ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ವೈ.ಕೆ.ರಾಮಯ್ಯ

ಡಾ. ಹಿ.ಚಿ. ಬೋರಲಿಂಗಯ್ಯ

ಪ್ರಕಟಣೆ
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

**Y.K. RAMAIAH**
Eminent Parlimentarian Series
Written by **DR. H.C. BORALINGAIAH**
Professor Kannada University,
Hampi, Vidyaranya - 583 276
**Published** by
Karnataka Legislature Library Committee
Vidhana Soudha, Bangalore-560001.
Page: 269 + viii Price: 20-00 Rs.

First Edition: 2008 Copies: 2000
**Printed & Designed by**
Government Press, Bangalore.

**ವೈ.ಕೆ. ರಾಮಯ್ಯ**
ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ
**ಲೇಖಕರು: ಡಾ. ಹಿ.ಚಿ. ಬೋರಲಿಂಗಯ್ಯ**
ಪ್ರೊಫೆಸರ್ ಕನ್ನಡ ವಿಶ್ವವಿದ್ಯಾಲಯ,
ಹಂಪಿ, ವಿದ್ಯಾರಣ್ಯ-583 276
**ಪ್ರಕಾಶನ**
**ಗ್ರಂಥಾಲಯ ಸಮಿತಿ**
**ಕರ್ನಾಟಕ ವಿಧಾನ ಮಂಡಲ**
ವಿಧಾನಸೌಧ, ಬೆಂಗಳೂರು-560 001.
ಪುಟ: 269 + viii ಬೆಲೆ: 20/- ರೂ.

ಮೊದಲ ಮುದ್ರಣ: 2008 ಪ್ರತಿಗಳು: 2,000
**ಮುದ್ರಣ ಮತ್ತು ವಿನ್ಯಾಸ**
ಸರ್ಕಾರಿ ಮುದ್ರಣಾಲಯ, ಬೆಂಗಳೂರು-560 001.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2008–2009

ಅಧ್ಯಕ್ಷರು

**ಶ್ರೀ ವೀರಣ್ಣ ಮತ್ತಿಕಟ್ಟಿ**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಜಗದೀಶ ಶೆಟ್ಟರ್**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ಎಂ. ನಾರಾಯಣಸ್ವಾಮಿ**

ವಿಧಾನಸಭಾ ಸದಸ್ಯರು ಹಾಗೂ ಉಪ ಸಮಿತಿಯ ಅಧ್ಯಕ್ಷರು

**ಶ್ರೀ ಕೆ. ಲಕ್ಷ್ಮೀನಾರಾಯಣ**

ವಿಧಾನಸಭಾ ಸದಸ್ಯರು

**ಶ್ರೀ ಎಸ್.ವಿ. ರಾಮಚಂದ್ರ**

ವಿಧಾನಸಭಾ ಸದಸ್ಯರು

**ಶ್ರೀ ಎನ್.ಎ. ಹ್ಯಾರೀಸ್**

ವಿಧಾನಸಭಾ ಸದಸ್ಯರು

**ಶ್ರೀ ಹೆಚ್.ಎಸ್. ಪ್ರಕಾಶ್**

ವಿಧಾನಸಭಾ ಸದಸ್ಯರು

**ಡಾ|| ಚಂದ್ರಶೇಖರ ಬಿ.ಕಂಬಾರ**

ವಿಧಾನ ಪರಿಷತ್ ಸದಸ್ಯರು

**ಶ್ರೀ ಮುಖ್ಯಮಂತ್ರಿ ಚಂದ್ರು**

ವಿಧಾನ ಪರಿಷತ್ ಸದಸ್ಯರು

**ಡಾ|| ಶ್ರೀನಾಥ್**

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

---

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಕಾರ್ಯದರ್ಶಿ |
| ಟಿ.ಎನ್. ಧ್ರುವಕುಮಾರ್ | ಅಪರ ಕಾರ್ಯದರ್ಶಿ (ಪ್ರ) |
| ಎಂ. ಗುರುರಾಜ | ಉಪ ಕಾರ್ಯದರ್ಶಿ |
| ಮುನೀರುನ್ನಿಸಾ | ಅಧೀನ ಕಾರ್ಯದರ್ಶಿ (ಪ್ರ) |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ವಿ. ಶ್ರೀಶ್ | ಕಾರ್ಯದರ್ಶಿ |
| ಟಿ. ಕೃಷ್ಣೆಗೌಡ | ಅಪರ ಕಾರ್ಯದರ್ಶಿ |

# ಮುನ್ನುಡಿ

24 ನವೆಂಬರ್ 2008

ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ॥ ರಾಮಮನೋಹರ ಲೋಹಿಯಾ, ಡಾ॥ ಬಿ.ಆರ್. ಅಂಬೇಡ್ಕರ್, ಡಾ॥ ಶಾಂಪ್ರಸಾದ್ ಮುಖರ್ಜಿ, ಡಾ॥ ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಯು ಈಗಾಗಲೇ ಪ್ರಕಟಿಸುತ್ತಿದೆ. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತಿದೆ. ನಮ್ಮ ನಾಡಿನ ಪ್ರಗತಿಪರ ಚಿಂತಕರು, ರಾಜಕೀಯ ಮುತ್ಸದ್ದಿಗಳ ಆಶಯಗಳನ್ನು ದಾಖಲಿಸಿ ಈ ಮೂಲಕ ಅವರ ಜೀವನ ಚಿತ್ರಣವನ್ನು ಪುಸ್ತಕ ರೂಪದಲ್ಲಿ ತರುತ್ತಿದೆ.

ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ಡಿ. ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ॥ ಲಂಕಾ ಸುಂದರಂ, ಸರದಾರ ಶರಣಗೌಡ ಇನಾಂದಾರ್, ಕೆ.ಹೆಚ್. ರಂಗನಾಥ್ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

**ಡಾ. ಹಿ.ಚಿ. ಬೋರಲಿಂಗಯ್ಯ** ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ **ವೈ.ಕೆ. ರಾಮಯ್ಯ** ಅವರ ಬಗೆಗಿನ ಈ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಇವರ ಸದನದ ಭಾಷಣಗಳು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಈ ನಾಡಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಆಶಯಗಳನ್ನು ಬಿಂಬಿಸುತ್ತವೆ.

ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ವೀರಣ್ಣ ಮತ್ತಿಕಟ್ಟಿ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಜಗದೀಶ್ ಶೆಟ್ಟರ್**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

ಶ್ರೀ ವೈ.ಕೆ. ರಾಮಯ್ಯನವರ ಹುಟ್ಟೂರಿನ ಪಕ್ಕದ ಹಳ್ಳಿಯವನೇ ಆದ ನನಗೆ ವೈ.ಕೆ.ಆರ್. ಸಹಜವಾಗಿಯೇ ನಿಕಟವಾಗಿದ್ದವರು. ಅವರಲ್ಲಿದ್ದ ಛಲ, ನಿಷ್ಠೆ, ಧೈರ್ಯ, ಪ್ರಾಮಾಣಿಕತೆ ನನ್ನಂಥವರಿಗೆ ಸ್ಫೂರ್ತಿಯನ್ನು ನೀಡಿದ್ದವು. ರಾಜಕಾರಣೆಗಿಂತ ಮುಖ್ಯವಾಗಿ ಸಮಾಜ ಚಿಂತಕರಾಗಿದ್ದ ವೈ.ಕೆ.ಆರ್. ನಾಡಿನಾದ್ಯಂತ ಜನಪ್ರಿಯರಾಗಿದ್ದರು. ಇಂಥ ಧೀಮಂತ ವ್ಯಕ್ತಿ ಬಹುಬೇಗ ನಮ್ಮನ್ನಗಲಿದರು ಎಂಬುದನ್ನು ನಂಬುವುದಕ್ಕೇ ಸಾಧ್ಯವಾಗುತ್ತಿಲ್ಲ. ವೈ.ಕೆ.ಆರ್. ನಿಧನದ ನಂತರ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಪುಸ್ತಕವೊಂದನ್ನು ಸಿದ್ಧಪಡಿಸುವಂತೆ ವಿಧಾನ ಪರಿಷತ್ ಸದಸ್ಯರೂ ನಾಡಿನ ಪ್ರಸಿದ್ಧ ಲೇಖಕರೂ ನನ್ನ ಗುರುಗಳೂ ಆದ ಡಾ. ಚಂದ್ರಶೇಖರ ಕಂಬಾರ ಅವರು ನನಗೆ ಸೂಚಿಸಿದರು. ಅಷ್ಟರಲ್ಲಿ ವಿಧಾನ ಮಂಡಲದಿಂದ ಅಧಿಕೃತ ಪತ್ರವೂ ನನ್ನ ಕೈಸೇರಿತು. ಈ ಹಿನ್ನೆಲೆಯಲ್ಲಿ ವೈ.ಕೆ.ಆರ್. ಅವರನ್ನು ಕುರಿತ ಗ್ರಂಥ ಸಿದ್ಧಗೊಂಡಿದೆ. ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿಯ ಎಲ್ಲ ಸದಸ್ಯರಿಗೂ ಅಧ್ಯಕ್ಷರಿಗೆ, ಹಾಗೂ ಅಧಿಕಾರಿಗಳಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಈ ಗ್ರಂಥದ ಸಿದ್ಧತೆಯ ಹಿಂದಿನ ಎಲ್ಲ ವಿಚಾರಗಳಲ್ಲೂ ಒತ್ತಾಸೆಯಾಗಿ ನಿಂತ ಗೆಳೆಯ ಎಲ್.ಎನ್. ಮುಕುಂದರಾಜ್ ಅವರಿಗೂ ಮತ್ತೊಬ್ಬ ಗೆಳೆಯ ಕೂಡ್ಲಿಗೆರೆ ಮಲ್ಲಿಕಾರ್ಜುನ ಅವರಿಗೂ ನನ್ನ ಪ್ರೀತಿಯ ನೆನೆಕೆಗಳು ಸಲ್ಲಲೇಬೇಕು. ಡಿ.ಟಿ.ಪಿ. ಮಾಡಿದ ಬಿ.ಎಂ. ರವಿಕುಮಾರ್, ಬಿ. ಸೋಮಶೇಖರ್, ಶರಣಬಸವ ಹಾಗೂ ಅಂದಕ್ಕೆ ಗಮನಕೊಟ್ಟ ಮಿತ್ರ ಸುಜ್ಞಾನಮೂರ್ತಿ ಅವರಿಗೆ ನನ್ನ ವಂದನೆಗಳು.

ಹಿ.ಚಿ. ಬೋರಲಿಂಗಯ್ಯ

# ಪರಿವಿಡಿ

# ಬಾಲ್ಯ

ಗೊಬ್ಬರವನಲ್ಲೆಗಳೆಯುವೆ ಏಕೆ ಮರದ ತುದಿ
ನಲ್ಗಂಪುವೆತ್ತು ತಂಗಾಳಿಗೊಲೆಯುವ ಹೂವೆ?
ಬೇರುಗಳಿಗಿಲ್ಲದಿರೆ ಗೊಬ್ಬರಂ, ಹೇಳೆನಗೆ
ವೃಕ್ಷಕಲ್ಲಿಯದು ಹೂವಿನ ಹಬ್ಬ? ಗೊಬ್ಬರದ
ಜೀವವನೆ ಹೀರಿ ಕೊಬ್ಬಿಹ ಹೂವೆ, ಕಬ್ಬಕ್ಕೆ
ನೀಂ ಮಾತ್ರ ವಸ್ತುವೇಂ? ನಿನ್ನಂತೆ ಗೊಬ್ಬರಂ
ಕಬ್ಬಕ್ಕೆ ಸಾಮಗ್ರಿಯಾಗಬಾರದೆ ಹೇಳು?
ಹಳಿಯದಿರೋ: ಇಂದೋ ನಾಳೆಯೋ ನೀನು ಕಳಗುರುಳಿ
ಗೊಂಬರದೊಳೊಂದಾಗುವಾ ಕಾಲ ಮುಂದೆ ಕಾದಿಹುದು!
ನೇಗಿಲ ಕುಳಂ ದೊರೆಯು ಕತ್ತಿಯುಂ ಕಿತ್ತೆಸೆದು,
ಮುತ್ತಿನುಂಡೆಯ ಮುಡಿವ ಸಿರಿನೆತ್ತಿಯನ್ನುತ್ತು
ಬತ್ತಮಂ ಬಿತ್ತಿ ಬೆಳೆಯುವ ಉತ್ತಮದ ಹೊತ್ತು
ಹತ್ತಿರಕೆ ಹತ್ತಿರಕೆ ಬರುತಿರುವುದೊತ್ತೊತ್ತಿ!
ಗೊಬ್ಬರಂ ಸಿಂಹಾಸನಕ್ಕೇರಿದಾ ದಿನಂ
ತನ್ನ ಹೊಗಳಿದ ಕಬ್ಬಿಲನ ಕಬ್ಬಿಗನ ಮಾಡಿ
ಮೆರೆಯುವುದು! ಅಂದು ಗೊಬ್ಬರದ ಕಂಪೆಲ್ಲರ್ಗೆ
ಪರಿಮಳ ದ್ರವ್ಯ ತಾನಾದಪುದು! ಏತಕೆನೆ,
ಸಿರಿವೆರಸು ಶಕ್ತಿಯಿರೆ ಗೊಬ್ಬರವೆ ಪರಿಮಳಂ
ಇಲ್ಲದಿರೆ ಪುನುಗು ತಾನಾದೊಡಂ ಗೊಬ್ಬರಂ!

- ಕುವೆಂಪು

ಅಕ್ಷರ ಜಗತ್ತಿನಿಂದ ಸಂಪೂರ್ಣವಾಗಿ ವಂಚಿತವಾಗಿದ್ದ ಹಳ್ಳಿಗಾಡಿನ ಅನೇಕ ಸಮುದಾಯಗಳು ಕಳೆದ ಶತಮಾನದ ಪೂರ್ವಾರ್ಧದಲ್ಲಿ ಹೊಸ ಮನ್ವಂತರಕ್ಕೆ ಒಳಗಾದವು. ವೈ.ಕೆ.·ರಾಮಯ್ಯನವರು ಅಕ್ಷರದ ಸಿಂಚನಕ್ಕೆ ಒಳಗಾದ ಮೊದಲ ಪೀಳಿಗೆಯ ಅದೃಷ್ಟವಂತರು. ಅವರು ಓದಿದ್ದು, ವಕೀಲರಾದದ್ದು, ಜನಮುಖಿ ಆಲೋಚನೆ ಹೊತ್ತು ರಾಜಕಾರಣಿ ಆದದ್ದು ಎಲ್ಲವೂ ಆಕಸ್ಮಿಕವೇ. ಆ ಕಾಲದಲ್ಲಿ ಶಾಲೆಗೆ ಸೇರಿಸುವುದಕ್ಕೇ ಹಿಂದೆ ಮುಂದೆ ನೋಡುತ್ತಿದ್ದ ಅವಜ್ಞೆ. ಓದಿ ಏನಾಗಬೇಕು ಎಂಬ ಅಜ್ಞಾನ. ಕೃಷಿಯೇ ನಮ್ಮ ಪರಮಕಾಯಕ, ಮೇಟಿಯೇ ಮೊದಲ ಗುರು ಎಂಬ ವೃತ್ತಿನಿಷ್ಠೆಯ ಕಾಲವದು. ಅಕ್ಷರದ ಬಗ್ಗೆ ಇಂಥ ತಾತ್ಸಾರವಿದ್ದ ಕಾಲದಲ್ಲಿ ಸಾಮಾನ್ಯ ರೈತ ಕುಟುಂಬದ, ಹೆಸರೇ ಗೊತ್ತಿಲ್ಲದ ಒಂದು ಪುಟ್ಟ ಹಳ್ಳಿಯ ವೈ.ಕೆ. ರಾಮಯ್ಯ ಶಾಲೆಗೆ ಸೇರಿದ್ದೂ ಒಂದು ಆಕಸ್ಮಿಕವೇ ಸರಿ. ಯಾಕೆಂದರೆ, ಅವರ ಕುಟುಂಬದ ಇನ್ಯಾರೂ ಶಾಲೆಯ ತಂಟೆಗೆ ಹೋಗಲೇಇಲ್ಲ. ಕೇವಲ ಆ ಮನೆಯಲ್ಲಿ ಅಲ್ಲ ಇದೇ ಊರಿನಲ್ಲೇ ಅಂಥ ಅದೃಷ್ಟ, ಅರಸಿ ಬಂದದ್ದು ರಾಮಯ್ಯನವರಿಗೆ ಮಾತ್ರ.

ಗೊಬ್ಬರವೇ ದೇವರೆಂದು ತಿಳಿದ ಶ್ರಮ ಸಂಸ್ಕೃತಿಯ ಬಡ ಒಕ್ಕಲಿಗ ಸಮುದಾಯದಲ್ಲಿ ಹುಟ್ಟಿ, ಅದೇ ಗೊಬ್ಬರದ ಹಿರಿಮೆಯನ್ನು ಜಗತ್ತಿಗೆ ಸಾರಿದ ಮೊದಲ ಪೀಳಿಗೆಯ ಅಕ್ಷರವಂತ ವೈ.ಕೆ.ರಾಮಯ್ಯ. ರಾಷ್ಟ್ರಕವಿ ಕುವೆಂಪು ಅವರ ಮಾತಿನಲ್ಲಿಯೇ ಹೇಳುವುದಾದರೆ "ಸಿರಿವೆರಸು ಶಕ್ತಿಯಿರೆ ಗೊಬ್ಬರವೆ ಪರಿಮಳಂ; ಇಲ್ಲದಿರೆ ಪುಸುಗು ತಾನಾದೊಡಂ ಗೊಬ್ಬರಂ". ವೈ.ಕೆ.ಆರ್. ಕುವೆಂಪುರವರ ಮಾತನ್ನು ಸತ್ಯವಾಗಿಸಿದವರು. ಗೊಬ್ಬರದ ಶ್ರಮಜೀವನಕ್ಕೆ ಪರಿಮಳದ ಮೆರಗು ತಂದವರು. ಇಂದಿನ ರಾಜಕೀಯದಲ್ಲಿ ಅನೇಕ ರೀತಿಯ ರಾಜಕಾರಣಿಗಳನ್ನೂ 'ಜನಸೇವಕ'ರನ್ನೂ ನೋಡುತ್ತಿದ್ದೇವೆ. ಜನಸೇವೆಯ ಹೆಸರಿನಲ್ಲಿ ಹಣ ಗಳಿಕೆಯ ಪಟ್ಟಭದ್ರರೇ ತುಂಬಿ ತುಳುಕುತ್ತಿರುವ ಇಂದಿನ ದಿನಗಳಲ್ಲಿ 'ಮೌಲ್ಯ'ವೆಂಬ 'ಪುಸುಗು' ಅಸಹ್ಯಕರವಾಗುತ್ತಿದೆ. ಆದರೆ ತಮ್ಮ ಅಂತರಂಗ ಶುದ್ಧಿ, ತತ್ವನಿಷ್ಠೆ, ನಿಷ್ಠುರನಡೆ ಮತ್ತು ದುಡಿಯುವ ಜನರ ನೇರ ಪ್ರತಿನಿಧಿಯಾಗಿದ್ದ ರಾಮಯ್ಯನವರು ರಾಜಕೀಯದ ಗೊಬ್ಬರವನ್ನು 'ಪುಸುಗು' ಮಾಡಿ ಸ್ವರ್ಗ ಸೇರಿದರು. ಗೊಬ್ಬರವನ್ನು ಸಿಂಹಾಸನಕ್ಕೆ ಏರಿಸಿ, ರೈತರಿಗೂ ಒಂದು ಮರ್ಯಾದೆ ತಂದುಕೊಟ್ಟರು. ಈ ಕಿರುಪುಸ್ತಕದಲ್ಲಿ ಅವರ ವ್ಯಕ್ತಿತ್ವ ಮತ್ತು ಸಾಧನೆಯನ್ನು ಸಂಕ್ಷಿಪ್ತವಾಗಿ ವಿವರಿಸುವ ಪ್ರಯತ್ನ ಮಾಡಿದ್ದೇನೆ.

ಅದೊಂದು ಕುರುಚಲು ಕಾಡಿನ ಪ್ರದೇಶ, ಸುತ್ತಲೂ ಸಣ್ಣಪುಟ್ಟ ಗುಡ್ಡಗಳಿಂದ ಆವೃತವಾದ ಕಾಡುಹಳ್ಳಿ. ತುಮಕೂರು ಮದ್ದೂರು ರಸ್ತೆಯಿಂದ ಪೂರ್ವಕ್ಕೆ ಆರು ಮೈಲು ದೂರದಲ್ಲಿರುವ ಎಲೆಕಡಕಲು ಎಂಬ ಈ ಪುಟ್ಟ ಹಳ್ಳಿ. ಐದು ತಾಲ್ಲೂಕುಗಳು ಸೇರುವ ಗಡಿ ಪ್ರದೇಶ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣ, ರಾಮನಗರ, ಮಾಗಡಿ, ಮಂಡ್ಯ ಜಿಲ್ಲೆಯ ಮದ್ದೂರು ಹಾಗೂ ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕುಗಳಿಗೆ ಹೊಂದಿಕೊಂಡಂತಿರುವ ಇದು ಚನ್ನಪಟ್ಟಣಕ್ಕೆ ಹೆಚ್ಚು ಹತ್ತಿರವಾದ ಹಳ್ಳಿ. ಯಾವ ಆಧುನಿಕ ಸೌಲಭ್ಯಗಳೂ ಇಲ್ಲದೆ ಕೇವಲ ಎತ್ತಿನಗಾಡಿ ಮಾತ್ರ ಹೋಗಿ ಬರಬಹುದಾಗಿದ್ದ ಆ ಕಾಲದ ಒಂದು ನಿರ್ಲಕ್ಷಿತ ಪ್ರದೇಶವೂ ಹೌದು. ಇಷ್ಟರ ನಡುವೆಯೂ ಸುಮಾರು ೧೨೦ ಮನೆಗಳ ಈ ಹಳ್ಳಿಗೆ ಪ್ರಾಥಮಿಕ ಶಾಲೆಯೊಂದಿತ್ತು ಎಂಬುದೇ ಮುಖ್ಯ ಅಂಶ. ಈ ಹಳ್ಳಿಯಲ್ಲಿ ಸಾವಿರದ ಒಂಬೈನೂರ ಮೂವತ್ತೊಂಬತ್ತು ಆಗಸ್ಟ್ ಐದರಂದು ಕಂಬೇಗೌಡ ಮತ್ತು ಚನ್ನಮ್ಮ ದಂಪತಿಗಳ ಕೊನೆಯ ಮಗನಾಗಿ ವೈ.ಕೆ. ರಾಮಯ್ಯ ಹುಟ್ಟಿದರು. ಕಂಬಯ್ಯ ಮತ್ತು ಹುಚ್ಚಯ್ಯ ಎಂಬುವವರು ಅಣ್ಣಂದಿರು, ತಿಮ್ಮಮ್ಮ, ಕರಿಯಮ್ಮ, ಕೆಂಪಮ್ಮ ಮತ್ತು ಚೆನ್ನಮ್ಮ ಎಂಬ ನಾಲ್ಕು ಜನ ಅಕ್ಕಂದಿರು. ಎಲೆ ಕಡಕಲು ಗ್ರಾಮದ ಒಟ್ಟು ಕೃಷಿ ಭೂಮಿಯ ವಿಸ್ತೀರ್ಣ ೩೭೦ ಎಕರೆಗಳು ಮಾತ್ರ. ೧೨೦ ಕುಟುಂಬಗಳಲ್ಲಿ ಸುಮಾರು ೧೦೦ ಕುಟುಂಬಗಳು ರೇಷ್ಮೆ ಕೃಷಿಯನ್ನು ಅವಲಂಬಿಸಿ ಜೀವನ ನಡೆಸುತ್ತಿದ್ದವು. ಸ್ವಂತ ಶ್ರಮದಿಂದ ಮಾಡಿಕೊಂಡಿದ್ದ ಶೇ. ೫ರಷ್ಟು ತರಿ ಜಮೀನನ್ನು ಬಿಟ್ಟರೆ ಉಳಿದಿದ್ದೆಲ್ಲವೂ ಸಂಪೂರ್ಣ ಖುಷ್ಕಿ. ಹೀಗಾಗಿ ಮಳೆ ಆಧಾರಿತ ವ್ಯವಸಾಯ ಪದ್ಧತಿ ಜಾರಿಯಲ್ಲಿತ್ತು. ಇಂತಹ ಒಂದು ಕುಗ್ರಾಮದಲ್ಲಿ ವೈ.ಕೆ. ರಾಮಯ್ಯ ಅವರು ಹುಟ್ಟಿ, ಶಾಲೆ ಸೇರಿದ್ದು ಕೂಡ ಒಂದು ಆಕಸ್ಮಿಕವೇ. ಏಕೆಂದರೆ ಶಾಲೆಗೆ ಕಳುಹಿಸಲೇಬೇಕೆಂಬ ಹಠ ಆಗ ಯಾರಲ್ಲಿಯೂ ಇರಲಿಲ್ಲ. ಊರಿನಲ್ಲಿಯೇ ಶಾಲೆ ಅಂತ ಒಂದು ಇದ್ದ ಕಾರಣಕ್ಕಾಗಿ ಪ್ರಾಥಮಿಕ ಶಾಲೆಗೆ ರಾಮಯ್ಯನವರನ್ನು ಸೇರಿಸಲಾಯಿತು. ಪ್ರಾಥಮಿಕ ಶಾಲೆಯ ನಂತರ ಪಕ್ಕದಲ್ಲಿಯೇ ಇದ್ದ ದೊಡ್ಡ ಗ್ರಾಮ ಉಜ್ಜಿನಿಯ ಮಾಧ್ಯಮಿಕ ಶಾಲೆಗೆ ಆ ಬಾಲಕನನ್ನು ಯಾಂತ್ರಿಕವಾಗಿ ಸೇರಿಸಲಾಯಿತು.

ಬಾಲ್ಯದಿಂದಲೂ ಹಿಪ್ಪುನೇರಳೇ ಸೊಪ್ಪು ಕಿತ್ತು ಹೊಲದ ಕೆಲಸಗಳನ್ನು ಮುಗಿಸಿ ಶಾಲೆಗೆ ಹೋಗಬೇಕಾದ ಅನಿವಾರ್ಯ ಪರಿಸ್ಥಿತಿ. ಶಾಲೆಯಿಂದ ಬಂದ ನಂತರವೂ ಕೃಷಿಗೆ ಪೂರಕವಾದ ಕೆಲಸಗಳು ಇದ್ದೆ ಇರುತ್ತಿದ್ದವು. ಆಗಿನ ಕಾಲಕ್ಕೆ ಶಾಲೆಯ ಓದು ಎಂಬುದು ಮೊದಲ ಆದ್ಯತೆಯಲ್ಲಿರಲಿಲ್ಲ. ಏನೋ ಒಂದೆರಡು ಅಕ್ಷರ ಕಲಿತುಕೊಳ್ಳಲಿ ಎಂದು ಶಾಲೆಗೆ ಕಳಿಸುತ್ತಿದ್ದರು. ತುಂಬಾ ಚುರುಕು ಬುದ್ದಿ ಮತ್ತು ತೀಕ್ಷ್ಣಮತಿ ಹೊಂದಿದ ಆ ಬಾಲಕ ಕೃಷಿ ಚಟುವಟಿಕೆಗಳ ಜೊತೆಗೆ ಚೆನ್ನಾಗಿ ಓದುವುದನ್ನು ಕಲಿತ. ಮಾಧ್ಯಮಿಕ ಶಾಲೆ ಮುಗಿದ ನಂತರ ಪ್ರೌಢಶಾಲೆಗೆ ಸೇರಿಸುವ ಸಂದರ್ಭದಲ್ಲಿ ರಾಮಯ್ಯನವರ ಅಣ್ಣಂದಿರಿಗೆ ತುಂಬಾ ಜಿಜ್ಞಾಸೆ ಉಂಟಾಗಿತ್ತು. ಅಷ್ಟರಲ್ಲಿ ಆಗಲೇ ರಾಮಯ್ಯನವರ ತಂದೆ ತೀರಿಕೊಂಡಿದ್ದ ಕಾರಣ ಅವರ ಹಿರಿಯ ಅಣ್ಣ ಕಂಬಯ್ಯನವರೇ ಸಂಸಾರದ ಜವಾಬ್ದಾರಿಗಳನ್ನು ಹೊತ್ತುಕೊಂಡಿದ್ದರು. ಹಾಗೂ ಹೀಗೂ ಬಾಲಕನನ್ನು ಹುಲಿಯೂರುದುರ್ಗದ ಪ್ರೌಢಶಾಲೆಗೆ ಸೇರಿಸುವ ನಿರ್ಧಾರ ಕೈಗೊಳ್ಳಲಾಯಿತು. ಎಲೆಕಡಕಲುವಿನಿಂದ ಆರು ಮೈಲಿ ದೂರದಲ್ಲಿದ್ದ ಹುಲಿಯೂರುದುರ್ಗದ ಪ್ರೌಢಶಾಲೆಗೆ ರಾಮಯ್ಯ ಸೇರಿದರು. ಚುರುಕುಬುದ್ಧಿ, ಶ್ರಮದ ಓದು, ಚರ್ಚಾಸ್ಪರ್ಧೆಗಳಲ್ಲಿ ಭಾಷಣ ಕಲೆ ಇತ್ಯಾದಿಗಳನ್ನು ರೂಢಿಸಿಕೊಂಡಿದ್ದ ಬಾಲಕ ಎಲ್ಲ ಉಪಾಧ್ಯಾಯರ ಪ್ರೀತಿಗೂ ಪಾತ್ರನಾಗಿದ್ದ. ಇಷ್ಟೆಲ್ಲ ಇದ್ದರೂ ಆಗಿನ ಕಾಲಕ್ಕೆ ಹಳ್ಳಿಯ ಹುಡುಗರ ಓದಿನ ಮುಂದುವರಿಕೆ ಹೀಗೇ ಎಂದು ಹೇಳುವ ಸ್ಥಿತಿಯಲ್ಲಿರಲಿಲ್ಲ. ಕೃಷಿ ಕೆಲಸಗಳು ಹೆಚ್ಚಾದಾಗ ಶಾಲೆ ಬಿಟ್ಟು ಕೆಲಸದಲ್ಲಿ ನಿರತವಾಗಬೇಕಾಗುತ್ತಿತ್ತು. ಒಂದು ಸಲ ರಜೆ ಹಾಕದೆ ಶಾಲೆಗೆ ಹೋಗಲೇಬೇಕೆಂದು ಬಾಲಕ ಹಠ ಮಾಡಿದಾಗ "ನೀನು ಓದ್ದೆ ಹೋದರೆ ಕಂಚಿಯಲ್ಲಿರುವ ಚಿನ್ನದ ಗೋಪುರವನ್ನು ಹಡ್ಡು ಹೊತ್ಕೊಂಡ್ ಹೋಗುವುದಿಲ್ಲ. ನೇಗಿಲು ತಕ್ಕೊಂಡ್ ಹೊಲಕ್ಕೆ ನಡಿ" ಎಂದು ಅವರ ಅಣ್ಣ ಹುಚ್ಚಯ್ಯ ಹೊಲಕ್ಕೆ ಕಳುಹಿಸಿದ ಸಂದರ್ಭವನ್ನು ಎಷ್ಟೋ ಸಂದರ್ಭದಲ್ಲಿ ರಾಮಯ್ಯನವರು ನೆನೆಸಿ ಕೊಳ್ಳುತ್ತಿದ್ದರು. ರಾಮಯ್ಯ ಓದಬಾರದು ಎಂಬುದು ಅವರ ಅಣ್ಣಂದಿರ ನಿಲುವೇನೂ ಆಗಿರಲಿಲ್ಲ. ಬಾಲಕನ ಚುರುಕುತನದ ಬಗ್ಗೆ ಅವರೆಲ್ಲರಿಗೂ ಅಪಾರವಾದ ಅಭಿಮಾನವಿತ್ತು. ಆದರೆ ಓದಿನಿಂದ ಆಗಬೇಕಾದ್ದೇನು ಎಂಬ ತಾತ್ಸಾರ ಭಾವನೆ ಎಲ್ಲ ರೈತರಲ್ಲಿ ಸರ್ವೇ ಸಾಮಾನ್ಯವಾಗಿರುವಂತೆ ಅವರಲ್ಲಿಯೂ ಇತ್ತು. ಆದರೆ ಇವೆಲ್ಲವನ್ನು ಮೀರಿ ರಾಮಯ್ಯ ಚೆನ್ನಾಗಿ ಓದಿ ಪ್ರೌಢಶಾಲೆಯನ್ನು ಮುಗಿಸಿದರು. ಆ ನಂತರ ರಾಮಯ್ಯನವರ ಹಿರಿ ಅಣ್ಣ ಕಂಬಯ್ಯನವರಿಗೆ ತನ್ನ ತಮ್ಮನನ್ನು ಓದಿಸಲೇಬೇಕೆಂಬ ಆಸೆ ಹುಟ್ಟಿತು. ಅಣ್ಣ ಮತ್ತು ಅತ್ತಿಗೆಯ ಸಹಕಾರದಿಂದ ರಾಮಯ್ಯ ತುಮಕೂರಿನ ಸರ್ಕಾರಿ ಕಾಲೇಜು ಸೇರಿದರು. ಎಷ್ಟೇ ಹಣಕಾಸಿನ ಕೊರತೆ ಇದ್ದರೂ ಎದೆಗುಂದದೆ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ೧೯೬೨ರಲ್ಲಿ ಬಿ.ಎ. ಪದವಿಯನ್ನು ಪಡೆದರು. ಇದರಿಂದ ಸಂತೋಷಗೊಂಡ ಅವರ ಅಣ್ಣ ಕಂಬಯ್ಯನವರು ಊರಿಗೆಲ್ಲ ಮರಿ ಊಟ ಹಾಕಿಸಿದ್ದು ಉಂಟು. ಕಾಲೇಜಿನ ರಜಾ ದಿನಗಳಲ್ಲಿ ಊರಿಗೆ ಬಂದಾಗ ಹಳೆಯ ನೆನಪೋ ಎನ್ನುವಂತೆ ರಾಮಯ್ಯ ಕೃಷಿ ಕೆಲಸಗಳಲ್ಲಿ ತೊಡಗಿಕೊಳ್ಳುತ್ತಿದ್ದರು. ಅದರಲ್ಲಿಯೂ ರೇಷ್ಮೆ ಕೃಷಿ ಅವರ ಅಚ್ಚುಮೆಚ್ಚಿನ ಕಾಯಕವಾಗಿತ್ತು. ತೋಟ ಅಗೆಯುವುದು, ಚಾಕಿ ಕಟ್ಟುವುದು, ಸೊಪ್ಪು ಕೀಳುವುದು, ಹುಳು ಸಾಕುವುದು, ಹಣ್ಣುಹುಳು ಆಯುವುದು, ಚಂದ್ರಿಕೆ ಸ್ವಚ್ಛಗೊಳಿಸುವುದು, ಗೂಡು ಎಡೆಯುವುದು ಹೀಗೆ ರೇಷ್ಮೆ ಕಸುಬಿನ ಎಲ್ಲ ಚಟುವಟಿಕೆಗಳಲ್ಲೂ ಅವರು ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು.

ಬಿ.ಎ. ಪದವಿಯ ನಂತರ ಮುಂದೇನು ಮಾಡುವುದು ಎಂಬ ಪ್ರಶ್ನೆ ರಾಮಯ್ಯನವರಿಗೆ ಎದುರಾಯಿತು. ಅವರ ಮಾತಿನಲ್ಲಿಯೇ ಹೇಳುವುದಾದರೆ "ಆ ದಿನಗಳಲ್ಲಿ ನನ್ನಲ್ಲಿ ಆದ ಮಾನಸಿಕ ಸ್ಥಿತಿಯಿಂದ ಸೆಟೆದು ನಿಂತ ಛಲ ನನ್ನ ಇಂದಿನ ಈ ಸ್ಥಿತಿಯ ಬದುಕಿಗೆ ಬುನಾದಿಯಾಯಿತು. ಛಲವನ್ನು ಮನದಲ್ಲಿ ಹೊತ್ತು ಕಂಕುಳಲ್ಲಿ ನನ್ನ ತಾಯಿ ಕಟ್ಟಿ ಕೊಟ್ಟ ರೊಟ್ಟಿ ಬುತ್ತಿ ಹಿಡಿದು, ಅಣ್ಣ ಕೊಟ್ಟ ಅಲ್ಪ ಹಣದೊಡನೆ ೧೯೬೨ನೇ ಇಸವಿಯ ಆದಿಭಾಗದಲ್ಲಿ ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಸೇರಿದೆ."

ಆ ಕಾಲಕ್ಕೆ ಮುಂದೇನು ಮಾಡಬೇಕೆಂಬ ಬಗ್ಗೆ ಮಾರ್ಗದರ್ಶನ ಮಾಡುವವರು ಯಾರೂ ಇರಲಿಲ್ಲ. ಉಜ್ಜನಿ ಸುತ್ತಮುತ್ತಲ ಯಾವ ಊರಿನಲ್ಲಿಯೂ ಆ ಕಾಲಕ್ಕೆ ಪದವಿದರರೇ ಇರಲಿಲ್ಲ ಎಂಬುದನ್ನು ನೆನಪಿಸಿಕೊಂಡಾಗ, ಈ ಮೊದಲ ಪದವೀಧರ ತನ್ನ ದಾರಿಯನ್ನು ತಾನೇ ಹುಡುಕಿಕೊಳ್ಳಬೇಕಾದ್ದು ಅನಿವಾರ್ಯವಾಗಿತ್ತು. ಇಂಥ ಸಂದರ್ಭದಲ್ಲಿ ಮುಂದೇನು ಮಾಡಬೇಕೆಂದು ತಿಳಿಯದೇ ಧಾರವಾಡ ವಿಶ್ವವಿದ್ಯಾಲಯದಲ್ಲಿ ಎಂ.ಎ. ಮಾನವಶಾಸ್ತ್ರ ಅಧ್ಯಯನಕ್ಕೆ ರಾಮಯ್ಯ ಸೇರಿದರು. ಆದರೆ ಇದು ರಾಮಯ್ಯನವರ ನಿರ್ದಿಷ್ಟ ಗುರಿಯಾಗಿರಲಿಲ್ಲ. ಯಾವುದೋ ಒಂದು ಸ್ನಾತಕೋತ್ತರ ಪದವಿಯನ್ನು ಪಡೆಯಬೇಕೆಂಬ ಛಲ ಅವರಲ್ಲಿ ತುಂಬಿಕೊಂಡಿತ್ತು. ಸ್ನಾತಕೋತ್ತರ ಅಧ್ಯಯನದ ಜೊತೆ ಜೊತೆಗೆ ಎಲ್.ಎಲ್.ಬಿ. ಪದವಿಯನ್ನು ಪಡೆದುಕೊಂಡದ್ದು ರಾಮಯ್ಯನವರ ಜೀವನದಲ್ಲಿ ಬೇರೆಯದೇ ತಿರುವನ್ನು ತಂದುಕೊಟ್ಟಿತು ಎನ್ನಬಹುದು. ೧೯೬೬ರಲ್ಲಿ ಎಂ.ಎ. ಎಲ್.ಎಲ್.ಬಿ. ಪದವಿಯನ್ನು ಪಡೆದು ರಾಮಯ್ಯ ಊರಿಗೆ ಬಂದಾಗ ಆಗಿನ ಕಾಲಕ್ಕೆ ಅದೊಂದು ಅಭೂತಪೂರ್ವ ಸಂಗತಿ. ಅಷ್ಟರಲ್ಲಾಗಲೇ ಪ್ರಸಿದ್ಧರಾಗಿದ್ದ ಪಕ್ಕದ ಮದ್ದೂರು ತಾಲ್ಲೂಕಿನ ಸೋಮನಹಳ್ಳಿಯ ಎಸ್.ಎಂ. ಕೃಷ್ಣ ಅವರು ಇಂಥ ದೊಡ್ಡ ಪದವಿಯನ್ನು ಪಡೆದಿದ್ದರು ಎಂಬುದನ್ನು ಬಿಟ್ಟರೆ ಆ ಸುತ್ತಿನ ಪ್ರದೇಶದಲ್ಲಿ ರಾಮಯ್ಯ ಮೂರು ಪದವಿಗಳನ್ನು ಪಡೆದ ದೊಡ್ಡ ವಿದ್ಯಾವಂತ ಎಂಬ ಕೀರ್ತಿಗೆ ಪಾತ್ರರಾಗಿದ್ದರು. "ಧಾರವಾಡದಲ್ಲಿನ ನಾಲ್ಕು ವರ್ಷಗಳ ನನ್ನ ವಿದ್ಯೆಗಾಗಿನ ಹೋರಾಟದ ಅಧ್ಯಾಯವೇ ಒಂದು ಪುಸ್ತಕ ಆಗಬಹುದು. ಈ ದಿನಗಳಲ್ಲಿ ಎಲ್ಲರಿಂದ, ಎಲ್ಲದರಿಂದ ದೂರವಿದ್ದ ನಾನು ಒಂದು ವಿಧವಾದ ಅಜ್ಞಾತವಾಸದಲ್ಲಿದ್ದುಕೊಂಡು ಮುಂದಿನ ಬದುಕಿಗಾಗಿ ಕಮ್ಮಟದಲ್ಲಿ ಸಾಧನೆ ಮಾಡಿದ ದಿನಗಳವು" ಎಂದು ರಾಮಯ್ಯ ಹೇಳಿಕೊಳ್ಳುತ್ತಾರೆ.

## ವಕೀಲಿ ವೃತ್ತಿ

೧೯೬೭ರಲ್ಲಿ ತುಮಕೂರಿನ ಹಿರಿಯ ವಕೀಲರಾದ ಶ್ರೀ ಶೇಷಾದ್ರಿಯವರ ಮಾರ್ಗದರ್ಶನ ದಲ್ಲಿ ಅವರ ಸಹಾಯಕರಾಗಿ ವಕೀಲಿ ವೃತ್ತಿಯನ್ನು ರಾಮಯ್ಯ ಆರಂಭಿಸಿದರು. ಯಾವುದೇ ಕಾರ್ಯಕ್ಕೆ ಕೈ ಹಾಕಿದರೂ ಅದರಲ್ಲಿ ಪರಿಪೂರ್ಣ ಸಾಧನೆ ಮಾಡುವವರೆಗೆ ಬಿಡುವ ಜಾಯಮಾನ ರಾಮಯ್ಯನವರದ್ದಲ್ಲ. ವಕೀಲಿ ವೃತ್ತಿಯಲ್ಲಿ ಪರಿಣಿತಿಯನ್ನು ಪಡೆಯಬೇಕೆಂಬ ಛಲದಿಂದ ವಿವಿಧ ಕಾನೂನು ಗ್ರಂಥಗಳನ್ನು ವಿಶೇಷವಾಗಿ ಅಧ್ಯಯನ ಮಾಡಿದರು. ಅತ್ಯುತ್ತಮ ಲಾಯರ್ ಆಗಬೇಕೆಂಬುದೇ ಅವರ ಏಕೈಕ ಆಕಾಂಕ್ಷೆಯಾಗಿತ್ತು. ಅಧ್ಯಯನ ಮತ್ತು ಅನುಭವದ ಜೊತೆಗೆ ವಾಕ್‌ಪಟುತ್ವವೂ ಇದ್ದುದರಿಂದ ಅತ್ಯಂತ ಕಡಿಮೆ ಅವಧಿಯಲ್ಲಿ ಅವರೊಬ್ಬ ಉತ್ತಮ ವಕೀಲ ಎಂಬ ಹೆಸರನ್ನು ಕೂಡ ಪಡೆದರು. ಆಗಿನ ಅವರ ಮನಸ್ಥಿತಿ ಕುರಿತು ಅವರೇ ಹೇಳಿಕೊಳುವಂತೆ "ವಕೀಲಿ ವೃತ್ತಿಯಲ್ಲಿ ಪರಿಣಿತಿ ಪಡೆಯುವ ಹಂಬಲ ಮತ್ತು ಹಠ, ಇಲ್ಲಿಯ ವಕೀಲರುಗಳ ಜೊತೆ

ಒಡನಾಟ, ಕೋರ್ಟುಗಳು, ಕೇಸುಗಳು, ಪಾಂಡಿತ್ಯ ಪಡೆಯುವ ಉತ್ಕಟ ಆಕಾಂಕ್ಷೆ ಮತ್ತು ಹಣ ಮಾಡುವ ಆಸೆಗಳಲ್ಲಿ ತೊಡಗಿದ್ದ ನನಗೆ ರೇಷ್ಮೆ ಇತ್ಯಾದಿ ಊರಿನ ವಿಚಾರಗಳು ನನ್ನ ಹತ್ತಿರ ಕೂಡ ಸುಳಿಯಲಿಲ್ಲ."

ಮೂರು ವರ್ಷಗಳ ಕಾಲ ತುಮಕೂರಿನಲ್ಲಿ ವಕೀಲಿ ವೃತ್ತಿ ನಡೆಸಿ ಒಂದು ಪ್ರಭಾವಿ ವಲಯವನ್ನು ಸೃಷ್ಟಿಸಿಕೊಂಡಿದ್ದ ರಾಮಯ್ಯನವರು ತನ್ನ ಸ್ವಂತ ತಾಲ್ಲೂಕು ಕೇಂದ್ರವಾದ ಕುಣಿಗಲ್‌ಗೆ ವಾಪಸ್ಸು ಬರಲು ನಿರ್ಧರಿಸಿದ್ದು ಅವರ ಜೀವನದ ಮತ್ತೊಂದು ತಿರುವು. ಅವರ ಅನೇಕ ವಕೀಲಿ ಸ್ನೇಹಿತರು ಮತ್ತು ಇತರರು ನಿನ್ನಂಥ ಪ್ರತಿಭಾವಂತ ವಕೀಲ ತುಮಕೂರಿನಲ್ಲಿಯೇ ಮುಂದುವರೆದರೆ ಭವಿಷ್ಯತ್ತಿಗೆ ಒಳ್ಳೆಯದೆಂದು ಸಲಹೆ ನೀಡಿದರೂ ಕುಣಿಗಲ್‌ಗೆ ಬರಲು ಅಚಲ ನಿರ್ಧಾರ ಕೈಗೊಂಡರು. "ಏಕೆಂದರೆ ಆ ಹೊತ್ತಿಗೆ ನನಗೆ ವಕೀಲಿಗಿರಿ ಮತ್ತು ಅದರಿಂದ ಹಣ ಸಂಪಾದನೆ ಮಾಡುವುದಷ್ಟೇ ನನ್ನ ಜೀವನದ ಗುರಿಯಾಗಿರಲಿಲ್ಲ. ಒಬ್ಬ ಸಾಮಾನ್ಯ ರೈತನ ಮಗನಾಗಿ ನನಗಿರಬೇಕಾದ ಸಾಮಾಜಿಕ ಹೊಣೆಗಾರಿಕೆ ಬಗ್ಗೆ ನನಗೆ ಅರಿವಾಗತೊಡಗಿತ್ತು. ಸಾರ್ವಜನಿಕ ಕ್ಷೇತ್ರದಲ್ಲಿ ಕೆಲಸ ಮಾಡಬೇಕೆಂಬ ಹಂಬಲ ಅಂತರ್ಯದಲ್ಲಿ ಅಡಗಿತ್ತು. ಆದರೆ ಎದೆಯಲ್ಲಿನ ಈ ಹಂಬಲ ದನಿಯಾಗಿರಲಿಲ್ಲ." ರಾಮಯ್ಯನವರ ಈ ಮಾತಿನ ಅರ್ಥ ಸ್ಪಷ್ಟವಾಗಿಯೇ ಇದೆ. ಅದೇನೆಂದರೆ ಕೇವಲ ವಕೀಲನಾಗಿ ಹಣ ಮಾಡುವುದರಲ್ಲಿ ಸಾರ್ಥಕತೆ ಇಲ್ಲ ಎಂಬ ಸತ್ಯ ಗೋಚರವಾಗಿ ತಾನು ಹುಟ್ಟಿದ ಮಣ್ಣಿಗಾಗಿ ಏನನ್ನಾದರೂ ಮಾಡಬೇಕೆಂಬ ಧ್ಯೇಯವೊಂದು ಅವರ ಅಂತರ್ಯದಲ್ಲಿ ಮೂಡಿತು. ಬಹುಶಃ ತನ್ನ ತಾಲ್ಲೂಕು ಕೇಂದ್ರವಾದ ಕುಣಿಗಲ್‌ನ್ನು ತನ್ನ ಕಾರ್ಯಕ್ಷೇತ್ರವಾಗಿ ಮಾಡಿಕೊಂಡು ಸಾಮಾಜಿಕ ರಂಗಕ್ಕೆ ಧುಮುಕ ಬೇಕೆಂಬ ಒಳ ಆಸೆ ಅವರಲ್ಲಿ ಮೂಡಿತು ಎಂದು ಕಾಣುತ್ತದೆ. ಅದೇ ಸಮಯಕ್ಕೆ ಸರಿಯಾಗಿ ಕುಣಿಗಲ್‌ಗೆ ಮುನ್ಸೀಫ್‌ಕೋರ್ಟ್ ಕೂಡ ಮಂಜೂರಾದದ್ದು ಅವರ ಆಸೆಗೆ ಮತ್ತಷ್ಟು ಇಂಬು ನೀಡಿತ್ತು. ೧೯೭೦ರಲ್ಲಿ ತನ್ನ ತಾಲ್ಲೂಕು ಕೇಂದ್ರವಾದ ಕುಣಿಗಲ್‌ಗೆ ಬಂದು ವಕೀಲಿ ವೃತ್ತಿಯನ್ನು ಮುಂದುವರೆಸುತ್ತಾರೆ.

ಆಗಿನ ಕಾಲಕ್ಕೆ ಕುಣಿಗಲ್ ಅಲ್ಲಿನ ದೊಡ್ಡಕೆರೆ ಮತ್ತು ಕುದುರೆ ಫಾರಂಗಳಿಗಾಗಿ ವಿಖ್ಯಾತವಾಗಿತ್ತಾದರೂ ಸಮಾಜದಲ್ಲಿ ಅಜ್ಞಾನ ಮತ್ತು ಬಡತನಗಳು ಮೇರೆ ಮೀರಿ ತಾಂಡವಾಡುತ್ತಿದ್ದವು. ಅನಕ್ಷರಸ್ಥರ ಸಂಖ್ಯೆ ಹೆಚ್ಚು ಪ್ರಮಾಣದಲ್ಲಿದ್ದುದಲ್ಲದೆ ಸಾಮಾಜಿಕ ಎಚ್ಚರವೂ ಜನಸಾಮಾನ್ಯರಲ್ಲಿ ಅಷ್ಟಾಗಿ ಇರಲಿಲ್ಲ.

ಇಂಥ ಸಂದರ್ಭದಲ್ಲಿ ತನ್ನ ನೆಲದ ಜನಸಾಮಾನ್ಯರಿಗಾಗಿ ಏನಾದರೂ ಮಾಡಬೇಕೆಂಬ ಹಂಬಲದಿಂದ ಅನೇಕ ಪ್ರಯತ್ನಗಳಿಗೆ ರಾಮಯ್ಯ ಕೈ ಹಾಕಿದರು. ಅಂಥ ಮೊದಲನೇ ಪ್ರಯತ್ನವೇ ಪಕ್ಷೇತರ ಅಭ್ಯರ್ಥಿಯಾಗಿ ಹುಲಿಯೂರುದುರ್ಗ ವಿಧಾನಸಭಾ ಕ್ಷೇತ್ರಕ್ಕೆ ಚುನಾವಣೆಗೆ ನಿಂತದ್ದು. ಅದಮ್ಯ ಉತ್ಸಾಹ, ಏನನ್ನಾದರೂ ಸಾಧಿಸಲೇಬೇಕೆಂಬ ಹಠ ಇತ್ತಾದರೂ ಬೇರುಬಿಟ್ಟು ರೂಪುಗೊಂಡಿದ್ದ ವ್ಯವಸ್ಥೆಯಲ್ಲಿ ಗೆಲ್ಲುವುದು ಅಷ್ಟು ಸುಲಭದ ಮಾತಾಗಿರಲಿಲ್ಲ. ಅಲ್ಲದೆ ಈಗಾಗಲೇ ಹೆಸರು ಮಾಡಿದ್ದ ಹಿರಿಯ ರಾಜಕಾರಣಿ ಎಸ್. ಹುಚ್ಚಮಾಸ್ತಿಗೌಡರ ಕ್ಷೇತ್ರ ಅದಾಗಿತ್ತು. ಸಾಮಾಜಿಕ ಕ್ಷೇತ್ರಕ್ಕೆ ಅಷ್ಟಾಗಿ ಪರಿಚಿತರಲ್ಲದ ರಾಮಯ್ಯ ತಮ್ಮ ಪ್ರಾಮಾಣಿಕ ಮಾತುಗಳ ಮೂಲಕ ಇಡೀ ಕ್ಷೇತ್ರದಲ್ಲಿ ಸಂಚಲನ ವನ್ನು ಉಂಟು ಮಾಡಿದ್ದರು ಎಂಬುದೇನೋ ನಿಜ. ಆದರೂ ಸೋತರು. ಚುನಾವಣೆಯಲ್ಲಿ ಸೋತರೂ ಅದೊಂದು ಅನುಭವವಾಗಿ ರಾಮ್ಯನವರ

ಆಲೋಚನೆಗೆ ಹೊಸ ದಾರಿಗಳನ್ನು ತೆರೆಯಿತು. ಈ ಚುನಾವಣೆಯ ಮೂಲಕ ಉಂಟಾಗಿದ್ದ ಅವರ ಜನಪ್ರಿಯತೆ ಕುಣಿಗಲ್‌ನ ವಕೀಲಿವೃತ್ತಿಗೆ ಮತ್ತಷ್ಟು ಉತ್ತೇಜನ ನೀಡಿತ್ತು ಎಂದರೆ ಆಶ್ಚರ್ಯವಲ್ಲ.

ಇದೇ ಸಂದರ್ಭದಲ್ಲಿ ತಾಲ್ಲೂಕ್ ಬೋರ್ಡ್ ಚುನಾವಣೆಯೂ ಬಂದದ್ದು ಅವರಿಗೆ ಸಾರ್ವಜನಿಕ ಕ್ಷೇತ್ರದಲ್ಲಿ ತೊಡಗಿಕೊಳ್ಳುವ ಮತ್ತೊಂದು ದಾರಿಯನ್ನು ತೋರಿಸಿತು. ಯುವಕರಾದ ರಾಮಯ್ಯ ನಿರಾಯಾಸವಾಗಿ ತಾಲ್ಲೂಕು ಬೋರ್ಡ್‌ಗೆ ಆಯ್ಕೆಯಾದರು. ಆಗಿನ್ನೂ ತುಮಕೂರು ಜಿಲ್ಲೆಯ ರಾಜಕೀಯ ಮಂದಗತಿಯಲ್ಲಿ ತನ್ನ ಇರುವನ್ನು ಗುರುತಿಸಿಕೊಳ್ಳುತ್ತಿದ್ದ ಕಾಲ. ಆ ಸಂದರ್ಭದಲ್ಲಿ ಅನೇಕ ಹಿರಿಯರ ನಡುವೆ ರಾಮಯ್ಯ ಮಹಾಭಾರತದ ಅಭಿಮನ್ಯುವಿನಂತೆ ಹೆಸರು ಮಾಡಿದ್ದರು. ಅಲ್ಲಿಯ ಹಿರಿಯ ರಾಜಕಾರಣಿ ಶ್ರೀ ಸಾಗರೇನಹಳ್ಳಿ ರೇವಣ್ಣನವರು ರಾಮಯ್ಯನವರಿಗೆ ಅಭಿಮನ್ಯುವೆಂದೇ ಹೆಸರಿಟ್ಟಿದ್ದರು. ತಾಲ್ಲೂಕು ಬೋರ್ಡ್ ಸದಸ್ಯತ್ವದ ಜೊತೆಗೆ ಕುಣಿಗಲ್ ರೋಟರಿ ಸಂಘದ ಅಧ್ಯಕ್ಷರಾಗಿ, ವಕೀಲರ ಸಂಘದ ಅಧ್ಯಕ್ಷರಾಗಿ, ವಿವಿಧ ಅಭಿವೃದ್ಧಿ ಸಮಿತಿಗಳ ಸದಸ್ಯರಾಗಿ ಸದಾ ಚೈತನ್ಯಶಾಲಿ ವ್ಯಕ್ತಿತ್ವವನ್ನು ರಾಮಯ್ಯ ರೂಢಿಸಿಕೊಂಡರು.

ಈ ಸಂದರ್ಭದಲ್ಲಿ ರಾಮಯ್ಯನವರ ಒಂದು ಮಾತನ್ನು ಉಲ್ಲೇಖಿಸುವ ಅಗತ್ಯವಿದೆ. "ಕುಣಿಗಲ್‌ನಲ್ಲಿಯೂ ನನ್ನ ವಕೀಲಿ ಕಸುಬು ಚೆನ್ನಾಗಿಯೇ ನಡೆಯುತ್ತಿತ್ತು. ಕೇವಲ ಲಗ್ನಪತ್ರಿಕೆಗಳಲ್ಲಿ, ಸಭೆ ಸಮಾರಂಭಗಳಿಗೆ ಮುದ್ರಿಸುವ ಆಹ್ವಾನ ಪತ್ರಿಕೆಗಳ ವಕೀಲ ನಾಗಿರಲಿಲ್ಲ, ನಿಜವಾಗಿಯೂ ನಾನು ಸುಪ್ರಸಿದ್ಧ ವಕೀಲನಾಗಿದ್ದೆ. ಕೈ ತುಂಬಾ ಕೆಲಸ, ಜೇಬಿನ ತುಂಬಾ ಹಣ, ಬಂಗಲೆ ಕಟ್ಟಿಸಿದೆ, ಕಾರು ಕೊಂಡುಕೊಂಡೆ. ಒಂದಲ್ಲ ಎರಡಲ್ಲ ಮೂವತ್ತು ಎಕರೆ ಜಮೀನು ಕೊಂಡು ಇಂದು ವನಸಿರಿಯಂತಿರುವ ನನ್ನ ಬದುಕಿನ ಸಾಧನೆ ಎಂದು ನಾನು ಹೆಮ್ಮೆಪಡುವ ತೋಟವನ್ನು ಮಾಡಿದೆ." ಬಾಲ್ಯದಿಂದಲೂ ಹಣಕಾಸಿನ ವಿಚಾರದಲ್ಲಿ ಅತ್ಯಂತ ಶಿಸ್ತು ಮತ್ತು ಪ್ರಾಮಾಣಿಕತೆಯನ್ನು ರೂಢಿಸಿಕೊಂಡು ಬಂದ ರಾಮಯ್ಯ ಸಾರ್ವಜನಿಕ ಕ್ಷೇತ್ರದಲ್ಲಿ ಲಂಚದ ಹಣಕ್ಕಾಗಿ ಎಂದೂ ಕೈಚಾಚಲಿಲ್ಲ. ಭ್ರಷ್ಟ ಬದುಕಿಗೆ ಇಂಬು ಕೊಡಲಿಲ್ಲ. ಪ್ರಸಿದ್ಧ ವಕೀಲನಾಗಿ ದುಡಿದ ಯಥೇಚ್ಛ ಹಣವನ್ನು ವಿನಿಯೋಗಿಸಿ ಅಗತ್ಯ ಅನುಕೂಲಗಳನ್ನು ಕಲ್ಪಿಸಿಕೊಂಡರು. ಕುಣಿಗಲ್ ಮದ್ದೂರ್ ಹೆದ್ದಾರಿಯಲ್ಲಿ ಮೂವತ್ತು ಎಕರೆ ಬಂಜರು ಜಮೀನನ್ನು ಕೊಂಡು ಅಪಾರ ಪರಿಶ್ರಮದ ಮೂಲಕ ಹಸಿರು ಚಿಮ್ಮಿಸಿದರು. ಅವರು ಜಮೀನು ಕೊಂಡಾಗ ಅದನ್ನು ನೋಡಿ ಇಲ್ಲೇನು ಬೆಳೆಯಲು ಸಾಧ್ಯ ಎಂದು ನಕ್ಕವರೂ ಉಂಟು. ರಾಮಯ್ಯನವರ ಅದೃಷ್ಟಕ್ಕೆ ಒಳ್ಳೆಯ ನೀರು ಸಿಕ್ಕಿತು. ಸ್ವಂತ ಪರಿಶ್ರಮದ ಮೂಲಕ ನಿಜವಾದ ಕೃಷಿಕನೇ ಆಗಿದ್ದ ರಾಮಯ್ಯ ಅನೇಕ ರೈತರಿಗೆ ಆದರ್ಶ ಎನ್ನುವಂಥ ಕೃಷಿಯನ್ನು ಅಲ್ಲಿ ರೂಪಿಸಿದರು.

ಇಷ್ಟೆಲ್ಲ ಅನುಕೂಲತೆಗಳಿದ್ದರೂ ಅವರ ಒಳಮನಸ್ಸಿನಲ್ಲಿ ತನ್ನ ಮಣ್ಣಿನ ಜನರ ಬದುಕನ್ನು ಕುರಿತು ಅನೇಕ ದುಮ್ಮಾನಗಳು ಕಾಡುತ್ತಿದ್ದವು. ಬಡತನ, ಅನಕ್ಷರತೆ, ನಿರುದ್ಯೋಗ, ಅಜ್ಞಾನ ಜನರನ್ನು ಕಾಡುತ್ತಿದ್ದವು. ಇವೆಲ್ಲವುಗಳಿಗೆ ಮುಕ್ತಿ ಇಲ್ಲವೇ ಎಂಬ ಅಂತರ್ಯದ ನೋವು ಅವರನ್ನು ಮತ್ತಷ್ಟು ಸಮಾಜಮುಖಿಯಾಗಿಸಿತು. ಈ ರೀತಿಯ ಅಂತರ್ಯದ ದುಮ್ಮಾನಗಳಲ್ಲಿ ಮನಸ್ಸು ಹೊಯ್ದಾಡುತ್ತಿದ್ದಾಗ ನಡೆದ ಒಂದು ಘಟನೆ ಅವರ ಕಣ್ಣನ್ನೂ ತೆರೆಯಿಸಿತು. ಅವರೆ ಹೇಳಿಕೊಳ್ಳುವಂತೆ ಅವರ ಸಾಮಾಜಿಕ ಪ್ರಜ್ಞೆಗೆ ಕಿಚ್ಚು ಹಚ್ಚಿದ ದಿನ ಅದು.

"ಅದೊಂದು ದಿನ, ೧೯೭೭ನೇ ಇಸವಿಯ ಒಂದು ಸಂಜೆ ನನ್ನ ಬದುಕಿನಲ್ಲಿ ಬಹಳ ಪ್ರಮುಖವಾದ ದಿನ. ನನ್ನ ಸಾಮಾಜಿಕ ಪ್ರಜ್ಞೆಗೆ ಕಿಚ್ಚು ಇಕ್ಕಿದ ದಿನ. ನನ್ನಲ್ಲಿದ್ದ ಸಾಮಾಜಿಕ

ಜೀವನದ ಆಕರ್ಷಣೆಗೆ ತೀವ್ರತೆಯನ್ನು ತಂದ ದಿನ. ಹಣ ಸಂಪಾದನೆ ಮಾಡುವ ಯಂತ್ರವಾಗಿದ್ದ ನನಗೆ ಜೀವ ಕೊಟ್ಟ, ವಿದ್ಯೆ ಕೊಟ್ಟ, ಹಣ, ಆಸ್ತಿ, ಅಧಿಕಾರ ಕೊಟ್ಟ ಜನರ ಬಗ್ಗೆ ನನಗಿರಬೇಕಾದ ಸಾಮಾಜಿಕ ಹೊಣೆಗಾರಿಕೆಯ ಕುರಿತು ಜ್ಞಾನೋದಯ ವಾದ ದಿನ ಅದು. ಸಂಜೆ ಸುಮಾರು ಆರು ಗಂಟೆ ಸಮಯ, ಕಚೇರಿಯ ಗುಮಾಸ್ತರು ಮತ್ತು ನನ್ನ ಕಿರಿಯ ವಕೀಲರುಗಳು ಅವರವರ ಕೆಲಸದಲ್ಲಿ ಮಗ್ನರಾಗಿದ್ದರು. ಕೆಲವು ಜನ ಕಕ್ಷಿದಾರರು ಕುಳಿತಿದ್ದರು. ಆಗ ಕಪ್ಪನೆ ಬಣ್ಣದ ಹಳ್ಳಿಯ ಒಂದು ಹೆಂಗಸು ಮತ್ತು ಗಂಡಸು ನನ್ನ ಆಫೀಸಿಗೆ ಬಂದು ನನ್ನಿಂದ ಬಹುದೂರದಲ್ಲೇ ನಿಂತು ಕೈಮುಗಿದರು. ಯಾವುದೋ ಕಟ್ಟಳೆಯ ಕಟ್ಟಿನಲ್ಲಿ ಮಗ್ನನಾಗಿದ್ದ ನಾನು ಕತ್ತೆತ್ತಿ ನೋಡಿದೆ. ಆ ಎರಡು ಜೀವಗಳು ಮಿಕಿ ಮಿಕಿ ನನ್ನನ್ನು ನೋಡುತ್ತಿದ್ದವು. ಕೋಪ ಅನ್ನುವುದು ಸದ್ಗುಣವೋ, ದುರ್ಗುಣವೋ ನನಗೆ ಗೊತ್ತಿಲ್ಲ. ಆದರೆ ಕೋಪ ನನ್ನ ಬದುಕಿನಲ್ಲಿ ಬೇರೂರಿದ ಗುಣ. ಈ ಕೋಪದ ಕೈಗೆ ಬುದ್ಧಿ ಕೊಟ್ಟು ಅದಕ್ಕೆ ಸಾಕಷ್ಟು ಬೆಲೆ ತೆತ್ತಿದ್ದೇನೆ. ಈ ಕೋಪಕ್ಕೆ ಹೆದರಿ, ಅನೇಕ ಜನ ನನ್ನ ಕಕ್ಷಿಗಾರರು ನನ್ನೊಡನೆ ಅತ್ಯಂತ ಭಯದಿಂದ ಇರುತ್ತಿದ್ದರು. ಅದಕ್ಕಾಗಿಯೇ ಏನೋ `ಏನು ಹೇಳಿ` ಎಂದು ನಾನು ಪ್ರಶ್ನಿಸಿದರೂ ಈ ಕುಳಗಳು ಬಾಯಿ ಬಿಡಲಿಲ್ಲ. ಕೂರಲು ಹೇಳಿದೆ.

ಹುಲಿಯೂರುದುರ್ಗ ಹೋಬಳಿಯ ಹಳೇ ಊರಿನ ಕರಿಮದ್ದ ಬಂದಿದ್ದ ಆ ಗಂಡಸು, ಕುಣಿಗಲ್ ತಾಲ್ಲೂಕಿನ ಅವನ ಜೊತೆಯಲ್ಲಿದ್ದ ಹೆಂಗಸು ಅವನ ತಂಗಿ. ದಾಖಲೆಯಲ್ಲಿ ತಿಮ್ಮಮ್ಮ. ಕರೆಯುವುದು ತಿಮ್ಮಿ. ಅದಕ್ಕಾಗಿಯೇ ನಾನು ಇದನ್ನು ಕರಿಮದ್ದನ ತಂಗಿಯ ಕಥೆ ಎನ್ನಲು ಇಚ್ಛಿಸುತ್ತೇನೆ. ಕಥೆಯೆಂದರೆ ಇದು ಕಟ್ಟುಕಥೆಯಲ್ಲ. ನಿಜ ಜೀವನದಲ್ಲಿ ನಡೆದ ಒಂದು ಸಾಮಾನ್ಯವಾದ ಆದರೆ ಸತ್ಯವಾದ ಘಟನೆ. ನನ್ನ ಲೇಖನಿಯಿಂದ ಒಂದು ಘಟನೆಯಾಗುವ ಈ ವಸ್ತು, ಕಥೆ ಬರೆಯುವ ನನ್ನ ಗೆಳೆಯರಿಗೆ ಒಂದು ಉತ್ತಮ ಕಥಾವಸ್ತುವಾಗುತ್ತಿತ್ತೆಂದು ಕಾಣುತ್ತದೆ.

ಹಳೇವೂರಿನ ಕರಿಮದ್ದನ ತಂಗಿ ತಿಮ್ಮಮ್ಮನನ್ನು ೬೦ ವರ್ಷ ವಯಸ್ಸಿನ ಬೋರಯ್ಯ ನಿಗೆ ಮೊದಲನೆ ಹೆಂಡತಿ ಬದುಕಿರುವಾಗಲೇ ಎರಡನೇ ಹೆಂಡತಿಯಾಗಿ ಮದುವೆ ಮಾಡಿಕೊಟ್ಟರು. ಎರಡು ಮಕ್ಕಳೂ ಆದವು. ಕಾಲಕ್ರಮೇಣ ಇಬ್ಬರು ಹೆಂಡಿರ ಕಾಟ ಶುರುವಾಯಿತು. ಬೋರಯ್ಯನಿಗೆ ತಿಳಿದವರು ಹೇಳಿದರು. ಮೊದಲ ಹೆಂಡತಿ ಬದುಕಿರು ವಾಗಲೇ ಎರಡನೇ ಹೆಂಡತಿಯನ್ನು ಮದುವೆಯಾಗಿರುವುದರಿಂದ ಕಿರಿ ಹೆಂಡತಿ ತಿಮ್ಮಮ್ಮ ನಿಗೆ ಮತ್ತು ಅವಳ ಮಕ್ಕಳಿಗೆ ಆಸ್ತಿಯಲ್ಲಿ ಯಾವ ಭಾಗವೂ ಬರುವುದಿಲ್ಲವೆಂದು, ಇದು ಇರುವ ಕಾನೂನು ಕೂಡ. ಮುದಿ ಗಂಡನನ್ನು ಮದುವೆಯಾಗಿ ಎರಡು ಮಕ್ಕಳನ್ನು ಹೆತ್ತ ಈ ಹೆಣ್ಣು ಏನು ಮಾಡಬೇಕು ಈಗ? ಹಾಲಿಗೆರೆ ಗುಂಡೇಗೌಡರು, ಕೊರಟಿ ಹನುಮಂತಯ್ಯ, ಅಮೃತೂರಿನ ರಾಮಣ್ಣಗೌಡರು ನ್ಯಾಯ ಮಾಡಿ ಒಂದು ನಿವೇಶನ, ೨ ಗುಂಟೆ ಹೊಲ, ೧೦ ಗುಂಟೆ ಗದ್ದೆಯನ್ನು ಬೋರಯ್ಯ ತಿಮ್ಮಮ್ಮನಿಗೆ ಬರೆದುಕೊಡುವಂತೆ ತೀರ್ಮಾನಿಸಿದರು. ಈ ತೀರ್ಮಾನದಂತೆ ತಿಮ್ಮಮ್ಮ ಬೋರಯ್ಯ ಮತ್ತು ಇತರರು ಕುಣಿಗಲ್‌ಗೆ ಬಂದು ತಿಮ್ಮಮ್ಮನಿಗೆ ಕೊಡುವ ಭಾಗದ ಆಸ್ತಿಯ ಪತ್ರ ಬರೆಸಿದರು. ಪತ್ರ ಬರೆದವರು, ಜಿನ್ನಾಗರದ ಶ್ರೀಗುಂಡಯ್ಯನವರು. ಈ ಪತ್ರ ಸಬ್‌ರಿಜಿಸ್ಟ್ರಾರ್ ಅವರ ರೂಬು ರೂಬು ರಿಜಿಸ್ಟ್ರಾಯಿತು. ತುಂಬಾ ಸಂತೋಷದಿಂದ ತಿಮ್ಮಮ್ಮ ಮನೆಗೆ ಹೋದಳು. ಮೂರು ದಿನಗಳಾದ ಮೇಲೆ ಕುಣಿಗಲ್‌ಗೆ ಬಂದು ರಿಜಿಸ್ಟ್ರಾರ್ ಆಫೀಸಿನಲ್ಲಿ ಪತ್ರ ತೆಗೆದುಕೊಂಡು ಮನೆಗೆ ಬಂದು ಮನೆ ದೇವರು ಹಳೇವೂರಮ್ಮನ ಹೆಸರು ಹೇಳಿ ಪೂಜಿಸಿ ನನ್ನ ಹಳೆಯ ಟ್ರಂಕಿನಲ್ಲಿ ಇಟ್ಟಳು.

ಮುಂಗಾರು ಮಳೆ ಬಿದ್ದು ಭೂತಾಯಿ ತಂಪಾದಳು. ಬೋರಯ್ಯನವರು ತಾನು ತಿಮ್ಮಮ್ಮನವರಿಗೆ ಬರೆದುಕೊಟ್ಟಿದ್ದ ಜಮೀನಿಗೆ ಹೇರು ಕಟ್ಟಿಕೊಂಡು ಉಳಲು ಬಂದರು. "ನನಗೆ ನನ್ನ ಮಕ್ಕಳಿಗೆ ಬರೆದುಕೊಟ್ಟಿರುವ ಜಮೀನನ್ನು ಏಕೆ ಉಳುತ್ತೀಯ? ಎಂದು ತಿಮ್ಮಮ್ಮ ಕೇಳಿದರೆ, ಯಾರೇ ಹೇಳಿದೋರು ನಿನಗೆ- ನಾನೆಲ್ಲೆ ನಿನಗೆ ಆಸ್ತಿ ಬರೆದು ಕೊಟ್ಟಿದ್ದೇನೆ- ನೀನೇ ನನ್ನ ಆಸ್ತಿಯಲ್ಲಿರುವ ನಿನ್ನ ಭಾಗವನ್ನು ನನಗೆ ಬರೆದುಕೊಟ್ಟಿದ್ದೀಯ ಎಂದ ಬೋರಯ್ಯ. ಆಘಾತವಾಯಿತು. ಈ ಹೆಣ್ಣು ಮಗಳು ಓಡಿದಳು ತೌರೂರು ಹಳೇವೂರಿಗೆ. ಈ ಊರು, ನಮ್ಮ ಕತೆಗಾರ ಡಾ. ಕರೀಗೌಡ ಬೀಚನಹಳ್ಳಿ ಅವರ ಊರಿಗೆ ಅತಿ ಸಮೀಪದ್ದು. ನಡೆದ ವಿಷಯವನ್ನು ತಮ್ಮನಿಗೆ ತಿಳಿಸಿ ಅವನನ್ನು ಕರೆದು ತಂದು ದುಬಾರಿಫೀಸಿನ ಕಡುಕೋಪಿಯಾದ ಸುಪ್ರಸಿದ್ಧ ವಕೀಲಿನ ಮುಂದೆ ದೈನ್ಯವಾಗಿ ನಿಂತಿದ್ದಾಳೆ. ಕಥೆಯೆಲ್ಲಾ ಕೇಳಿ ಪತ್ರವನ್ನು ಓದಿದೆ. ವಿವರವನ್ನೆಲ್ಲಾ ಬರೆದರೆ ಇದೇ ದೊಡ್ಡದಾಗುತ್ತೆ. ಮಾಡಿದ ಅಪರಾಧವನ್ನು ಇಲ್ಲವೆಂದು ವಾದಿಸುವುದರಲ್ಲಿ, ಕಕ್ಷಿಗಾರನು ಸೃಷ್ಟಿಸಿದ ದಾಖಲೆಗಳ ಆಧಾರದ ಮೇಲೆ ಸುಳ್ಳು ಕೇಸುಗಳನ್ನು ಅತ್ಯಂತ ಶ್ರದ್ಧೆಯಿಂದ ವಾದಿಸುವ ಚತುರನಾಗಿದ್ದೆ ನಾನು ಆ ವೇಳೆಗೆ. ಈ ಕಥೆ ಕೇಳಿದ ಮೇಲೆ, ಪತ್ರ ಓದಿದ ಮೇಲೆ ನನ್ನ ಶರೀರದಲ್ಲಿ ವಿದ್ಯುತ್ ಸಂಚರಿಸಿದಂತಾಯಿತು. ಮೂಕನಾದೆ, ಅವೇಳೆಯಾದರೂ, ಹೋಟೆಲಿನ ಗಬ್ಬು ಟೀ ತರಿಸಿ ಕುಡಿದು, ಒಂದಾದ ಮೇಲೆ ಒಂದರಂತೆ ಸಿಗರೇಟು ಸೇದಿದೆ. ಎಂತಹ ಜನ? ಶೋಷಣೆಗೆ, ಮೋಸಕ್ಕೆ, ಅನ್ಯಾಯಕ್ಕೆ ಒಂದು ಮಿತಿ ಬೇಡವೇ- ಸುಪ್ತವಾಗಿದ್ದ ನನ್ನ ಚೇತನ ಎಚ್ಚರಗೊಂಡಿತು. ನಡೆದಿದ್ದು ಇಷ್ಟೆ ಬೋರಯ್ಯನು ಈ ತಿಮ್ಮಮ್ಮನಿಗೆ ಬರೆದುಕೊಟ್ಟ ಆಸ್ತಿಗೆ ಸಂಬಂಧಪಟ್ಟ ಪತ್ರ ಬರೆದ ಮೇಲೆ ಅದು ರಿಜಿಸ್ಟರ್ಡ್ ಆಗುವ ಮೊದಲು ತಿಮ್ಮಮ್ಮನೇ ಬೋರಯ್ಯನಿಗೆ ಬರೆದು ಕೊಟ್ಟ ಪತ್ರವಾಗಿ ಬದಲಾವಣೆಯಾಗಿ ರಿಜಿಸ್ಟರ್ಡ್ ಆಗಿದೆ! ನೀವು ನಂಬುತ್ತೀರ ನಂಬಿದರೆ ನಂಬಿ ಬಿಟ್ಟರೆ ಬಿಡಿ. ಇದು ಸೂರ್ಯಚಂದ್ರರ ಬೆಳಕಿನಷ್ಟೇ ಸತ್ಯ. ಈ ಪತ್ರ ಈಗಲೂ ಇದೆ. ಬರೆದವರು, ಸಾಕ್ಷಿ ಹಾಕಿದವರೂ ಇದ್ದಾರೆ. ಇದು ಹೇಗೆ ಸಾಧ್ಯವೆಂದು ನಿಮಗೆ ಕುತೂಹಲವಿರಬಹುದು. ತುಂಬಾ ಸುಲಭವಾಗಿ ಸಹಜವಾಗಿ ಮಾಡಿದ್ದಾರೆ ಈ ಕೆಲಸವನ್ನು. ಪತ್ರದಲ್ಲಿ "ನನಗೆ" ಎನ್ನುವ ಕಡೆ "ನಿನಗೆ", "ನೀನು" ಎನ್ನುವ ಕಡೆ "ನಾನು", "ನಿನ್ನದು" ಎನ್ನುವ ಕಡೆ ನನ್ನದು ಎಂದು ತಿದ್ದಿ ರಿಜಿಸ್ಟರ್ಡ್ ಮಾಡಿಸಿದ್ದಾರೆ. ಎಂತಹ ವಂಚಕರು- ಮೂದಿಗೂಬೆಯನ್ನು ಮದುವೆಯಾಗಿ ಅವನಿಂದ ಎರಡು ಮಕ್ಕಳನ್ನು ಹೆತ್ತುಹೊತ್ತು ಸಾಕುವ ಸಂಕಟ ಒಂದು ಕಡೆ. ಆದರೆ ಈ ವಂಚಕ ಘೋರ ಕೃತ್ಯ ಇನ್ನೊಂದು ಕಡೆ.

ಒಂದು ಕ್ಷಣ ನಾನೇ ತುಸು ಬೆವರಿದೆ ಹಾಗೂ ಬೆಚ್ಚಿದೆ. ಕಾರಣ, ಸಂಪೂರ್ಣ ಅವಿದ್ಯಾವಂತರಾದ ನನ್ನ ನಾಲ್ಕು ಜನ ಅಕ್ಕಂದಿರು ನನ್ನ ಕಣ್ಣ ಮುಂದೆ ಬಂದರು. ಇವರಿಗೆ ಯಾರಿಗಾದರೂ ಇಂತಹ ವಂಚನೆ, ಅನ್ಯಾಯ ಆದರೆ? ನಮ್ಮ ಮಧ್ಯೆ ಇಂತಹ ವಂಚನೆಗೆ ಗುರಿಯಾದ ಅದೆಷ್ಟು ಜನ ಅಕ್ಕತಂಗಿಯವರಿದ್ದಾರೋ ಅನ್ನಿಸಿತು. ಮೊಟ್ಟಮೊದಲಿಗೆ ಕಕ್ಷಿದಾರನನ್ನು ನಾನು ನೋಡುವ ದೃಷ್ಟಿಯಲ್ಲಿ, ನಾನು ಅವರನ್ನು ಮಾತನಾಡಿಸುವ ಶೈಲಿಯಲ್ಲಿ ಬದಲಾವಣೆ ಆದುದನ್ನು ಆ ದಿನ ನನ್ನ ಕಚೇರಿಯಲ್ಲಿದ್ದ ಕಿರಿಯ ಮಿತ್ರ ವಕೀಲರು ಗಮನಿಸಿರಬಹುದು. ಭಾರವಾದ ಹೃದಯದಿಂದ, ಕಸಿವಿಸಿಗೊಂಡ ಚಿಂತನೆಗಳ ನಡುವೆ "ನೀವು ಬೆಳಿಗ್ಗೆ ಬನ್ನಿ" ಎಂದು ಹೇಳಿ ಅವರನ್ನು ಕಳುಹಿಸಿದೆ. ಭಾರವಾದ ಹೃದಯದಲ್ಲಿ ಎಂತಹುದೋ ಯೋಚನೆ. ಇಂಥ ಸನ್ನಿವೇಶದಲ್ಲಿ ಆಗ ಮೈಸೂರು ರೇಷ್ಮೆ, ಜಿತ್ತನೆ ವಲಯದ ಸಹ ನಿರ್ದೇಶಕರಾಗಿದ್ದ ಶ್ರೀ ಕೆ.

ವೀರಯ್ಯನವರು ಮತ್ತು ಅವರ ಸಹೋದ್ಯೋಗಿಗಳು ನನ್ನ ಕಚೇರಿಗೆ ಬಂದರು. ಅವರು ಇಲಾಖೆ ಬಗ್ಗೆ, ಕರ್ನಾಟಕ ರೇಷ್ಮೆ ಸಂಘದ ಬಗ್ಗೆ ಏನೇನೋ ಹೇಳಿದರು. ಆದರೆ ನನಗೆ ಆ ದಿನ ಯಾವುದರ ಬಗ್ಗೆಯೂ ಆಸಕ್ತಿ ಉಳಿದಿರಲಿಲ್ಲ. ನನ್ನ ತಲೆಯ ತುಂಬಾ ಕರಿಮದ್ದನ ತಂಗಿಯ ಬದುಕಿನ ಬವಣೆಯೇ ತುಂಬಿತ್ತು. ತುಂಬಾ ಯಾಂತ್ರಿಕವಾಗಿ ನಿಮಗೆ "ಏನಾಗಬೇಕು" ಎಂದು ಕೇಳಿದೆ: "ಕರ್ನಾಟಕ ರೇಷ್ಮೆ ಸಂಘದ ಸದಸ್ಯರಾಗಬೇಕು ಅದರ ಶುಲ್ಕ ೧೦.೦೦ ರೂಪಾಯಿ" ಎಂದರು. ನನಗೆ ಇವರಿಂದ ಬಿಡುಗಡೆ ಬೇಕಾಗಿತ್ತು. ೧೦.೦೦ ರೂಪಾಯಿ ಕೊಟ್ಟು ರಸೀದಿ ಪಡೆದು ಇವರಿಂದ ಬಿಡುಗಡೆ ಹೊಂದಿದೆ. ಆದರೆ ನಾನು ಆ ದಿನ ಕರ್ನಾಟಕ ರೇಷ್ಮೆ ಸಂಘದ ಸದಸ್ಯನಾದೆ. ನನಗೆ ಅರಿವಿಲ್ಲದಂತೆ ಅತ್ಯಂತ ಸ್ವಾಭಾವಿಕವಾಗಿ. ಆದರೆ ಮುಂದೆ ಬಹಳ ಪ್ರಮುಖ ಬೆಳವಣಿಗೆಗಳಿಗೆ ನಾಂದಿ ಹಾಡಿದ ಘಟನೆ ನಡೆದುಹೋಗಿತ್ತು."

## ರೇಷ್ಮೆ ಸಂಘದ ಅಧ್ಯಕ್ಷ

ಕರಿಮದ್ದನ ಕರಳು ಕಲಕುವ ಘಟನೆ ನಡೆದುದ್ದಕ್ಕೂ ಅದೇ ಸಂದರ್ಭದಲ್ಲಿ ರೇಷ್ಮೆ ಸಂಘದ ಸದಸ್ಯನಾದುದ್ದಕ್ಕೂ ಕಾರ್ಯ ಕಾರಣ ಸಂಬಂಧವಿದೆ ಎನ್ನಿಸುತ್ತದೆ. ಅಂದಿನಿಂದಲೇ ರಾಮಯ್ಯ ಬರೀ ದುಡ್ಡು ಮಾಡುವ ವಕೀಲಿ ವೃತ್ತಿಯನ್ನು ಎರಡನೇ ಆದ್ಯತೆಯನ್ನಾಗಿ ಇಟ್ಟು ಸಮಾಜಕಾರ್ಯವನ್ನು ಮೊದಲನೇ ಆದ್ಯತೆಯಾಗಿ ಪರಿಗಣಿಸಿದರು.

ರೇಷ್ಮೆ ಕುಣಿಗಲ್ ತಾಲ್ಲೂಕಿನ ಬಹುತೇಕ ಜನರಿಗೆ ಜೀವನಾಧಾರವಾಗಿದ್ದ ಕೃಷಿ. ಅದರಲ್ಲಿಯೂ ನೀರಾವರಿ ಇಲ್ಲದ ಒಣಗಾಡಿನ ಪ್ರದೇಶಗಳಲ್ಲಿ ಉಪ್ಪು ಮೆಣಸು ಬಟ್ಟೆಬರಗೆ ಕೂಡ ಇದೇ ಆಧಾರ. ರಾಮಯ್ಯನವರು ಈ ಹಿಂದೆಯೇ ತಿಳಿಸಿರುವಂತೆ ರೇಷ್ಮೆ ಕೃಷಿಯ ಜೊತೆಗೆ ಬದುಕಿ ಬಂದವರು. ವಕೀಲರಾಗಿ ಕೂಡ ತಮ್ಮ ತೋಟದಲ್ಲಿ ರೇಷ್ಮೆ ಹುಳು ಸಾಕಾಣಿಕೆಯನ್ನು ಮುಂದುವರಿಸಿದ್ದವರು. ಆ ಕಾಲದಲ್ಲಿ ರೇಷ್ಮೆ ಬೆಳೆಗಾರರನ್ನು ಕಾಡುತ್ತಿದ್ದ ಸಮಸ್ಯೆ ಒಂದೆರಡಲ್ಲ. ಕೈಗೆ ಬಂದರೆ ಬೆಳೆ ಇಲ್ಲದಿದ್ದರೆ ಕೊಳೆ ಎಂಬ ಗಾದೆ ಮಾತಿನಂತೆ ಕೈಗೆ ಬಂದರೆ ಮಾತ್ರ ಅದು ಗ್ಯಾರಂಟಿ. ಕುಣಿಗಲ್ ತಾಲ್ಲೂಕು ಪ್ರದೇಶವನ್ನು ಬಿತ್ತನೆ ಪ್ರದೇಶ ಎಂದು ಘೋಷಿಸಲಾಗಿತ್ತು. ಹಾಗಾಗಿ ಆ ಪ್ರದೇಶದ ರೈತರು ಬಿತ್ತನೆ ಗೂಡು ಬೆಳೆಯುವುದನ್ನು ಬಿಟ್ಟು ಬೇರೆ ತಳಿಗಳನ್ನು ಪ್ರಯೋಗಿಸುವಂತೆಯೇ ಇರಲಿಲ್ಲ. ಆದರೆ ರೋಗರಹಿತವಾದ ಬಿತ್ತನೆ ಸಿಗುತ್ತಿರಲಿಲ್ಲ. ಆದ್ದರಿಂದ ಬೆಳೆಯೂ ಗ್ಯಾರಂಟಿ ಇರಲಿಲ್ಲ. ಒಂದು ವೇಳೆ ಬೆಳೆ ಉತ್ತಮವಾಗಿ ಆದರೂ ಮಾರುಕಟ್ಟೆಯ ದರ ಸ್ಥಿಮಿತದಲ್ಲಿರುತ್ತಿರಲಿಲ್ಲ. ಈ ಎಲ್ಲ ಅವ್ಯವಸ್ಥೆಗಳನ್ನು ಸ್ವಂತ ಅನುಭವಿಸಿ ತಿಳಿದಿದ್ದರು ರಾಮಯ್ಯ. ಇಂಥ ಸಂದರ್ಭದಲ್ಲಿ ಬೇಳೆಗಾರರ ಸಂಘ ಸೇರಿದುದು ಒಂದು ಹೊಸ ಕ್ರಾಂತಿಗೆ ನಾಂದಿಯಾಯಿತು. ಟಿಪ್ಪುಸುಲ್ತಾನರ ಕಾಲದಿಂದಲೇ ರೇಷ್ಮೆ ಬೆಳೆಗೆ ಆದ್ಯತೆಯನ್ನು ನೀಡಲಾಗಿತ್ತಾದರೂ ರೈತರ ಕಷ್ಟಸುಖಗಳನ್ನು ಯಾರೂ ಹಂಚಿಕೊಂಡಿರಲಿಲ್ಲ. ೧೯೧೪ರಷ್ಟು ಹಿಂದೆಯೇ ಬ್ರಿಟಿಷರ ಆಡಳಿತದಲ್ಲಿಯೇ ಮೈಸೂರು ಪ್ರಾಂತ್ಯದಲ್ಲಿ ರೇಷ್ಮೆ ಇಲಾಖೆ ಅಸ್ತಿತ್ವಕ್ಕೆ ಬಂದಿತ್ತು. ೧೯೨೭ರಲ್ಲಿಯೇ ಮೈಸೂರು ರೇಷ್ಮೆ ಸಂಘವೂ ಸ್ಥಾಪನೆಯಾಗಿತ್ತು. ಇಷ್ಟೆಲ್ಲ ಆದರೂ ಬೆಳೆಗಾರರ ಕಷ್ಟಸುಖಗಳಿಗೆ ಯಾರೂ ಅಷ್ಟಾಗಿ ಸ್ಪಂದಿಸಿರಲಿಲ್ಲ. ಅನೇಕ ಹಿರಿಯರು ಆ ಬಗ್ಗೆ ಯೋಚಿಸಿದ್ದರಾದರೂ ಒಂದು ಸಂಘಟನಾತ್ಮಕ ಪ್ರಯೋಗ ನಡೆದಿರಲಿಲ್ಲ. ವೈ.ಕೆ. ರಾಮಯ್ಯನವರು ಕುಣಿಗಲ್ ವಲಯದಲ್ಲಿ ಆಗ ಇದ್ದ ಹಿರಿಯ ಅಧಿಕಾರಿ ಶ್ರೀ ಕೆ. ವೀರಯ್ಯನವರ ಸಲಹೆಯಂತೆ ರೇಷ್ಮೆ ಸಂಘದ ಸದಸ್ಯರಾದ್ದು ಒಂದು ಯೋಗಾಯೋಗ. ಕರಿಮದ್ದರಂಥ ಅನೇಕ ನತದೃಷ್ಟ ರೈತರ ಒಳಿತಿಗಾಗಿಯಾದರೂ ರೇಷ್ಮೆ

ಸಂಘವನ್ನು ಬಲಪಡಿಸಬೇಕೆಂಬ ಛಲ ರಾಮಯ್ಯನವರಲ್ಲಿ ಹುಟ್ಟಿತು. ವಕೀಲಿ ವೃತ್ತಿಯನ್ನು ಕಡೆಗಣಿಸಿ ಅಖಿಲ ಕರ್ನಾಟಕ ಮಟ್ಟದ ರೇಷ್ಮೆ ಬೆಳೆಗಾರರ ಸಂಘಟನೆಗೆ ರಾಮಯ್ಯ ಮುಂದಾದರು. ಕರ್ನಾಟಕದ ಅನೇಕ ಭಾಗಗಳನ್ನು ಸುತ್ತಿ ಬೆಳೆಗಾರರ ಕಷ್ಟಸುಖಗಳನ್ನು ಹಂಚಿಕೊಂಡರು. ಅನುಭವಗಳನ್ನು ಪರಸ್ಪರ ವಿನಿಮಯ ಮಾಡಿಕೊಂಡರು. ಅಖಿಲ ಕರ್ನಾಟಕ ಮಟ್ಟದಲ್ಲಿ ರೇಷ್ಮೆ ಬೆಳೆಗಾರರ ಸಂಘವನ್ನು ಪುನರ್‌ರಚಿಸಿದರು. ೧೯೭೪ರಲ್ಲಿ ರೇಷ್ಮೆ ಬೆಳೆಗಾರರ ಸಂಘದ ಅಧ್ಯಕ್ಷರಾಗಿಯೂ ನಿಯುಕ್ತರಾದರು. ಮುಂದೆ ಅವರು ೧೯೮೫ರಲ್ಲಿ ರೇಷ್ಮೆ ಸಚಿವರಾಗುವವರೆಗೂ ಅಂದರೆ ಸುಮಾರು ಹನ್ನೊಂದು ವರ್ಷಗಳ ಕಾಲ ಸಂಘದ ಅಧ್ಯಕ್ಷರಾಗಿ ಆ ಕ್ಷೇತ್ರದಲ್ಲಿ ಒಂದು ಹೊಸ ಕ್ರಾಂತಿಯನ್ನೇ ತಂದರು. ಸಂಘದ ಅಧ್ಯಕ್ಷರಾಗಿ ಮಾಡಿದ ಆರಂಭಿಕ ಕೆಲಸಗಳನ್ನು ಅವರ ಮಾತಿನಲ್ಲಿಯೇ ತಿಳಿಯೋಣ.

"ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷನಾಗಿ ನಾನು ಅಧಿಕಾರ ವಹಿಸಿಕೊಂಡಾಗ, ಸಂಘದ ಆರ್ಥಿಕ ಸ್ಥಿತಿ ಹದಗೆಟ್ಟಿತ್ತು. ಆಗ ಸದಸ್ಯರ ಸಂಖ್ಯೆ ಹೆಚ್ಚು ಮಾಡಬೇಕೆಂದು ರಾಜ್ಯಾದ್ಯಂತ ಪ್ರವಾಸ ಮಾಡಿದೆ. ಈಗಾಗಲೇ ಈ ಸಂಘದ ವಿಚಾರವಾಗಿ ತಿಳಿದುಕೊಂಡವ ರೊಡನೆ ಸಮಾಲೋಚನೆ ಮಾಡಿದೆ. ಇಂತಹ ಸಂಘವೊಂದಿದೆ ಎಂದು ತಿಳಿಯದವರಿಗೆ ತಿಳಿಸಿ ಅವರ ಸಹಕಾರ ಪಡೆದೆ. ರೇಷ್ಮೆ ಇಲಾಖೆಯ ಅಧಿಕಾರಿಗಳ ಸಹಕಾರದೊಡನೆ, ಇಡೀ ರಾಜ್ಯದಲ್ಲಿ ನನ್ನ ಸದಸ್ಯ ಮಿತ್ರರೊಡನೆ ಪ್ರವಾಸ ಮಾಡುವಾಗ ಹೋದ ಕಡೆಯೆಲ್ಲಾ ರೇಷ್ಮೆ ಬೆಳೆಗಾರರು ಉತ್ಸಾಹ ತೋರಿ ಸಹಕರಿಸಿದರು. ಈ ಸಂಘದ ಸದಸ್ಯರಾಗುವುದರಿಂದ ಏನು ಪ್ರಯೋಜನವೆಂದು ವ್ಯಂಗ್ಯ ಮಾಡಿದವರೂ ಉಂಟು. ಆಧುನಿಕ ಭಾರತದ ಪುಢಾರಿತನದ, ಜೀವನೋಪಾಯದ ಮಾರ್ಗಗಳ ಅರಿವಿದ್ದ ಜನ ಸದಸ್ಯತ್ವಕ್ಕೆ ರೂ. ೧೦.೦೦ ಕೇಳಿದಾಗ ಕುಹಕವಾಗಿ ನಕ್ಕು ದೂರವಾಗಿದ್ದೂ ಉಂಟು. ಇಂತಹ ಒಂದೆರಡು ಕಹಿ ಅನುಭವಗಳ ಮಧ್ಯೆಯೂ ಜನರು ತೋರಿದ ಒಟ್ಟಾರೆ ಉತ್ಸಾಹ ದೊಡ್ಡದಾಗಿತ್ತು. ಹೊಸ ಸದಸ್ಯರನ್ನು ನೋಂದಾವಣಿ ಮಾಡುವುದರ ಮೂಲಕ ಸಂಘದ ಚಟುವಟಿಕೆಗಳಿಗೆ ಬಳಸಿದ ಹಣವಲ್ಲದೆ, ಸುಮಾರು ಇಪ್ಪತ್ತೈದು ಸಾವಿರ ರೂಪಾಯಿಗಳನ್ನು ಮಲ್ಲೇಶ್ವರದ ಬ್ಯಾಂಕ್ ಒಂದರಲ್ಲಿ ಠೇವಣಿ ಇಟ್ಟು, ಅದರಿಂದ ಬರುವ ಬಡ್ಡಿಯಿಂದ ಸಂಘದ ಚಟುವಟಿಕೆಗಳು ಸುಸೂತ್ರವಾಗಿ ನಡೆಯುವಂತೆ ಏರ್ಪಾಟು ಮಾಡಿದೆ.

ಸಂಘಕ್ಕೆ ತನ್ನದೇ ಆದ ಒಂದು ಕಚೇರಿ ಇರಲಿಲ್ಲ. ರೇಷ್ಮೆ ನಿರ್ದೇಶಕರ ಕಚೇರಿಯಲ್ಲಿ ಒಂದು ಕೊಠಡಿ ಪಡೆದು, ನಾಮಫಲಕ ನೇತು ಹಾಕಿದೆವು. ಇಲಾಖೆಯ ನೌಕರರಾಗಿದ್ದ ಶ್ರೀ ಯಶವಂತರಾವ್ ಅವರು ಸಂಘದ ಕಾರ್ಯಾಲಯದ ಜವಾಬ್ದಾರಿ ನಡೆಸಲು ಏರ್ಪಾಟು ಮಾಡಿದೆವು. ಗೊತ್ತಾದ ಸಂಭಾವನೆ ಮೇಲೆ ಕಚೇರಿಗೆ ಒಬ್ಬ ಜವಾನನ್ನು ನೇಮಿಸಿದೆವು. ನನಗೆ ವಹಿಸಿದ ಕೆಲಸವನ್ನು ಶ್ರದ್ಧೆಯಿಂದ, ಶಿಸ್ತಿನಿಂದ ನಿರ್ವಹಿಸಲು ನಾನು ಎಲ್ಲಾ ಕಾಲದಲ್ಲಿಯೂ ಶ್ರಮಿಸಿದ್ದೇನೆ. ಸಂಬಳ ಸಾರಿಗೆಗಳಿಲ್ಲದೆ, ಸವಲತ್ತಿನ ಸವಿಯಿಲ್ಲದೆ ಈ ಸ್ಥಾನದಲ್ಲಿ ನಾನು ಕೆಲಸ ಮಾಡುವುದನ್ನು ನೋಡಿ ನಕ್ಕವರೂ ಉಂಟು. ಆದರೆ ಅವರಿಗೇನು ಗೊತ್ತು? ಎಲ್ಲವನ್ನು ಜನರಿಂದ ಪಡೆದ ಋಣ ತೀರಿಸಲು ದುಡಿಯುವುದರ ಸುಖ. ಸುಪ್ತಾವಸ್ಥೆಯಲ್ಲಿದ್ದ ಈ ಸಂಘವನ್ನು ಬಲಪಡಿಸಿ, ಇಲಾಖೆಗೂ, ರೇಷ್ಮೆ ಉದ್ಯಮದಲ್ಲಿ ತೊಡಗಿರುವವರಿಗೂ ಇರುವ ಸಂಬಂಧ ಸೇತುವನ್ನು ಬಲಪಡಿಸಬೇಕಾಗಿತ್ತು. ಈ ಉದ್ಯಮದ ಪ್ರಗತಿಗೆ ಇಂತಹ ಸ್ವತಂತ್ರ ಸಂಘವೊಂದಿರಬೇಕೆಂದು ಬಯಸಿ, ನಿಯಮಾವಳಿಗೆ ಮಾರ್ಪಾಡು ಮಾಡಿ, ಹೊಸ ನಿಯಮಗಳನ್ನು ತರಲು ಕಾರಣಕರ್ತರು ಇಲಾಖೆಯ ಮುಖ್ಯಸ್ಥರಾಗಿದ್ದ ಶ್ರೀ ಬಾಲಸುಬ್ರಹ್ಮಣ್ಯಂರವರು.

ನಾನು ಅಧ್ಯಕ್ಷನಾಗುವ ವೇಳೆಗೆ ಸರಿಯಾಗಿ ಶ್ರೀ ಮೀನಾಕ್ಷಿ ಸುಂದರಂ ಅವರು ಇಲಾಖೆಯ ಮುಖ್ಯಸ್ಥರಾಗಿದ್ದರು. ಇವರ ನನ್ನ ಸಂಬಂಧ ಜಗಳದಿಂದಲೇ ಮೊದಲಾಯಿತು. ತುಮಕೂರಿನಲ್ಲಿ ಇವರು ಜಿಲ್ಲಾಧಿಕಾರಿಯಾಗಿದ್ದರು. ಆಗ ನಾನು ಸರ್ಕಾರಿ ವಕೀಲನಾಗಿದ್ದೆ. ಯಾವುದೋ ವಿಷಯದಲ್ಲಿ ನನ್ನಿಂದ ಕೆಲವು ಮಾಹಿತಿ ಕೇಳಿದ್ದರು. ನಾನು ನಿಮ್ಮಲ್ಲಿಯೇ ಇದೆ ತೆಗೆದು ನೋಡಿ ಎಂದು ಬರೆದೆ. ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ನಿಮ್ಮ ಮೇಲೆ ವರದಿ ಮಾಡುತ್ತೇನೆ ಎಂದು ನನಗೆ ಬೆದರಿಕೆ ಪತ್ರ ಬರೆದರು. ಪತ್ರ ಓದಿ ನಕ್ಕು, ಉತ್ತರ ಬರೆದೆ. ದಯಮಾಡಿ ಆ ಕೆಲಸ ಮಾಡಿ, ಅದಕ್ಕಿಂತ ಮೊದಲು Please ascertain from your predessor, under what circumstances I accepted this dirty job ಎಂದು ಬರೆದು Dirty Job ಎನ್ನುವುದನ್ನು ಅಂಡರಲೈನ್ ಮಾಡಿದ್ದೆ. ಈ ಪತ್ರವನ್ನು ಓದಿ ಕಿಡಿ ಕಾರಿದರಂತೆ. ತುಮಕೂರಿನ ಆಗಿನ ಸರ್ಕಾರಿ ವಕೀಲರಾದ ಕಡಬಾದ ಗರುಡಾಚಾರರನ್ನು ಕರೆದು ಪತ್ರ ಅವರ ಮುಂದಿಟ್ಟು ನನ್ನ ಉದ್ಧಟತನದ ಬಗ್ಗೆ ಹಾರಾಡಿದರಂತೆ.

ಅವರಿಗಿಂತ ಮೊದಲಿದ್ದ ಜಿಲ್ಲಾಧಿಕಾರಿಗಳಾದ ಶ್ರೀ ಎಸ್. ದೊರೈರಾಜ್‌ರವರು ಬಲವಂತದಿಂದ ಈ ಸರ್ಕಾರಿ ವಕೀಲಿಗಿರಿಯನ್ನು ನನ್ನ ತಲೆಗೆ ಕಟ್ಟಿದ್ದರೆಂದೂ "ನೀವು ಇಡೀ ಒಂದು ವರ್ಷದಲ್ಲಿ ಕೊಡುವ ಫೀಸಿನ ಹಣವನ್ನು ಅವನು ಒಂದು ದಿನದಲ್ಲಿಯೇ ಸಂಪಾದಿಸುತ್ತಾನೆ" ಎಂದು ಶ್ರೀ ಗರುಡಾಚಾರ್ ಅವರು ಅವರ ಮಾಮೂಲಿ ದೇಶಾವರಿ ನಗೆ ನಗುತ್ತಾ, ಅವರ ಫಾರಿನ್ ಶರ್ಟಿಗೆ ಸುತ್ತಿದ್ದ ದೇಶೀಯ ಟೈ ಸರಿಮಾಡಿಕೊಂಡು ತಿಳಿಸಿದರಂತೆ.

ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷನಾಗಿ, ಎಲ್ಲದಕ್ಕೂ ಇಲಾಖೆಯ ಆಸರೆ ಬೇಕಾಗಿತ್ತು. ಇಲಾಖೆಯ ನಿರ್ದೇಶಕರಾದ ಶ್ರೀ ಮೀನಾಕ್ಷಿ ಸುಂದರಂ ಅವರನ್ನು ನೋಡಲು ಶ್ರೀ ಯಶವಂತರಾವ್ ಅವರಿಗೆ ಹೇಳಿ ಭೇಟಿಯ ಕಾಲ ಗೊತ್ತು ಮಾಡಿಕೊಂಡು, ಬಹು ಅಂತಸ್ತುಗಳ ಕಟ್ಟಡಗಳಲ್ಲಿರುವ ಅವರ ಸುಸಜ್ಜಿತ ಕೊಠಡಿಗೆ ಹೋದೆ. ಅವರೇ ಎದ್ದು ಬಂದು ಹಸ್ತಲಾಘವನಿತ್ತು, ಗೌರವದಿಂದ ಕರೆದು ಕೂರಿಸಿಕೊಂಡರು. ಸಂಘದ ಬಗೆಗೆ, ಇಲಾಖೆಯವರಿಗೆ ಆಗಬೇಕಾಗಿರುವ ಸಹಾಯ, ಸಹಕಾರಗಳ ಬಗೆಗೆ ಚರ್ಚಿಸಿದೆವು. ಅವರ ಮಾತಿನಲ್ಲಿ, ನಡತೆಯಲ್ಲಿ ಸ್ನೇಹಪರತೆ ಇತ್ತು. ಐ.ಎ.ಎಸ್. ಅಧಿಕಾರಿಗಳಲ್ಲಿ ಸಹಜವಾಗಿ ಕಾಣುವ "ಅಹಂ" ಇರಲಿಲ್ಲ. ನನಗೆ ಆಶ್ಚರ್ಯ, ಸರ್ಕಾರಿ ವಕೀಲನಾಗಿ, ಒರಟುತನದಿಂದ ನಾನು ನಡೆದುಕೊಂಡ ಜಿಲಾಧಿಕಾರಿ ಇವರೇನಾ? ಎಂದು. ಹೌದು ಅದೇ ವ್ಯಕಿ. ನನ್ನ ಆ ಉದ್ಧಟತನದ ಘಟನೆ ನಡೆದ ಮೇಲೆ ನಾನು ಸರ್ಕಾರಿ ವಕೀಲಗಿರಿಗೆ ರಾಜೀನಾಮೆ ಕೊಟ್ಟೆ. ಆಮೇಲೆ ಅವರು ನನ್ನ ಬಗೆಗೆ ಎಲ್ಲವನ್ನು ತಿಳಿದುಕೊಂಡು, ಅರ್ಥ ಮಾಡಿಕೊಂಡಿದ್ದರು. ಮಾತು ಮುಗಿಸಿ ಎದ್ದು ಬರುವಾಗ ನಾನೇ ಹೇಳಿದೆ "ನನಗೆ ಜೈಲಿಗೆ ಹೋಗಲು ಅವಕಾಶ ಮಾಡಿಕೊಡದೆ ಅನ್ಯಾಯ ಮಾಡಿದಿರಿ" ಎಂದು. ಅವರಿಗೆ ಮೊದಲು ಅರ್ಥವಾಗದಿದ್ದರೂ, ತುಸು ಯೋಚಿಸಿ ನಕ್ಕು ನುಡಿದರು. "ಹೋ ಅದೇ, ಆ ಕೆಟ್ಟ ದಿನಗಳ ಬಗ್ಗೆ ಚರ್ಚೆ ಈಗೇಕೆ" ಎಂದರು.

"ಸಂಘದ ಸದಸ್ಯತ್ವವನ್ನು ಹೆಚ್ಚಿಸಿದೆ. ಅದರ ಮೂಲಕ ಹಣ ಕೂಡಿಸಿಟ್ಟೆ, ಇಲಾಖೆಯ ಅಧಿಕಾರಿಗಳಿಂದಿಡಿದು ನೌಕರರವರೆಗೆ ಸಾರಮಸ್ಯ, ಬಾಂಧವ್ಯ ಕೂಡಿಸುವುದರಲ್ಲಿ ಯಶಸ್ವಿಯಾಗಿದ್ದೆ. ಕುಳಿತುಕೊಳ್ಳಲು ಕಚೇರಿ ಮಾಡಿದೆವು. ಕಚೇರಿ ನಡೆಸಲು ಸಿಬ್ಬಂದಿ ಕೂಡಾ ನೇಮಕವಾಗಿತ್ತು. ಇಷ್ಟೇ ನನ್ನ ಗುರಿಯಾಗಿರಲಿಲ್ಲ. ಈ ಸಂಘದ ಮೂಲಕ, ಉದ್ಯಮದ ಎಲ್ಲಾ ಹಿತಾಸಕ್ತಿಗಳನ್ನು

ಅದರಲ್ಲಿಯೂ ಬೆಳೆಗಾರರನ್ನು ಸಂಘಟಿಸಿ, ಅವರಿಗೆ ಸಹಜವಾಗಿ ಸಲ್ಲಬೇಕಾಗಿರುವ ಸವಲತ್ತುಗಳನ್ನು ಅಧಿಕಾರಯುತವಾಗಿ ಕೇಳುವ "ದನಿ" ಕೂಡಬೇಕಾಗಿತ್ತು. ಎಲ್ಲಾ ಜಿಲ್ಲೆಗಳಲ್ಲಿಯೂ ರೇಷ್ಮೆ ಬೆಳೆಗಾರರ ಸಮ್ಮೇಳನವನ್ನು ಏರ್ಪಡಿಸಿ, ಅಲ್ಲಿಯ ರೈತರನ್ನು ಸಂಘಟಿಸುವ ತೀರ್ಮಾನ ಮಾಡಿದೆವು."

ಹೀಗೆ ರೇಷ್ಮೆ ಸಂಘದ ಅಧ್ಯಕ್ಷರಾಗಿ ಕರ್ನಾಟಕದಲ್ಲಿ ಹೆಚ್ಚು ರೇಷ್ಮೆ ಬೆಳೆಯುವ ಪ್ರದೇಶಗಳನ್ನು ಸುತ್ತಿ ಬೆಳೆಗಾರರನ್ನು ಒಗ್ಗೂಡಿಸಿದ್ದಲ್ಲದೆ ಪ್ರಸ್ತುತ ವ್ಯವಸ್ಥೆಯ ಬಗ್ಗೆ ರೈತರನ್ನು ರಾಮಯ್ಯ ಎಚ್ಚರಗೊಳಿಸಿದರು. ಮಾರುಕಟ್ಟೆಯ ಅವ್ಯವಸ್ಥೆಯನ್ನು ಸರಿಡಿಸಲು ಸತತವಾಗಿ ಹೋರಾಟ ಮಾಡಿದರು. ವೈಜ್ಞಾನಿಕವಾಗಿ ಬೆಳೆ ತೆಗೆಯುವ ಬಗ್ಗೆ ರೈತರಿಗೆ ಅರಿವು ಉಂಟು ಮಾಡುವ ಕಾರ್ಯಕ್ರಮಗಳನ್ನು ಹಾಕಿಕೊಂಡರು. ಹೊಸ ತಳಿಗಳ ಅನ್ವೇಷಣೆಗಾಗಿ ಕಾರ್ಯ ಯೋಜನೆ ರೂಪಿಸುವಂತೆ ಸರ್ಕಾರದ ಮೇಲೆ ಒತ್ತಾಯ ತಂದರು.

ರೇಷ್ಮೆ ಸಂಘದ ಅಧ್ಯಕ್ಷರಾಗಿ ಅವರು ಮಾಡಿದ ಬಹುಮುಖ್ಯ ಕೆಲಸವೆಂದರೆ ಹೊರದೇಶದಿಂದ ರೇಷ್ಮೆ ಆಮದು ಮಾಡಿಕೊಳ್ಳುತ್ತಿದ್ದ ಕೇಂದ್ರ ಸರ್ಕಾರದ ಕೆಟ್ಟನೀತಿಯನ್ನು ಉಗ್ರವಾಗಿ ವಿರೋಧಿಸಿದ್ದು. ಹೊರದೇಶದ ರೇಷ್ಮೆ ಪೈಪೋಟಿಯಲ್ಲಿ ರಾಜ್ಯದ ರೈತನ ಗೂಡಿಗೆ ಬೆಲೆ ಸಿಗುತ್ತಿರಲಿಲ್ಲ. ಶೇ. ೮೦ರಷ್ಟು ರೇಷ್ಮೆಯನ್ನು ಕರ್ನಾಟಕದಲ್ಲೇ ಉತ್ಪಾದಿಸುತ್ತಿದ್ದರಿಂದ ಆಮದು ನೀತಿಯ ಹೊಡೆತ ನಮ್ಮ ರಾಜ್ಯದ ರೈತರಿಗೇ ಆಗಿತ್ತು. ಇದನ್ನು ತಾತ್ವಿಕವಾಗಿ ಮತ್ತು ಸಂಘಟನಾತ್ಮಕವಾಗಿ ವಿರೋಧಿಸಿದ್ದಲ್ಲದೆ ಆಳುವ ಸರ್ಕಾರವನ್ನು ಕೂಡ ಎಚ್ಚರಿಸಿದ್ದು ರಾಮಯ್ಯನವರ ದೊಡ್ಡ ಸಾಧನೆ. ದೆಹಲಿಯ ಒತ್ತಡವನ್ನು ಸಹಿಸಿಕೊಂಡು ರೇಷ್ಮೆ ಆಮದಿಗೆ ದಾರಿ ಮಾಡಿಕೊಡುತ್ತಿದ್ದ ನಮ್ಮ ಲೋಕಸಭಾ ಸದಸ್ಯರನ್ನು ಒಂದುಗೂಡಿಸಿ ಶಾಸಕರು ಮತ್ತು ಲೋಕಸಭಾ ಸದಸ್ಯರ ನಿಯೋಗವನ್ನು ದೆಹಲಿಗೆ ಕೊಂಡೊಯ್ಯುವ ಏರ್ಪಾಡನ್ನು ಕೂಡ ರಾಮಯ್ಯ ಆ ಸಂದರ್ಭದಲ್ಲಿ ಮಾಡಿದರು.

ಇವೆಲ್ಲವುಕ್ಕಿಂತ ಮುಖ್ಯವಾಗಿ ಕುಣಿಗಲ್ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಬಿತ್ತನೆ ರೇಷ್ಮೆಗೂಡುಗಳನ್ನು ಉತ್ಪಾದಿಸುತ್ತಿದ್ದ ರೈತರಿಗೆ ಬೋನಸ್ ನೀಡುವ ಹೊಸ ವ್ಯವಸ್ಥೆಯೊಂದು ಜಾರಿಗೆ ಬರಲು ರಾಮಯ್ಯ ಕಾರಣರಾದರು. ಬೇರೆ ಯಾವುದೇ ತಳಿಯನ್ನು ಬೆಳೆಯಬಾರದೆಂಬ ಕಾನೂನಿಗೆ ಒಳಪಟ್ಟ ಆ ಪ್ರದೇಶದಲ್ಲಿ ರೈತರಿಗೆ ಯಾವಾಗಲೂ ನ್ಯಾಯಯುತ ಬೆಲೆ ಸಿಗುತ್ತಿರಲ್ಲ. ಬಿತ್ತನೆಗೆ ಆಯ್ಕೆಯಾದ ಗೂಡನ್ನು ಹೊರತುಪಡಿಸಿದರೆ ಉಳಿದ ಗೂಡು ತುಂಬಾ ಕನಿಷ್ಟ ಬೆಲೆಗೆ ಹರಾಜಾಗುತ್ತಿತ್ತು. ರಾಜ್ಯದ ಬಿತ್ತನೆ ಬೆಳೆಯುವ ಇತರೆ ಭಾಗದ ರೈತರನ್ನು ಒಗ್ಗೂಡಿಸಿ ತೀವ್ರ ಹೋರಾಟ ನಡೆಸಿದ ರಾಮಯ್ಯನವರ ಛಲಕ್ಕೆ ಕೊನೆಗೂ ಬೆಲೆ ಸಿಕ್ಕಿತು. ಬಿತ್ತನೆಗೆ ಆಯ್ಕೆಯಾಗದ ಗೂಡಿಗೆ ಬೆಂಬಲ ಬೆಲೆ ಮತ್ತು ಬೋನಸ್ ನೀಡಲು ಸರ್ಕಾರ ಒಪ್ಪಿತು. ಇದು ರಾಮಯ್ಯನವರು ಶಾಸಕರಾಗುವ ಮೊದಲಿನ ಪ್ರಮುಖ ಸಾಧನೆಗಳಲ್ಲಿ ಒಂದು. ರೇಷ್ಮೆ ಸಂಘದ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ರೇಷ್ಮೆ ಕೃಷಿ ಎಂಬ ಮಾಸ ಪತ್ರಿಕೆಯ ಸಂಪಾದಕ ಮಂಡಲಿಯ ಸದಸ್ಯರಾಗಿಯೂ ರಾಮಯ್ಯನವರು ಉದ್ಯಮಕ್ಕೆ ಅನೇಕ ಸಲಹೆಗಳನ್ನು ನೀಡಿದರು.

**ಶಾಸಕ**

೧೯೭೫ರಲ್ಲಿ ತುರ್ತು ಪರಿಸ್ಥಿತಿಯ ಘೋಷಣೆಯ ನಂತರ ರಾಷ್ಟ್ರದಲ್ಲಿ ನಾನಾ ರೀತಿಯ ರಾಜಕೀಯ ಬದಲಾವಣೆಗಳಾದವು. ದೇಶಾದ್ಯಂತ ಜಯಪ್ರಕಾಶ ನಾರಾಯಣ್‌ರವರ ನಾಯಕತ್ವದಲ್ಲಿ

ಕಾಂಗ್ರೆಸ್ ವಿರುದ್ಧ ಆಂದೋಲನ ಶುರುವಾಯಿತು. ಜೆ.ಪಿ.ಯವರ ಕರೆಗೆ ಓಗೊಟ್ಟು ಕಾಂಗ್ರೆಸ್ಸೇತರ ಪಕ್ಷಗಳ ವಿಲೀನವಾಗಿ ಜನತಾಪಕ್ಷ ಸ್ಥಾಪನೆಯಾಯಿತು. ಅದುವರೆಗೆ ರಾಜ್ಯದಲ್ಲಿ ವಿರೋಧಪಕ್ಷವಾಗಿವಾಗಿದ್ದ ಓ ಕಾಂಗ್ರೆಸ್ ಕೂಡ ಜನತಾಪಕ್ಷದಲ್ಲಿ ಲೀನವಾಯಿತು. ಓ ಕಾಂಗ್ರೆಸ್‌ನ ಸಕ್ರಿಯ ಸದಸ್ಯರಾಗಿದ್ದ ವೈ.ಕೆ. ರಾಮಯ್ಯನವರು ಕೂಡ ಜನತಾ ಪಕ್ಷದ ಸಕ್ರಿಯ ಸದಸ್ಯರಾದರು. ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಅನೇಕ ನಾಯಕರು ಜೈಲು ಸೇರಿದರು. ದೊಡ್ಡ ನಾಯಕರನ್ನು ಅನುಸರಿಸುತ್ತಿದ್ದ ವೈ.ಕೆ. ರಾಮಯ್ಯನವರೂ ಕೂಡ ಜೈಲಿಗೆ ಹೋಗಬೇಕಾದ ಪ್ರಸಂಗ ಬಂದಿತ್ತಾದರೂ ಆಗಿನ ಜಿಲ್ಲಾಧಿಕಾರಿಯವರ ರಾಮಯ್ಯನವರ ಬಗೆಗಿನ ಮೃದು ಧೋರಣೆಯಿಂದಾಗಿ ಸ್ವಲ್ಪದರಲ್ಲಿ ಜೈಲುವಾಸದಿಂದ ವಂಚಿತರಾದರು. ತುರ್ತು ಪರಿಸ್ಥಿತಿ ಮುಗಿದು ಜನತಾ ಪಕ್ಷ ಒಂದು ಪ್ರಮುಖ ರಾಜಕೀಯ ಪಕ್ಷವಾಗಿ ಹೊರ ಹೊಮ್ಮಿತ್ತಾದರೂ ಕರ್ನಾಟಕದಲ್ಲಿ ಅದು ಅಧಿಕಾರಕ್ಕೆ ಬರಲಿಲ್ಲ. ತುರ್ತು ಪರಿಸ್ಥಿತಿಯ ನಂತರ ೧೯೭೮ರಲ್ಲಿ ನಡೆದ ಎರಡನೇ ಚುನಾವಣೆಯಲ್ಲಿ ವೈ.ಕೆ. ರಾಮಯ್ಯನವರು ಕುಣಿಗಲ್ ವಿಧಾನಸಭಾ ಕ್ಷೇತ್ರದಿಂದ ಜನತಾಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧೆಗೆ ಇಳಿದರು. ಈಗಾಗಲೇ ರೈತರನ್ನು ಕುರಿತಾದ ತಮ್ಮ ಅನೇಕ ಜನಪರ ಕಾರ್ಯಗಳಿಂದ ಕ್ಷೇತ್ರದಾದ್ಯಂತ ಜನಾನುರಾಗಿಯಾಗಿದ್ದ ರಾಮಯ್ಯ ಹೆಚ್ಚಿನ ಖರ್ಚು ವೆಚ್ಚವನ್ನು ಮಾಡದೆ ಸುಮಾರು ೧೨,೦೦೦ ಮತಗಳ ಅಂತರದಿಂದ ಗೆಲ್ಲುವ ಮೂಲಕ ಪ್ರಥಮ ಬಾರಿಗೆ ವಿಧಾನಸಭೆಯನ್ನು ಪ್ರವೇಶಿಸಿದರು. ಈ ಸಂದರ್ಭದ ತಮ್ಮ ಅನಿಸಿಕೆಯನ್ನು ವೈ.ಕೆ.ರಾಮಯ್ಯ ಅವರು ಹೀಗೆ ನಿರೂಪಿಸಿದ್ದಾರೆ.

"೧೯೭೮ರಲ್ಲಿ ಸಾರ್ವಜನಿಕ ಚುನಾವಣೆಯಲ್ಲಿ ನಾನು ವಿಧಾನಸಭೆಗೆ ಕುಣಿಗಲ್ ಮತದಾರ ಕ್ಷೇತ್ರದಿಂದ ಜನತಾ ಪಕ್ಷದ ಉಮೇದುವಾರನಾಗಿ ಸ್ಪರ್ಧಿಸಿದೆ. ಈ ಚುನಾವಣೆಯಲ್ಲಿ ಜನರು ನನ್ನನ್ನು ಸುಮಾರು ೧೨ ಸಾವಿರಕ್ಕೂ ಮಿಗಿಲಾದ ಮತಗಳಿಂದ ಚುನಾಯಿಸಿದರು. ವಕೀಲನಾಗಿ ನಾನು ಗಳಿಸಿದ್ದ ಅಪಾರ ಕಕ್ಷಿದಾರರು, ಅಷ್ಟರಲ್ಲಿ ನಾನು ತಾಲ್ಲೂಕು ಅಭಿವೃದ್ಧಿ ಮಂಡಲಿ ಸದಸ್ಯನಾಗಿ ಹಾಗೂ ಹಲವಾರು ಸಾಮಾಜಿಕ ಚಟುವಟಿಕೆಯಲ್ಲಿ ತೊಡಗಿಸಿಕೊಂಡು ಪಡೆದಿದ್ದ ಜನಸಂಪರ್ಕ ಈ ಗೆಲುವಿಗೆ ಕಾರಣ ವಾಗಿತ್ತು. ಇದಕ್ಕಿಂತ ಮಿಗಿಲಾಗಿ, ನನ್ನ ಚುನಾವಣಾ ಕ್ಷೇತ್ರದಲ್ಲಿದ್ದ ಸುಮಾರು ೧೫-೨೦ ಸಾವಿರ ಮೈಸೂರು ರೇಷ್ಮೆ ಬಿತ್ತನೆ ಬೆಳೆಯುವ ರೇಷ್ಮೆ ಬೆಳೆಗಾರರು ಮುಖ್ಯವಾಗಿದ್ದರು. ಆಗ ತಾನೆ ಬೋನಸ್ ಘೋಷಣೆ ಮಾಡಲ್ಪಟ್ಟಿತ್ತು. ಅಷ್ಟೇ ಅಲ್ಲ, ಚುನಾವಣೆಯ ಸಮಯಕ್ಕೆ ಸರಿಯಾಗಿ ಮೊಟ್ಟ ಮೊದಲಿಗೆ ಬೋನಸ್ ಹಣವನ್ನು ಎಲ್ಲಾ ಮಾರುಕಟ್ಟೆಗಳಲ್ಲಿಯೂ ಹಂಚುತ್ತಿದ್ದರು. ಈ ಹಣ ಬರಲು ರಾಮಯ್ಯನೇ ಕಾರಣವೆಂದು ಎಲ್ಲಾ ರೈತರಿಗೂ ತಿಳಿದಿತ್ತು. ಇದರಿಂದಾಗಿ ಸ್ವಲ್ಪ ಹೆಚ್ಚುಕಡಿಮೆ ಎಲ್ಲಾ ಬೆಳೆಗಾರರು ನನ್ನನ್ನು ಬೆಂಬಲಿಸಿದರು. ರೇಷ್ಮೆ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಅಧಿಕಾರಿಗಳಿಂದ ಹಿಡಿದು ಕೆಳದರ್ಜೆಯ ನೌಕರರೊಡನೆ ನಾನು ಹೊಂದಿದ್ದ ನಿಕಟ ಸಂಪರ್ಕವೂ ಸಹಾಯಕ್ಕೆ ಬಂದಿತು. ವಿದ್ಯಾರ್ಥಿ ದೆಸೆಯಲ್ಲಿ ಇದ್ದಾಗಿನಿಂದಲೂ ಬಯಸಿದ ಗುರಿ ಸಾಧನೆ ಆಗಿತ್ತು. ಜನರಿಗೆ ಕೊಟ್ಟ ಮಾತಿನ ಪ್ರಕಾರ ವಕೀಲಿ ವೃತ್ತಿಯನ್ನು ಸಂಪೂರ್ಣವಾಗಿ ಕೈಬಿಟ್ಟೆ. ಆ ಚುನಾವಣೆಗೆ ಕೆಲವೇ ದಿನಗಳಿಗೆ ಮುಂಚೆ ನನ್ನಲ್ಲಿದ್ದ ಕಿರಿಯ ವಕೀಲರಾದ ಶ್ರೀ ಎ.ಆರ್. ರಂಗಸ್ವಾಮಿ ಅವರು, ತಮ್ಮದೇ ಆದ ಆಫೀಸು ತೆಗೆದರು. ಅಂದು ಅವರಿಗೆ ನನ್ನಲ್ಲಿ ಅನೇಕ ವರ್ಷಗಳಿಂದ ಇಟ್ಟ ಪೆನ್ನನ್ನು ಕಾಣಿಕೆಯಾಗಿ ಕೊಟ್ಟೆ. ಆಮೇಲೆ ನಾನು ಇದುವರೆವಿಗೂ "ವಕಾಲತ್ತು" ರುಜು ಮಾಡಲೇ ಇಲ್ಲ.

ರಾಜಕಾರಣವನ್ನು ಹಾಗೂ ರಾಜಕೀಯವನ್ನು ಜನರು ತುಚ್ಛವಾಗಿ, ಲಘುವಾಗಿ ಅನುಮಾನದಿಂದ ನೋಡುತ್ತಿದ್ದ ಪರಿಸ್ಥಿತಿಯಲ್ಲಿ ಇದಕ್ಕೆ ಭಿನ್ನವಾಗಿ, ಹೊರತಾಗಿ ರಾಜಕಾರಣ ಮಾಡಬೇಕೆಂಬ ಕಟಿಬದ್ಧ ತೀರ್ಮಾನದೊಡನೆ ಸಾರ್ವಜನಿಕ ಕ್ಷೇತ್ರದಲ್ಲಿ ಕಾರ್ಯೋನ್ಮುಖನಾದೆ. ಉಳಿದ ಕಾರ್ಯಗಳ ಜೊತೆಗೆ ನನ್ನನ್ನು ಚಿಕ್ಕಂದಿನಿಂದಲೂ ಆಕರ್ಷಿಸಿದ್ದ ನಮ್ಮ ಪ್ರದೇಶದ ರೈತರಿಗೆ ಜೀವನಾಧಾರವಾಗಿದ್ದ ರೇಷ್ಮೆ ಕಸುಬು ಮತ್ತು ಈ ಕಸುಬಿನಲ್ಲಿರುವ ಸಮಸ್ಯೆಗಳನ್ನು ಅರಿತುಕೊಳ್ಳುವುದರಲ್ಲಿ ಹಾಗೂ ಪರಿಹಾರ ಕಂಡುಕೊಳ್ಳಲು ಅಧಿಕಾರ ಅಸ್ತ್ರವಿಲ್ಲದೆ ಸಾಧ್ಯವಿರಲಿಲ್ಲ. ಸುಮಾರು ಒಂದು ದಶಕದ ನನ್ನ ಹೋರಾಟಕ್ಕೆ ಈಗ ಶಾಸಕ ಸ್ಥಾನದ ಬಲ ಒಂದು ಸಿಂಹಬಲವಾಯಿತು. ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷನಾಗಿ ಮುಂದುವರಿದೆ. ಸಂಘವು ನನ್ನನ್ನು ಅಭಿಮಾನದಿಂದ ಸನ್ಮಾನಿಸಿತು. ಸಂಘದ ಉಳಿದ ಪದಾಧಿಕಾರಿಗಳು, ಆಗಿನ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರನ್ನು ಭೇಟಿ ಮಾಡಿ ನನ್ನನ್ನು ರೇಷ್ಮೆ ಖಾತೆ ಮಂತ್ರಿ ಮಾಡಬೇಕೆಂದು ಒತ್ತಾಯಿಸಿದರೆಂದು ನನಗೆ ಆಮೇಲೆ ತಿಳಿಯಿತು.

"ನನ್ನ ಕಾರ್ಯವೈಖರಿಯಲ್ಲಿ ಸ್ವಲ್ಪ ಬದಲಾವಣೆ ಮಾಡಿಕೊಂಡೆ. ಕೇವಲ ಪ್ರಾರ್ಥನೆ, ಕೋರಿಕೆ, ವಿನಂತಿಗಳಿಂದ ಕೆಲಸ ಮಾಡಿಸಿಕೊಳ್ಳುತ್ತಿದ್ದ ನಾನು ಅಧಿಕಾರಯುತವಾಗಿ ಅಬ್ಬರಿಸಿ, ಗದರಿಸಿ, ಕೆಲಸ ಮಾಡಿಸಿಕೊಳ್ಳಲು ಮೊದಲು ಮಾಡಿದೆ."

ಶಾಸಕರಾದ ತಕ್ಷಣ ವೈ.ಕೆ.ಆರ್. ಮೊದಲು ಗಮನ ಹರಿಸಿದ್ದು ರೇಷ್ಮೆ ಇಲಾಖೆಯ ಕಡೆಗೆ. ಅಲ್ಲಿಯವರೆಗೆ ಮೈಸೂರು ಬಿತ್ತನೆ ವಲಯಕ್ಕೆ ವಿಶ್ವಬ್ಯಾಂಕಿನ ನೆರವಿನ ಯೋಜನೆಯಲ್ಲಿ ಯಾವ ಸವಲತ್ತನ್ನೂ ಒದಗಿಸುವ ಪ್ರಯತ್ನ ಮಾಡಿರಲಿಲ್ಲ. ಮಾರುಕಟ್ಟೆಗಳಿಲ್ಲದೆ ಕುಣಿಗಲ್, ಹುಲಿಯೂರುದುರ್ಗ, ಕೆಂಪನಹಳ್ಳಿ, ಹೆಬ್ಬೂರು, ಸಂತೆಮಾವತ್ತೂರು; ಕುದೂರು ಮುಂತಾದ ಕಡೆ ಬಿತ್ತನೆ ಗೂಡುಗಳನ್ನು ಬೀದಿಯಲ್ಲಿ ಇಟ್ಟು ಮಾರುತ್ತಿದ್ದರು. ಬಿತ್ತನೆ ಮೊಟ್ಟೆ ಕೇಂದ್ರಗಳಂತೂ ಬಾಡಿಗೆ ಮನೆಗಳಲ್ಲಿಂಯೇ ಕೆಲಸ ನಿರ್ವಹಿಸುತ್ತಿದ್ದವು. ಈ ಹಿನ್ನೆಲೆಯಲ್ಲಿ ಸರ್ಕಾರದ ಮೇಲೆ ಸತತ ಒತ್ತಡ ತಂದು ಬಿತ್ತನೆ ವಲಯಗಳಲ್ಲಿ ಅವಶ್ಯಕವಾಗಿ ಬೇಕಾಗಿರುವ ಮಾರುಕಟ್ಟೆ ಮತ್ತು ಬಿತ್ತನೆ ಕೋಠಿ ಕಟ್ಟಡಗಳಿಗಾಗಿ ಸರ್ಕಾರದಿಂದ ಸುಮಾರು ೬೦ ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಿಸಿ ಕ್ರಮ ಕೈಗೊಂಡರು. ವಾಸ್ತವವಾಗಿ ಇವರು ಕುಣಿಗಲ್‌ನ ಶಾಸಕರಾದರೂ ಪಕ್ಕದ ಹುಲಿಯೂರುದುರ್ಗ ಕ್ಷೇತ್ರವನ್ನು ಕೂಡ ಯಾವುದೇ ತಾರತಮ್ಯವಿಲ್ಲದೆ ಅಭಿವೃದ್ಧಿಪಡಿಸಲು ಪ್ರಯತ್ನಿಸಿದ್ದು ಅವರ ವಿಶಾಲ ದೃಷ್ಟಿಗೆ ಸಾಕ್ಷಿ. ರಸ್ತೆ ಮತ್ತು ಡಾಂಬರಿನ ಕೆಲಸವಾಗಲಿ, ನೀರಾವರಿಯ ಕೆಲಸಗಳಾಗಲಿ, ಕೃಷಿ ಕ್ಷೇತ್ರ ಇತರೆ ಕೆಲಸಗಳಾಗಲಿ ದಿನದ ೨೦ ಘಂಟೆ ಕಾಲ ಸತತವಾಗಿ ಕ್ಷೇತ್ರದ ಅಭಿವೃದ್ಧಿಯ ಬಗ್ಗೆ ಚಿಂತಿಸುವುದು ಅವರ ಕ್ರಿಯಾಶೀಲ ವ್ಯಕ್ತಿತ್ವಕ್ಕೆ ಸಾಕ್ಷಿಯಂತಿತ್ತು. ಇವರು ಶಾಸಕರಾದ ನಂತರ ಕುಣಿಗಲ್ ತಾಲ್ಲೂಕಿನ ಅಭಿವೃದ್ಧಿ ಕೆಲಸಗಳು ಕ್ಷಿಪ್ರಗತಿಯಲ್ಲಿ ನೆರವೇರಿದವು. ವಿದ್ಯುಚ್ಛಕ್ತಿ ಇಲ್ಲದೆ ವಿದ್ಯಾರ್ಥಿ ದೆಸೆಯನ್ನು ಕಳೆದ ರಾಮಯ್ಯನವರು ತನ್ನ ಕ್ಷೇತ್ರದ ಪ್ರತಿಯೊಂದು ಗ್ರಾಮಕ್ಕೂ ವಿದ್ಯುಚ್ಛಕ್ತಿ ಒದಗಿಸುವುದು ತನ್ನ ಪ್ರಥಮ ಕರ್ತವ್ಯ ಎಂದು ಭಾವಿಸಿ ಅದನ್ನು ನೆರವೇರಿಸಿದರು. ಕೇವಲ ಒಂದೆರಡು ವರ್ಷಗಳಲ್ಲಿಯೇ ಇಡೀ ಕರ್ನಾಟಕದ ಕೆಲವೇ ಆದರ್ಶ ಶಾಸಕರಲ್ಲಿ ಒಬ್ಬರು ಎನ್ನುವ ಕೀರ್ತಿಗೆ ಪಾತ್ರರಾದದ್ದು ಅವರ ಪ್ರಾಮಾಣಿಕ ಸೇವೆಗೆ ಹಿಡಿದ ಕನ್ನಡಿಯಾಗಿದೆ.

## ಗೃಹಮಂಡಲಿ ಅಧ್ಯಕ್ಷ

ಶಾಸಕರಾದ ಕೆಲವೇ ತಿಂಗಳುಗಳಲ್ಲಿ ರಾಮಯ್ಯನವರನ್ನು ಕರ್ನಾಟಕ ಗೃಹಮಂಡಲಿ ಅಧ್ಯಕ್ಷರಾಗಿ ನೇಮಿಸಲಾಯಿತು. ಅಲ್ಲಿಯವರೆಗೆ ಗೃಹಮಂಡಲಿ ಜಡತ್ವದಿಂದ ನಿಧಾನಗತಿಯ ಕೆಲಸ ಮಾಡುತ್ತಿತ್ತೆಂಬುದು ರಾಮಯ್ಯನವರ ಅಭಿಪ್ರಾಯ. ಅಧ್ಯಕ್ಷರಾದ ಕೂಡಲೇ ರಾಜ್ಯದ ವಿವಿಧ ಭಾಗಗಳಲ್ಲಿ ನಿರ್ಮಾಣವಾಗುತ್ತಿದ್ದ ಮನೆಗಳನ್ನು ಖುದ್ದಾಗಿ ಪರಿಶೀಲಿಸಿ ಭ್ರಷ್ಟತೆ ಇರುವ ಕಡೆ ತೀವ್ರವಾದ ಕ್ರಮ ಕೈಗೊಳ್ಳುವ ಕಾರ್ಯಕ್ಕೆ ಮುಂದಾದರು. ಲೆಕ್ಕ ಪತ್ರಗಳ ತಪಾಸಣೆಯನ್ನು ಹೊಸದಾಗಿ ಮಾಡಿಸಿದರು. ಅವಧಿ ಮೀರಿದ ಸಾಲಗಳನ್ನು ವಸೂಲಿ ಮಾಡುವ ಕ್ರಮಕೈಗೊಂಡರು. ಸಮಾಜದ ವಿವಿಧ ವರ್ಗಗಳಿಗಾಗಿ ವಿವಿಧ ನಮೂನೆಯ ಮನೆಗಳ ನಿರ್ಮಾಣವನ್ನು ಕೈಗೊಂಡರು. ಇವೆಲ್ಲಕ್ಕಿಂತ ಮಿಗಿಲಾಗಿ ಅವರು ಆರಂಭಿಸಿದ ವಿಶಿಷ್ಟ ಯೋಜನೆಯನ್ನು ಇಲ್ಲಿ ವಿವರಿಸಲೇಬೇಕು.

ನಾನೀಗಾಗಲೇ ತಿಳಿಸಿದಂತೆ ರೇಷ್ಮೆ ಅವರ ಜೀವನದ ಒಂದು ಭಾಗ. ಗೃಹಮಂಡಲಿಯ ಅಧ್ಯಕ್ಷರಾಗಿಯೂ ಅದಕ್ಕೆ ಸ್ಪಂದಿಸಿದ್ದುದು ಒಂದು ವಿಶೇಷ. ರೇಷ್ಮೆ ಬೆಳೆ ಬೆಳೆಯಲು ಪ್ರತ್ಯೇಕ ಮನೆಗಳಿಲ್ಲದೆ ಸಂಸಾರದ ಮನೆಗಳಲ್ಲಿಯೇ ಹುಳ ಸಾಕುತ್ತಿದ್ದ ರೈತರಿಗಾಗಿ ಹೊಸ ಯೋಜನೆಯೊಂದನ್ನು ರೂಪಿಸಿದರು. ಅಂದರೆ ರೇಷ್ಮೆ ಬೆಳಗಾರರಿಗೆ ಗೃಹಮಂಡಳಿ ಮೂಲಕ ಗ್ರಾಮೀಣ ಪ್ರದೇಶಗಳಲ್ಲಿ ಪ್ರತ್ಯೇಕ ಮನೆ ಕಟ್ಟಿಕೊಡುವ ಯೋಜನೆ ಅದಾಗಿತ್ತು. ರಾಷ್ಟ್ರೀಯ ಗೃಹಮಂಡಲಿ ಈ ಯೋಜನೆಯನ್ನು ಶ್ಲಾಘಿಸಿತ್ತಾದರೂ ಗ್ರಾಮಾಂತರ ಪ್ರದೇಶಗಳಲ್ಲಿ ಇಂತಹ ಮನೆ ಕಟ್ಟಲು ಧನಸಹಾಯಕ್ಕೆ ಅವಕಾಶವಿಲ್ಲ ಎಂದು ಹೇಳಿತು. ಆದರೆ ಪಟ್ಟು ಬಿಡದೆ ವೈ.ಕೆ.ಆರ್. ರಾಷ್ಟ್ರೀಯ ಮಂಡಲಿಯ ಅಧಿಕಾರಿಗಳೊಡನೆ ಚರ್ಚಿಸಿ ಅವರ ಮನವೊಲಿಸಿ ರಾಜ್ಯ ಗೃಹಮಂಡಲಿ ಮತ್ತು ರೇಷ್ಮೆ ಇಲಾಖೆಯ ಸಹಕಾರದಲ್ಲಿ ಮನೆಗಳನ್ನು ಕಟ್ಟುವ ಒಪ್ಪಂದ ರೂಪಿಸುವಲ್ಲಿ ಯಶಸ್ವಿಯಾದರು. ಹೀಗೆ ಗೃಹ ಮಂಡಲಿಯಲ್ಲಿ ಅತ್ಯಂತ ಕಡಿಮೆ ಅವಧಿಯ ಅಧ್ಯಕ್ಷರಾಗಿದ್ದರೂ ಕೂಡ ಅನೇಕ ಹೊಸ ಯೋಜನೆಗಳನ್ನು ರೂಪಿಸಿ ಅನುಷ್ಠಾನಕ್ಕೆ ತರುವಲ್ಲಿ ಸಫಲರಾದರು.

## ಲೋಕಸಭೆಗೆ ಸ್ಪರ್ಧೆ

೧೯೭೯ರ ಅಂತ್ಯ ಭಾಗದಲ್ಲಿ ಕೇಂದ್ರ ಸರ್ಕಾರದಲ್ಲಿ ಉಂಟಾದ ಅನಿರೀಕ್ಷಿತ ವಿದ್ಯಮಾನಗಳಿಂದಾಗಿ ಲೋಕಸಭಾ ಚುನಾವಣೆ ಘೋಷಿಸಲ್ಪಟ್ಟಿತು. ರಾಮಕೃಷ್ಣ ಹೆಗಡೆ ನೇತೃತ್ವದಲ್ಲಿ ಆದಾಗ ತಾನೇ ಕರ್ನಾಟಕದಲ್ಲಿ ಸರ್ಕಾರ ನಡೆಸುತ್ತಿದ್ದ ಜನತಾಪಕ್ಷ ತನ್ನೊಳಗಿನ ಅನೇಕ ಕ್ರಿಯಾಶೀಲ ಶಾಸಕರನ್ನೇ ಆಯ್ದು 'ಲೋಕಸಭಾ ಚುನಾವಣೆಗೆ ಹುರಿಯಾಳುಗಳನ್ನಾಗಿಸಿತು. ಪಕ್ಷದ ಅಣತಿಯಂತೆ ರಾಮಯ್ಯ ತುಮಕೂರು ಕ್ಷೇತ್ರದಿಂದ ಲೋಕಸಭೆಗೆ ಸ್ಪರ್ಧಿಸಿದರು. ರೇಷ್ಮೆ ಬೆಳೆಗಾರರ ಸಂಘದ ಅಧ್ಯಕ್ಷರಾಗಿ ಅವರು ಮಾಡಿದ ಕೆಲಸ, ಶಾಸಕರಾಗಿ ಅತ್ಯಲ್ಪ ಅವಧಿಯಲ್ಲಿ ಗಳಿಸಿದ್ದ ಯಶಸ್ಸು, ತುಮಕೂರು ಜಿಲ್ಲೆಗೆ ಹೇಮಾವತಿ ನೀರನ್ನು ತರಬೇಕೆಂಬ ಕನಸನ್ನು ಹೊತ್ತಿದ್ದ ರಾಮಯ್ಯನವರ ದೂರದರ್ಶಿತ್ವ ಇವೆಲ್ಲವುಗಳಿಂದಾಗಿ ಗ್ರಾಮೀಣ ಪ್ರದೇಶದಲ್ಲಿ ರಾಮಯ್ಯನವರ ಪರವಾದ ಅಲೆಯೇನೋ ಎದ್ದಿತು. ಆದರೆ ಕಳೆದಬಾರಿ ಸೋಲನ್ನು ಅನುಭವಿಸಿದ್ದ ಶ್ರೀಮತಿ ಇಂದಿರಾಗಾಂಧಿ ನೇತೃತ್ವದ ಕಾಂಗ್ರೆಸ್‌ಗೆ ಅನುಕಂಪದ ಓಟುಗಳು ಹೆಚ್ಚಾಗಿ ಬಿದ್ದವು. ಬಹುಶಃ ಈ ಕಾರಣದಿಂದಾಗಿ ಗೆದ್ದೇ ಗೆಲ್ಲುತ್ತಾರೆ ಎಂಬ ಭರವಸೆಯ ಹುರಿಯಾಳಾಗಿದ್ದ ರಾಮಯ್ಯ ಲಕ್ಷಾಂತರ ಜನರ ಕೃಪೆಗೆ ಪಾತ್ರರಾದರೂ, ಕೇವಲ ೩೦,೦೦೦ ಮತಗಳ ಅಂತರದಿಂದ ಪರಾಭವಗೊಂಡರು.

ಲೋಕಸಭೆಯ ಕ್ಷೇತ್ರವ್ಯಾಪ್ತಿಯನ್ನು ಗಮನಿಸಿದಾಗ ಇದು ಅಲ್ಪಮತಗಳ ಅಂತರ ಅಷ್ಟೇ. ಆದರೂ ಈ ಸೋಲನ್ನು ಯಾವುದೇ ವಿಕಾರಗಳಿಲ್ಲದೇ ಸ್ವೀಕರಿಸಿ ವೈ.ಕೆ.ಆರ್. ಎಂದಿನಂತೆ ಕ್ಷೇತ್ರದಲ್ಲಿನ ಕೆಲಸದಲ್ಲಿ ಮಗ್ನರಾದರು.

**ಮತ್ತೆ ವಿಧಾನಸಭೆಗೆ**

ಲೋಕಸಭಾ ಚುನಾವಣೆಯಲ್ಲಿ ಪರಾಭವಗೊಂಡ ಜನತಾಪಕ್ಷ ನೈತಿಕ ಹೊಣೆಹೊತ್ತು ಕರ್ನಾಟಕದಲ್ಲಿ ಮತ್ತೆ ಚುನಾವಣೆಗೆ ಹೋಗಲು ನಿರ್ಧರಿಸಿತು. ಈ ಬಾರಿ ಕುಣಿಗಲ್ ವಿಧಾನಸಭಾ ಕ್ಷೇತ್ರದಿಂದ ವೈ.ಕೆ.ಆರ್. ಎರಡನೇ ಅವಧಿಗೆ ಅಭ್ಯರ್ಥಿಯಾಗಿ ನಿಂತರು. ರಾಮಯ್ಯನವರು ಲೋಕಸಭೆಯಲ್ಲಿ ಸೋತಿದ್ದ ಅನುಕಂಪವೂ ಯತೇಚ್ಛವಾಗಿತ್ತು. ೧೯೮೫ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ೨೬,೦೦೦ಕ್ಕೂ ಅಧಿಕ ಮತಗಳ ಅಂತರದಿಂದ ರಾಮಯ್ಯ ಗೆದ್ದರು. ಆ ಸಂದರ್ಭದ ತಮ್ಮ ಅನುಭವವನ್ನು ಅವರು ಹೀಗೆ ದಾಖಲಿಸಿದ್ದಾರೆ. "ನನ್ನ ಅಲ್ಪ ಸೇವೆಗೆ ಜನರು ತೋರಿದ ಅಗಾಧ ಪ್ರೀತಿ ವಿಶ್ವಾಸ ನನ್ನನ್ನು ಬೆರಗುಗೊಳಿಸಿತು. ದೈನ್ಯತೆಯಿಂದ ನಾನು ಮೂಕನಾದೆ. ಆ ಮುಗ್ಧ ಜನರು ತೋರಿರುವ ಪ್ರೀತಿವಿಶ್ವಾಸಗಳಿಗೆ ನಾನು ಅರ್ಹನೇ ಎಂಬುವ ಪ್ರಶ್ನೆ ನನ್ನನ್ನು ಕಾಡಿತು. ನನಗೆ ಜನರು ಕೊಟ್ಟಿರುವ ಈ ಶಕ್ತಿಯನ್ನು ಅದರ ಸೇವೆಗಾಗಿ ತೊಡಗಿಸಬೇಕೆಂಬ ಹಂಬಲ ನನ್ನಲ್ಲಿ ಮತ್ತೂ ತೀವ್ರವಾಯಿತು." ರಾಮಯ್ಯನವರ ಈ ಆತ್ಮ ನಿರೀಕ್ಷೆ ಅವರ ಪ್ರಾಮಾಣಿಕತೆಗೆ ಹಿಡಿದ ಕನ್ನಡಿ.

**ರೇಷ್ಮೆ ಸಚಿವ**

ಎರಡನೇ ಬಾರಿಗೆ ವಿಧಾನಸಭೆ ಪ್ರವೇಶಿಸಿದ ವೈ.ಕೆ. ರಾಮಯ್ಯನವರು ಶ್ರೀ ರಾಮಕೃಷ್ಣ ಹೆಗಡೆಯವರ ನೇತೃತ್ವದಲ್ಲಿ ರಚಿತವಾದ ಮಂತ್ರಿಮಂಡಲದಲ್ಲಿ ರೇಷ್ಮೆ ಖಾತೆ ಸಚಿವರಾಗಿ ನೇಮಕಗೊಂಡರು. ಆ ಸಂದರ್ಭದ ಅವರ ಸಾಧನೆಗಳನ್ನು ಅವರ ಬರಹದ ಮೂಲಕವೇ ಇಲ್ಲಿ ದಾಖಲಿಸಬಯಸುತ್ತೇನೆ.

"ನನಗೆ ಗೊತ್ತಿರುವ ಎಲ್ಲಾ ಸ್ನೇಹಿತರೂ ಸರಿಯಾಗಿಯೇ ಊಹಿಸಿದ್ದಂತೆ ನನಗೆ ರೇಷ್ಮೆ ಖಾತೆಯನ್ನು ವಹಿಸಿದ್ದರು. ಅಧಿಕಾರ ನನಗೆ ಬೇಕೇ ಬೇಕು. ಆದರೆ ಅದು ಜನರ ಸೇವೆಗೆ ಹೊರತು ಸ್ವಾರ್ಥ ಸಾಧನೆಗಾಗಿಯಲ್ಲವೆಂಬ ನಂಬಿಕೆಯುಳ್ಳ ನನಗೆ ಈ ಪ್ರಬಲ ಅಧಿಕಾರದ ಅಸ್ತ್ರ ಒದಗಿ ಬಂದದ್ದು ಅದರಲ್ಲೂ ಅನೇಕ ವರ್ಷಗಳ ಕಾಲ ಹೋರಾಡಿದ್ದ ಕ್ಷೇತ್ರವಾದ ರೇಷ್ಮೆ ಖಾತೆಯ ಮಂತ್ರಿಯಾದುದು ಒಂದು ಒಳ್ಳೆಯ ಅವಕಾಶ ಮತ್ತು ಸವಾಲೆಂದು ತಿಳಿದು ಕೆಲಸಕ್ಕೆ ತೊಡಗಿದೆ. ಅನೇಕ ವರ್ಷಗಳಿಂದ ನಾನಾ ವೇದಿಕೆಗಳಲ್ಲಿ ನಾನು ಈ ಉದ್ಯಮದ ಬಗ್ಗೆ ಹಂಬಲಿಸಿದ್ದ ಕೆಲಸಗಳನ್ನು ನಾನೇ ಮಾಡುವ ಅವಕಾಶ ಒದಗಿಬಂದಿತ್ತು. ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷನಾಗಿ ಈ ಉದ್ಯಮದ ಬಗ್ಗೆ ಚರ್ಚಿಸಲು ಕರ್ನಾಟಕದ ರೇಷ್ಮೆ ಸಚಿವರನ್ನು ಭೇಟಿ ಮಾಡಲು ಅನೇಕ ಸಾರಿ ಪ್ರಯತ್ನಪಟ್ಟು ವಿಫಲನಾಗಿದ್ದ ನಾನೇ ರೇಷ್ಮೆ ಖಾತೆಯ ಸಚಿವನಾದಾಗಿನ ನನ್ನ ಮನಃಸ್ಥಿತಿಯನ್ನು ಊಹಿಸಿಕೊಳ್ಳಲು ನಿಮಗೇ ಬಿಡುತ್ತೇನೆ.

ಮೂಲ ಬಿತ್ತನೆ ಪ್ರದೇಶಗಳಿಗೆ ವಿಶ್ವಬ್ಯಾಂಕಿನ ನೆರವಿನ ರೇಷ್ಮೆ ಅಭಿವೃದ್ಧಿಯ ಯೋಜನೆಯಡಿಯಲ್ಲಿ ಯಾವ ನೆರವು ಮತ್ತು ಕಾರ್ಯಕ್ರಮ ಇಲ್ಲದಿದ್ದುದರ ಬಗೆಗೆ ಪ್ರತಿಭಟಿಸಿದ್ದ ನನಗೆ ಇದೊಂದು ವಿಪರ್ಯಾಸವೆಂದು ಕಂಡಿತು. ಮೂಲಭೂತವಾಗಿ ಬಿತ್ತನೆ ಪ್ರದೇಶದ

ಅಭಿವೃದ್ಧಿಯಾಗದೆ ರೇಷ್ಮೆ ಉತ್ಪಾದನೆ ಹೆಚ್ಚಿಸಲು ತರುವ ಕಾರ್ಯಕ್ರಮಗಳು ಎಷ್ಟರಮಟ್ಟಿಗೆ ಯಶಸ್ವಿಯಾಗುತ್ತದೆಂದು ತೀವ್ರವಾಗಿ ಪರಿಶೀಲಿಸಲು ಇಲಾಖೆಯ ಆಯುಕ್ತರು ಮತ್ತು ನಿರ್ದೇಶಕರಿಗೆ ಸೂಚನೆ ಕೊಟ್ಟೆ. ಈಗಿರುವ ಲೋಪದೋಷಗಳನ್ನು ಒಪ್ಪಿಕೊಂಡ ಅಧಿಕಾರಿಗಳು ಈ ಲೋಪದೋಷಗಳನ್ನು ಪರಿಹರಿಸುವ ಪ್ರಯತ್ನದಲ್ಲಿ ನಿರತರಾದರು. ರೇಷ್ಮೆ ಅಭಿವೃದ್ಧಿ ಯೋಜನೆಯ ಮಧ್ಯಕಾಲಿಕ ಗುಣಸಮೀಕ್ಷೆ ಅದೇ ಸಂದರ್ಭಕ್ಕೆ ಒದಗಿಬಂತು. ಇದರ ಸದುಪಯೋಗ ಪಡೆದು ಮೈಸೂರು ಬಿತ್ತನೆ ಪ್ರದೇಶ ಬೈವೊಲ್ಟಿನ್ ಬಿತ್ತನೆ ಪ್ರದೇಶ ಮತ್ತು ಮೂಲ ಬಿತ್ತನೆ ಪ್ರದೇಶಗಳಿಗೆ ಬೇಕಾಗಿರುವ ಸವಲತ್ತು ಮತ್ತು ಸಲಕರಣೆಗಳನ್ನು ಒದಗಿಸಲು ಬೇಕಾದ ಕಾರ್ಯಕ್ರಮವನ್ನು ಪರಿಷ್ಕೃತ ರೇಷ್ಮೆ ಅಭಿವೃದ್ಧಿ ಯೋಜನೆಯ ಅಡಿಯಲ್ಲಿ ಅಳವಡಿಸಲಾಯಿತು. ಹೀಗಾಗಿ ಮೈಸೂರು ಬಿತ್ತನೆ ಪ್ರದೇಶದಲ್ಲಿ ಬೇಕಾದ ಕಟ್ಟಡಗಳು ಮತ್ತು ಗುಣಮಟ್ಟದ ಮೂಲ ತಳಿಯನ್ನು ರೈತರ ಹಂತದಲ್ಲಿ ಬೆಳೆಯಲು ಬೇಕಾಗುವ ಚಾಕಿ ಮತ್ತು ತಾಂತ್ರಿಕ ಕೇಂದ್ರಗಳನ್ನು ಸ್ಥಾಪಿಸಲಾಯಿತು. ಹಾಗೆಯೇ ಗುಣಮಟ್ಟದ ಬಿತ್ತನೆ ಮೊಟ್ಟೆಗಳನ್ನು ತಯಾರಿಸಲು ಮತ್ತು ಬೆಳೆದ ಬಿತ್ತನೆ ಗೂಡುಗಳನ್ನು ಯೋಗ್ಯ ರೀತಿಯಲ್ಲಿ ಶೇಖರಿಸಿ ವಿಲೇವಾರಿ ಮಾಡಲು ಸೂಕ್ತ ಕಟ್ಟಡ ಕಟ್ಟಿಸಲು ಕ್ರಮ ತೆಗೆದುಕೊಳ್ಳಲಾಯಿತು.

ನಾನು ರೇಷ್ಮೆ ಖಾತೆ ಸಚಿವನಾದ ಮೇಲೆ ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷ ಪದವಿಗೆ ರಾಜೀನಾಮೆ ಕೊಟ್ಟೆ. ಸಂಘದ ಅನೇಕ ಸದಸ್ಯರು ನಾನು ಅಧ್ಯಕ್ಷನಾಗಿ ಮುಂದುರಿಯುವಂತೆ ಒತ್ತಾಯ ತಂದರು. ಆದರೆ ನಾನು ರೇಷ್ಮೆ ಖಾತೆಯ ಸಚಿವನಾಗಿ ಕೈಗಾರಿಕೆಗೆ ಸಂಬಂಧಪಟ್ಟ ಸಂಘದ ಅಧ್ಯಕ್ಷನಾಗಿರುವುದು ಉಚಿತವಲ್ಲವೆಂದು ಸಂಘದ ಧ್ಯೇಯಧೋರಣೆಗಳಿಗೂ ಮತ್ತು ಸರ್ಕಾರದ ಧ್ಯೇಯಧೋರಣೆಗಳೂ ಸಂಘರ್ಷ ಉಂಟಾದಾಗ ಆಗಬಹುದಾದ ಪರಿಣಾಮದ ದೃಷ್ಟಿಯಿಂದಲೂ ಹಾಗೂ ಅನೇಕ ಹಿತಾಸಕ್ತಿಗಳ ಒತ್ತಡದಲ್ಲಿ ಕೆಲಸ ಮಾಡಬೇಕಾದ ಸಚಿವನಾಗಿ ಸಂಘದ ಅಧ್ಯಕ್ಷನಾಗಿ ಸಮರ್ಥವಾಗಿ ಕೆಲಸ ಮಾಡಲು ಸಾಧ್ಯವಾಗುವುದಿಲ್ಲವೆಂದು ಹೇಳಿ ನನ್ನ ರಾಜೀನಾಮೆಯು ತೀರ್ಮಾನಕ್ಕೆ ಅಂಟಿಕೊಂಡೆ. ನಾನು ರಾಜೀನಾಮೆ ಕೊಟ್ಟಿದ್ದರೂ ಇದುವರೆವಿಗೂ ಯಾವ ಹೊಸ ಅಧ್ಯಕ್ಷನನ್ನು ಆರಿಸದೆ ಸಂಘದ ಉಪಾಧ್ಯಕ್ಷರಾದ ಶ್ರೀಗುರುಮಲ್ಲ ದೇವರು ಅವರೇ ಅಧ್ಯಕ್ಷರಾಗಿ ಇಂದಿಗೂ ಮುಂದುವರಿಯುತ್ತಿದ್ದಾರೆ.

ನಾನು ಸಚಿವನಾದಾಗ ನೂರಾಹತ್ತು ಕೋಟಿ ರೂಪಾಯಿಗಳ ವೆಚ್ಚದ ವಿಶ್ವ ಬ್ಯಾಂಕ್ ನೆರವಿನ ಐದು ವರ್ಷಗಳ ಕರ್ನಾಟಕ ರೇಷ್ಮೆ ಅಭಿವೃದ್ಧಿ ಯೋಜನೆಯು ಒಂದು ಹಂತ ತಲುಪಿತ್ತು, ನಾನಾ ವೇದಿಕೆಗಳಲ್ಲಿ ನಾನು ರೇಷ್ಮೆ ಉದ್ಯಮದ ಬಗ್ಗೆ ಮಾಡಿದ ಹೋರಾಟ, ದುಡಿದ ದುಡಿಮೆ, ಇದರಿಂದ ಪಡೆದ ಅನುಭವಗಳನ್ನು ಆಧಾರವಾಗಿಟ್ಟುಕೊಂಡು ಸಮರ್ಪಕವಾಗಿ ಈ ಖಾತೆಯನ್ನು ನಿರ್ವಹಿಸಲು ವಿಶ್ವಾಸದಿಂದಲೇ ಈ ಖಾತೆಯನ್ನು ನನಗೆ ವಹಿಸಲಾಯಿತೆಂದು ಸೂಲಿಬಲೆಯಲ್ಲಿ ಸರ್ಕಾರಿ ರೇಷ್ಮೆ ಬಿತ್ತನೆ ಕೋಟಿ ಕಟ್ಟಡದ ಉದ್ಘಾಟನೆ ಮಾಡುವಾಗ ಮಾನ್ಯ ಮುಖ್ಯಮಂತ್ರಿಯವರು ಸಾರ್ವಜನಿಕವಾಗಿ ಹೇಳಿ ವಿಶ್ವಬ್ಯಾಂಕಿನ ನೆರವಿನ ಯೋಜನೆಯನ್ನು ಉತ್ತಮವಾಗಿ ಕಾರ್ಯರೂಪಕ್ಕೆ ತರಲು ನನಗೆ ತಿಳಿಸಿದ್ದರು. ಅವರು ನಿರೀಕ್ಷಿಸಿದ ಮಟ್ಟಕ್ಕೆ ಕೆಲಸ ಮಾಡುವುದು ನನ್ನ ಕರ್ತವ್ಯವಾಗಿತ್ತು. ಅಧಿಕಾರಿಗಳೊಡನೆ ಚರ್ಚಿಸಿ, ಯೋಜನೆಯನ್ನು ಕೂಲಂಕಷವಾಗಿ ಅಭ್ಯಸಿಸಿ, ಕಾರ್ಯಪ್ರವೃತ್ತನಾದೆ. ಈ ಯೋಜನೆಯ ಬಗ್ಗೆ ಸ್ಥೂಲವಾಗಿ ಹೇಳಬಹುದಾದರೆ

೧. ಯೋಜನೆಯ ಕೊನೆಯ ವರ್ಷದಲ್ಲಿ ರೇಷ್ಮೆ ಉತ್ಪಾದನೆ ೧೬೦೦ ಟನ್ ಹೆಚ್ಚಾಗಬೇಕು, ಅಂದರೆ ೧೯೭೯-೮೦ರಲ್ಲಿ ೨೬೩೧ ಟನ್ ಇದ್ದ ರೇಷ್ಮೆ ಉತ್ಪಾದನೆ, ಐದು ವರ್ಷದ ಕೊನೆಯಲ್ಲಿ ೪೨೩೧ ಟನ್ ಉತ್ಪಾದನಾ ಸಾಮರ್ಥ್ಯ ಗಳಿಸಬೇಕು. ಇದರಲ್ಲಿ ೧,೦೦೦ ಟನ್ ರೇಷ್ಮೆ ಅಂತರರಾಷ್ಟ್ರೀಯ ಗುಣಮಟ್ಟದ ಬೈವೋಲ್ಟಿನ್ ರೇಷ್ಮೆಯಾಗಿರಬೇಕು.

೨. ಕಚ್ಚಾ ರೇಷ್ಮೆ ಮತ್ತು ಸ್ಪನ್ ರೇಷ್ಮೆಯ ದಾರವನ್ನು ರಫ್ತು ಮಾಡಲು ಯೋಗ್ಯ ಗುಣಮಟ್ಟಕ್ಕೇರಿಸಲು ಅನುಕೂಲಕರವಾದ ಆಧುನಿಕ ಸಂಸ್ಕರಣ ಘಟಕಗಳನ್ನು ಮತ್ತು ತಾಂತ್ರಿಕತೆಯನ್ನು ಅಳವಡಿಸಬೇಕು.

೩. ಹೆಚ್ಚು ಕಾಲಾವಧಿ ಬೇಕಾಗಿರುವ ರೇಷ್ಮೆ ಕೃಷಿ ಸುಧಾರಣೆಗೆ ರೇಷ್ಮೆ ಕೃಷಿಯಲ್ಲಿ ಮುಂದುವರಿದ ಪ್ರದೇಶಗಳಿಂದ ಅತ್ಯಾಧುನಿಕ ತಾಂತ್ರಿಕ ಜ್ಞಾನ ಪಡೆದು ಆಚರಣೆಗೆ ತರುವುದು ಮತ್ತು ಸ್ಥಳೀಯ ರೇಷ್ಮೆ ಸಂಶೋಧನಾಲಯವನ್ನು ವಿಸ್ತರಿಸುವುದು.

೪. ಈ ಸಾಧನೆಗೆ ಪೂರಕವಾಗಿ ೧೪೦೦ ಹೆಕ್ಟೇರ್ ಪ್ರದೇಶದಲ್ಲಿ ಹಿಪ್ಪುನೇರಳೆ ತೋಟಗಳನ್ನು ಹೊಸದಾಗಿ ಬೆಳೆಯಲು ಅನುಕೂಲ ಕಲ್ಪಿಸುವುದು ಮತ್ತು ಯೋಜನೆಯ ಪ್ರಾರಂಭದಲ್ಲಿದ್ದ ೨೪,೦೦೦ ಹೆಕ್ಟೇರ್ ನೀರಾವರಿ ಹಿಪ್ಪು ನೇರಳೆಗೆ ಮತ್ತು ೪,೬೦,೦೦೦ ಹೆಕ್ಟೇರ್ ಮಳೆ ಆಧಾರಿತ ಹಿಪ್ಪುನೇರಳೆ ಪ್ರದೇಶಗಳಲ್ಲಿ ಮತ್ತು ಹೊಸ ಪ್ರದೇಶಗಳಿಗೆ ಗುಣಮಟ್ಟದ ರೇಷ್ಮೆ ಮೊಟ್ಟೆಗಳನ್ನು ಮತ್ತು ತಾಂತ್ರಿಕ ನೆರವನ್ನು ಕೊಡುವುದು. ಇದಕ್ಕೋಸ್ಕರ ವರ್ಷಕ್ಕೆ ಒಂದು ಲಕ್ಷ ಮೊಟ್ಟೆ ತಯಾರು ಮಾಡುವ ಸಾಮರ್ಥ್ಯವುಳ್ಳ ೧೦ ಆಧುನಿಕ ಮೊಟ್ಟೆ ತಯಾರಿಕಾ ಕೇಂದ್ರಗಳು, ೧೫೦ ತಾಂತ್ರಿಕ ಸೇವಾ ಕೇಂದ್ರಗಳು, ೧೫೦೦ ಚಾಕಿ ಸಾಗಾಣಿಕ ಕೇಂದ್ರಗಳು ಮತ್ತು ಇದಕ್ಕೆ ಬೇಕಾದ ಸಿಬ್ಬಂದಿ ಸವಲತ್ತುಗಳು ಹಾಗೂ ೧೧ ಗೂಡಿನ ಮಾರುಕಟ್ಟೆಗಳಿಗೆ ಹೊಸ ಕಟ್ಟಡಗಳನ್ನು ಒದಗಿಸಿ, ವಿಸ್ತರಿಸುವುದು.

ಕರ್ನಾಟಕ ರೇಷ್ಮೆ ಅಭಿವೃದ್ಧಿ ಯೋಜನೆ ಎಲ್ಲೆಲ್ಲೂ ಕುತೂಹಲ ಕೆರಳಿಸಿತ್ತು. ಇಡೀ ರಾಷ್ಟ್ರದಲ್ಲಿ ಏಕೆ? ವಿಶ್ವದಲ್ಲಿಯೇ ಈ ಯೋಜನೆಯ ಪ್ರಗತಿಯನ್ನು ಕುತೂಹಲ ಮತ್ತು ಆಸಕ್ತಿಗಳಿಂದ ನೋಡುತ್ತಿದ್ದ ಕಾಲ ಅದು. ವರ್ಷವರ್ಷವೂ ರೇಷ್ಮೆ ಬೇಡಿಕೆ ಹೆಚ್ಚಾಗುತ್ತಿತ್ತು. ವಿಶ್ವದಲ್ಲೇ ರೇಷ್ಮೆ ಉತ್ಪಾದನೆಯಲ್ಲಿ ಅಗ್ರಗಣ್ಯ ದೇಶವಾದ ಜಪಾನ್ ಮತ್ತು ಅಷ್ಟೇ ಪ್ರಮುಖವಾದ ಮತ್ತೊಂದು ರಾಷ್ಟ್ರ ಕೋರಿಯಾದಲ್ಲಿ ರೇಷ್ಮೆಯ ಉತ್ಪಾದನೆ ಗಣನೀಯ ವಾಗಿ ಕಡಿಮೆಯಾಗಿತ್ತು. ಇಂತಹ ಸಂದರ್ಭದಲ್ಲಿ ಭಾರತ ದೇಶದ ಅದರಲ್ಲೂ ಕರ್ನಾಟಕದ ರೇಷ್ಮೆ ಉತ್ಪತ್ತಿಯ ಬಗ್ಗೆ, ವಿಶ್ವದ ಗಮನವಿದ್ದದ್ದು ಆಶ್ಚರ್ಯವಾಗಿರಲಿಲ್ಲ. ಕಚ್ಚಾ ರೇಷ್ಮೆಗೆ ಇದ್ದ ಬೇಡಿಕೆಯಿಂದಾಗಿ, ಉದ್ಯಮದಲ್ಲಿ ತೊಡಗಿದ್ದ ಬೆಳೆಗಾರರಿಗೆ, ನೂಲು ಬಿಚ್ಚುವವರಿಗೆ, ಕೈಮಗ್ಗದವರಿಗೆ ಮತ್ತು ರೇಷ್ಮೆ ರಫ್ತುದಾರರಿಗೆ ಬಹಳ ಲಾಭ ಬರುತ್ತಿತ್ತು. ಇಂತಹ ಸಂದರ್ಭದಲ್ಲಿ ರೇಷ್ಮೆ ನೂಲಿನ ಉತ್ಪಾದನೆ ಗುರಿಯನ್ನು ಮುಟ್ಟುವುದರಲ್ಲಿ ಅನುಮಾನವಿರಲಿಲ್ಲ. ಆದರೆ ಒಂದು ಸಾವಿರ ಟನ್ ಅಂತರರಾಷ್ಟ್ರೀಯ ಗುಣಮಟ್ಟದ ರೇಷ್ಮೆ ತಯಾರಿಕೆ ಮತ್ತು ರೇಷ್ಮೆಯನ್ನು ರಫ್ತು ಮಾಡುವ ನಮ್ಮ ಗುರಿ ಕನಸಾಗಿಯೇ ಉಳಿದಿತ್ತು. ಈ ದೃಷ್ಟಿಯಿಂದ ಕರ್ನಾಟಕ ರೇಷ್ಮೆ ಅಭಿವೃದ್ಧಿ ಯೋಜನೆ ನಿರೀಕ್ಷಿಸಿದಷ್ಟು ಸಫಲವಾಗಿಲ್ಲವೆಂದು ನಾನು ಅಭಿಪ್ರಾಯಪಟ್ಟು, ಅದು ಪತ್ರಿಕೆಯಲ್ಲಿ ಪ್ರಕಟವಾದಾಗ ಅಂದಿನ ಸರ್ಕಾರದ ಕಾರ್ಯದರ್ಶಿಗಳಾಗಿದ್ದ ಶ್ರೀಪದ್ಮನಾಭ ಅವರು ದಿಗಿಲುಗೊಂಡು ನನ್ನಲ್ಲಿ ಬಂದಾಗ ನಾನು "ನಾವು ಕೊಟ್ಟಿರುವ ಹೇಳಿಕೆಯನ್ನು ನಾನು ಸಮರ್ಥಿಸಿಕೊಳ್ಳಬಲ್ಲೆ, ನೀವು ಗಾಬರಿಯಾಗುವುದು ಬೇಡವೆಂದು ತಿಳಿಸಿದೆ."

ಹೊರ ದೇಶಗಳಿಂದ ಮುಖ್ಯವಾಗಿ ಚೀನಾದಿಂದ ಗುಣಮಟ್ಟದ ರೇಷ್ಮೆಯನ್ನು ಕಡಿಮೆ ದರದಲ್ಲಿ ಆಮದು ಮಾಡಿಕೊಳ್ಳುವುದು ವರ್ಷ ವರ್ಷ ಜಾಸ್ತಿಯಾಗುತ್ತಿತ್ತು. ಈ ಗೊತ್ತುಗುರಿಯಿಲ್ಲದ ಆಮದು ಮಾರುಕಟ್ಟೆಯಲ್ಲಿ ತೀವ್ರತರನಾದ ಏರುಪೇರುಗಳಿಗೆ ಅವಕಾಶವಾಯಿತು. ತುಂಬಾ ಉತ್ಸಾಹದಿಂದ ಕರ್ನಾಟಕ ರೇಷ್ಮೆ ಅಭಿವೃದ್ಧಿ ಯೋಜನೆಯನ್ನು ಕಾರ್ಯರೂಪಕ್ಕೆ ತರುತ್ತಿರುವ ಈ ಸಮಯದಲ್ಲಿ ರೇಷ್ಮೆ ಉತ್ಪಾದನೆಯನ್ನು ಕರ್ನಾಟಕದಲ್ಲೇ ಅಲ್ಲದೆ, ಇತರ ರಾಜ್ಯಗಳಲ್ಲೂ ಹೆಚ್ಚಿಸುವ ಚಿನ್ನದಂತಹ ಅವಕಾಶಕ್ಕೆ ಈ ಆಮದು ನೀತಿ ಮಾರಕವಾಗುತ್ತದೆ ಎನ್ನುವುದು ನನಗೆ ಖಚಿತವಾಗಿ ಮನವರಿಕೆಯಾಯಿತು. ನಮ್ಮ ದೇಶದಲ್ಲಿ ರೇಷ್ಮೆ ಕಸುಬು ಶತಮಾನಗಳಿಂದ ಇದ್ದರೂ ಬ್ರಿಟಿಷರ ಆಮದು ನೀತಿ ಒಂದು ಕಾಲದಲ್ಲಿ ನಮ್ಮ ಈ ಕೈಗಾರಿಕೆಗೆ ಮಾರಕವಾಗಿತ್ತು. ನಮ್ಮ ದೇಶದಲ್ಲಿ ಬ್ರಿಟಿಷರ ಕಾಲದಿಂದಲೂ ಉತ್ಪತ್ತಿಯಾಗುತ್ತಿರುವ ರೇಷ್ಮೆ ಬೇಡಿಕೆಗಿಂತ ಕಡಿಮೆಯಾಗಿದೆ. ಸ್ವಾತಂತ್ರ್ಯ ಪೂರ್ವ ದಿನಗಳಲ್ಲಿ ದೊರೆತ ಅನುಕೂಲ ಪರಿಸ್ಥಿತಿಯಿಂದಾಗಿ ಈ ಕೈಗಾರಿಕೆ ಚೇತರಿಸಿಕೊಳ್ಳಲು ಅವಕಾಶವಾಯಿತು.

ಇತ್ತೀಚಿನ ವರ್ಷಗಳಲ್ಲಿ ರಫ್ತು ವಹಿವಾಟು ಹೆಚ್ಚಾದುದರಿಂದಲೂ ಹಾಗೂ ಆಂತರಿಕ ಬೇಡಿಕೆ ಜಾಸ್ತಿಯಾಗಿದ್ದುದರಿಂದಲೂ ರೇಷ್ಮೆಯ ಬೇಡಿಕೆ ಹೆಚ್ಚಾಗಿತ್ತು "ಉತ್ತಮ ಬೆಳೆ ಅದಕ್ಕೆ ತಕ್ಕ ಬೆಲೆ ಈ ಉದ್ಯಮದ ವಿಕಾಸಕ್ಕೆ ಇರುವ ಒಂದೇ ಒಂದು ದಾರಿ" ಎಂದು ಯಾವಾಗಲೂ ನಂಬಿದವನು ನಾನು. ಇದರಿಂದಾಗಿ ರೇಷ್ಮೆ ದಾರಕ್ಕೆ ಎಷ್ಟೇ ಬೆಲೆ ಹೆಚ್ಚಾದರೂ ಅದು ಒಳ್ಳೆಯದೆಂದು ಭಾವಿಸಿದವನು. ಕಾರಣ ಇಲ್ಲಿ ಕೊಂಡುಕೊಳ್ಳುವವನು ಧನಿಕ, ಉತ್ಪಾದನೆ ಮಾಡುವವನು ಬಡವ, ಬೆಲೆ ಹೆಚ್ಚಿದಂತೆಲ್ಲ ಉದ್ಯಮ ವಿಕಾಸವಾಗುತ್ತದೆ.

ಭಾರತದ ರೇಷ್ಮೆ ಉದ್ಯಮಕ್ಕೆ ತಿರುವು ಕೊಡುವಂತಹ ಅವಕಾಶವಿರುವ ಈ ಸಂದರ್ಭದಲ್ಲಿ ರಾಜಕೀಯವಾಗಿ ಪ್ರಬಲವಾಗಿರುವ ಉತ್ತರ ಪ್ರದೇಶದ ವಾರಣಾಸಿಯ ಹಿತಾಸಕ್ತಿಯ ಗುಂಪೊಂದು ಆಮದು ಈತಿಯನ್ನು ಸಡಿಲಪಡಿಸಲು ಕೇಂದ್ರ ಸರ್ಕಾರದ ಮೇಲೆ ಪ್ರಭಾವ ಬೀರತೊಡಗಿತು. ಈ ಆಮದು ನೀತಿಯ ಅನಿಷ್ಟ ಪರಂಪರೆಯ ನಿಜರೂಪದ ಅರಿವಿಲ್ಲದ ಬೇರೆ ರಾಜ್ಯದವರೂ ಸಹ ಕಡಿಮೆ ಬೆಲೆಯಲ್ಲಿ ಉತ್ತಮ ಗುಣಮಟ್ಟದ ಚೀನಾ ದೇಶದ ರೇಷ್ಮೆಯನ್ನು ಆಮದು ಮಾಡಿಕೊಳ್ಳುವುದರಲ್ಲಿ ಆಸಕ್ತಿ ತೋರಿದರು. ರಾಷ್ಟ್ರದ ರೇಷ್ಮೆ ಉತ್ಪತ್ತಿ ಮಾಡುವ ಇತರ ರಾಜ್ಯದ ಸಂಬಂಧಪಟ್ಟ ಸಚಿವರುಗಳಿಗೆ ಮತ್ತು ಅಧಿಕಾರಿಗಳಿಗೆ ನಾನು ಈ ವಿಷಯದಲ್ಲಿ ಪತ್ರ ಬರೆದು ಆಮದು ನೀತಿಯನ್ನು ಬೆಂಬಲಿಸುವುದರ ಪರಿಣಾಮದ ಬಗ್ಗೆ ಎಚ್ಚರಿಸಿದೆ. ಅಂದಿನ ಜವಳೀಖಾತೆ ಸಚಿವರೂ, ಈಗಿನ ನಮ್ಮ ರಾಜ್ಯಪಾಲರೂ ಆಗಿರುವ ಶ್ರೀ ಖುರ್ಷಿದ್ ಆಲಂಖಾನ್‌ರನ್ನು ಹಾಗೂ ತಮಿಳುನಾಡಿನ ಅಂದಿನ ಸಣ್ಣ ಕೈಗಾರಿಕೆಗಳ ಸಚಿವರನ್ನು ಖುದ್ದಾಗಿ ಭೇಟಿ ಮಾಡಿ ವಾರಾಣಾಸಿ ಮತ್ತು ತಮಿಳುನಾಡಿಗೆ ಬೇಕಾದಷ್ಟು ರೇಷ್ಮೆ ನೂಲನ್ನು ಒದಗಿಸುವ ಭರವಸೆ ಕೊಟ್ಟು ರೇಷ್ಮೆ ಆಮದು ಮಾಡಿಕೊಳ್ಳುವುದನ್ನು ಬೆಂಬಲಿಸಬೇಡಿರೆಂದು ಅವರನ್ನು ಒತ್ತಾಯಿಸಿದೆ. ಬೆಂಗಳೂರಿನಲ್ಲಿ ನಡೆದ ರಾಷ್ಟ್ರೀಯ ರೇಷ್ಮೆ ಉದ್ಯಮದ ಸಭೆಯೊಂದರಲ್ಲಿ ಕೇಂದ್ರ ಸರ್ಕಾರದ ಈ ನೀತಿಯನ್ನು ಕಟುವಾಗಿ ನಾನು ಟೀಕಿಸಿದಾಗ ಈ ನನ್ನ ಟೀಕೆ ಅತಿಯಾಯಿತೆಂದು ಹೇಳಿದವರೂ ಉಂಟು. ಒಂದು ಕಡೆ ರೇಷ್ಮೆಯ ಬೆಲೆ ಹೆಚ್ಚುತ್ತಿರುವಾಗ ಬೇಡಿಕೆ ಇರುವಷ್ಟು ರೇಷ್ಮೆಯನ್ನು ಭಾರತದಲ್ಲಿ ಉತ್ಪತ್ತಿ ಮಾಡಲು ಸಾಧ್ಯವಿಲ್ಲದಿರುವಾಗ ಕೇಂದ್ರ ಸರ್ಕಾರದಿಂದ ಆಮದು ಅನಿವಾರ್ಯವೆಂದು ಆಗ ಕರ್ನಾಟಕ ವಿಧಾನಸಭೆಯಲ್ಲಿ ವಿರೋಧ ಪಕ್ಷದ ನಾಯಕರಾಗಿದ್ದ ಶ್ರೀ ವೀರಪ್ಪ ಮೊಯಿಲಿಯವರು

ಹೇಳಿದ್ದಲ್ಲದೆ "ನೀವು ಈಗ ಕೇವಲ ರೇಷ್ಮೆ ಬೆಳೆಗಾರರ ಸಂಘದ ಅಧ್ಯಕ್ಷರಲ್ಲ, ಕರ್ನಾಟಕದ ಇಡೀ ರೇಷ್ಮೆ ಉದ್ಯಮದ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಕೆಲಸ ಮಾಡಬೇಕಾಗಿರುವ ಸಚಿವರಾಗಿದ್ದೀರಿ. ಆದ್ದರಿಂದ ಬೆಳೆಗಾರರ ಪಕ್ಷಪಾತಿ ಆಗಿ ಮಾತಾಡುವುದು ಸರಿಯಲ್ಲ" ಎಂದು ವಿಧಾನಸಭೆಯಲ್ಲಿ ನನ್ನನ್ನು ಛೇಡಿಸಿದಾಗ "ಈ ರಾಷ್ಟ್ರದ ರೇಷ್ಮೆ ಬೆಳೆಗಾರರ ಪಕ್ಷಪಾತಿ ಎಂದು ನೀವು ನನ್ನನ್ನು ಆಪಾದಿಸುತ್ತಿದ್ದೀರಾ? ಆದರೆ ರೇಷ್ಮೆ ಬೆಳೆಗಾರರ ಪಕ್ಷಪಾತಿ ಆಗುವುದಕ್ಕೆ ನಾನು ಹೆಮ್ಮೆ ಪಡುತ್ತೇನೆ" ಎಂದೆ. "ರೇಷ್ಮೆ ನೂಲಿನ ಧಾರಣೆ ಆಗ ಸುಮಾರು ೪೫೦ ರಿಂದ ೫೦೦ ರವರೆಗೆ ಇದ್ದಿರಬಹುದು. ಕೆಲವು ವ್ಯಾಪಾರಿಗಳ ಅಭಿಪ್ರಾಯವನ್ನು ನಂಬಿ ಕೆಲವು ಸದಸ್ಯರು ನಮ್ಮ ಪಕ್ಷದವರೇ ಆದ ಶ್ರೀ ಲಕ್ಷ್ಮಿಸಾಗರ್‌ರವರೂ ಸೇರಿದಂತೆ ಉದ್ಗಾರ ತೆಗೆದಾಗ ರೇಷ್ಮೆ ನೂಲಿನ ನಾರದ ಬೆಲೆ ಒಂದು ಸಾವಿರ ರೂ. ಆಗಲಿಬಿಡಿ, ಇದರಿಂದ ಈ ದೇಶದ ಯಾವ ಬಡವನಿಗೂ ಅನಾನುಕೂಲ ಆಗುವುದಿಲ್ಲ" ಎಂದಾಗ ಎಲ್ಲರೂ ಗೊಳ್ಳನೆ ನಕ್ಕರು. ಈಗ ರೇಷ್ಮೆಯ ಬೆಲೆ ೧,೮೦೦ ರಿಂದ ೨,೦೦೦ ರೂಪಾಯಿಗಳವರೆಗೆ ಹೆಚ್ಚಿರುವುದನ್ನು ನೋಡಿ ಆಗ ನಕ್ಕ ಜನ ಈಗ ಏನು ಹೇಳುತ್ತಾರೋ ಗೊತ್ತಿಲ್ಲ.

ರೇಷ್ಮೆ ಖಾತೆ ಸಚಿವನಾದ ಮೇಲೆ ಈ ಉದ್ಯಮವನ್ನು ನೋಡುವ ನನ್ನ ದೃಷ್ಟಿಯಲ್ಲಿ ಸಮಸ್ಯೆಗಳ ಬಗೆಗಿನ ಅನಿಸಿಕೆಗಳಲ್ಲಿ ಆಮೂಲಾಗ್ರ ಬದಲಾವಣೆ ಆಯಿತೆಂದರೆ ತಪ್ಪಾಗಲಾರದು. ಅಂಕಿಅಂಶಗಳ ಕಡೆ ನನ್ನ ಗಮನ ಅತಿಯಾಯಿತು. ಅಂತರರಾಷ್ಟ್ರೀಯ ಮಟ್ಟದಲ್ಲಿ ೭ನೇ ಸ್ಥಾನದಲ್ಲಿರುವ ಭಾರತವನ್ನು ಹೇಗಾಗರೂ ಮಾಡಿ ೫ನೇ ಸ್ಥಾನಕ್ಕಾದರೂ ತರಬೇಕೆಂಬ ಚಪಲ ತಲೆಯಲ್ಲಿ ತೂರಿತ್ತು. ಅಂದರೆ ಹೇಗಾದರೂ ಮಾಡಿ ರೇಷ್ಮೆ ಉತ್ಪಾದನೆ ಹೆಚ್ಚಿಸಬೇಕು ಎನ್ನುವ ಆಲೋಚನೆ ಕಾಡಿತ್ತು. ಈ ದಿಸೆಯಲ್ಲಿ ಸುಮಾರು ೫೦ ಭಾಗ ರೇಷ್ಮೆ ವ್ಯವಸಾಯವಿರುವ ಮೈಸೂರು ಜಿಲ್ಲೆಯಲ್ಲಿ ಬೈವೋಲ್ಟಿನ್ ಬೆಳೆಯುವುದು ಹೋಗಲಿ, ಹೊಸ ಮಿಶ್ರ ತಳಿಯನ್ನು ಬೆಳೆಯಲೂ ರೈತರು ತಿರಸ್ಕರಿಸುತ್ತಿದ್ದುದು ರೇಷ್ಮೆ ಗುಣಮಟ್ಟವನ್ನು ಅಂತರರಾಷ್ಟ್ರೀಯ ಮಟ್ಟಕ್ಕೆ ತರಬೇಕೆಂಬ ನಮ್ಮ ಹಂಬಲಕ್ಕೆ ತಣ್ಣೀರು ಎರಚಿದಂತಾಗಿತ್ತು. ನನಗೆ ಪರಿಚಯವಿರುವ ಆ ಪ್ರದೇಶದ ಎಲ್ಲರನ್ನೂ ಹೇಗಾದರೂ ಮಾಡಿ ಒಂದು ಕಡೆ ಸೇರಿಸಿ ಮನವೊಲಿಸಿಕೊಂಡು, ಚಾಮರಾಜ ನಗರ ಪ್ರದೇಶವಲ್ಲಿ ಕೊನೆಯ ಪಕ್ಷ ಮಿಶ್ರ ತಳಿಯನ್ನಾದರೂ ಬೆಳೆಸಲು ಒಪ್ಪಿಸಬೇಕೆಂದು ಕಾರ್ಯೋನ್ಮುಕನಾಗಿದ್ದೆ.

ಚಾಮರಾಜನಗರದ ಹೊಸ ಬಿತ್ತನೆ ಕೋಠಿಯ ಪ್ರಾರಂಭೋತ್ಸವ. ಅಲ್ಲಿಂದ ಆರಿಸಿ ಬಂದಿದ್ದ ಬಿ. ರಾಚಯ್ಯನವರು ಆಗ ಸಚಿವರು. ಶ್ರೀಪುಟ್ಟಸ್ವಾಮಯ್ಯನವರು ಶಾಸನಸಭೆ ಸದಸ್ಯರು. ಈ ಸಭೆ ನಡೆಸಬೇಕಾದ ಸಮಯಕ್ಕೆ ಶಾಸಕರಾದ ಶ್ರೀ ಪುಟ್ಟಸ್ವಾಮಯ್ಯನವರು ಪ್ರವಾಸ ಹೋಗಿದ್ದರು. ಶ್ರೀ ರಾಚಯ್ಯನವರು ಅವರಿಗೆ ಕಾಯಲು ಸಿದ್ಧರಿಲ್ಲ. ಸಮಾರಂಭ ಮಾಡಿ ಮುಗಿಸೋಣವೆಂದರೆ ನಾನು ಒಪ್ಪಲಿಲ್ಲ. ಶ್ರೀ ಪುಟ್ಟಸ್ವಾಮಿಯವರು ಬಂದ ಮೇಲೆಯೇ ಮಾಡೋಣವೆಂದು ಮುಂದಕ್ಕೆ ಹಾಕಿದೆ. ಕಾರಣ ವಿರೋಧ ಪಕ್ಷದ ಸ್ಥಳೀಯ ಶಾಸಕರನ್ನು ಕಡೆಗಣಿಸಲು ನಾನು ಸಿದ್ಧನಿರಲಿಲ್ಲ. ಜೊತೆಗೆ ಅಲ್ಲಿನ ರಾಜಕೀಯ ಹಿನ್ನೆಲೆ ಕೂಡ ನನಗೆ ತಿಳಿದಿತ್ತು. ಜೊತೆಗೆ ಹೇಗಾದರೂ ಮಾಡಿ ಈ ಸೀನಿಚಿ ತಳಿ ನಿಲ್ಲಿಸಲು ಎಲ್ಲರನ್ನೂ ಒಂದು ಕಡೆ ಸೇರಿಸಿ ಮನವೊಲಿಸಬೇಕೆಂಬ ಆಸೆ ಕೂಡ ಇದಕ್ಕೆ ಕಾರಣ ವಾಗಿತ್ತು. ಸಭೆಗೆ ಎಲ್ಲರೂ ಸೇರಿದೆವು. ಆದರೆ ಸೀನಿಚಿ, ವಿಷಯ ಬಂದಾಗ ಈ ನಾಯಕರೂ ಕೂಡ ಹಳೆ ಮಿಶ್ರತಳಿ ಮೊಟ್ಟೆಯನ್ನೇ ಹಂಚುವುದು ಒಳ್ಳೆಯದು. ಅದರಲ್ಲಿಯೂ ಬೇಸಿಗೆಯಲ್ಲಿ ಇದು

ಅನಿವಾರ್ಯ. ಏಕೆಂದರೆ ಬಹುತೇಕ ತೋಟಗಳು ಮಳೆ ಆಶ್ರಿತ ತೋಟಗಳು. ಮ [illegible] ಕಾಲಕ್ಕೆ ತಕ್ಕ ಹಾಗೆ ಆಗುವುದಿಲ್ಲ. ಬರಗಲು ಸೊಪ್ಪು ತಿಂದರೂ ಹಳೆ ಮಿಶ್ರ ತಳಿ ಹುಳುಗಳು ಬೇಸಿಗೆಯಲ್ಲೂ ಅಷ್ಟಿಷ್ಟು ಇಳುವರಿ ಕೊಡುತ್ತವೆ. ಆದರೆ ಇಂತಹ ಸೊಪ್ಪು ಹಾಕಿ ಸಾಕಿದರೆ ಹೊಸ ಮಿಶ್ರತಳಿ ಹುಳುಗಳು ಸಂಪೂರ್ಣ ಹಾಳಾಗುತ್ತವೆ. ಜೊತೆಗೆ ಹೊಸ ಮಿಶ್ರತಳಿ ಮೊಟ್ಟೆ ತಯಾರಿಕೆಗೆ ಬೇಕಾದ ಬೈವೊಲ್ಟಿನ್ ಗೂಡುಗಳು ಬೇಸಿಗೆಯಲ್ಲಿ ಸಿಕ್ಕುವುದಿಲ್ಲ ಎಂಬ ರೈತರ ಅಭಿಪ್ರಾಯಕ್ಕೆ ಇವರೂ ದನಿ ಸೇರಿಸಿದರು. ಈಗ ತಾನೆ ಮೊದಲಾಗಿರುವ ಈ ಬಿತ್ತನೆ ಕೋಠಿಯಲ್ಲಿ ಒಳ್ಳೆಯ ಮೊಟ್ಟೆ ಮಾಡಿಸಿ ವಿಶ್ವಬ್ಯಾಂಕ್ ನೆರವಿನ ಯೋಜನೆಯ ಚಾಕಿ ಸಾಕಾಣಿಕೆ ಕೇಂದ್ರ ದಿಂದ ಚಾಕಿ ಕೊಡಿ, ಹೊಸದಾಗಿ ಆಗಿರುವ ತಾಂತ್ರಿಕ ಕೇಂದ್ರಗಳಿಂದ ರೈತರಿಗೆ ಪ್ರಚುರಪಡಿಸಿ, ಮೈಸೂರು ಜಿಲ್ಲೆ ಬೆಳೆಗಾರರು ಕಂದಾಚಾರದವರಾದರೂ ಹೊಸ ಮಿಶ್ರತಳಿ ಹೆಚ್ಚು ಲಾಭದಾಯಕವಾದರೆ ಅವರೇ ಮುಂದೆ ಬಂದು ಆ ತಳಿ ಮೇಯಿಸುವರು, ಸದ್ಯದಲ್ಲಿ ಹೊಸ ತಳಿಯನ್ನು ರೈತರ ಮೇಲೆ ಹೇರುವುದು ಬೇಡ ಎಂದು ವಾದಿಸಿದರು. ಅಷ್ಟೇ ಅಲ್ಲ, ಬೇಸಿಗೆಯಲ್ಲಿ ಇಲಾಖೆಯವರೇ ಹಳೆ ಮಿಶ್ರ ತಳಿ ಮೊಟ್ಟೆ ಹಂಚಲು ಏರ್ಪಾಡು ಮಾಡಬೇಕೆಂದು ಒತ್ತಾಯಿಸಿದರು. ಸಚಿವನಾಗುವ ಮೊದಲು ಇವರ ವಾದವೇ ನನ್ನ ವಾದವಾಗಿತ್ತು. ಅಂದರೆ ಯಾವುದು ಚೆನ್ನಾಗಿ ಬೆಳೆ ಆಗುತ್ತೋ ಅದನ್ನು ಬೆಳೆಯುತ್ತಾನೆ ರೈತ. ಆದರೆ ಈಗ ನಾನು ಏನಾದರೂ ಸಾಧಿಸಬೇಕೆಂಬ ಚಪಲ ಹೊತ್ತ ಸಚಿವನಲ್ಲವೆ? ಅನೇಕ ವರ್ಷಗಳಿಂದ ನಂಬಿದ್ದ ಅನಿಸಿಕೆಗಳನ್ನು ಮರೆತು ಹೇಗೆ ತೀರ್ಮಾನ ಮಾಡಲಿ ಮಂತ್ರಿಯಾಗಿ ನಾನು ಈ ಬೇಡಿಕೆಯನ್ನು ಇಲಾಖೆಯ ನಿರ್ಣಯದ ವಿರುದ್ಧ ತೆಗೆದುಕೊಳ್ಳಬೇಕಾಗಿತ್ತು. ನನ್ನವೇ ಆದ ನಂಬಿಕೆ, ಅನಿಸಿಕೆ, ಅಭಿಪ್ರಾಯಗಳಿಗೂ, ಈಗ ಆಡಳಿತಗಾರನಾಗಿ ನಾನು ತೆಗೆದುಕೊಳ್ಳಬೇಕಾದ ತೀರ್ಮಾನಗಳಿಗೂ ಒಂದು ವಿಧವಾದ ಸಂಘರ್ಷವೇ ಪ್ರಾರಂಭವಾಯಿತು. ಬೆಳೆಗಾರನ ಹಿತ, ಆಡಳಿತಗಾರನ ಹಂಬಲ-ಮನ ತಲ್ಲಣಿಸಿತು. ಇಲಾಖೆಯವರ ಅಡ್ಡಿ ಆತಂಕಗಳಿರಲಿಲ್ಲ. ಮಂತ್ರಿ, ಶಾಸಕರ ಒತ್ತಾಯಕ್ಕೆ ಮಣಿಯುವ ಅನಿವಾರ್ಯತೆ ಇರಲಿಲ್ಲ. ಆದರೂ ಏನೋ ಗೊಂದಲ. ಆಡಳಿತಗಾರನ ದಿಢೀರ್ ಪರಿಹಾರ ವರ್ಗ ಮತ್ತು ಕ್ರಮಗಳು ಪ್ರಾಣಿ ಮತ್ತು ಸಸ್ಯಗಳ ಅಭಿವೃದ್ಧಿ ಕಾರ್ಯಾಚರಣೆಯಲ್ಲಿ ಸಲ್ಲದು. ಅಲ್ಲದೆ ಪರಿಸರದ ವಾಸ್ತವಿಕತೆ ಮತ್ತು ವಿವೇಚನಾ ಜ್ಞಾನವಿಲ್ಲದೆ ಅತಿ ಬುದ್ಧಿವಂತಿಕೆ ಮತ್ತು ಆಡಳಿತದ ದಕ್ಷತೆಯ ದೃಷ್ಟಿಯಿಂದ ತೆಗೆದುಕೊಂಡ ತೀರ್ಮಾನಗಳು, ನಿರ್ಣಯಗಳು ಮತ್ತು ಕಾರ್ಯನಿರ್ವಹಣೆಗಳು ಒಳಿತನ್ನು ಮಾಡುವ ಬದಲು ಕೆಡುಕನ್ನೇ ತರುವ ಸಂಭವಗಳೇ ಹೆಚ್ಚೆಂದು ನನಗನ್ನಿಸಿತು. ಆನೇಕಲ್‌ನಲ್ಲಿ ಬೈವೊಲ್ಟಿನ್ ತಳಿಯನ್ನು ಬಲವಂತವಾಗಿ ಹೇರಿ ಆದ ಅನುಭವ ಹಸಿರಾಗಿತ್ತು. ಬೆಳೆ ಕಳೆದುಕೊಂಡ ಬೆಳೆಗಾರನ ಬೆಳಕಿಲ್ಲದ ಮನೆಯ ಚಿತ್ರ ಕಣ್ಣು ಮುಂದೆ ಕಟ್ಟಿ ಬಂತು. ಅಬ್ಬಾ ಈ ವಿಜ್ಞಾನಿಗಳ, ಸಂಶೋಧಕರ, ಪರಿಣಿತರ, ಆಡಳಿತಗಾರರ ಹಾಗೂ ಇಲಾಖೆಯ ಅಧಿಕಾರಿಗಳ ದೃಷ್ಟಿಕೋನಕ್ಕೂ, ಸಾಮಾನ್ಯ ರೇಷ್ಮೆ ಬೆಳೆಗಾರನ ದೃಷ್ಟಿಕೋನಕ್ಕೂ ಅದೆಷ್ಟು ಅಂತರ. ದೊಡ್ಡ ಕಂದಕವೇ ನಿರ್ಮಾಣವಾಗಿದೆ ಎನಿಸಿತು. ಇವರೆಲ್ಲರಿಗೂ ಒಂದಲ್ಲ ಒಂದು ವಿಧದಲ್ಲಿ ಕೀರ್ತಿ ಶನಿಕಾಟ. ಆದರೆ, ಬೆಳೆಗಾರನಿಗೆ ಯಾವ ತಳಿಯಾದರೇನು ಸುಲಭವಾಗಿ ಸಾಕುವಂತಿರಬೇಕು. ಬೆಳೆ ಹಾಳಾಗಬಾರದು, ಖರ್ಚು ಹೆಚ್ಚಾಗಬಾರದು, ಆದಾಯ ಉತ್ತಮವಾಗಿರಬೇಕು. ಆಡಳಿತಗಾರರ ಮತ್ತು ಇತರರ ಗುರಿ ಹೆಚ್ಚು ಇಳುವರಿ ಕೊಡುವ ಅಂತರರಾಷ್ಟ್ರೀಯ ಗುಣಮಟ್ಟದ ರೇಷ್ಮೆ ತಳಿಗಳನ್ನು ಪ್ರಚುರಪಡಿಸಬೇಕು. ನಮ್ಮ ದೇಶ ಪ್ರಪಂಚದ ಭೂಪಟದಲ್ಲಿ ಮೊದಲನೇ ಸ್ಥಾನ

ಗಳಿಸಬೇಕು. ಈ ಎರಡು ದೃಷ್ಟಿಕೋನಗಳ ಸಮಾಗಮವಾದರೆ ಮಾತ್ರ ಅಭಿವೃದ್ಧಿ ಸಾಧ್ಯ ಎನ್ನುವ ಸತ್ಯ ನಿಚ್ಚಳವಾಗಿ ಗೋಚರಿಸಿತು. ಇಲಾಖೆ ನಿರ್ಣಯದ ವಿರುದ್ಧವಾದರೂ ವಾಸ್ತವಿಕತೆಯ ಹಾಗೂ ಬೆಳೆಗಾರನ ದೃಷ್ಟಿಯಿಂದ ಹಳೆ ಮಿಶ್ರ ಜಾತಿ ಮೊಟ್ಟೆಯನ್ನು ಕೆಲವು ಕಾಲ ಅದರಲ್ಲಿಯೂ ಬೇಸಿಗೆಯಲ್ಲಿ ಖಾಸಗೀ ಮೊಟ್ಟೆ ತಯಾರಕರು ತಯಾರಿಸಿ, ಹಂಚಲು ಅನುಮತಿ ಕೊಡುವ ನಿರ್ಣಯ ಮಾಡಿದೆ. ಅಲ್ಲಿನ ಮೊಟ್ಟೆ ತಯಾರಕರೂ ಹಾಗೂ ರೈತರು ಖುಷಿಪಟ್ಟರು. ಕೆಲವರು ಉದ್ಯಮದಲ್ಲಿ ಇದು ಹಿಂಜರಿತವೆಂದೂ ಮಾತನಾಡಿಕೊಂಡರು. ನಾನೀಗಾಗಲೇ ಹೇಳಿರುವಂತೆ ನಾವು ಯಾರು ಏನೇ ಮಾಡಿದರೂ ಹೇಳಿದರೂ ನಾಟಿ ಕಡ್ಡಿ, ಸೀಬಿಚಿ ತಳಿ ಇನ್ನೂ ಅಲ್ಲಿ ಉಳಿದಿದೆ.

ನಿರ್ದಿಷ್ಟ ಕಾರ್ಯಕ್ರಮಗಳ ಬಗ್ಗೆ ನಾನು ಆಲೋಚಿಸತೊಡಗಿದೆ. ಅಂದಿನ ಸರ್ಕಾರಿ ಕಾರ್ಯದರ್ಶಿಗಳಾಗಿದ್ದ ಶ್ರೀ ಪದ್ಮನಾಭ ಅವರು ಮತ್ತು ಇಲಾಖೆ ನಿರ್ದೇಶಕರಾಗಿದ್ದ ಶ್ರೀ ಬಿ.ಕೆ. ದಾಸ್‌ರವರು ನನ್ನನ್ನು ಅರ್ಥ ಮಾಡಿಕೊಂಡು ನಡೆದುಕೊಳ್ಳುತ್ತಿದ್ದರು. ನಡೆದುಕೊಳ್ಳದೆ ವಿಧಿ ಇರಲಿಲ್ಲ

ಮೊದಲನೆಯದಾಗಿ ಬಿತ್ತನೆ ಕ್ಷೇತ್ರಗಳು ಮತ್ತು ವಲಯಗಳ ಗುಣಮಟ್ಟದ ಬಿತ್ತನೆ ಗೂಡುಗಳನ್ನು ಒದಗಿಸಲು ಅಗತ್ಯವಾದ ಕಾರ್ಯಕ್ರಮ ಕೈಗೊಳ್ಳುವುದು. ಎರಡನೆಯದಾಗಿ ಗುಣಮಟ್ಟದ ರೋಗರಹಿತವಾದ ಮೊಟ್ಟೆಗಳನ್ನು ಸರ್ಕಾರಿ ಮತ್ತು ಖಾಸಗಿ ತಯಾರಿಕಾ ಕೇಂದ್ರಗಳಲ್ಲಿ ಒದಗಿಸುವಂತೆ ಏರ್ಪಾಟು ಮಾಡುವುದು. ಮೂರನೆಯದಾಗಿ ಜಾತಿ ಸಾಕಾಣಿಕೆ ಕೇಂದ್ರಗಳು ಮತ್ತು ತಾಂತ್ರಿಕ ಸೇವಾ ಕೇಂದ್ರಗಳು ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುವಂತೆ ನೋಡಿಕೊಳ್ಳುವುದು.

ಈ ಉದ್ಯಮದ ಮತ್ತೊಂದು ವಿಶೇಷವೆಂದರೆ ಮೂಲ ಬಿತ್ತನೆ ಗೂಡುಗಳನ್ನು ಮೂರು ಹಂತಗಳಲ್ಲಿ ಸಂಸ್ಕರಿಸುವುದು. ಇದರ ಮೂಲ ಉದ್ದೇಶ ಬಿತ್ತನೆಯನ್ನು ದೃಢಕಾಯವಾಗಿ ಮತ್ತು ರೋಗರಹಿತವಾಗಿ ಕಾಪಾಡುವುದು. ಈ ಹಂತಗಳನ್ನು ಪಿ೧, ಪಿ೨, ಪಿ೩ಗಳೆಂದು ಕರೆಯುತ್ತಾರೆ. ಮನುಷ್ಯರಲ್ಲಿ ತಂದೆ, ಅಜ್ಜ, ಮುತ್ತಜ್ಜ ಇದ್ದ ಹಾಗೆ ಎಂದು ಹೇಳಬಹುದು. ಈ ಬಿತ್ತನೆ ಗೂಡುಗಳನ್ನು ಎಲ್ಲಾ ಹಂತದಲ್ಲಿಯೂ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರಗಳಲ್ಲಿ ಬೆಳೆದು ಆ ಗೂಡುಗಳನ್ನು ಮೊಟ್ಟೆ ತಯಾರಿಕಾ ಕೇಂದ್ರಗಳಲ್ಲಿ ಸಂಸ್ಕರಿಸಿ ಮೊಟ್ಟೆ ತಯಾರು ಮಾಡುತ್ತಾರೆ. ಪಿ೧ ಹಂತದ ಗೂಡುಗಳಿಂದ ತಯಾರಾದ ಮೊಟ್ಟೆಗಳನ್ನು ಬಿತ್ತನೆ ಬೆಳೆಯುವ ರೈತರಿಗೆ ಸಾಕಲು ಹಂಚುತ್ತಾರೆ. ರೈತರು ಬೆಳೆದ ಗೂಡುಗಳು ರೋಗರಹಿತವಾಗಿದ್ದು, ಗುಣಮಟ್ಟದವುಗಳಾಗಿದ್ದರೆ ಮಾತ್ರ ಬಿತ್ತನೆಗೆ ಯೋಗ್ಯವೆಂದು ದೃಢೀಕರಿಸಿ ಮಿಶ್ರತಳಿ ಮೊಟ್ಟೆ ತಯಾರು ಮಾಡಲು ಹಂಚುತ್ತಾರೆ. ಈ ವಿಧಾನವನ್ನು ಮೈಸೂರು ಬಿತ್ತನೆ ವಲಯ ಹಾಗೂ ಬೈವೋಲ್ಟಿನ್ ಬಿತ್ತನೆ ವಲಯಗಳಲ್ಲಿ ಅನುಸರಿಸುತ್ತಾರೆ. ಒಳಹೊಕ್ಕು ನೋಡಬೇಕು ಈಗಿನ ವ್ಯವಸ್ಥೆಯಲ್ಲಿನ ನಮ್ಮ ಕಾರ್ಯಕ್ರಮಗಳು ಕೆಲಸ ಮಾಡುವ ಕಾರ್ಯವೈಖರಿಯನ್ನು. ಕೆಲವು ಸಾರಿ ಅಳಬೇಕೆನ್ನಿಸುತ್ತದೆ, ಇನ್ನೂ ಕೆಲವು ಸಾರಿ ಕಪಾಳಕ್ಕೆ ಬಾರಿಸಬೇಕೆನ್ನಿಸುತ್ತದೆ. ತತ್ವಗಳಿಗೂ ಆಚರಣೆಗಳಿಗೂ ನಮ್ಮ ಆಡಳಿತ ವ್ಯವಸ್ಥೆಯಲ್ಲಿ ಅಷ್ಟೇ ಏಕೆ ನಮ್ಮ ಬದುಕಿನಲ್ಲಿಯೂ ಅಷಾಢಭೂತಿತನ. ತತ್ವ ಹೇಳಲಿಕ್ಕೆ ಬದನೆಕಾಯಿ ತಿನ್ನಲಿಕ್ಕೆ ಎಂದು ಇದಕ್ಕಾಗಿಯೇ ನಮ್ಮ ಹಿರಿಯರು ಹೇಳಿದರು ಎಂದು ಕಾಣುತ್ತದೆ.

ಮೈಸೂರು ಬಿತ್ತನೆ ವಲಯದಲ್ಲಿ ಒಂದು ಕೆ.ಜಿ. ನೂಲು ಬಿಚ್ಚಲು ಹೋಗುವ ಬಿತ್ತನೆ ಗೂಡಿಗೆ ಕೊಡುತ್ತಿದ್ದ ೩.೦೦ ರೂ. ಬೋನಸ್, ಮಿಶ್ರತಳಿ ಗೂಡಿನ ಬೆಲೆಯ ಅಂತರವನ್ನು ಮುಚ್ಚಲು

ಸಾಧ್ಯವಾಗಿರಲಿಲ್ಲ. ಲೆಕ್ಕಾಚಾರದ ಪ್ರಕಾರ ೧೦ ರೂಪಾಯಿಗಳ ಪರಿಹಾರ ಕೊಡಬೇಕಾಗಿತ್ತು. ನಮ್ಮ ಜನ ಎಂತಹವರೆಂದರೆ ಯಾವುದಾದರೂ ಸವಲತ್ತು ಆದಾಗಿ ಬಂದರೆ ಅನುಭವಿಸುತ್ತಾರೆ. ಇಲ್ಲದಿದ್ದರೆ ಸುಮ್ಮನಿರುತ್ತಾರೆ. ತಮಗೆ ನ್ಯಾಯವಾಗಿ ಸಲ್ಲಬೇಕಾದ ಸವಲತ್ತಿಗೆ ಹೋರಾಡುವ ಪ್ರವೃತ್ತಿಯನ್ನು ಇವರಿಗೆ ಕಲಿಸುವುದರಲ್ಲೇ ನನ್ನ ಅರ್ಧ ಆಯಸ್ಸು ಮುಗಿಯಿತು.

ಇಂತಹ ಪರಿಹಾರಗಳಿಗಾಗಿ ಬೇರೆಯವರ ಕೃಪಾ ಕಟಾಕ್ಷಕ್ಕಾಗಿ ಕಾಯುತ್ತಿದ್ದ ನನಗೆ ನನ್ನ ಜನರು ಆ ಪರಿಹಾರವನ್ನು ಕೊಡುವ ಅಧಿಕಾರವನ್ನು ಈಗ ನನಗೇ ಕೊಟ್ಟಿದ್ದಾರೆ. ಬೆಳೆಗಾರರ ಅರ್ಜಿಗಳಿಲ್ಲ, ಒತ್ತಾಯಗಳಿಲ್ಲ, ಘೇರಾವೊ, ಮುಷ್ಕರಗಳಿಲ್ಲ. ಆದಾಗ್ಯೂ ಬೆಳೆಗಾರರಿಗೆ ೫.೦೦ ರೂ. ನಿಂದ ೧೦.೦೦ ರೂಪಾಯಿಗಳಿಗೆ ಬೋನಸ್ ಹೆಚ್ಚಿಸಬೇಕೆಂದು ನಾನು ಕಳುಹಿಸಿದ ಪ್ರಸ್ತಾವನೆಗೆ ಹಣಕಾಸು ಇಲಾಖೆಯವರು ಈ ಹಣಕ್ಕೆ ಆಯವ್ಯಯದಲ್ಲಿ ಅವಕಾಶ ಮಾಡಿಕೊಂಡಿಲ್ಲವಾದ್ದರಿಂದ ಈ ವರ್ಷ ಕೊಡಲಾಗುವುದಿಲ್ಲ ಎಂಬ ಕೊಕ್ಕೆಯೊಡನೆ ಕಡತ ವಾಪಸ್ಸು ಬಂದಿತು. ಇಷ್ಟನ್ನು ಮಾಡಲಾಗದ ಮೇಲೆ ನಾನೇಕೆ ಮಂತ್ರಿಯಾಗಿರಬೇಕು ಕಾಸಿನ ಸಚಿವರೂ ಆಗಿದ್ದ, ಮುಖ್ಯಮಂತ್ರಿಯವರಿಗೆ ಹೇಳಿದೆ, ನಾನು ನನ್ನ ಖಾತೆಯ ಆಯವ್ಯಯದ ಚರ್ಚೆಗೆ ಉತ್ತರಿಸುವಾಗ ಈ ಪರಿಹಾರವನ್ನು ಘೋಷಿಸಲು ಆಗದಿದ್ದರೆ ನಾನು ಉತ್ತರವನ್ನು ಕೊಡುವುದಿಲ್ಲವೆಂದು, ನನ್ನ ಹಠಮಾರಿತನದ ಅನುಭವವಿದ್ದ ಮುಖ್ಯಮಂತ್ರಿಗಳು ಸಂಬಂಧಪಟ್ಟವರಿಗೆ ಮಂಗಳಾರತಿ ಮಾಡಿದ ಮೇಲೆ ಕಡತ ತರಿಸಿಕೊಂಡ ಹಣಕಾಸು ಇಲಾಖೆಯಿಂದ ಒಪ್ಪಿಗೆ ಸೂಚಿಸಿ ಕಳುಹಿಸಿದರು. ಅನಂತರ ಅತ್ಯಂತ ಹೆಮ್ಮೆಯಿಂದ ೫.೦೦ ರೂಪಾಯಿ ಬೋನಸ್‌ನ್ನು ೧೦.೦೦ ರೂಪಾಯಿಗೆ ಹೆಚ್ಚಿಸಲಾಗಿದೆ ಎಂದು ವಿಧಾನಸಭೆಯಲ್ಲಿ ಘೋಷಿಸಿದೆ.''

ಇವೆಲ್ಲಕ್ಕಿಂತ ಮುಖ್ಯವಾಗಿ ನಾವು ಗಮನಿಸಬೇಕಾದುದೆಂದರೆ ಎಂತಹ ಅಧಿಕಾರದ ಸಂದರ್ಭದಲ್ಲಿಯೂ ವೈ.ಕೆ.ಆರ್. ಬದಲಾಗಲಿಲ್ಲ ಎಂಬುದು. ಅವರ ಎಂದಿನ ಸರಳ ನಡತೆ, ಅದರ ಜೊತೆಗೇ ನಿಷ್ಠುರ ವರ್ತನೆ ಇತರ ರಾಜಕಾರಣಿಗಳಿಗಿಂತ ಪ್ರತ್ಯೇಕವಾಗಿಯೇ ಅವರನ್ನು ನಿಲ್ಲಿಸಿತು. ಭ್ರಷ್ಟ ನೌಕರ ವರ್ಗಕ್ಕೆ ಸಿಂಹಸ್ವಪ್ನವಾಗಿದ್ದ ಅವರು ಒಳ್ಳೆಯತನಕ್ಕೆ ಅಷ್ಟೇ ಮೃದುವಾಗಿ ವರ್ತಿಸುತ್ತಿದ್ದರು. ಬಹುವರ್ಷಗಳಿಂದ ರೇಷ್ಮೆ ಇಲಾಖೆಯಲ್ಲಿ ಇದ್ದ ಜಡತ್ವವನ್ನು ಹೋಗಲಾಡಿಸಿದ್ದಲ್ಲದೆ ಅಲ್ಲಿನ ಸಾಂಪ್ರದಾಯಿಕ ಭ್ರಷ್ಟತೆಗೆ ಕಡಿವಾಣ ಹಾಕಿದರು. ಕರ್ನಾಟಕದಲ್ಲಿಯೇ ದೊಡ್ಡದಾದ ರಾಮನಗರದ ಗೂಡು ಮಾರುಕಟ್ಟೆಗೆ ಸಾಧಾರಣ ರೈತನೊಬ್ಬನಂತೆ ವೇಷ ಮರೆಸಿಕೊಂಡು ಹೋಗಿ ಭ್ರಷ್ಟ ಅಧಿಕಾರಿಗಳು ಮತ್ತು ದಲ್ಲಾಳಿ ಏಜೆಂಟರುಗಳನ್ನು ಪ್ರತ್ಯಕ್ಷವಾಗಿ ಮಟ್ಟ ಹಾಕಿದ್ದು ಆ ಭಾಗದ ರೈತರ ನಡುವೆ ಇನ್ನೂ ಕತೆಯಂತೆ ಜನಜನಿತವಾಗಿದೆ. ಒಟ್ಟಿನಲ್ಲಿ ರೇಷ್ಮೆ ಇಲಾಖೆಗೆ ಸಮಗ್ರ ರೂಪದ ಕಾಯಕಲ್ಪ ತಂದುದಲ್ಲದೆ ಅದಕ್ಕೊಂದು ಭವ್ಯ ಅಸ್ತಿತ್ವವನ್ನು ತಂದುಕೊಟ್ಟಿದ್ದು ರಾಮಯ್ಯನವರ ಪ್ರಮುಖ ಸಾಧನೆಗಳಲ್ಲಿ ಒಂದಾಗಿದೆ.

ವಿಶ್ವದ ಗುಣಮಟ್ಟದ ರೇಷ್ಮೆ ಉತ್ಪತ್ತಿಯಲ್ಲಿ ಪ್ರಥಮ ಸ್ಥಾನದಲ್ಲಿದ್ದ ಜಪಾನ್ ನಾನಾ ಕಾರಣಗಳಿಗಾಗಿ ಹಿಂದುಳಿದಾಗ ಚೀನಾ ಮೊದಲನೇ ಸ್ಥಾನಕ್ಕೇರಿತು. ಐದನೇ ಸ್ಥಾನದಲ್ಲಿದ್ದ ಭಾರತ ವೈ.ಕೆ. ರಾಮಯ್ಯನವರ ಕಾಲದಲ್ಲಿ ಎರಡನೇ ಸ್ಥಾನಕ್ಕೆ ಏರಿದ್ದನ್ನು ಗಮನಿಸಿದರೆ ರೇಷ್ಮೆ ಇಲಾಖೆಯಲ್ಲಿ ರಾಮಯ್ಯ ಎಂಥ ಪವಾಡವನ್ನು ಮಾಡಿದ್ದರೆಂಬುದು ಯಾರಿಗಾದರೂ ಮನದಟ್ಟಾಗುತ್ತದೆ.

ಜಪಾನಿನ ವೈಜ್ಞಾನಿಕ ರೇಷ್ಮೆ ಸಾಕಾಣೆ ಮತ್ತು ಅಲ್ಲಿನ ಉದ್ಯಮವನ್ನು ಅಧ್ಯಯನ ಮಾಡುವ ಉದ್ದೇಶದಿಂದ ಮಂತ್ರಿಯಾಗಿದ್ದ ಸಂದರ್ಭದಲ್ಲಿ ಜಪಾನ್ ದೇಶಕ್ಕೆ ಭೇಟಿ ಕೊಟ್ಟಿದ್ದು ಕರ್ನಾಟಕದ ರೇಷ್ಮೆ ಬೆಳವಣಿಗೆಯ ಅಭಿವೃದ್ಧಿ ದೃಷ್ಟಿಯಿಂದ ಮತ್ತೊಂದು ಪ್ರಮುಖ ಅಂಶ. ೨೬.೬.೧೯೮೬ ರಿಂದ ೧೪.೭.೧೯೮೬ರವರೆಗೆ ಜಪಾನ್ ಮತ್ತು ಕೊರಿಯ ದೇಶದ ಅನೇಕ ಸ್ಥಳಗಳಿಗೆ ಭೇಟಿ ನೀಡಿ ಅಲ್ಲಿನ ರೇಷ್ಮೆ ತಜ್ಞರೊಡನೆ ಚರ್ಚಿಸಿ ಅಲ್ಲಿ ಕಂಡ ಅನುಭವವನ್ನು ತಮ್ಮದೇ ಆದ ಶೈಲಿಯಲ್ಲಿ ವೈ.ಕೆ.ಆರ್. ನಿರೂಪಿಸಿದ್ದಾರೆ. ಅದರಲ್ಲಿಯೂ ಜಪಾನಿನ ರೇಷ್ಮೆ ತಜ್ಞರಾದ ಡಾ. ಓಮುರ ಮತ್ತು ಇಸೋಬೆ ಮುಂತಾದವರ ಜೊತೆ ಅವರು ಕಳೆದ ದಿನಗಳನ್ನು ಅತ್ಯುತ್ತಮವಾಗಿ ನಿರೂಪಿಸಿದ್ದಾರೆ. ಅದರ ಒಂದೆರಡು ಪ್ಯಾರಾವನ್ನು ಮಾತ್ರ ಓದುಗರ ದೃಷ್ಟಿಯಿಂದ ಇಲ್ಲಿ ನೀಡಬಯಸುತ್ತೇನೆ.

"ಮೋಟುಬೀಡಿ ಸೇದಿಕೊಂಡು, ಶರೀರದ ಎಲ್ಲಾ ಅಂಗಾಂಗಳನ್ನು ಕೆರೆದುಕೊಂಡು, ರಾಜೀವ್‌ಗಾಂಧಿಯಿಂದ ಹಿಡಿದು ರಾಮಯ್ಯನವರೆಗಿನ ರಾಜಕೀಯ ಮಾತನಾಡುತ್ತ, ಬೀದಿ ಬೀದಿಗಳಲ್ಲಿ ನಿಂತು, ಕುಳಿತು, ಕಾಲ ಕಳೆಯುವ ಭಾರತದ ಕೆಲವು ಜನರ ಪರಿಸ್ಥಿತಿಯನ್ನು ಜ್ಞಾಪಿಸಿಕೊಂಡು ನಾನು ನಕ್ಕು ಸುಮ್ಮನಾದೆ. ದಾರಿಯಲ್ಲಿ ಹೋಗುವಾಗ, "ಕೈಗಾರಿಕೆ", "ಬೇಸಾಯ" ಮತ್ತು "ವ್ಯಾಪಾರ" ಒಂದೇ ಕಡೆ ಇರುವ ಜಪಾನ್‌ನ ವೈಶಿಷ್ಟ್ಯ ಮೊಟ್ಟಮೊದಲಿಗೆ ನನಗೆ ಅರಿವಾಯ್ತು. ಅಮಿ ಒಂದು ಪಟ್ಟಣ. ಇಲ್ಲಿ ಇರುವ ಸಿರಿಕಲ್ಚರಲ್ ಬ್ರೀಡಿಂಗ್ ಇನ್‌ಸ್ಟಿಟ್ಯೂಟ್‌ನ ಕಿರಿಯ ಅಧಿಕಾರಿ ಶ್ರೀ ತನಾಕಾರವರ ಜೊತೆ ಚರ್ಚಿಸಿದೆ. ಅಸಾಹಿತೋಕರ (ASAHITOKA) ತಳಿಯ ಹುಳುವನ್ನು ಸುಮಾರು ಶೇಕಡಾ ೨೬.೮ ಮತ್ತು "ಟೊಯೋಟೊಕಾಯಿ" (TOYOTOKAYI) ತಳಿಯನ್ನು ಸುಮಾರು ಶೇಕಡಾ ೨೩ರಷ್ಟು ಜಪಾನಿನ ರೇಷ್ಮೆ ಬೆಳೆಗಾರರು ಉಪಯೋಗಿಸುತ್ತಾ ಇದ್ದಾರೆ ಎಂದು ಶ್ರೀ ತನಾಕಾರವರು ತಿಳಿಸಿದರು. ಅದೇ ಅಮಿಯಿಂದ ವಾಪಸ್ ಬಂದು ಜಪಾನ್‌ನ ವ್ಯವಸಾಯ ಮಂತ್ರಾಲಯದಲ್ಲಿ ರೇಷ್ಮೆ ನಿರ್ದೇಶಕರೊಡನೆ ಚರ್ಚಿಸಿದೆ. ಅವರ ಕಚೇರಿಗೆ ಭೇಟಿ ಕೊಟ್ಟಾಗ, ಭಾರತದ ಕಚೇರಿಗಳು ಮತ್ತು ಇಲ್ಲಿ ನಡೆಯುವ ಕೆಲಸದ ವ್ಯವಸ್ಥೆಗೂ ಮತ್ತು ಜಪಾನಿನದಕ್ಕೂ ಇರುವ ವ್ಯತ್ಯಾಸವನ್ನು ಅರಿತುಕೊಳ್ಳಲು ಸಹಾಯವಾಯಿತು.

ಇಂಬಾರಗಿ ಪ್ರಿಫೆಕ್ಚರಲ್ ಸಿರಿಕಲ್ಚರಲ್ ಎಕ್ಸ್‌ಪರಿಮೆಂಟ್ ಸ್ಟೇಷನ್‌ನ ನನ್ನ ಭೇಟಿ ನನಗೆ ಹೊಸ ಅನುಭವಗಳಿಗೆ ಅವಕಾಶ ನೀಡಿತು ಎನ್ನಬಹುದು. ಸತಾಗಾವ ಅಲ್ಲಿನ ನಿರ್ದೇಶಕರು. ಹಿಪ್ಪುನೇರಳೆಯ ರೋಗಗಳ ಬಗ್ಗೆ ಪರಿಣತರು, ಬಹಳಷ್ಟು ವಿಚಾರಗಳನ್ನು ನನಗೆ ಮನವರಿಕೆ ಮಾಡಿಕೊಟ್ಟರು. ಅಲ್ಲಿ ಸುಮಾರು ಮೂವತ್ತು ತೆರನಾದ ಹಿಪ್ಪುನೇರಳೆ ತಳಿಗಳಿವೆ ಎಂದು ನನಗೆ ತಿಳಿಸಿದರು. (Thirty verities of Mulberry) ನಿರ್ದಿಷ್ಟ ಋತುಮಾನಕ್ಕೆ ನಿರ್ದಿಷ್ಟ ತಳಿಗೆ ಸರಿಹೊಂದಬಲ್ಲ ಹಿಪ್ಪು ನೇರಳೆ ತಳಿಗಳಿವೆ ಎಂದಾಗ ನಾನು ಅವಾಕ್ಕಾದೆ. ಅವರು ಹೇಳುತ್ತಿದ್ದಾಗ ನನ್ನ ಮನಸ್ಸು ಮೈಸೂರಿನ ಸಂಶೋಧನಾ ಸಂಸ್ಥೆಯಲ್ಲಿ ಒಬ್ಬ ಸಂಶೋಧಕರೊಡನೆ ಹಿಂದೆ ನಾನು ಪ್ರಸ್ತಾಪಿಸಿದ್ದ ವಿಷಯವನ್ನು ನೆನಪಿಗೆ ತಂದಿತು. ಮೈಸೂರಿನಲ್ಲಿ ನಾನು ಅವರನ್ನು ಕೇಳಿದ್ದೆ. ಹುಳುಗಳು ತಿನ್ನುವ ಸೊಪ್ಪು ಮತ್ತು ಹುಳುಗಳಿಗೆ ಬರುವ ರೋಗ ಪರಸ್ಪರ ಸಂಬಂಧ ಹೊಂದಿಲ್ಲವೆ" ಎನ್ನುವುದು ನನ್ನ ಪ್ರಶ್ನೆಯಾಗಿತ್ತು. There is no realationship between the leaf and the worms disease (ಸೊಪ್ಪಿಗೂ ಹುಳುವಿಗೆ ತಗಲುವ ರೋಗಕ್ಕೂ ಸಂಬಂಧವಿಲ್ಲ) ಎನ್ನುವುದು ಅವರ ವಾದವಾಗಿತ್ತು!

ಆದರೆ ಶ್ರೀ ಸತಗಾವ ಖಚಿತ ಧ್ವನಿಯಲ್ಲಿ ಹೇಳಿದ್ದರು - ರೇಷ್ಮೆ ಹುಳುಗಳು ತಿನ್ನುವ ಹಿಪ್ಪುನೇರಳೆ (ತಳಿಯನ್ನುದ್ದೇಶಿಸಿ ಹೇಳಿದ್ದರು) ಹಾಗೂ ರೇಷ್ಮೆ ಹುಳುಗಳ ರೋಗಕ್ಕೆ ನಿಕಟ ಸಂಬಂಧವಿದೆ ಎಂದು.

ಈ ಹಿಂದೆ ಮೈಸೂರಿನ ಸಂಶೋಧನಾ ಸಂಸ್ಥೆಗೆ ಭೇಟಿ ನೀಡಿ ಅಲ್ಲಿನ ಸಂಶೋಧಕರೊಡನೆ ನಡೆಸಿದ್ದ ಚರ್ಚೆಯಲ್ಲಿ ನನಗೆ ತಿಳಿದುಬಂದಿದ್ದು. "ಹಿಪ್ಪುನೇರಳೆಯಲ್ಲಿನ ಯಾವ ಅಂಶಗಳು ಹುಳುಗಳ ಬೆಳವಣಿಗೆಯಲ್ಲಿ ಅಥವಾ ರೋಗದಲ್ಲಿ ಪ್ರಧಾನ ಪಾತ್ರ ವಹಿಸುತ್ತವೆ ಎಂಬುದೂ, ಯಾವ ವಿಶೇಷ ಅಂಶ ರೇಷ್ಮೆ ಗ್ರಂಥಿಯು ಉತ್ತಮವಾಗಿ ಉಳಿಯಲು ನೆರವಾಗುತ್ತದೆ ಎಂಬುದೂ ಇನ್ನೂ ಸಂಶೋಧನೆಯೇ ಆಗಿಲ್ಲ" ಎನ್ನುವುದು. ಹಾಗೂ ಒಟ್ಟಾರೆ ರೇಷ್ಮೆ ಹುಳುಗಳ ಏಕೈಕ ಆಹಾರವಾದ ಹಿಪ್ಪುನೇರಳೆ ಕುರಿತು ಸಂಶೋಧನೆಯು ಆಗಬೇಕಾಗಿದ್ದ ಪ್ರಮಾಣದಲ್ಲಿ ಮತ್ತು ಆಗಬೇಕಾಗಿದ್ದ ರೀತಿಯಲ್ಲಿ ಆಗಲಿಲ್ಲವೇನೋ ಎನ್ನುವ ನನ್ನ ಸಂದೇಹಕ್ಕೆ ಜಪಾನಿನ ಈ ತಜ್ಞರೊಡನೆ ನಡೆಸಿದ ಚರ್ಚೆ ಮತ್ತಷ್ಟು ನೀರೆರೆದಿತು.

ಪ್ರವಾಸ ಮುಂದುವರೆಯಿತು. ಸುಕಾಬಾಕ್ಕೆ (TSUKUBA) ಬಂದಿಳಿದೆವು. ಇದೊಂದು ಸುಂದರ ತಾಣ. ಇಡೀ ಜಪಾನ್ ರಾಷ್ಟ್ರದ ಸಂಶೋಧನಾ ಸಂಸ್ಥೆಗಳನ್ನು ತನ್ನಲ್ಲಿ ಅಡಗಿಸಿ ಕೊಂಡಿರುವ ನಗರವಿದು. "ನ್ಯಾಷನಲ್ ಸಿರಿಕಲ್ಚರಲ್ ಎಕ್ಸ್‌ಪೆರಿಮೆಂಟ್ ಸ್ಟೇಷನ್" ಇಲ್ಲಿದೆ. ಜಪಾನ್‌ನ ರೇಷ್ಮೆ ಉದ್ಯಮದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವಹಿಸಲು ನೆರವಾದ ಸಂಸ್ಥೆಯಿದು. ಇದರ ಮುಖ್ಯಸ್ಥರಾದ ಡಾ. ಹಜ್‌ಮಾ ಅವರನ್ನು ಭೇಟಿ ಯಾಗುವ ಸದಾವಕಾಶ ದೊರಕಿತ್ತು.

ಪ್ರತಿ ಋತುಮಾನಗಳಿಗೂ ಪ್ರತ್ಯೇಕ ತಳಿಯನ್ನು ಸಾಕಾಣೆ ಮಾಡುತ್ತಾರೆ ಎಂದು ನಂಬಿದ್ದ ನಾನು ಬೇಸಿಗೆಯಲ್ಲಿ ಬೆಳೆಯಿರುವುದಿಲ್ಲವೆಂಬ ಮಾತು ಕೇಳಿ ತಬ್ಬಿಬ್ಬಾದೆ. ಉಷ್ಣಾಂಶ ಅಧಿಕಾರವಾಗಿರುವುದರಿಂದ ಸಾಕಣೆ ಸಾಧ್ಯವಿಲ್ಲವೆಂದು ನಂಬುಗೆ ಅವರದ್ದಾಗಿದೆ. ಹವಾಮಾನದ ವೈಪರೀತ್ಯವನ್ನು ಎದುರಿಸಿ ನಿಲ್ಲಬಲ್ಲ ತಳಿಯ ಅಭಾವವಿದೆ ಎನ್ನುತ್ತಾರೆ. ಬೇಸಿಗೆಯ ದಿನಗಳಲ್ಲಿ ಬೈವೋಲ್ಟೈನ್ ಬೆಳೆ ಸಮರ್ಪಕವಾಗಿ ಆಗುವುದಿಲ್ಲವಾದುದರಿಂದ ಮಲ್ಟಿವೋಲ್‌ಟೈನ್ ಗುಣದ ಚೀನಾ ಮೂಲದ ತಳಿಯನ್ನು ಸಾಕುವುದಾಗಿ ತಿಳಿಸಿದರು. ಆಗ ನನಗೆ ಕರ್ನಾಟಕದಲ್ಲಿ ಶ್ವೇತಕ್ರಾಂತಿಯನ್ನು ಮಾಡಬೇಕೆಂದು ಹೊರಟಿರುವ ಸಂಶೋಧಕರು ನನ್ನ ನೆನಪಿಗೆ ಬಂದರು. ಬೇಸಿಗೆಯನ್ನು ತಡೆದುಕೊಂಡು ಬೆಳೆಯಾಗುವಂತಹ ತಳಿಯಲ್ಲವೆಂಬ ಕಾರಣಕ್ಕಾಗಿ ಜಪಾನಿಯವರು ಆ ಋತುಮಾನದಲ್ಲಿ ಬೈವೋಲ್ಟೀನ್ ಕೈಬಿಟ್ಟಿದ್ದಾರೆಂದ ಮೇಲೆ ನನ್ನ ದೇಶದ ಹವಾಮಾನಕ್ಕೆ ಪ್ರತಿಸ್ಪಂದಿಸಬಲ್ಲ ತಳಿ ನಮ್ಮಲ್ಲಿದೆಯೆ ಎಂಬ ಚಿಂತೆ ನನ್ನನ್ನು ಕಾಡಿತು. ಈ ಮಾತನ್ನು ಬರೆಯುವಾಗ ಬೇಸಿಗೆ ಯಲ್ಲಿ ಬೈವೋಲ್ಟಿನ್ ಸಾಕಣೆ ಕೈಗೊಳ್ಳುವುದು ಬೇಡ ಎನ್ನುವ ಅಭಿಪ್ರಾಯಕ್ಕೆ ನಾನು ಬಂದಿದ್ದೇನೆ ಎಂದು ಭಾವಿಸಬಾರದು. ನನ್ನ ಉದ್ದೇಶವೂ ಅದಲ್ಲ. ಸದ್ಯಕ್ಕೆ ಈಗ ಇರುವ ತಳಿಗಳು ಬೆಳೆಗಾರನ ಶ್ರಮಕ್ಕೆ ತಕ್ಕ ಪ್ರತಿಫಲ ಕೊಡುತ್ತಿಲ್ಲವೆನ್ನುವ ಭಾವನೆ ನನ್ನದು. ನಮ್ಮ ದೇಶದ ಹವಾಮಾನಕ್ಕೆ ಹೊಂದಿಕೊಳ್ಳುವಂತಹ ತಳಿಗಳ ಆವಿಷ್ಕಾರಕ್ಕೆ ಎಲ್ಲ ಸಂಶೋಧಕರೂ ಗಮನ ಕೊಡಬೇಕು. ನಮ್ಮಲ್ಲಿನ ಬೆಳೆಗಾರನ ವಾಸಸ್ಥಿತಿ ಸಾಮಾಜಿಕ ಜೀವನಕ್ರಮ ಶೋಚನೀಯವಾಗಿರುವಾಗ ಬೈವೋಲ್‌ಟೈನ್ ತಳಿಯನ್ನು ಸಾಕುವುದಕ್ಕೆ ಒತ್ತಾಯವಿರಬೇಕೇ ಎನ್ನುವ ಪ್ರಶ್ನೆ ನನ್ನದು. ಒಳ್ಳೆಯ ತೋಟ, ಅನುಕೂಲಕರ ಮನೆ, ವೈಜ್ಞಾನಿಕ ಸಲಕರಣೆಗಳಿರುವಂತವರು ಮಾತ್ರ ಬೇಸಿಗೆಯಲ್ಲೇ ಸಾಕಣೆ ಮಾಡಬಹುದು. ಈಗಿರುವ ತಳಿಗಳೇ ಸರಿಯಾಗಿವೆ ಎನ್ನುವ ನಂಬಿಕೆಯೇ ಬಹಳ ಕಾಲದವರೆಗೂ ಮುಂದುವರಿಯಬಾರದು.

ಸಾಕಣೆಗೆ ಇಟ್ಟುಕೊಂಡಿದ್ದ ಎಲ್ಲ ಬೈವೋಲ್‌ಟೈನ್ ಬೆಳೆಗಳೂ ಆಗುತ್ತಿಲ್ಲ. ಬೆಳೆ ಉಳಿಯುವಂತಹ ಬೈವೋಲ್‌ಟೈನ್ ತಳಿಯನ್ನು ಒದಗಿಸುವ ಗುರಿ ನಮ್ಮ ಸಂಶೋಧಕರ ದಾಗಬೇಕು. ರೇಷ್ಮೆ ಅಂಶ ಹೆಚ್ಚಾಗಿರುವ ತಳಿಗಳು ಕ್ಷೇತ್ರದಲ್ಲಿ ಸೋಲುತ್ತಿರುವುದರ ಹಿನ್ನೆಲೆಯಲ್ಲಿ ನಮ್ಮ ಧೋರಣೆ ರೂಪುಗೊಳ್ಳಬೇಕು. ಹೆಚ್ಚು ಗಟ್ಟಿಮುಟ್ಟಾದ ತಳಿಗಳನ್ನು ಸಂಶೋಧಿಸಲು ನಿರಂತರ ಸಂಶೋಧನೆ ನಡೆಯಬೇಕು. ಹೀಗಾಗದಿದ್ದಲ್ಲಿ ಎಷ್ಟು ಸಂಶೋಧನೆ ನಡೆದರೂ ಅದು ಸಾಮಾನ್ಯ ರೈತನಿಗೆ ಉಪಯೋಗವಾಗದು. ನನ್ನ ಆಲೋಚನಾ ತರಂಗಗಳನ್ನು ದಿನಚರಿಯಲ್ಲಿ ಆ ರಾತ್ರಿಯೇ ಗುರುತು ಹಾಕಿಕೊಂಡೆ. ಕೊಟ್ಟಿಗೆ ಗೊಬ್ಬರ ಹಾಗೂ ಹಸಿರೆಲೆ ಗೊಬ್ಬರವನ್ನು ಹೆಚ್ಚು ಹೆಚ್ಚಾಗಿ ಹಿಪ್ಪುನೇರಳೆ ತೋಟಕ್ಕೆ ಕೊಡಬೇಕೆನ್ನುವುದನ್ನೂ, ರೆಂಬೆಗಳನ್ನು ಕಿತ್ತು ಹುಳುಗಳಿಗೆ ಹಾಕುವುದು ಉತ್ತಮವೆಂಬುದನ್ನೂ ಪರಿಣಿತರ ಬಳಿ ಮಾತನಾಡುವಾಗ ತಿಳಿದೆ. ನಮ್ಮ ದೇಶದಲ್ಲಿ ರಸಗೊಬ್ಬರದ ಬಳಕೆ ಮೇಲುಗೈ ಆಗಿ ಕೊಟ್ಟಿಗೆ ಗೊಬ್ಬರ ನೆಪಮಾತ್ರವಾಗಿರುವುದನ್ನು ನೆನಪು ಮಾಡಿಕೊಂಡಾಗ ನಮ್ಮ ರೈತರು ಎಸಗುತ್ತಿರುವ ದೊಡ್ಡ ತಪ್ಪಿನ ನೆನಪಾಯಿತು. ರಸಗೊಬ್ಬರದ ಬಳಕೆ ಹಿಪ್ಪುನೇರಳೆಯ ಬೆಳೆಗೆ ಪೂರಕವಾಗಬೇಕೆ ಹೊರತು ಮೂಲ ಪೋಷಕವಾಗಲಾರದು ಎನ್ನುವುದನ್ನು ಅರ್ಥಮಾಡಿಕೊಂಡು ಕೊಟ್ಟಿಗೆ ಗೊಬ್ಬರವನ್ನು ಹೆಚ್ಚಾಗಿ ಸಂಗ್ರಹಿಸುವಂತಾಗಬೇಕೆನ್ನುವ ನಿಷ್ಠುರ ಸತ್ಯದ ಅರಿವಾಯಿತು."

**ತೋಟಗಾರಿಕೆ ಸಚಿವ**

ಮೂರು ವರ್ಷಗಳ ಅಂತರದಲ್ಲಿ ರಾಮಯ್ಯನವರ ರೇಷ್ಮೆ ಖಾತೆ ಬದಲಾಗಿ ತೋಟಗಾರಿಕೆ ಸಚಿವರಾಗಿ ನೇಮಕಗೊಂಡರು. ಅದೂ ಕೂಡ ರೈತರು ಮತ್ತು ಕೃಷಿಗೆ ಸಂಬಂಧಪಟ್ಟ ಖಾತೆಯೇ ಆದ್ದರಿಂದ ರಾಮಯ್ಯನವರು ನಿರಾಶೆಗೊಳ್ಳಲಿಲ್ಲ. ರಾಜ್ಯಾದ್ಯಂತ ಸುತ್ತಾಡಿ ಆ ಕ್ಷೇತ್ರವನ್ನು ಬಲಪಡಿಸಲು ಸಾಕಷ್ಟು ಪ್ರಯತ್ನಪಟ್ಟರು. ಇಲ್ಲಿಯೂ ಸಹ ಮಧ್ಯವರ್ತಿಗಳ ಕಾಟವನ್ನು ತಪ್ಪಿಸುವ ಅನೇಕ ಪ್ರಯತ್ನಗಳನ್ನು ಮಾಡಿದರು. ರಾಜ್ಯದ ಪ್ರಸಿದ್ಧ ಪರಿಸರ ತಜ್ಞರೆನಿಸಿದ ಶ್ರೀ ಎ.ನ. ಯಲ್ಲಪ್ಪರೆಡ್ಡಿಯವರ ಮಾತುಗಳನ್ನು ಇಲ್ಲಿ ಉಲ್ಲೇಖಿಸುವುದು ಅಗತ್ಯ ಎಂದು ಭಾವಿಸುತ್ತೇನೆ.

"ನಾನು ಅರಣ್ಯ ಇಲಾಖೆಯಲ್ಲಿ ಅರಣ್ಯ ಸಂರಕ್ಷಣಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದಾಗ ಮಾನ್ಯ ಶ್ರೀ ವೈ.ಕೆ. ರಾಮಯ್ಯನವರ ಹೆಸರು ಕೇಳಿದ್ದೆ ಅಷ್ಟೆ. ಇವರು ರಾಜ್ಯದ ಒಬ್ಬ ಪ್ರಾಮಾಣಿಕ, ತತ್ವನಿಷ್ಠ, ನಿರ್ಭೀತ ರಾಜಕಾರಣಿ ಹಾಗೂ ರಾಜ್ಯದ ಬಗ್ಗೆ ಸ್ಪಷ್ಟ ನಿರ್ದೇಶನ ನೀಡಬಲ್ಲ ಎಂಟೆರ್ದೆಯ ಏಕೈಕ ಜನಪ್ರತಿನಿಧಿ. ಮೊಟ್ಟಮೊದಲಿಗೆ ಇವರನ್ನು ನೋಡಿದ್ದು ತುಮಕೂರಿನ ಪ್ರವಾಸಿ ಮಂದಿರದಲ್ಲಿ. ಆಗ ನಾನೇ ನನ್ನನ್ನು ಅವರಿಗೆ ಪರಿಚಯಿಸಿಕೊಂಡೆ. ಅವರು ಅಂದೇ ನಮ್ಮ ರಾಜ್ಯದ ಅರಣ್ಯ ಇಲಾಖೆಯ ರೀತಿರಿವಾಜುಗಳು, ಸರ್ಕಾರದ ನೀತಿನಿಯಮಗಳು ಇವುಗಳನ್ನು ಕುರಿತು ಸುಮಾರು ಇಪ್ಪತ್ತು ನಿಮಿಷಗಳ ಕಾಲ ನನ್ನೊಡನೆ ಚರ್ಚಿಸಿದರು. ಅವರ ಮಾತಿನ ಧಾಟಿ, ವಿಷಯಗಳ ಸಮಗ್ರ ತಿಳುವಳಿಕೆ, ಜನಸೇವಾಪರತೆ ಇವುಗಳನ್ನು ಕಂಡು ನಮ್ಮ ರಾಜ್ಯದಲ್ಲಿ ಇಂತಹ ರಾಜಕಾರಣಿಗಳೂ ಇದ್ದಾರೆಂದು ಹೆಮ್ಮೆ ಎನಿಸಿತು.

ಇವರು ತೋಟಗಾರಿಕೆ ಇಲಾಖಾ ಸಚಿವರಾಗಿದ್ದಾಗ ನಡೆದ ಒಂದು ಘಟನೆಯನ್ನು ಅದೇ ಇಲಾಖೆಯಲ್ಲಿದ್ದ ನನ್ನ ಸ್ನೇಹಿತರಿಂದ ಕೇಳಿ ಅವರ ಬಗೆಗಿನ ಅಭಿಮಾನ ಇಮ್ಮಡಿ ಯಾಯಿತು. ಆಗಿನ ತೋಟಗಾರಿಕೆ ಇಲಾಖೆಯ ನಿರ್ದೇಶಕರು ಒಬ್ಬ ಹಿರಿಯ ಐ.ಎ.ಎಸ್. ಅಧಿಕಾರಿಗಳು. ಅವರ ಸರ್ಕಾರಿ ವಾಸದ ಮನೆ ಲಾಲ್‌ಬಾಗಿನಲ್ಲಿಯೇ ಇತ್ತು. ಇದೊಂದು ದೊಡ್ಡ ಬಂಗಲೆ. ಇದು

೧೯೦೪ರಲ್ಲಿ ನಿರ್ಮಿತವಾಗಿ ತೋಟಗಾರಿಕೆ ಇಲಾಖೆ ನಿರ್ದೇಶಕ ರಾಗಿದ್ದ ಜಾನ್ ಕ್ಯಾಮರಾನ್ ಎಂಬುವವರು ವಾಸಮಾಡುತ್ತಿದ್ದ ನಿವಾಸ ಸ್ಥಳ. ಇವರು ಮತ್ತು ಕ್ರಂಬಿಗಲ್‌ರವರು ತೋಟಗಾರಿಕೆ ಇಲಾಖೆಗೂ ತನ್ಮೂಲಕ ಆಗಿನ ಮೈಸೂರು ರಾಜ್ಯಕ್ಕೂ ಸಲ್ಲಿಸಿರುವ ಸೇವೆ ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಹದು. ಈ ಬಂಗಲೆಯಲ್ಲಿ ನಂತರ ಬಂದ ನಿರ್ದೇಶಕರುಗಳು ಪಾರಂಪರಿಕವಾಗಿ ವಾಸಮಾಡುತ್ತಿದ್ದರು. ಇದು ಉತ್ತಮ ವಾಸ್ತುಶಿಲ್ಪ ಕೌಶಲ್ಯದಿಂದ ಕೂಡಿದ್ದು ಎಲ್ಲರ ಮೆಚ್ಚುಗೆಗೆ ಪಾತ್ರವಾಗಿತ್ತು. ಇದರಿಂದಾಗಿ ಇಲ್ಲಿ ವಾಸಿಸುತ್ತಿದ್ದ ಯಾವ ನಿರ್ದೇಶಕರೂ ಕಟ್ಟಡದಲ್ಲಿ ಯಾವುದೇ ಬದಲಾವಣೆ ಮಾಡದೆ ಅದರ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಬಂದದ್ದರು. ನಿರ್ದೇಶಕರ ಕಾರ್ಯಾಲಯದ ಆವರಣದಲ್ಲಿ ಅಮೂಲ್ಯವಾದ ಒಂದು ದೊಡ್ಡ ಪುಸ್ತಕ ಭಂಡಾರವಿದ್ದಿತು. ಇದು ರಾಷ್ಟ್ರದ ಯಾವ ಕಡೆಯೂ ದೊರೆಯದ ತೋಟಗಾರಿಕೆಗೆ ಸಂಬಂಧಿಸಿದ ಅಪರೂಪದ ಗ್ರಂಥಗಳನ್ನು ಒಳಗೊಂಡಿತ್ತು. ಇಲಾಖೆಯಲ್ಲಿ ಕೆಲಸ ಮಾಡಿದ ಎಲ್ಲಾ ನಿರ್ದೇಶಕರೂ ತೋಟಗಾರಿಕೆ ಹಾಗೂ ವೃಕ್ಷ ವಿಜ್ಞಾನಕ್ಕೆ ಸಂಬಂಧಿಸಿದ ಈ ಗ್ರಂಥಾಲಯವನ್ನು ತಮ್ಮ ಇಲಾಖೆಯ ಪ್ರಮುಖ ಅಂಗವೆಂದು ಪರಿಗಣಿಸಿ ಸಂರಕ್ಷಿಸುತ್ತಿದ್ದರು. ಪ್ರತಿವರ್ಷವೂ ಅತ್ಯುತ್ತಮ ಗ್ರಂಥಗಳನ್ನು, ಅಂತಾರಾಷ್ಟ್ರೀಯ ಮಟ್ಟದ ಸಂಶೋಧನಾ ಲೇಖನಗಳನ್ನು ಸಂಗ್ರಹಿಸಿ ಗ್ರಂಥಾಲಯವನ್ನು ಅಭಿವೃದ್ಧಿ ಪಡಿಸುತ್ತಿದ್ದರು. ಅಲ್ಲದೆ ಇದರ ಪೂರ್ಣಲಾಭ ವನ್ನು ಪಡೆದು ತಮ್ಮ ಜ್ಞಾನಭಂಡಾರವನ್ನು ಹೆಚ್ಚಿಸಿಕೊಳ್ಳುತ್ತಿದ್ದರು.

ರಾಜ್ಯದಲ್ಲಿ ತೋಟಗಾರಿಕೆಗೆ ವಿಶೇಷ ಒತ್ತುಕೊಟ್ಟು ಅದನ್ನು ಸಮಗ್ರವಾಗಿ, ಉಪಯುಕ್ತವಾಗಿ ಅಭಿವೃದ್ಧಿಪಡಿಸಿದ ಕೀರ್ತಿ ನಿರ್ದೇಶಕರಾಗಿದ್ದ ಮಾನ್ಯ ಡಾ. ಎಂ.ಎಚ್. ಮರೀಗೌಡರಿಗೆ ಸಲ್ಲುತ್ತದೆ. ಇವರು ತಮ್ಮ ಅಧಿಕಾರಾವಧಿಯಲ್ಲಿ ಈ ಗ್ರಂಥ ಭಂಡಾರವನ್ನು ಹೆಚ್ಚು ಅಭಿವೃದ್ಧಿಪಡಿಸಿದರು. ನಮ್ಮ ರಾಷ್ಟ್ರಕವಿ ಕುವೆಂಪು ಅವರೂ ಇದರ ಲಾಭವನ್ನು ಪಡೆಯುತ್ತಿದ್ದರು. ಅವರು ಬೆಂಗಳೂರಿಗೆ ಬಂದಾಗಲೆಲ್ಲಾ ಈ ಗ್ರಂಥಭಂಡಾರಕ್ಕೆ ಭೇಟಿ ಕೊಡುತ್ತಿದ್ದರು. ಇದನ್ನು ತಿಳಿದ ಡಾ. ಮರೀಗೌಡರು ಅವರಿಗಾಗಿ ಒಂದು ಪ್ರತ್ಯೇಕವಾದ ಕೊಠಡಿಯನ್ನೇ ಮುಡುಪಾಗಿಟ್ಟರು. ಇಂಥ ಒಂದು ದೊಡ್ಡ ಪ್ರಾಮುಖ್ಯ ಈ ಗ್ರಂಥಾಲಯಕ್ಕಿದೆ.

ಸರ್ಕಾರ ಕೆಲಕಾಲ ನಂತರ ಐ.ಎ.ಎಸ್. ಅಧಿಕಾರಿಗಳನ್ನು ತೋಟಗಾರಿಕಾ ಇಲಾಖೆಯ ನಿರ್ದೇಶಕರಾಗಿ ನೇಮಕ ಮಾಡತೊಡಗಿತು. ಒಬ್ಬ ಹಿರಿಯ ಐ.ಎ.ಎಸ್. ಅಧಿಕಾರಿ ಇಲಾಖಾ ನಿರ್ದೇಶಕರಾಗಿ ನೇಮಕಗೊಂಡರು. ಸರ್ಕಾರಿ ಬಂಗಲೆ ಪಕ್ಕದ ಕಟ್ಟಡದಲ್ಲಿದ್ದ ಗ್ರಂಥಾಲಯವನ್ನು ಸಿದ್ದಾಪುರದ ಗೇಟ್ ಬಳಿಯಿದ್ದ ಆಗಿನ ಕ್ಯಾಂಟೀನ್ ಕಟ್ಟಡಕ್ಕೆ ಸ್ಥಳಾಂತರಿಸಲು ತೀರ್ಮಾನಿಸಿದರು. ಈ ವಿಷಯ ತಿಳಿದ ನಿವೃತ್ತ ನಿರ್ದೇಶಕರಾದ ಡಾ. ಮರೀಗೌಡರು ಖುದ್ದಾಗಿ ನಿರ್ದೇಶಕರಾಗಿದ್ದ ಐ.ಎ.ಎಸ್. ಅಧಿಕಾರಿಯನ್ನು ಭೇಟಿ ಮಾಡಿ ಈ ಗ್ರಂಥಾಲಯಕ್ಕೆ ತನ್ನದೇ ಆದ ಹಿರಿಮೆ, ಅಸ್ತಿತ್ವವಿದೆ. ಯಾವುದೇ ಕಾರಣಕ್ಕೂ ಇದನ್ನು ಬೇರೆಡೆ ಸ್ಥಳಾಂತರಿಸಬೇಡಿರೆಂದು ಕೋರಿಕೊಂಡರು. ಇದರಿಂದ ಕುಪಿತರಾದ ಆ ಅಧಿಕಾರಿ, ಈ ಗ್ರಂಥಭಂಡಾರವನ್ನು ಹೇಗೆ ಅಭಿವೃದ್ಧಿಪಡಿಸಬೇಕು, ರಕ್ಷಿಸಬೇಕು ಎಂಬ ಅರಿವು ನನಗೂ ಇದೆ ಎಂದು ಸ್ವಲ್ಪ ಒರಟಾಗಿಯೇ ಉತ್ತರಿಸಿದರು. ಈ ಮಾತುಗಳಿಂದ ಬೇಸರಗೊಂಡ ತೋಟಗಾರಿಕಾ ಇಲಾಖಾಭಿವೃದ್ಧಿಗೆ ಸಲಹೆಗಾರರಾಗಿದ್ದ ಡಾ. ಮರೀಗೌಡರು ಆ ಹುದ್ದೆಗೆ ರಾಜೀನಾಮೆ ನೀಡಿದರು. ತದನಂತರವೂ ಈ ಅಧಿಕಾರಿಯು ತಮ್ಮ ನಿರ್ಧಾರವನ್ನು ಬದಲಾಯಿಸದೆ ಗ್ರಂಥಭಂಡಾರದ ಸ್ಥಳಾಂತರಕ್ಕೆ ಪ್ರಾರಂಭಿಸಿದರು. ಅಷ್ಟರಲ್ಲಿಯೇ ಈ ವಿಷಯ ತಿಳಿದ ತೋಟಗಾರಿಕಾ ಇಲಾಖಾ ಕಾರ್ಯದರ್ಶಿಗಳು ಗ್ರಂಥಾಲಯದ ಸ್ಥಳ

ಬದಲಾವಣೆ ಬೇಡವೆಂದು ಸೂಚಿಸಿದರು. ಇವರ ಸೂಚನೆಯನ್ನು ತಿರಸ್ಕರಿಸಿ, ಉದ್ದೇಶಿಸಿದಂತೆ ಸ್ಥಳಾಂತರಕ್ಕೆ ಅಧಿಕಾರಿ ಮುಂದಾದರು. ದುರದೃಷ್ಟವಶಾತ್ ಡಿಸೆಂಬರ್ ೩೧ರಂದು ಇದೇ ಐ.ಎ.ಎಸ್. ನಿರ್ದೇಶಕರು ಎಲ್ಲ ಹಿರಿಯ ಅಧಿಕಾರಿಗಳನ್ನು ಅವರ ಕುಟುಂಬ ವರ್ಗದವರನ್ನೂ ಈ ಸರ್ಕಾರಿ ಬಂಗಲೆಗೆ ಆಹ್ವಾನಿಸಿ ನೂತನ ವರ್ಷಾಚರಣೆ ಮಾಡಿದರು. ಈ ಎಲ್ಲಾ ವಿಷಯಗಳನ್ನು ತಿಳಿದ ತೋಟಗಾರಿಕಾ ಸಚಿವರಾಗಿದ್ದ ವೈ.ಕೆ.ರಾಮಯ್ಯನವರು ನಿರ್ದೇಶಕರ ವಾಸದ ಬಂಗಲೆಯಲ್ಲಿರುವ ಗ್ರಂಥಾಲಯದ ಮಹತ್ವವನ್ನು ತಿಳಿಸಿದರು. ಇದನ್ನು ಯಾವ ಕಾರಣಕ್ಕೂ ಸ್ಥಳಾಂತರಿಸ ಬಾರದೆಂದೂ ನಿರ್ದೇಶಕರ ವಾಸದ ಬಂಗಲೆಯನ್ನೇ ಡಾ. ಎಂ.ಎಚ್. ಮರೀಗೌಡ ರಾಷ್ಟ್ರೀಯ ತೋಟಗಾರಿಕಾ ಗ್ರಂಥಾಲಯ ಎಂದು ಹೆಸರಿಟ್ಟು ಸರ್ಕಾರಿ ಆದೇಶವನ್ನೇ ಹೊರಡಿಸಿದರು. ತನ್ಮೂಲಕ ಅಧಿಕಾರದ ಮತ್ತಿನ ಗುಂಗಿನಲ್ಲಿದ್ದು, ತಾನೇ ಸರ್ಕಾರವೆಂದು ಭಾವಿಸಿದ್ದ ಈ ಹಿರಿಯ ಐ.ಎ.ಎಸ್. ಅಧಿಕಾರಿಗೆ ಪ್ರಜಾಪ್ರಭುತ್ವದಲ್ಲಿ ಪ್ರಜಾಪ್ರತಿನಿಧಿಗಳಾದ ಸಚಿವರ ಆದೇಶವೇ ಅಂತಿಮ ಮತ್ತು ಅವರೇ ಸರ್ಕಾರವೆಂಬುದನ್ನು ಮಾರ್ಮಿಕವಾಗಿ ರಾಮಯ್ಯನವರು ತಿಳಿಸಿಕೊಟ್ಟರು. ಅವರ ದಕ್ಷತೆಗೆ, ಕಾರ್ಯವೈಖರಿಗೆ ಇದು ಒಂದು ಉತ್ತಮ ನಿದರ್ಶನ.

"ವೈ.ಕೆ.ಆರ್. ಅವರು ಎಲ್ಲರನ್ನೂ ಸಮಾನವಾಗಿ ನೋಡುವ ನಿರ್ದಾಕ್ಷಿಣ್ಯ ಗುಣ ಉಳ್ಳವರು. ಒಮ್ಮೆ ಇವರು ಸಚಿವರಾಗಿದ್ದಾಗ ಅಧಿಕಾರಿಗಳ ಸಭೆ ಏರ್ಪಟ್ಟಿತು. ಈ ಇಲಾಖೆಯಲ್ಲಿಯೇ ಅಧಿಕಾರಿಯಾಗಿದ್ದ ಅವರ ಬಂಧು ಒಬ್ಬರು, ತಾವು ಸಚಿವರ ಸಂಬಂಧಿಕರೆಂದು ತೋರ್ಪಡಿಸಿಕೊಳ್ಳಲು ಸಭೆಯಲ್ಲಿ ಅನವಶ್ಯಕವಾಗಿ ಹೆಚ್ಚುಗಾರಿಕೆಯಿಂದ ಮೆರೆಯಲು ಪ್ರಯತ್ನಿಸಿದರು. ಕೂಡಲೇ ಇದನ್ನು ಮನಗಂಡ ರಾಮಯ್ಯನವರು ಸಂಬಂಧಿಕ ಅಧಿಕಾರಿಯ ಮಾತುಗಳನ್ನು ಮೊಟಕುಗೊಳಿಸುವಂತೆ ತಿಳಿಸಿ, ಅವರ ಅತ್ಯುತ್ಸಾಹಕ್ಕೆ ತಣ್ಣೀರೆರಚಿದರು. ಇದನ್ನು ಗಮನಿಸಿದ ಎಲ್ಲ ಅಧಿಕಾರಿಗಳೂ ಅವರ ನಿಷ್ಪಕ್ಷಪಾತ ವರ್ತನೆಗೆ ತಲೆದೂಗಿದರು."

ಇವರು ತಮ್ಮ ಅಧಿಕಾರಾವಧಿಯಲ್ಲಿ ಬಹಳಷ್ಟು ಉತ್ತಮ ಜನೋಪಯೋಗಿ ಕಾರ್ಯಕ್ರಮಗಳನ್ನು ಕೈಗೊಂಡಿದ್ದರು. ತೋಟಗಾರಿಕೆ ಇಲಾಖೆಗೆ ನವಚೇತನವನ್ನು ತುಂಬಿ ಜನತೆಯ ಪ್ರೀತಿಗೆ ಪಾತ್ರರಾದರು. ರಾಜ್ಯದ ಎಲ್ಲೆಡೆ ಹೆಚ್ಚು ಹೆಚ್ಚು ಹಣ್ಣಿನ ಗಿಡಗಳನ್ನು ಬೆಳೆಸಲು ವಿಶೇಷ ಪ್ರೋತ್ಸಾಹಕ ಕಾರ್ಯಕ್ರಮಗಳನ್ನು ಜಾರಿಗೆ ತಂದರು. ಮುಖ್ಯವಾಗಿ ಇಂದು ಕರ್ನಾಟಕದಲ್ಲಿ ವಿವಿಧ ಮಾವಿನ ತಳಿಗಳು ಜಲಾನಯನ ಪ್ರದೇಶಗಳಲ್ಲಿ ಹಾಗೂ ರೈತರ ಭೂಮಿಗಳಲ್ಲಿ ಚೆನ್ನಾಗಿ ಬೆಳೆದು ಫಲ ಕೊಡುತ್ತಿರುವುದಕ್ಕೆ ಇವರೇ ಕಾರಣಿಕರು. ಇವರು ಸಚಿವರಾಗಿದ್ದಾಗ ಮೃದುಮರಗಳ ಕಸಿಮಾಡುವ ತಾಂತ್ರಿಕತೆ ಆಗತಾನೆ ಕಾರ್ಯರೂಪಕ್ಕೆ ಬಂದಿತ್ತು. ಇದರ ಉಪಯೋಗವನ್ನು ಮನವರಿಕೆ ಮಾಡಿಕೊಂಡು ಇವರು ಇಲಾಖೆಯ ಎಲ್ಲಾ ಅಧಿಕಾರಿಗಳೂ ಖುದ್ದಾಗಿ ಈ ತಾಂತ್ರಿಕತೆಯನ್ನು ಅಭ್ಯಸಿಸಿ ಉತ್ತಮ ತಳಿಯ ಮಾವಿನ ಸಸಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ತಯಾರಿಸಬೇಕೆಂದು ಈ ವಿಷಯದಲ್ಲಿ ಪರಿಣತರಾಗಿದ್ದ ಡಾ. ಹಿತ್ತಲಮನಿಯವರಿಗೆ ಆದೇಶ ನೀಡಿದರು. ಇವರ ಈ ಮಹತ್ವದ ನಿರ್ಧಾರದಿಂದ ಇಂದು ಕರ್ನಾಟಕ ರಾಜ್ಯದಲ್ಲಿ ವಿವಿಧ ಮಾವಿನ ತಳಿಯ ಮರಗಳಿಂದ ಕೋಟ್ಯಾಂತರ ರೂ.ಗಳ ಬೆಲೆಯ ಮಾವಿನ ಹಣ್ಣುಗಳನ್ನು ಬೆಳೆಯಲಾಗುತ್ತಿದೆ. ಸಹಸ್ರಾರು ರೈತಕುಟುಂಬಗಳಿಗೆ ಜೀವನಾಧಾರವಾಗಿದೆ. ಈ ಬಗೆಯ ಚಟುವಟಿಕೆಯಿಂದ ಸ್ವಂತ ಉದ್ಯೋಗ ಹೆಚ್ಚಿತು. ರೈತರು ಸ್ವಾವಲಂಬಿಗಳಾಗುವುದರ ಜೊತೆಗೆ ಉತ್ತಮ ಗುಣಮಟ್ಟದ ಪೌಷ್ಟಿಕಾಂಶಗಳು ದೊರೆಯುವಂತಾಯಿತು. ಹಲವು ಹಂತಗಳಲ್ಲಿ ಹೆಚ್ಚು ಹೆಚ್ಚು ಉದ್ಯೋಗಗಳು ಸೃಷ್ಟಿಯಾದವು.

ಈ ಮಧ್ಯೆ ರಾಮಕೃಷ್ಣ ಹೆಗಡೆ ಮತ್ತು ದೇವೇಗೌಡರ ನಡುವಿನ ಭಿನ್ನಾಭಿಪ್ರಾಯ ಹೆಚ್ಚಾಗಿ ರಾಮಯ್ಯನವರು ದೇವೇಗೌಡರ ಪರ ನಿಂತ ಕಾರಣ ಹೆಗಡೆಯವರ ಸಂಪುಟಕ್ಕೆ ರಾಜೀನಾಮೆ ನೀಡಬೇಕಾದ ಪ್ರಸಂಗ ಒದಗಿಬಂತು. ಆ ಸಂದರ್ಭದ ರಾಜಕೀಯ ಕೇಂದ್ರಬಿಂದುವಾಗಿ ರಾಮಯ್ಯನವರ ಮನೆ ಪರಿವರ್ತಿತವಾಗಿತ್ತು.

**ಐತಿಹಾಸಿಕ ಉಪಚುನಾವಣೆ**

ಅನೇಕ ರಾಜಕೀಯ ವಿಪ್ಲವಗಳ ಕಾರಣದಿಂದಾಗಿ ಹಾಗೂ ಹಿರಿಯ ನಾಯಕರ ನಡುವಿನ ಒಡಕಿನ ಕಾರಣದಿಂದಾಗಿ ರಾಮಯ್ಯನವರು ೧೯೮೯ರ ವಿಧಾನಸಭಾ ಚುನಾವಣೆಯಲ್ಲಿ ಅಲ್ಪ ಅಂತರದಿಂದ ಸೋಲನ್ನು ಅನುಭವಿಸಬೇಕಾಗಿ ಬಂತು. ಸೋಲು ಮತ್ತು ಗೆಲುವು ರಾಮಯ್ಯನವರಿಗೆ ಹೊಸದೇನಾಗಿರಲಿಲ್ಲ. ಅತ್ಯಂತ ನಿರ್ಲಿಪ್ತವಾಗಿ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡ ರಾಮಯ್ಯನವರು ತುಮಕೂರು ಜಿಲ್ಲೆಗೆ ಹೇಮಾವತಿಯನ್ನು ಹರಿಸುವ ಸಂಬಂಧದಲ್ಲಿ ಉಂಟಾಗಿದ್ದ ವಿಳಂಬ ನೀತಿಯನ್ನು ಪ್ರತಿಭಟಿಸಿ ಹೋರಾಟ ಕೈಗೊಂಡರು. ಈ ಬಿಡುವಿನ ದಿನಗಳಲ್ಲಿಯೇ **ನಾನು ಮತ್ತು ರೇಷ್ಮೆ** ಎಂಬ ಕೃತಿಯನ್ನು ಕೂಡ ಬರೆದು ಪ್ರಕಟಿಸಿದರು.

ಅಷ್ಟರಲ್ಲಿ ಕುಣಿಗಲ್ ವಿಧಾನಸಭಾ ಕ್ಷೇತ್ರದಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿ ಗೆದ್ದಿದ್ದ ಹಿರಿಯ ರಾಜಕಾರಣಿ ಶ್ರೀ ಕೆ. ಲಕ್ಕಪ್ಪ ಅವರು ನಿಧನ ಹೊಂದಿದರು. ಆ ಸಂದರ್ಭದಲ್ಲಿ ವೈ.ಕೆ.ಆರ್. ಮತ್ತೆ ಉಪ ಚುನಾವಣೆಯಲ್ಲಿ ಕುಣಿಗಲ್ ಕ್ಷೇತ್ರದ ಅಭ್ಯರ್ಥಿಯಾದರು. ಅದು ಕಾಂಗ್ರೆಸ್ ಆಡಳಿತದಲ್ಲಿ ಇದ್ದ ಕಾಲ. ಎಸ್. ಬಂಗಾರಪ್ಪನವರು ರಾಜ್ಯದ ಮುಖ್ಯಮಂತ್ರಿ. ಯಾವುದೇ ಚುನಾವಣೆಯನ್ನು ತಮ್ಮ ಸ್ವಂತ ಪ್ರತಿಷ್ಠೆಯನ್ನಾಗಿ ತೆಗೆದುಕೊಳ್ಳುವುದು ಬಂಗಾರಪ್ಪನವರ ಜಾಯಮಾನ. ಹಾಗಾಗಿ ಇಡೀ ಸರ್ಕಾರವೇ ಈ ಚುನಾವಣೆಯನ್ನು ಅತ್ಯಂತ ಪ್ರತಿಷ್ಠೆಯ ಚುನಾವಣೆಯನ್ನಾಗಿ ಪರಿಗಣಿಸಿ ರಾಮಯ್ಯನವರ ವಿರುದ್ಧ ಪ್ರಚಾರಕ್ಕೆ ನಿಂತಿತು. ಒಂದು ಕಾಲಕ್ಕೆ ರಾಮಯ್ಯನವರ ಶಿಷ್ಯರೇ ಆಗಿದ್ದ ಎಸ್.ಪಿ. ಮುದ್ದುಹನುಮೇಗೌಡ ಕಾಂಗ್ರೆಸ್ ಅಭ್ಯರ್ಥಿ. ವೈ.ಕೆ.ಆರ್. ಏಕಾಂಗಿ ಹೋರಾಟಗಾರ. ಶ್ರೀ ಹೆಚ್.ಡಿ. ದೇವೇಗೌಡರು ರಾಮಯ್ಯನವರ ಪರವಾಗಿ ಪ್ರಚಾರ ಮಾಡಿದರಾದರೂ ಅಷ್ಟರಲ್ಲಾಗಲೇ ವೈ.ಕೆ.ಆರ್. ಮತ್ತು ದೇವೇಗೌಡರ ನಡುವೆ ತಣ್ಣಗಿನ ವೈಮನಸ್ಸು ಉಂಟಾಗಿದ್ದ ಕಾರಣ ಅದು ಪರಿಣಾಮ ಬೀರುವ ಸ್ಥಿತಿಯಲ್ಲಿರಲಿಲ್ಲ. ರಾಜ್ಯದ ಆಡಳಿತ ಹಿಡಿದ ಬಹುತೇಕ ಮಂತ್ರಿಮಾನ್ಯರ ದಂಡು ಕುಣಿಗಲ್‌ನಲ್ಲಿ ಬೀಡುಬಿಟ್ಟು ಅಬ್ಬರದ ಪ್ರಚಾರ ನಡೆಸುತ್ತಿದ್ದಾಗ ಒಂದು ರೀತಿಯಲ್ಲಿ ಫಕೀರನಂತೆ ಅಡ್ಡಾಡುತ್ತ ಜನತೆಯ ನಡುವೆ ರಾಮಯ್ಯ ತಮ್ಮ ಕಷ್ಟಸುಖಗಳನ್ನು ಹೇಳಿಕೊಳ್ಳುತ್ತಿದ್ದರು. ಶ್ರೀಮಾನ್ ದೇವೇಗೌಡರೂ ಕೂಡ ತಮ್ಮ ಪಕ್ಷದ ಅಳಿವು ಉಳಿವು ಎಂಬ ರೀತಿಯಲ್ಲಿ ರಾಮಯ್ಯನವರನ್ನು ದೂರವೇ ಇಟ್ಟರೂ ತಮ್ಮ ಪಕ್ಷದ ಉಳಿವಿಗಾಗಿ ಚುನಾವಣಾ ಪ್ರಚಾರ ಮಾಡಿದರು. ರಾಮಯ್ಯನವರಂಥ ಕತೃತ್ವ ಶಕ್ತಿಯ ಒಬ್ಬ ಮಹಾನ್‌ಕೆಲಸಗಾರರನ್ನು ಕಳೆದ ಬಾರಿ ಸೋಲಿಸಿದ್ದ ಜನತೆ ಈ ಸಲ ಅಂತಹ ತಪ್ಪು ಮಾಡಲು ಸಿದ್ಧವಿರಲಿಲ್ಲ. ಆ ಸಂದರ್ಭದಲ್ಲಿ ನಾಡಿನ ಎಲ್ಲ ಪತ್ರಿಕೆ ಮತ್ತು ಮಾಧ್ಯಮಗಳಲ್ಲಿಯೂ ಕುಣಿಗಲ್ ಉಪಚುನಾವಣೆಯದೇ ಸುದ್ದಿ. ಕುಣಿಗಲ್‌ನ ಪ್ರವಾಸಿ ಮಂದಿರದಲ್ಲಿ ರಾಮಯ್ಯನವರ ಪರವಾಗಿ ಸೇರಿದ್ದ ಅಪಾರ ಜನಸ್ತೋಮದ ಮೇಲೆ ಪೋಲೀಸರೊಬ್ಬರು ಗುಂಡು ಹಾರಿಸಿದರು ಎಂಬ ಸುದ್ದಿ ಕಾಳ್ಗಿಚ್ಚಿನಂತೆ ಹಬ್ಬಿ, ಇಡೀ ಕ್ಷೇತ್ರವೇ ಪ್ರಕ್ಷುಬ್ಧವಾದದ್ದೂ ಉಂಟು. ಗುಂಡಿಗೆ ಬಲಿಯಾಗಿ ಒಬ್ಬ ಅಮಾಯಕ ಪ್ರಾಣವನ್ನು ಕಳೆದುಕೊಂಡ. ಆದರೂ ಫಲಿತಾಂಶ ಹೊರಬಿದ್ದಾಗ ಎಲ್ಲ ಅಧಿಕಾರ ಮತ್ತು ರಾಜಕೀಯ ಮಸಲತ್ತುಗಳನ್ನು ಮೀರಿ

ಜನತೆಯ ನಡುವಿನ ಶಕ್ತಿಯಾಗಿದ್ದ ಏಕಾಂಗಿ ವೀರ ರಾಮಯ್ಯ ಸುಮಾರು ೧೦,೦೦೦ ಮತಗಳ ಅಂತರದಿಂದ ಗೆದ್ದು ಬಂದರು. ಇದೊಂದು ಸರಳತೆಗೆ, ಕ್ಷೇತ್ರದಲ್ಲಿ ಮಾಡಿದ ಕೆಲಸಕ್ಕೆ, ರೈತಪರ ನಿಲುವಿಗೆ ಸಿಕ್ಕ ಐತಿಹಾಸಿಕ ಜಯ ಎಂದು ಮಾಧ್ಯಮಗಳು ಈ ಐತಿಹಾಸಿಕ ಫಲಿತಾಂಶವನ್ನು ಕೊಂಡಾಡಿದವು. ಪತ್ರಿಕೆಗಳು ಸಂಪಾದಕೀಯವನ್ನು ಬರೆದು ವೈ.ಕೆ.ಆರ್. ಅವರನ್ನು ಅಭಿನಂದಿಸಿದವು.

## ಹೇಮಾವತಿ ನೀರಿಗಾಗಿ ಹೋರಾಟ

ತುಮಕೂರು ನಮ್ಮ ರಾಜ್ಯದ ಪ್ರಮುಖ ಒಣಭೂಮಿ ಪ್ರದೇಶಗಳಲ್ಲಿ ಒಂದು. ಬೃಹತ್ ನೀರಾವರಿ ಯೋಜನೆಗಳೇನೂ ಇಲ್ಲದಿದ್ದ ತುಮಕೂರು ಜಿಲ್ಲೆಗೆ ಹೇಮಾವತಿ ನೀರು ತರುವ ಪ್ರಯತ್ನ ೧೯೭೩ರಷ್ಟು ಹಿಂದೆಯೇ ದೇವರಾಜ ಅರಸರ ಕಾಲದಲ್ಲಿ ನಡೆದಿತ್ತು. ಆದರೆ ಸಮರ್ಥ ನಾಯಕತ್ವದ ಕೊರತೆಯಿಂದಾಗಿ ಅತ್ಯಂತ ನಿಧಾನಗತಿಯಲ್ಲಿ ಕೆಲಸ ನಡೆಯುತ್ತಿತ್ತು. ರೈತರ ಬಗ್ಗೆ ಅಪಾರ ಕಾಳಜಿ ಇದ್ದುದಷ್ಟೇ ಅಲ್ಲದೆ ನೀರಾವರಿಯ ಬಗ್ಗೆ ಅಧ್ಯಯನದ ಮೂಲಕ ಅನುಭವವನ್ನು ರೂಢಿಸಿಕೊಂಡಿದ್ದ ರಾಮಯ್ಯನವರು ಶಾಸಕರಾದ ನಂತರ ಆ ನಿಟ್ಟಿನಲ್ಲಿ ಹೆಚ್ಚು ಹೆಚ್ಚು ಪ್ರಯತ್ನ ಮಾಡತೊಡಗಿದರು.

"ಬೆಂಗಾಡಿನ ತುಮಕೂರು ಜಿಲ್ಲೆಗೆ ಹೇಮಾವತಿಯನ್ನು ಸೆಳೆದುತರುವ ಭಗೀರಥ ಪ್ರಯತ್ನವನ್ನು ಅವರು ಕೈಗೊಂಡರು. ಬಾಗೂರು ನವಿಲೆ ಸುರಂಗದ ಕೆಲಸ ಅನೇಕ ವರ್ಷಗಳಿಂದ ಅತ್ಯಂತ ನಿಧಾನಗತಿಯಲ್ಲಿ ನಡೆಯುತ್ತಿತ್ತು. ಅದನ್ನೆ ನೆಪ ಮಾಡಿಕೊಂಡು ಪಟ್ಟಭದ್ರ ಹಿತಾಸಕ್ತಿಗಳು ತುಮಕೂರು ಜಿಲ್ಲೆಯನ್ನು ನಿರ್ಲಕ್ಷಿಸುತ್ತಿದ್ದವು. ಆಳುವ ಸರ್ಕಾರದಲ್ಲಿದ್ದುಕೊಂಡೇ ದೇವೇಗೌಡರಂಥ ಹಿರಿಯರ ಸಹಕಾರದಲ್ಲಿ ಹೇಮಾವತಿ ನಾಲಾ ಕೆಲಸಗಳನ್ನು ಚುರುಕುಗೊಳಿಸುವಂತೆ ರಾಮಯ್ಯ ಒತ್ತಾಯ ತಂದರು. ಆಳುವ ಪಕ್ಷದಲ್ಲಿದ್ದುಕೊಂಡು ಅನೇಕ ಬಾರಿ ಸರ್ಕಾರ ಮುಜುಗರ ಅನುಭವಿಸುವಂತಹ ಧೀರೋದಾತ್ತ ಹೇಳಿಕೆಗಳನ್ನು ನೀಡಿ ಎಚ್ಚರಿಸುತ್ತಿದ್ದರು. ಶಾಸಕರಾಗಿಲ್ಲದ ಸಂದರ್ಭದಲ್ಲಿ ಕೂಡ ಈ ಬಗೆಗಿನ ಕಾಳಜಿ ಎಳ್ಳಷ್ಟೂ ಕಡಿಮೆಯಾಗಲಿಲ್ಲ. ರಾಮಯ್ಯನವರ ಹೋರಾಟ ಎಂತಹ ತಾರಕಮಟ್ಟಕ್ಕೆ ಮುಟ್ಟುತ್ತಿತ್ತೆಂದರೆ ಆಡಳಿತ ಇಕ್ಕಟ್ಟಿಗೆ ಸಿಲುಕಿ ಅವರನ್ನು ಕೋರಿಕೊಳ್ಳುವ ಸ್ಥಿತಿ ತಲುಪುತ್ತಿತ್ತು. ರೈತರಲ್ಲಿ ವಿದ್ಯುತ್ ಸಂಚಲನ ಉಂಟು ಮಾಡುತ್ತಿದ್ದ ವೈ.ಕೆ.ಆರ್. ರವರ ಹೋರಾಟದ ಸ್ವರೂಪವೇ ಸಮುದಾಯದಲ್ಲಿ ಸ್ವಾಭಿಮಾನದ ಕಿಚ್ಚನ್ನು ಹುಟ್ಟಿಸುತ್ತಿತ್ತು. ಬಾಗೂರು ನವಿಲೆ ಸುರಂಗದ ಬಳಿ ಹೋಗಿ ದಿನಗಟ್ಟಲೆ ರಾಮಯ್ಯ ಕುಳಿತುಬಿಡುತ್ತಿದ್ದರು. ಅದರ ಅಂತರಾಳವನ್ನು ಹೊಕ್ಕು ಎಂಜಿಯರ್‌ಗಳನ್ನು ಗುತ್ತಿಗೆದಾರರನ್ನು ತರಾಟೆಗೆ ತೆಗೆದುಕೊಳ್ಳುತ್ತಿದ್ದರು. ನಾಲಾ ಪ್ರದೇಶದಲ್ಲಿ ಪ್ರತಿಯೊಂದು ಕಾಮಗಾರಿಯನ್ನು ಪರೀಕ್ಷಿಸುತ್ತ, ಹುಚ್ಚನಂತೆ ಸುತ್ತುತ್ತಿದ್ದರು. ವೈ.ಕೆ.ಆರ್. ಅವರಿಗಿದ್ದ ನೀರಿನ ಬಗೆಗಿನ ಕಾಳಜಿಯನ್ನು ಕುರಿತು ಪ್ರಖ್ಯಾತ ಪತ್ರಕರ್ತ ಪಿ. ಲಂಕೇಶ್ ತಮ್ಮ ಪತ್ರಿಕೆಯಲ್ಲಿ ಹೀಗೆ ಬರೆದಿದ್ದರು.

"ಹಠಮಾರಿ ರಾಮಯ್ಯ ನೀರಾವರಿಯನ್ನು ಸರ್ಕಾರ ನಿರ್ಲಕ್ಷಿಸಿದ ಬಗ್ಗೆ "ಜನಜಾಗೃತಿ" ಕಾರ್ಯಕ್ರಮ ಹಾಕಿಕೊಂಡಿದ್ದಾರೆ. ಇದು ಒಂದು ಅರ್ಥದಲ್ಲಿ ಪ್ರತಿಷ್ಠೆಯ ವಿರುದ್ಧ ಕಾಳಜಿಯೇ ಆಗಿದೆ. ಈ ಬಗ್ಗೆ ಪತ್ರಿಕೆ ಜತೆ ಮಾತನಾಡಿದ ರಾಮಯ್ಯ, ತರ್ಕಬದ್ಧ ಚಿಂತನೆ ಮುಂದಿಟ್ಟಿದ್ದಾರೆ.

ಕರ್ನಾಟಕದಲ್ಲಿ ನೀರಾವರಿಗೆ ಲಭ್ಯವಿರುವ ಜಮೀನು ೫೫ ಲಕ್ಷ ಹೆಕ್ಟೇರು. ೨೩ ಲಕ್ಷ ಹೆಕ್ಟೇರು ಜಮೀನಿಗೆ ಆಗುವಷ್ಟು ನೀರಾವರಿ ಸಾಮರ್ಥ್ಯವನ್ನು ಇಲ್ಲಿ ಸೃಷ್ಟಿಸಲಾಗಿದೆ. ಇದರ ಲಾಭ ಪಡೆಯುತ್ತಿರುವುದು ೧೦ ರಿಂದ ೧೨ ಲಕ್ಷ ಹೆಕ್ಟೇರು ಜಮೀನು ಮಾತ್ರ. ಅಂದರೆ ಸಾಮರ್ಥ್ಯದಲ್ಲಿ

ಇನ್ನು ೧೪ ಲಕ್ಷ ಹೆಕ್ಟೇರು ಜಮೀನಿಗೆ ನೀರು ಒದಗಿಸುವ ಸಾಧ್ಯತೆ ಇದ್ದರೂ, ಅದರ ಬಗ್ಗೆ ಸರ್ಕಾರ ತಲೆ ಕೆಡಿಸಿಕೊಂಡಿಲ್ಲ. ಸೃಷ್ಟಿಯಾಗಿರುವ ನೀರಾವರಿ ಸಾಮರ್ಥ್ಯವನ್ನು ಸಮರ್ಪಕವಾಗಿ ಬಳಸಿಕೊಳ್ಳಬೇಕೆಂದು ರಾಮಯ್ಯನವರ ಮುಖ್ಯ ಆಗ್ರಹವಾಗಿದೆ.

ಅವರ ಪ್ರಕಾರ "ರಾಷ್ಟ್ರದ ನೀರಾವರಿ ಸಾಮರ್ಥ್ಯ ಶೇ. ೩೫ ಆಗಿದ್ದು, ರಾಜ್ಯದಲ್ಲಿ ಶೇ. ೧೫ ಆಗಿದೆ. ಇತರ ರಾಜ್ಯಗಳೊಂದಿಗೆ ಹೋಲಿಸಿದರೆ ಕರ್ನಾಟಕದ ಪರಿಸ್ಥಿತಿ ನಿಕೃಷ್ಟವಾಗಿದೆ. ಇದನ್ನು ದೃಷ್ಟಿಯಲ್ಲಿಟ್ಟುಕೊಂಡು ವೀರೇಂದ್ರ ಪಾಟೀಲ್, ಎಸ್. ನಿಜಲಿಂಗಪ್ಪ ಬೃಹತ್ ನೀರಾವಿ ಯೋಜನೆಗಳನ್ನು ಕೈಗೆತ್ತಿಕೊಂಡರು.

ಒಮ್ಮೊಮ್ಮೆ ಕಾವ್ಯಮಯವಾಗಿ ಮಾತನಾಡುವ ವೈ.ಕೆ.ಆರ್. ಕೃಷ್ಣಾ ಮತ್ತು ಕಾವೇರಿ ನೀರಾವರಿ ಯೋಜನೆಗಳು ಕರ್ನಾಟಕದ ಎರಡು ಕಣ್ಣುಗಳಿದ್ದಂತೆ. ಅವುಗಳ ಆನಂದ ಬಾಷ್ಪದಿಂದ ಭೂಮಿ ತೊಯ್ದು ಜನರ ಬದುಕು ಹಸನಾಗುವ ಬಯಕೆ ಈ ನಾಡಿನ ಜನರದ್ದು. ಆದರೆ ಆನಂದಬಾಷ್ಪದ ಬದಲು ಕಣ್ಣೀರು ಬರುತ್ತಿದೆ. ಈ ಎರಡು ಯೋಜನೆಗಳು ಆದಷ್ಟು ಬೇಗನೆ ಮುಗಿಯಬೇಕಾದ ಅನಿವಾರ್ಯತೆ ಇದೆ ಎನ್ನುತ್ತಾರೆ.

"ಯಾಕೆ?" ಎಂದೇನಾದರೂ ಪ್ರಶ್ನಿಸಿದರೆ ರಾಮಯ್ಯ ಅವರಲ್ಲಿ ಅದಕ್ಕೂ ಉತ್ತರವಿದೆ. "ಕೃಷ್ಣಾ ಯೋಜನೆಯನ್ನಯ ೨೦೦೦ ಇಸವಿಯೊಳಗೆ ಮುಗಿಸಬೇಕಾದ ಪರಿಸ್ಥಿತಿ ಇದೆ. ಕಾವೇರಿ ನದಿ ನೀರಿನ ಬಗ್ಗೆ ಆಯೋಗದ ಮಧ್ಯಂತರ ತೀರ್ಪು ನೀಡಲಾಗಿದ್ದು, ಈ ಬಗ್ಗೆ ಪರಿಹಾರ ಕಂಡುಕೊಳ್ಳುವ ಸಲುವಾಗಿ ಯಾರಾದರು ಶೀಘ್ರದಲ್ಲೇ ಈ ಯೋಜನೆಯನ್ನು ಪೂರ್ಣಗೊಳಿಸಬೇಕಾದ ವಿಶೇಷ ಪರಿಸ್ಥಿತಿ ನಿರ್ಮಾಣವಾಗಿದೆ" ಎನ್ನುತ್ತಾರೆ. "ಈ ವಿಶೇಷ ಪರಿಸ್ಥಿತಿ ನಿಭಾಯಿಸಲಿಕ್ಕೆ ಈವರೆಗಿನ ಸರ್ಕಾರಗಳು ವಿಶೇಷ ಕಾರ್ಯಕ್ರಮಗಳನ್ನು ಹಮಿಕೊಳ್ಳಲಿಲ್ಲ. ಬಜೆಟ್ಟಿನಲ್ಲಿ ಒದಗಿಸಿದಷ್ಟು ಹಣವನ್ನು ಯಾವುದೇ ವರ್ಷ ಖರ್ಚು ಮಾಡಿಲ್ಲ. ಕೋರಮಂಗಲದಲ್ಲಿ ಕ್ರೀಡಾ ಗ್ರಾಮ ನಿರ್ಮಿಸಲಿರುವ ಬಗ್ಗೆ ತುಡಿತ, ಆತುರ ಆಸಕ್ತಿ ನೀರಾವರಿ ಬಗ್ಗೆ ಏಕಿಲ್ಲ?" ಎನ್ನುವುದು ಅವರ ನೋವು.

"ಈ ಯೋಜನೆಗಳನ್ನು ಪ್ರಾರಂಭ ಮಾಡಿ ಎಂದು ಸತ್ಯಾಗ್ರಹ ಮಾಡಿದರೆ, ಹಿಡಿದು ಜೈಲಿಗೆ ಹಾಕುತ್ತಾರೆ. ಹಿಂದಿನ ರಾಜ್ಯಸರ್ಕಾರದ ಮೋಸದ ಪರಂಪರೆಯನ್ನು ದೇವೇಗೌಡರು ಮುದುವರಿಸಿಕೊಂಡು ಹೋಗುತ್ತಿದ್ದಾರೆ ಎನ್ನುವುದರಲ್ಲಿ ಅನುಮಾನವೇ ಇಲ್ಲ" ಎನ್ನುವ ರಾಮಯ್ಯ "ಈ ಬಗ್ಗೆ ಅಧಿಕೃತ ವಿರೋಧ ಪಕ್ಷವಾದ ಬಿ.ಜೆ.ಪಿ. ಮೌನವಹಿಸಿದೆ. ನೀರಾವರಿ ಯೋಜನೆಗಳ ಪ್ರದೇಶದಲ್ಲಿ ಬರುವ ಜನಪ್ರತಿನಿಧಿಗಳು ಇದರ ಬಗ್ಗೆ ಯಾಕೋ ಗಮನಹರಿಸುತ್ತಿಲ್ಲ" ಎನ್ನುವ ಆರೋಪವನ್ನು ಮಾಡುತ್ತಾರೆ. "ಈ ಬಗ್ಗೆ ಎಚ್.ಕೆ. ಪಾಟೀಲರಂಥವರು ಮಾತನಾಡಿರಬಹುದು. ಆದರೆ ಸಂಘಟಿತರಾಗಿ ಯಾವ ಪಕ್ಷಗಳೂ ಈ ವಿಷಯವನ್ನು ಕೈಗೆತ್ತಿಕೊಳ್ಳಲಿಲ್ಲ" ಎನ್ನುತ್ತಾರೆ ಅವರು. ಹೀಗಾಗಿ ರಾಮಯ್ಯ ರೈತ ಸಂಘದ ಅಧ್ಯಕ್ಷ ಎಂ.ಡಿ. ನಂಜುಂಡಸ್ವಾಮಿ ಜೊತೆ ಸೇರಿ ಸರ್ಕಾರದ ವಿರುದ್ಧ ಸಂಘಟಿತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ನಿರ್ಧರಿಸಿದ್ದಾರೆ. ಈ ಜೋಡಿ, ಕೃಷ್ಣಾ ಮೇಲ್ದಂಡೆ ಯೋಜನೆಯ ಅಚ್ಚುಕಟ್ಟು ಪ್ರದೇಶ ಮತ್ತು ಕಾವೇರಿ ಕಣಿವೆ ಪ್ರದೇಶದಲ್ಲಿ ಪ್ರವಾಸ ಕೈಗೊಂಡಿದ್ದಾರೆ. ಇದು ದೇವೇಗೌಡರ ವಿರುದ್ಧ ಸಮರ ಸಾರುವ ಮೊದಲ ಯತ್ನ ಇರಬಹುದೆ?"
(ಲಂಕೇಶ್ ಪತ್ರಿಕೆ)

ರಾಮಯ್ಯನವರ ಹೇಮಾವತಿ ಬಗೆಗಿನ ಸಮಗ್ರ ಹೋರಾಟದ ಸ್ವರೂಪವನ್ನು ಅವರ ಒಡನಾಡಿ ಮತ್ತು ತುಮಕೂರು ಜಿಲ್ಲಾ ಪಂಚಾಯತ್ ಪ್ರಾಮಾಣಿಕ ಜನ ಪ್ರತಿನಿಧಿ ಶ್ರೀ ವೈ.ಹೆಚ್. ಹುಚ್ಚಯ್ಯ ಅವರು ವಿವರವಾಗಿ ಹೇಮಾವತಿ ಅಭಿನಂದನಾ ಸಂಪುಟದಲ್ಲಿ ಬಹು ಚೆನ್ನಾಗಿ ವಿವರಿಸಿದ್ದಾರೆ. ಹಗಲಿರುಳೂ ರಾಮಯ್ಯನವರ ಹೋರಾಟದಲ್ಲಿ ಜೊತೆಗಾರನಾಗಿ ಪಾಲ್ಗೊಂಡ ಶ್ರಿ ಹುಚ್ಚಯ್ಯ ಅವರ ಮಾತುಗಳು ರಾಮಯ್ಯನವರ ಹೋರಾಟದ ಸ್ವರೂಪವನ್ನು ಯಾವುದೇ ವೈಭವೀಕರಣವಿಲ್ಲದೆ ಈ ಮುಂದಿನಂತೆ ವಿವರಿಸುತ್ತವೆ:

"ವೈ.ಕೆ.ಆರ್. ಹೇಮಾವತಿ ನೀರಿಗಾಗಿ ಅನೇಕ ರೀತಿಯ ಹೋರಾಟವನ್ನು ಮಾಡಿದರು. ಅವರ ಹೋರಾಟದಲ್ಲಿ ಹಲವು ಹಂತಗಳಿರುತ್ತಿದ್ದವು. ಮೊದಲಿಗೆ ಒತ್ತಾಯಿಸುವುದು, ನಂತರ ಎಚ್ಚರಿಸುವುದು. ಅದರಿಂದ ಏನೂ ಪ್ರಯೋಜನವಾಗದಿದ್ದಾಗ ಸತ್ಯಾಗ್ರಹ ಕೈಗೊಳ್ಳುವುದು. ಪಾದಯಾತ್ರೆಯ ಮೂಲಕ ಜನರನ್ನು ಸಂಘಟಿಸಿ ಸತ್ಯಾಗ್ರಹವನ್ನು ಕೈಗೊಳ್ಳುತ್ತಿದ್ದ ರೀತಿಯನ್ನು ನೋಡಿದಾಗ ಗಾಂಧೀಜಿಯ ಸ್ವಾತಂತ್ರ್ಯಪೂರ್ವದ ಸತ್ಯಾಗ್ರಹಗಳು ನೆನಪಿಗೆ ಬರುತ್ತವೆ." ಅನೇಕ ಬಾರಿ ಬಂಧನಕ್ಕೊಳಗಾಗಿ ಜೈಲುವಾಸವನ್ನು ಅನುಭವಿಸಿರುವ ರಾಮಯ್ಯನವರು ಮಹಾ ಹಠವಾದಿಯಾಗಿ ಯಾರ ಮಾತಿಗೂ ಕಿಮ್ಮತ್ತು ಕೊಡದೆ ಆತಂಕದ ಸ್ಥಿತಿಗೂ ತಲುಪಿಬಿಡುತ್ತಿದ್ದರು. ಜಾಮೀನು ಪಡೆಯುವ ಯಾವ ಗೋಜಿಗೂ ಹೋಗದೆ ಜೈಲುವಾಸವನ್ನು ಆದ್ಯತೆಯನ್ನಾಗಿ ಪರಿಗಣಿಸುತ್ತಿದ್ದರು. ಇಂಥ ಪ್ರಕರಣಗಳು ವಿಧಾನಸಭೆಯಲ್ಲಿ ಪ್ರಸ್ತಾಪವಾಗಿ ಕೋಲಾಹಲಕ್ಕೆ ಕಾರಣವಾದದ್ದೂ ಉಂಟು. ಅಂಥ ಒಂದು ಪ್ರಸಂಗದ ಪತ್ರಿಕಾ ವರದಿಗಳನ್ನು ಇಲ್ಲಿ ಉಲ್ಲೇಖಿಸಬಯಸುತ್ತೇನೆ.

"ಹೇಮಾವತಿ ನದಿ ನೀರಿನ ಯೋಜನೆಯನ್ನು ಆಗ್ರಹಿಸಿ ಕಾರಾಗೃಹದಲ್ಲಿರುವ ಸಮಾಜವಾದಿ ಜನತಾಪಕ್ಷದ ನಾಯಕ ವೈ.ಕೆ. ರಾಮಯ್ಯ ಅವರ ಪ್ರಕರಣ ಇಂದು ವಿಧಾನ ಪರಿಷತ್ತಿನಲ್ಲಿ ಪ್ರಸ್ತಾಪಗೊಂಡು, ಕಾಂಗ್ರೆಸ್ ಸದಸ್ಯರಿಗೂ ಹಾಗೂ ಜನತಾದಳದವರ ಮಧ್ಯೆ ಆಕ್ರೋಶಕ್ಕೆ ಕಾರಣವಾಯಿತು.

ಕಾಂಗ್ರೆಸ್ಸಿನ ಕೆ. ಮಲ್ಲಣ್ಣ ಶೂನ್ಯ ವೇಳೆಯಲ್ಲಿ ಈ ವಿಷಯ ವಿವರಿಸುತ್ತ, ತುಮಕೂರು ನಗರಕ್ಕೆ ಹೇಮಾವತಿ ನದಿ ನೀರನ್ನು ಕೊಡಿರಿ ಎಂದು ಆಗ್ರಹಿಸಿ ಸತ್ಯಾಗ್ರಹ ಮಾಡಿದ್ದು ತಪ್ಪೇ? ಅವರನ್ನು ಬಂಧಿಸಿ ಜೈಲಿಗೆ ಹಾಕಬೇಕೇ? ಎಂದು ಪ್ರಶ್ನಿಸಿದರು. ದೇವೇಗೌಡರ ಸರ್ಕಾರ ತುಮಕೂರಿಗೆ ಅನ್ಯಾಯ ಮಾಡುತ್ತಿದೆ ಎಂದರು. ಇದಕ್ಕೆ ಪೂರಕವಾಗಿ ಕಾಂಗ್ರೆಸ್ಸಿನ ಭೀಮಣ್ಣ ಖಂಡ್ರೆ ಹಾಗೂ ಎಚ್.ಕೆ. ಪಾಟೀಲ್ ಅವರು, ನಮ್ಮ ಕಾಂಗ್ರೆಸ್ ಸರ್ಕಾರ ಈ ಬಗ್ಗೆ ಪ್ರಯತ್ನ ಮಾಡಿತ್ತು. ಉದ್ದೇಶಪೂರ್ವಕವಾಗಿ ಈ ಯೋಜನೆಗೆ ಹಣ ನೀಡದೇ ರಾಮಯ್ಯ ಅವರನ್ನು ಬಂಧಿಸಿತು ಎಂದು ದೂರಿದರು.

ಕಾಂಗ್ರೆಸ್ಸಿನ ಇನ್ನೊಬ್ಬ ಸದಸ್ಯ ಮರಿಲಿಂಗೇಗೌಡ ಅವರು, ನೀರಾವರಿಗೆ ೩೦೦ ಕೋಟಿ ರೂ. ಹಣ ಕೊಡಲಿಲ್ಲ ಎಂದು ಆಪಾದಿಸಿ ನಿಮ್ಮ ಮುಖ್ಯಮಂತ್ರಿಗಳು ಆಗ ಸರ್ಕಾರದಿಂದ ಹೊರಗೆ ಬಂದರು. ಆದರೆ ಈಗ ರಾಮಯ್ಯ ಅವರನ್ನು ಬಂಧಿಸಿ ಜೈಲಿಗೆ ಕಳಿಸುವುದೇ ಎಂದು ಚುಚ್ಚಿದರು.

ಕೆ.ಪಿ.ಸಿ.ಸಿ.ಯ ಸುದರ್ಶನ್. ಬಿಜೆಪಿಯ ರಾಮಚಂದ್ರೇಗೌಡ ಅವರು, ರಾಮಯ್ಯ ಅವರ ಮನ ಒಲಿಸಿ. ಚರ್ಚಿಸಿ ಅವರನ್ನು ಜೈಲಿನಿಂದ ಹೊರಗೆ ಬರುವಂತೆ ಮಾಡಬೇಕೆಂದರು. ಕೆ. ಮಲ್ಲಣ್ಣ ಮತ್ತು ಎಚ್.ಕೆ. ಪಾಟೀಲರು, ರಾಮಯ್ಯ ಅವರ ಮೇಲೆ ಹಾಕಿದ ಕೇಸ್ ವಾಪಸು ತೆಗೆದುಕೊಳ್ಳಬೇಕೆಂದರು."

"ಹೇಮಾವತಿ ನಾಲಾ ಕಾಮಗಾರಿಯನ್ನು ಮುಂದುವರಿಸುವಂತೆ ಆಗ್ರಹಿಸಿ ಸತ್ಯಾಗ್ರಹ ನಡೆಸಿದ ಆರೋಪದ ಮೇಲೆ ಈಗ ನ್ಯಾಯಾಂಗ ಬಂಧನದಲ್ಲಿರುವ ಮಾಜಿ ಸಚಿವ ವೈ.ಕೆ. ರಾಮಯ್ಯ ಅವರ ವಿರುದ್ಧ ಹೂಡಿರುವ ಮೊಕದ್ದಮೆಗಳನ್ನು ಸರ್ಕಾರ ಹಿಂತೆಗೆದುಕೊಂಡಿದೆ ಎಂದು ಗೃಹ ಸಚಿವ ಪಿ.ಜಿ.ಆರ್. ಸಿಂಧ್ಯಾ ಪ್ರಕಟಿಸಿದರು."

ವಿಧಾನಸಭೆಯಲ್ಲಿಂದು ಸಂಜೆ ರಾಜ್ಯಪಾಲರು ಭಾಷಣಕ್ಕೆ ವಂದನೆ ಸಲ್ಲಿಸುವ ನಿರ್ಣಯದ ಮೇಲೆ ಚರ್ಚೆ ನಡೆದಿದ್ದ ಸಂದರ್ಭದಲ್ಲಿ ಮಧ್ಯ ಪ್ರವೇಶಿಸಿ ಈ ಹೇಳಿಕೆ ನೀಡಿದ ಅವರು, ಸತ್ಯಾಗ್ರಹ ನಿಲ್ಲಿಸುವಂತೆ ರಾಮಯ್ಯ ಅವರನ್ನು ಈ ಮೂಲಕ ವಿನಂತಿಸುವುದಾಗಿ ತಿಳಿಸಿದರು.

ಕನ್ನಡ ಚಳುವಳಿಯ ವಾಟಾಳ್ ನಾಗರಾಜ್ ಅವರ ಪ್ರಸ್ತಾಪಕ್ಕೆ ಉತ್ತರಿಸಿದ ಗೃಹಮಂತ್ರಿ ಸಿಂಧ್ಯಾ ಅವರು, ರಾಮಯ್ಯ ಅವರನ್ನು ಬಂಧನದಿಂದ ಬಿಡುಗಡೆ ಮಾಡಲು ಅಗತ್ಯವಾದ ಎಲ್ಲ ಕ್ರಮಗಳನ್ನು ಕೈಗೊಳ್ಳುವುದಾಗಿ ಹೇಳಿದರು.

ರಾಮಯ್ಯ ಅವರೇ ಸ್ವತಃ ನ್ಯಾಯಾಲಯಕ್ಕೆ ಮುಚ್ಚಳಿಕೆ ನೀಡಿ ಬಿಡುಗಡೆ ಆಗಬಹುದು ಎಂಬ ಸಚಿವರ ಹೇಳಿಕೆಯನ್ನು ಹಲವಾರು ಸದಸ್ಯರು ಒಪ್ಪದೆ, ಸರ್ಕಾರವೇ ರಾಮಯ್ಯ ಅವರನ್ನು ಬಿಡುಗಡೆ ಮಾಡಲು ಮುಂದಾಗಬೇಕು ಎಂದು ಕೋರಿದರು.

"ಮಾಜಿ ಮುಖ್ಯಮಂತ್ರಿ ಬಂಗಾರಪ್ಪ ಹಾಗೂ ಮಾಜಿ ಮಂತ್ರಿಗಳಾದ ಕಾಗೋಡು ತಿಮ್ಮಪ್ಪ ಮತ್ತು ಕೆ.ಎನ್. ನಾಗೇಗೌಡ ಮತ್ತಿತರ ಒತ್ತಾಯಕ್ಕೆ ಮಣಿದ ಸಚಿವ ಸಿಂಧ್ಯಾ ಅವರು, ಹೇಮಾವತಿ ನದಿ ನೀರಿಗೆ ಸಂಬಂಧಿಸಿದಂತೆ ಹೋರಾಟ ಮಾಡಿ ಜೈಲಿಗೆ ಹೋಗಿರುವ ರಾಮಯ್ಯ ಅವರ ಬಿಡುಗಡೆ ಕ್ರಮ ಕೈಗೊಳ್ಳಲಾಗುವುದು ಎಂದರು." (ಸಂಯುಕ್ತ ಕರ್ನಾಟಕ: ೬.೬.೧೯೯೫)

"ತುಮಕೂರು ಜಿಲ್ಲೆಗೆ ಹೇಮಾವತಿ ನೀರು ಹರಿಯಲು ಎಂತಹ ತ್ಯಾಗ, ಬಲಿದಾನಕ್ಕೂ ಸಿದ್ಧನೆಂದು ಹೇಮಾವತಿ ನಾಲಾ ವಲಯ ಅಚ್ಚುಕಟ್ಟುದಾರರ ವೇದಿಕೆ ಅಧ್ಯಕ್ಷ ವೈ.ಕೆ.ರಾಮಯ್ಯ ತಿಳಿಸಿದರು. ಅವರು ಸಿ.ಎಸ್. ಪುರ ಗ್ರಾಮದ ಸಂತೆ ಮೈದಾನದಲ್ಲಿ ಅಚ್ಚುಕಟ್ಟುದಾರರ ವೇದಿಕೆ ಏರ್ಪಡಿಸಿದ್ದ, ತುಮಕೂರು, ಕುಣಿಗಲ್ ಮಾರ್ಗದ ಹೇಮಾವತಿ ಮುಖ್ಯ ನಾಲಾ ಕಾಮಗಾರಿ ಆರಂಭಿಸುವುದಕ್ಕೆ ಒತ್ತಾಯಿಸುವ ಪ್ರತಿಭಟನಾ ಸಭೆಯನ್ನು ಉದ್ದೇಶಿಸಿ ಮಾತನಾಡುತ್ತಿದ್ದರು."

ಸರಕಾರ ನೀಡಿದ ಗಡುವಿನಂತೆ ತುಮಕೂರು, ಕುಣಿಗಲ್ ಮಾರ್ಗವನ್ನು ಇನ್ನು ೧೫ ತಿಂಗಳಲ್ಲಿ ಪೂರ್ಣಗೊಳಿಸಬೇಕಾಗಿದ್ದು ಅವಧಿ ತೀರುತ್ತಾ ಬಂದಿದ್ದರೂ, ಕಾಮಗಾರಿ ೧೮ಆರಂಭವಾಗಿಲ್ಲವೆಂದು ತಿಳಿಸಿದ ಅವರು, ಅಧಿಕಾರಕ್ಕಾಗಿ ಏನೂ ಆಸೆ ಪಡದೆ ರೈತರ ಹಿತಕ್ಕಾಗಿ ಶ್ರಮಿಸುವೆನೆಂದರು.

ರಾಜ್ಯ ರಾಜಕಾರಣದಲ್ಲಿ ಯಾರ ಬೆಂಬಲವಿಲ್ಲದೆ ಜನಪ್ರಿಯತೆ ಹೊಂದುತ್ತಿರುವ ನನ್ನನ್ನು ಜಿಲ್ಲೆಯ ರಾಜಕಾರಣಿಗಳು ತೇಜೋವಧೆ ಮಾಡಲೆತ್ನಿಸುತ್ತಿದ್ದು, ಯಾರ ಬೆದರಿಕೆಗೂ ಜಗ್ಗದೆ ನನ್ನ ಹೋರಾಟದ ಫಲವಾಗಿ ಜಿಲ್ಲೆಗೆ ಹೇಮಾವತಿ ನೀರು ಹರಿದಿರುವ ಬಗ್ಗೆ ಸಂತೃಪ್ತಿಯಿದೆಯೆಂದು ಭಾವುಕರಾಗಿ ನುಡಿದರು.

ಹೇಮಾವತಿಗಾಗಿ ಪ್ರಧಾನಿ ದೇವೇಗೌಡರು ನನ್ನ ಮಧ್ಯೆ ವಿರಸ ಮೂಡಿದ್ದು, ಅದರಿಂದ ನನಗೇನೂ ನಷ್ಟವಾಗಿಲ್ಲವೆಂದು ತಿಳಿಸಿದ ರಾಮಯ್ಯ, ಹನಿ ನೀರು ಹರಿದು ರೈತನ ಹೃದಯ ತಂಪಾಗುವುದಾದರೆ ನಾನೇ ಧನ್ಯ ಎಂದರು.

ಜಿಲ್ಲಾ ಪರಿಷತ್ ಸದಸ್ಯರುಗಳಾದ ವೈ.ಹೆಚ್. ಹುಚ್ಚಯ್ಯ, ಎಂ. ದಕ್ಷಿಣಾಮೂರ್ತಿ ಮಾತನಾಡಿ, ಹೋರಾಟಗಾರ ವೈ.ಕೆ. ರಾಮಯ್ಯನವರ ಜೊತೆಗೆ ಸದಾ ರೈತರ ಬೆಂಬಲವಿದ್ದು ಪಕ್ಷಭೇದ ಮರೆತು ಅವರ ಬೆಂಬಲಕ್ಕೆ ನಿಲ್ಲಬೇಕೆಂದು ನೆರೆದವರಲ್ಲಿ ಮನವಿ ಮಾಡಿದರು. (ಪ್ರಜಾವಾಣಿ : ೧೪.೯.೧೯೯೬) ವೈ.ಕೆ.ಆರ್. ಅವರ ಅವಿರತ ಹೋರಾಟದ ನಂತರ ಅಂತೂ ಹೇಮಾವತಿಯ ಎಡದಂಡೆಯ ನೀರು ತುಮಕೂರಿಗೆ ಪ್ರವೇಶ ಮಾಡಿತು. ಆ ಸಂದರ್ಭದ ಮತ್ತೊಂದು ವರದಿಯನ್ನು ಇಲ್ಲಿ ನೀಡಲಾಗಿದೆ.

"ಎರಡು ದಿನಗಳ ಹಿಂದೆ ಹೇಮಾವತಿ ಎಡದಂಡೆಯ ಮುಖ್ಯ ಕಾಲುವೆಯ ಬಾಗಿಲನ್ನೇ ಸ್ಫೋಟಿಸುತ್ತೇನೆ ಎಂದು ರೋಷತಪ್ತರಾಗಿ ವೈ.ಕೆ. ರಾಮಯ್ಯ ಅವರ ನೇತೃತ್ವದಲ್ಲಿ ಹೊರಟು ನಿಂತಿದ್ದ ತುರುವೇಕೆರೆಯ ರೈತರ ಮುಖದಲ್ಲಿ ಇಂದು ಪ್ರಸನ್ನ ಭಾವ. ಶಿಂಷಾ ಕೊಳ್ಳಕ್ಕೆ ನೀರು ಬಿಡಲಾಗಿದೆ ಎಂಬ ಸುದ್ದಿ ಪತ್ರಿಕೆಗಳಿಂದ ತಿಳಿದ ಕ್ಷಣದಿಂದ ಜನ ಹೇಮಾವತಿಯ ಸ್ವಾಗತಕ್ಕೆ ಸಜ್ಜಾಗಿದ್ದಾರೆ.

ಹಾಸನ ಜಿಲ್ಲೆಯಲ್ಲಿರುವ ಹೇಮಾವತಿ ಎಡದಂಡೆಯ ಮುಖ್ಯ ಕಾಲುವೆ ಪ್ರದೇಶಕ್ಕೆ ಖುದ್ದಾಗಿ ಭೇಟಿ ನೀಡಿ ಬಿಡಲಾಗುತ್ತಿರುವ ನೀರನ್ನು ಗಮನಿಸಿದರೆ ರೈತರ ಮುಖದಲ್ಲಿನ ಈ ಸಂತಸ ಬಹಳ ದಿನ ಇರಲಾರದು ಎಂಬ ಗುಮಾನಿ ಮೂಡುತ್ತದೆ. ನೀರು ಬಿಡಲಾಗಿದೆಯೇ ಎಂಬುದನ್ನು ಖುದ್ದಾಗಿ ಗಮನಿಸಲು ಅಲ್ಲಿಗೇ ಬಂದಿದ್ದ ವೈ.ಕೆ. ರಾಮಯ್ಯ ಅವರೂ ಈ ಸಂಶಯಕ್ಕೆ ಸಹಮತ ವ್ಯಕ್ತಪಡಿಸಿದರು.

ಕೊಟ್ಟ ಆಶ್ವಾಸನೆಯಂತೆ ನೀರೇನೋ ಬಿಡಲಾಗಿದೆ. ಆದರೆ ಬಿಡುತ್ತಿರುವ ನೀರಿನ ಪ್ರಮಾಣ ಗಮನಿಸಿದರೆ ನೀರು ಮಾರ್ಕೋನಹಳ್ಳಿ ಕೆರೆ ತಲುಪಲು ಕನಿಷ್ಠ ಒಂದೂವರೆ ತಿಂಗಳು ಹಿಡಿಯಬಹುದು. ಮುಖ್ಯಮಂತ್ರಿ ದೇವೇಗೌಡರು ಬೆಂಗಳೂರಿನಲ್ಲಿ ಏನೇ ಹೇಳಬಹುದು. ಆದರೆ ಮುಖ್ಯ ಕಾಲುವೆಯಿಂದ ಬಾಗೂರು ನವಿಲೆ ಸುರಂಗ ಕಾಲುವೆಗೆ ನೀರು ಬಿಡುವ ಗೇಟು ತೆಗೆಯುವ ಕಾಳೇಗೌಡ ಮಾತ್ರ ನಿರ್ಲಿಪ್ತ. ಎಷ್ಟು ನೀರು ಬಿಟ್ಟಿದ್ದೀಯಪ್ಪಾ? ಎಂದರೆ 'ಒಂದೂವರೆ ಅಡಿ ಬಿಟ್ಟಿದ್ದೀನಿ ಸಾರ್' ಎನ್ನುತ್ತಾನೆ ಆತ. ಅಂದರೆ ಎಷ್ಟು ಕ್ಯೂಸೆಕ್ಸ್? ಎಂದು ಕೇಳಿದರೆ ಅದೆಲ್ಲಾ ಗೊತ್ತಿಲ್ಲಾ ಸಾರ್ ಎನ್ನುತ್ತಾನೆ ನಿದ್ದೆಗಣ್ಣು ಉಜ್ಜುತ್ತಾ.

ಹೇಮಾವತಿ ಯೋಜನೆಯಲ್ಲಿನ ರಾಜಕೀಯದ ಪ್ರತ್ಯಕ್ಷದರ್ಶನವಾಗಬೇಕಾದರೆ ಅದರ ಎಡದಂಡೆಯ ಮುಖ್ಯ ಕಾಲುವೆಯ ದಡದಲ್ಲಿ ಹೋಗಿ ನಿಲ್ಲಬೇಕು. ಹೇಮಾವತಿ ಜಲಾಶಯದಿಂದ ಬಲದಂಡೆ ಮತ್ತು ಎಡದಂಡೆಯ ಎರಡು ಕಾಲುವೆಗಳಿಂದ ನೀರು ಹೊರ ಹರಿಯುತ್ತದೆ. ಬಲದಂಡೆ ಕಾಲುವೆ ಹಾಸನದ ಹೊಳೆನರಸೀಪುರ ಹಾಗೂ ಮೈಸೂರಿನ ಕೆ.ಆರ್. ನಗರದ ಜಮೀನಿಗೆ ನೀರುಣಿಸಿದರೆ, ಎಡದಂಡೆಯ ಮುಖ್ಯ ಕಾಲುವೆ ಎರಡು ಹೋಳಾಗಿ ಮೊದಲನೆಯದು ಸಾಹುಕಾರ್ ಚೆನ್ನಯ್ಯ ಕಾಲುವೆಯಿಂದ ಕೆ.ಆರ್.ಪೇಟೆ, ನಾಗಮಂಗಲಗಳ ರೈತರ ಜಮೀನಿಗೆ ನೀರು ಹರಿಯುತ್ತದೆ. ಎರಡನೆಯ ಬಾಗೂರು ನವಿಲೆ ಸುರಂಗ ಕಾಲುವೆಯ ಮೂಲಕ ತುಮಕೂರಿಗೆ ನೀರು ಹರಿಯುತ್ತದೆ.

ಇತ್ತೀಚೆಗೆ ಹೇಮಾವತಿ ಯೋಜನೆ ಪ್ರದೇಶಕ್ಕೆ ನೀರು ಬಿಡಬೇಕೆಂಬ ಸರಕಾರದ ನಿರ್ಧಾರದಂತೆ ಬಲದಂಡೆಯ ಮುಖ್ಯ ಕಾಲುವೆ ಮತ್ತು ಎಡದಂಡೆಯ ಸಾಹುಕಾರ್ ಚೆನ್ನಯ್ಯ ಕಾಲುವೆಯಲ್ಲಿ

ನೀರು ಹರಿಯುತ್ತಲೇ ಇದೆ. ಅದರ ಅಚ್ಚುಕಟ್ಟು ಪ್ರದೇಶದ ರೈತರು ಅದರ ಫಲವನ್ನೂ ಅನುಭವಿಸುತ್ತಿದ್ದಾರೆ. ಸಾಹುಕಾರ್ ಚೆನ್ನಯ್ಯ ಕಾಲುವೆಯ ಪಕ್ಕದಲ್ಲಿಯೇ ಇರುವ ತುಮಕೂರಿಗೆ ನೀರು ಹರಿಸುವ ಬಾಗೂರು ನವಿಲೆ ಸುರಂಗ ಕಾಲುವೆಯಲ್ಲಿ ಮಾತ್ರ ನೀರು ಹರಿದಿಲ್ಲ. ಅದಕ್ಕೆ ನೀರು ಬಿಡುವ ಕಬ್ಬಿಣದ ಗೇಟನ್ನು ಮಾತ್ರ ನಿನ್ನೆ ಮಧ್ಯಾಹ್ನದವರೆಗೆ ಭದ್ರವಾಗಿ ಮುಚ್ಚಿಡಲಾಗಿತ್ತು.

ತುರುವೇಕೆರೆಯ ರೈತರ ಮಾತಿನಲ್ಲಿಯೇ ಹೇಳುವುದಾದರೆ, ತುಮಕೂರು ನಾಲಾಕ್ಕೆ ನೀರು ಬಿಡುವ ಬಾಗಿಲಿಗೆ ಅಡ್ಡವಾಗಿರುವುದು ಕಬ್ಬಿಣದ ಗೇಟಲ್ಲ, ಮುಖ್ಯಮಂತ್ರಿ ದೇವೇಗೌಡರ ಕಬ್ಬಿಣಕ್ಕಿಂತ ಕಟುವಾಗಿರುವ ಮನಸ್ಸು, ರೈತರ ಪ್ರತಿಭಟನೆಗೆ ಕೊನೆಗೂ ಆ ಮನಸ್ಸು ಕರಗಿ ನಾಲೆಯಲ್ಲಿ ನೀರು ಹರಿದಿದೆ.

ಬಾಗೂರು-ನವಿಲೆ ಸುರಂಗ ಮಾರ್ಗದ ಮೂಲಕ ದಾಟಿಬರುವ ನೀರು ತುಮಕೂರು ಮತ್ತು ನಾಗಮಂಗಲ ವಿಭಾಗದ ನಾಲಾಗಳಲ್ಲಿ ಹರಿಯಬೇಕು. ಸುರಂಗ ಕಾಲುವೆಯನ್ನು ವಿಭಾಗಿಸುವವರೆಗೇನೋ ನಿನ್ನೆಯಿಂದ ನೀರು ಹರಿಯುತ್ತಿದೆ. ಆದರೆ ಅಲ್ಲಿರುವ ಮತ್ತೊಂದು ಕಬ್ಬಿಣದ ಗೇಟು ಇನ್ನೂ ಸರಿದಿಲ್ಲ. ಈಗ ತುಮಕೂರು ಜಿಲ್ಲೆಗೆ ಹರಿಯುವ ನೀರು ಅದೇ ಸ್ಥಳದಲ್ಲಿ ಕಾಲುವೆಯ ದುರಸ್ತಿಯಂತಹ ತುರ್ತು ಸಂದರ್ಭದಲ್ಲಿ ನೀರು ಹೊರಬಿಡಲು ನಿರ್ಮಿಸಲಾದ ಎಸ್ಕೇಪ್ ಗೇಟಿನ ಮೂಲಕ. ಈ ನೀರು ಗಂಗಾಘಟ್ಟ ಕೆರೆ ಹಾದು ಮೊದಲು ತಲುಪುವುದು ನೊಣವಿನಕೆರೆಗೆ. ಅಲ್ಲಿಂದ ಮಲ್ಲಾಘಟ್ಟ, ತುರುವೇಕೆರೆಗಳ ಮೂಲಕ ಹಾದು ಮಾರ್ಕೋನಹಳ್ಳಿ ಕೆರೆಗೆ ನೀರು ಹೋಗಬೇಕು. ಕಳೆದ ವಾರ ಇದೇ ಸಮಯದಲ್ಲಿ ಸರ್ಕಾರ ೧,೦೦೦ ಕುಸ್ಸೆಕ್ಸ್ ನೀರನ್ನು ಬಿಟ್ಟಿದೆ. ಆದರೂ ಮಾರ್ಕೋನಹಳ್ಳಿ ಕೆರೆ ತುಂಬಲು ತಿಂಗಳಿಗಿಂತ ಹೆಚ್ಚಿನ ಅವಧಿ ಬೇಕಾಗಿತ್ತು. ಈ ಬಾರಿ ಕೆರೆಗಳಲ್ಲಿ ಅಲ್ಪಸ್ವಲ್ಪ ನೀರಿದ್ದರೂ ಈಗಿನ ಪ್ರಮಾಣದಲ್ಲಿ (೨೦೦ ರಿಂದ ೨೫೦ ಕ್ಯುಸೆಕ್ಸ್) ನೀರು ಹರಿದರೆ ಕನಿಷ್ಠ ಎರಡು ತಿಂಗಳು ಬೇಕಾಗಬಹುದು.

ತುಮಕೂರು ವಿಭಾಗದ ಟಿ. ಸುಬ್ರಹ್ಮಣ್ಯ ನಾಲೆ ಪ್ರಾರಂಭವಾಗುವ ಸ್ಥಳದಿಂದ ೩೦ ಕಿ.ಮೀ.ವರೆಗೆ ಹಾದು ಬಂದವರಿಗೆ ನಾಲಾ ಕಾಮಗಾರಿ ಪೂರ್ಣವಾಗಿರುವುದು ಸ್ಪಷ್ಟವಾಗುತ್ತದೆ. ೩೦ ಕಿ.ಮೀ.ನಲ್ಲಿರುವ ಈಚನೂರು ವರೆಗೆ ನೀರು ಬಿಡಲು ಸದ್ಯಕ್ಕೆ ಅಡ್ಡಿಗಳೇನಿಲ್ಲ. ಅಲ್ಲಿಯವರೆಗೆ ನೀರು ಹರಿದರೆ ತಿಪಟೂರು ಪಟ್ಟಣಕ್ಕೆ ಕುಡಿಯುವ ನೀರು ಪೂರೈಸುವ ಯೋಜನೆಯನ್ನೂ ಪೂರ್ಣಗೊಳಿಸಬಹುದು. (ಅಲ್ಲಿನ್ನೂ ಕೊಳವೆಗಳನ್ನು ಹಾಕುವ ಕೆಲಸವೇ ಪ್ರಾರಂಭವಾಗಿಲ್ಲವೆಂಬುದು ಬೇರೆ ಮಾತು.) ಬಹುಶಃ ಇದಕ್ಕಾಗಿ ಸದ್ಯದಲ್ಲಿಯೇ ರೈತರು ಮತ್ತೊಂದು ಹೋರಾಟಕ್ಕೆ ಸಜ್ಜಾಗಬೇಕೇನೋ" (ಪ್ರಜಾವಾಣಿ : ೭.೯.೧೯೯೫)

ಇದೇ ಸಂದರ್ಭದಲ್ಲಿ ೯.೧.೨೦೦೨ರಂದು ಪ್ರಜಾವಾಣಿಯಲ್ಲಿ ಬರೆದ ಸಂಪಾದಕೀಯ ಕೂಡ ಇಲ್ಲಿ ಉಲ್ಲೇಖಾರ್ಹ. "ಕೊನೆಗೂ ತುಮಕೂರಿನ ಕುಣಿಗಲ್‌ವರೆಗಿನ ಹೇಮಾವತಿ ಮುಖ್ಯ ನಾಲೆಯ ಕಾಮಗಾರಿ ಮುಗಿದಿದೆ. ೭೨ ಕಿ.ಮೀ. ಉದ್ದದ ಈ ನಾಲೆಯ ಮೂಲಕ ೫೦ ಸಾವಿರ ಎಕರೆ ಪ್ರದೇಶಕ್ಕೆ ನೀರಾವರಿ ಒದಗಿಸಲು ಮೊದಲು ನಿರ್ಧರಿಸಿದ್ದರೂ ಈಗ ಆರಂಭಿಕ ನಾಲೆಯನ್ನು ವಿಸ್ತರಿಸುವ ಹಾಗೂ ಅಗಲಗೊಳಿಸುವ ಮೂಲಕ ಮೂರು ಜಿಲ್ಲೆಗಳ ಸುಮಾರು ೫ ಲಕ್ಷ ಎಕರೆ ಪ್ರದೇಶಕ್ಕೆ ನೀರಾವರಿ ಒದಗಿಸಲು ನಿರ್ಧರಿಸಿರುವುದು ನಿಜಕ್ಕೂ ಸ್ವಾಗತಾರ್ಹ. ಆರಂಭದಲ್ಲಿ ಶಿಂಷಾ ಕೊಳ್ಳಕ್ಕೆ ನೀರು ಹರಿಸಲೆಂದು ಆರಂಭವಾದ ಕಾಮಗಾರಿ, ೧೯೬೪ರಲ್ಲಿ ಈ ಉದ್ದೇಶ ಸಾಧನೆಯಾದ ಬಳಿಕ ಹೊಸ ದಾರಿ ಹಿಡಿದಿದ್ದು ಸರಕಾರದ ಹಾಗೂ ಜನರ ಸಂಕಲ್ಪ ಶಕ್ತಿಗೆ ಸಾಕ್ಷಿ. ರಾಜ್ಯ ಸರಕಾರದ

ಮೇಲೆ ಒತ್ತಡ ಹೇರಿ ಕಾಮಗಾರಿಗೆ ಹೆಚ್ಚುವರಿ ಹಣ ದೊರಕಿಸುವಲ್ಲಿ ಶಾಸಕ ವೈ.ಕೆ. ರಾಮಯ್ಯ ಅತ್ಯಂತ ಪ್ರಮುಖ ಪಾತ್ರ ವಹಿಸಿದ್ದು ಶ್ಲಾಘನೀಯ. ನೀರಾವರಿ ಯೋಜನೆಗಳಿಂದ ವಂಚಿತವಾಗಿರುವ ಬೇರೆ ಜಿಲ್ಲೆಗಳ ಶಾಸಕರೂ ಇವರಿಂದ ಕಲಿಯಬೇಕಾದ ಪಾಠಗಳಿವೆ.

ಯೋಜನೆಯ ಕುರಿತು ಪತ್ರಿಕಾಗೋಷ್ಠಿಯಲ್ಲಿ ವಿವರ ನೀಡಿದ ಶಾಸಕ ವೈ.ಕೆ.ರಾಮಯ್ಯ ಅವರು, ಇದೇ ವೇಳೆ ರಾಜಕೀಯ ಮತ್ತು ಅಭಿವೃದ್ಧಿ ಕಾರ್ಯಗಳ ಕುರಿತು ಮಾಡಿರುವ ವಾದ ಮಾತ್ರ ಅಸಂಗತ ಎನ್ನದೇ ವಿಧಿಯಿಲ್ಲ. ಕುಣಿಗಲ್ ಕೆರೆಗೆ ಹೇಮಾವತಿ ನೀರು ಹರಿಸುವ ಕಾಮಗಾರಿ ಮುಗಿಯುವವರೆಗೆ ರಾಜಕೀಯದಿಂದ ದೂರ ಇದ್ದೆ, ಪೂರ್ಣಾವಧಿ ರಾಜಕೀಯವನ್ನೇ ಮಾಡುವ ಜನಪ್ರತಿನಿಧಿ ತನ್ನ ಕ್ಷೇತ್ರದಲ್ಲಿ ಅಭಿವೃದಿ ಕಾರ್ಯಗಳನ್ನು ಸಮರ್ಪಕವಾಗಿ ಮಾಡಲು ಆಗುವುದಿಲ್ಲ ಎಂದು ರಾಮಯ್ಯ ಅವರು ಹೇಳಿರುವುದು ತುಮಕೂರು ಮಾತ್ರವಲ್ಲ ಇತರ ಹಲವು ಜಿಲ್ಲೆಗಳ ರಾಜಕೀಯ ತಲುಪಿರುವ ಅಧಃಪತನಕ್ಕೂ ಸಾಕ್ಷಿಯಾಗಿದೆ. ಅಭಿವೃದ್ಧಿ ಕಾರ್ಯ ಬೇರೆ, ರಾಜಕೀಯ ಬೇರೆ ಎಂಬ ಕಲ್ಪನೆಯೇ ಮೂಲತಃ ತಪ್ಪು. ಬಹಳಷ್ಟು ಕಡೆ ಶಾಸಕರಾದವರು ಚಿಲ್ಲರೆ ವರ್ಗಾವಣೆ, ಬೆಂಬಲಿಗರ ನೇಮಕಾತಿ ಮುಂತಾದ ರಾಜಕೀಯ ಮೇಲಾಟಗಳಲ್ಲಿ ಮಾತ್ರ ನಿರತರಾಗಿದ್ದ ರಿಂದಲೇ ಈ ತಪ್ಪು ಕಲ್ಪನೆ ಉಂಟಾಗಿದೆ. ರಾಮಯ್ಯ ಅವರು ಈಗ ಹೇಮಾವತಿ ಕಾಮಗಾರಿಗಾಗಿ ನಡೆಸಿದ ಭಗೀರಥ ಯತ್ನವೇ ತಮ್ಮ ರಾಜಕೀಯ ಎಂದು ತಿಳಿದು ಕೊಳ್ಳಬೇಕು. ಅವರು ಹಾಕಿರುವ ರಾಜಕೀಯ ರಜೆ ಹೇಗೆಯೇ ಮುಂದುವರಿದು ಜಿಲ್ಲೆಗೆ ಇನ್ನಷ್ಟು ಅಭಿವೃದ್ಧಿ ಕೆಲಸಗಳು ನಡೆಯಲಿ ಎನ್ನುವುದು ಅಲ್ಲಿನ ಮತದಾರರ ಅಭಿಲಾಷೆ ಕೂಡಾ. ಅಭಿವೃದ್ಧಿ ಕೆಲಸಗಳನ್ನೇ ರಾಜಕೀಯ ಎಂದು ಶಾಸಕರು ತಿಳಿದುಕೊಂಡರೆ, ಬಹಳಷ್ಟು ಕ್ಷೇತ್ರಗಳ ಸಮಸ್ಯೆಗಳು ಹೊವೆತ್ತುವಷ್ಟು ಸರಾಗವಾಗಿ ನಿವಾರಣೆ ಆದಿತು. (ಪ್ರಜಾವಾಣಿ ಸಂಪಾದಕೀಯ : ೯.೧.೨೦೦೧)

ಬಹುಶಃ ಮೇಲ್ಕಂಡ ವಿವರಗಳು ಮತ್ತು ವಿವಿಧ ಹೇಳಿಕೆಗಳು ವೈ.ಕೆ.ಆರ್.ರವರ ಹೇಮಾವತಿ ಹೋರಾಟವನ್ನು ಮತ್ತು ಅವರ ಫಲವನ್ನು ಸಂಕ್ಷಿಪ್ತವಾಗಿ ಮನವರಿಕೆ ಮಾಡಿಕೊಟ್ಟಿವೆ ಎಂದು ಭಾವಿಸುತ್ತೇನೆ.

## ವಿಶಿಷ್ಟ ಕಾರ್ಯಕ್ಷೇತ್ರಗಳು

ಇವತ್ತಿನ ರಾಜಕಾರಣ ಬಹುತೇಕವಾಗಿ ತತ್ಕಾಲ ಸಿಂಧು ತಂತ್ರವನ್ನು ಬಳಸುತ್ತಿದೆ. ಆಯಾ ಸಂದರ್ಭದಲ್ಲಿ ಜನರನ್ನು ಮೆಚ್ಚಿಸಲು ಏನು ಬೇಕೋ ಅಂಥ ಯೋಜನೆಗಳನ್ನು ರೂಪಿಸಿ ಜನತೆಯನ್ನು ವಂಚಿಸುವ ಅಥವಾ ಸಮಾಧಾನಪಡಿಸುವ ಪ್ರವೃತ್ತಿಯೇ ಹೆಚ್ಚು. ಭವಿಷ್ಯದ ತನ್ನ ನಾಡು ಹೇಗಿರಬೇಕು, ಮುಂದಿನ ಪೀಳಿಗೆಗೆ ಯಾವ ಪ್ರಯೋಜನಗಳಾಗಬೇಕು ಎಂಬ ದೂರದೃಷ್ಟಿ ಮತ್ತು ಕನಸುಗಳು ನಮ್ಮ ಅನೇಕ ನಾಯಕರಿಗೆ ಇರುವುದೇ ಇಲ್ಲ. ಬಹುತೇಕ ರಾಜಕಾರಣಿಗಳು ಚುನಾವಣೆಯಲ್ಲಿ ಗೆಲ್ಲುವುದು ಹೇಗೆ ಮತ್ತು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದು ಹೇಗೆ ಎಂಬ ಸ್ವಾರ್ಥದಲ್ಲಿಯೇ ಮುಳುಗಿರುತ್ತಾರೆ. ಅದಕ್ಕಾಗಿ ಅಪ್ರಮಾಣಿಕ ಮುಖವಾಡಗಳನ್ನು ಪ್ರದರ್ಶಿಸುತ್ತಾರೆ. ಇಂಥ ಸಂದರ್ಭದಲ್ಲಿ ರಾಮಯ್ಯನವರು ಮರಳುಗಾಡಿನ ನಡುವಿನ ಓಯಸಿಸ್ ಜಲದಂತೆ ಆಶಾವಾದಿಗಳಾಗಿ ದೂರದೃಷ್ಟಿಯ ಹೋರಾಟ ನಡೆಸಿ ಇಂದು ಇಲ್ಲವಾಗಿದ್ದಾರೆ. ಸರ್ಕಾರದಿಂದ ಮಂಜೂರಾತಿ ಆಗುವ ಯೋಜನೆಗಳನ್ನಷ್ಟೇ ಅನುಷ್ಠಾನಕ್ಕೆ ತರುವುದು ತಮ್ಮ ಕರ್ತವ್ಯ ಎಂದು ಅವರು ಎಂದೂ ಭಾವಿಸಲಿಲ್ಲ. ಸರ್ಕಾರಿ ಯೋಜನೆಗಳನ್ನು ನೂರಕ್ಕೆ ನೂರರಷ್ಟು ಎಲ್ಲರಿಗಿಂತ ಮಿಗಿಲಾಗಿ ತಮ್ಮ ಕ್ಷೇತ್ರದಲ್ಲಿ ಅನುಷ್ಠಾನಗೊಳಿಸುತ್ತಿದ್ದರು ಎಂಬ ಮಾತು ಬೇರೆ.

ಆದರೆ ಅವೆಲ್ಲವನ್ನು ಮೀರಿ ತಮ್ಮ ಕನಸಿನ ನಾಡೊಂದನ್ನು ಸಕಾರಗೊಳಿಸುವ ದೃಢಹೆಜ್ಜೆಯನ್ನು ತಾವು ಆಯ್ಕೆಯಾದ ಕ್ಷೇತ್ರಗಳಲ್ಲಿ ಇಟ್ಟಿದ್ದರು ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳಲೇಬೇಕು. ಅದು ಗಾಂಧೀಜಿ ಮತ್ತು ಲೋಹಿಯಾ ಕಂಡಂಥ ಗ್ರಾಮೀಣಾಭಿವೃದ್ಧಿ ಕನಸು.

ವೈ.ಕೆ. ರಾಮಯ್ಯನವರು ತಮ್ಮ ಕ್ಷೇತ್ರದಲ್ಲಿ ಸಾಕಾರಗೊಳಿಸಿದ ಅಂಥ ವಿಶಿಷ್ಟ ಯೋಜನೆಗಳನ್ನು ಮುಂದೆ ವಿವರಿಸಲಾಗಿದೆ.

## ಪಾದಯಾತ್ರೆ

ವೈ.ಕೆ.ಆರ್. ತಾವು ಪ್ರಥಮವಾಗಿ ಆಯ್ಕೆಯಾದ ವರ್ಷದಿಂದಲೇ ತಮ್ಮ ಕ್ಷೇತ್ರದ ವಿಭಿನ್ನ ಸ್ಥಳಗಳಿಗೆ ವಿಭಿನ್ನ ದಿಕ್ಕುಗಳಲ್ಲಿ ಪಾದಯಾತ್ರೆ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ನಮ್ಮ ಎಷ್ಟೋ ಪ್ರತಿನಿಧಿಗಳು ಕಾರಿನಿಂದ ಕೆಳಗಿಳಿಯುವ ಕೃಪೆಯನ್ನು ತೋರುವುದಿಲ್ಲ. ಆದರೆ ರಾಮಯ್ಯನವರು ಕಾಲ್ನಡಿಗೆಯ ಜಾಥಾಗಳ ಮೂಲಕ ಜನರ ಕಷ್ಟಸುಖಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಒಂದೊಂದು ಗುರಿ ಇಟ್ಟುಕೊಂಡು ಅನೇಕ ಹಳ್ಳಿಗಳ ಮೂಲಕ ಹಾದು ಮತ್ತೆ ಯಾವುದೋ ಹಳ್ಳಿಯನ್ನು ತಲುಪಿ ಅಲ್ಲಿಯೇ ವಾಸ್ತವ್ಯ ಮಾಡುತ್ತಿದ್ದರು. ಹೀಗೆ ವಾರಗಟ್ಟಲೆ, ಕೆಲವೊಮ್ಮೆ ತಿಂಗಳುಗಟ್ಟಲೆ ಪಾದಯಾತ್ರೆ ಸಾಗುತ್ತಿತ್ತು. ತಮ್ಮ ಶಿಷ್ಯರು, ಅಭಿಮಾನಿಗಳು, ಸ್ಥಳೀಯ ಸಂಸ್ಥೆಯ ಜನಪ್ರತಿನಿಧಿಗಳು, ಅಧಿಕಾರಿಗಳು ಮತ್ತು ಸಾಹಿತ್ಯ ಚಿಂತಕರು ಮುಂತಾಗಿ ನಾನಾ ಕ್ಷೇತ್ರದ ಜನರು ಇವರ ಪಾದಯಾತ್ರೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಆ ಸಂದರ್ಭಗಳಲ್ಲಿ ಸಮಾಜದ ಕಟ್ಟಕಡೆಯ ನಿರ್ಲಕ್ಷಿತ ವ್ಯಕ್ತಿಯವರೆಗೆ ತಾವೇ ಖುದ್ದಾಗಿ ಕಷ್ಟಗಳನ್ನು ವಿಚಾರಿಸಲು ಮತ್ತು ಆ ಮೂಲಕ ನ್ಯಾಯ ಒದಗಿಸಲು ಸಾಧ್ಯವಾಗುತ್ತಿತ್ತು. ರಾಮಯ್ಯನವರು ಯಾವಾಗಲೂ ಹೇಳುತ್ತಿದ್ದರು: ಖಾದಿಬಟ್ಟೆಯ ಮರಿ ಪುಡಾರಿಗಳು ಭ್ರಷ್ಟ ಅಧಿಕಾರಿಗಳು ಸದಾ ಬೆಂಗಳೂರಿನಲ್ಲಿ ಇದ್ದು ಸ್ವಾರ್ಥಕ್ಕಾಗಿ ರಾಜಕಾರಣಿಗಳ ಬಳಿ ಬರುತ್ತಾರೆ. ಆದರೆ ನಮ್ಮ ಹಳ್ಳಿಗಳಲ್ಲಿರುವ ದಲಿತರು, ವೃದ್ಧರು ಮತ್ತು ಅಸಹಾಯಕರು ಹೇಗೆ ಬರುತ್ತಾರೆ ಹೇಳಿ? ಅವರಿಗಾಗಿ ಈ ಪಾದಯಾತ್ರೆ ಎಂಬುದು ಅವರ ನಂಬಿಕೆಯಾಗಿತ್ತು.

## ಗಿಡ ನೆಡುವ ಕಾರ್ಯಕ್ರಮ

ಪರಿಸರದ ಬಗ್ಗೆ ಅಪಾರವಾದ ಕಾಳಜಿ ಇಟ್ಟುಕೊಂಡಿದ್ದ ವೈ.ಕೆ.ಆರ್.ರವರಿಗೆ ಬಯಲುಸೀಮೆ ಸದಾ ಹಸಿರಾಗಿರಬೇಕು ಎಂಬ ತುಂಬು ಹಂಬಲವಿತ್ತು. ಅಶೋಕನ ಪರಿಸರ ಪ್ರೇಮ, ಗಾಂಧಿಯ ಗ್ರಾಮಾಭಿವೃದ್ಧಿ ಮತ್ತು ಅಪ್ಪಿಕೋ ಚಳುವಳಿಯ ಬಹುಗುಣರ ಮರದ ಬಗೆಗಿನ ತಿಳುವಳಿಕೆ ಈ ಎಲ್ಲದರ ಸಂಗಮದಂತಿದ್ದ ವೈ.ಕೆ.ಆರ್. ಕುಣಿಗಲ್ ಮತ್ತು ಹುಲಿಯೂರುದುರ್ಗ ವಿಧಾನಸಭಾ ಕ್ಷೇತ್ರಗಳನ್ನು ಸಂಪೂರ್ಣ ಸಸ್ಯರಾಶಿಯನ್ನಾಗಿ ಪರಿವರ್ತಿಸಿದರು. ಅವರ ಪಾದಯಾತ್ರೆಯ ಸಂದರ್ಭದಲ್ಲಿ ರಸ್ತೆಯುದ್ದಕ್ಕೂ ಗಿಡ ನೆಡುವ ಕಾರ್ಯಕ್ರಮ ಕಡ್ಡಾಯವಾಗಿ ಇರುತ್ತಿತ್ತು. ಅವರ ಜೀವಮಾನದುದ್ದಕ್ಕೂ ರಾಮಯ್ಯನವರು ಬಿಡದಂತೆ ನಡೆಸಿಕೊಂಡು ಬಂದ ವಿಶಿಷ್ಟ ಕಾರ್ಯಕ್ರಮ ಈ ಪಾದಯಾತ್ರೆ ಮತ್ತು ಗಿಡ ನೆಡುವುದು. ಸುರೇಶ್ ಎಂಬ ಒಬ್ಬ ಅರಣ್ಯಾಧಿಕಾರಿಯ ಪ್ರತ್ಯಕ್ಷ ಅನುಭವವನ್ನು ಇಲ್ಲಿ ಉಲ್ಲೇಖ ಮಾಡಬಯಸುತ್ತೇನೆ.

"ಅಂದು ಮಂಗಳವಾರ: ಅಂಗಳದ ತುಂಬಾ ಜನವಿತ್ತು. ಹೌದು ನನಗಿನ್ನೂ ಚೆನ್ನಾಗಿ ನೆನಪಿದೆ. ೧೯೮೬ರ ಜೂನ್ ತಿಂಗಳು ಎರಡನೇ ಮಂಗಳವಾರ ಸಂಜೆ. ಆಗ ತಾನೆ ಬೆಂಗಳೂರಿನಿಂದ

ವೈ.ಕೆ.ಆರ್. ಬಂದಿದ್ದರು. ಅವರನ್ನು ಕಾಣಲು ನನಗೆ ಕರೆ ಬಂತು. ಮನೆಯಂಗಳದ ತುಂಬಾ ಜನ ತುಂಬಿದ್ದರು. ನನಗಿಂತ ಮೊದಲೇ ಬಂದಿದ್ದ, ತುಮಕೂರು ಅರಣ್ಯ ಅಧಿಕಾರಿ ಶಿವಲಿಂಗಯ್ಯನವರೊಂದಿಗೆ ಗಂಭೀರ ಚರ್ಚೆಯಲ್ಲಿದ್ದರು. ರಾಮಯ್ಯನವರ ಮಾತುಗಳು ನನಗೆ ತುಂಬಾ ವಿಶೇಷವಾಗಿ ಕಾಣತೊಡಗಿದವು. ತುಮಕೂರಿನಿಂದ ಕುಣಿಗಲ್ ಕಡೆಗೆ ಪಾದಯಾತ್ರೆ. ದಾರಿಯುದ್ದಕ್ಕೂ ಸಸಿ ನೆಡುವುದು, ಸಸಿಗಳ ವಿತರಣೆ, ಜನರಿಗೆ ಪರಿಸರ, ಶಿಕ್ಷಣ ಮತ್ತು ಆರೋಗ್ಯದ ಬಗ್ಗೆ ಅರಿವು ಮೂಡಿಸುವುದು. ರಾಮಯ್ಯನವರು ತಮ್ಮ ಈ ಚಿಂತನೆಯನ್ನು ತೆರೆದಿಟ್ಟಾಗ ನಿಜಕ್ಕೂ ನನಗೆ ಆಶ್ಚರ್ಯವಾಯಿತು. ಅವರು ತಮ್ಮ ಈ ಚಿಂತನೆಯನ್ನು ಕಾರ್ಯಗತಗೊಳಿಸುವ ದೃಢನಿರ್ಧಾರ ತಳೆದಿದ್ದರು.

ಪಾದಯಾತ್ರೆಯುದ್ದಕ್ಕೂ ಸಸಿಗಳ ವಿತರಣೆ, ಶಾಲಾ ಕಾಲೇಜು, ಸರ್ಕಾರಿ ಕಛೇರಿಗಳ ಆವರಣಗಳಲ್ಲಿ ಊರ ಜನರೊಂದಿಗೆ ಸಸಿ ನೆಡುವುದು, ಅಲ್ಲಲ್ಲಿ ಪುಟ್ಟ ಸಭೆ. ಸಮಾರಂಭ, ಕುಣಿಗಲ್ ತುಮಕೂರು ನಡುವೆ ಇರುವ ಹೆಬ್ಬೂರು ಒಂದು ಸಣ್ಣಗ್ರಾಮ. ಅಲ್ಲಿ ತಲುಪಿದಾಗ ಮಟಮಟ ಮಧ್ಯಾಹ್ನ. ಸಸಿ ವಿತರಣೆಗಾಗಿ ಮೊದಲೇ ಲಾರಿ ಮೇಲೆ ಹತ್ತಿ ತಮಗೆ ಬೇಕಾದ ಸಸಿಗಳನ್ನು ಆಯ್ದು ಒಯ್ಯಲಾರಂಭಿಸಿದರು. ಈ ಪೈಪೋಟಿಯಲ್ಲಿ ನಮ್ಮ ನೂರಾರು ಸಸಿಗಳು ಹಾಳಾಗುವುದನ್ನು ನೋಡಿ ಅರಣ್ಯಾಧಿಕಾರಿಗಳಾದ ನಾವೆಲ್ಲ ಖಿನ್ನರಾಗಿದ್ದೆವು. ಅಲ್ಲಿ ಸಮೀಪದಲ್ಲಿಯೇ ಜನರೊಂದಿಗೆ ಮಾತನಾಡುತ್ತ ನಿಂತಿದ್ದ ರಾಮಯ್ಯನವರ ಮುಖದಲ್ಲಿ ಈ ಚಿತ್ರಣ ನೋಡಿಯೂ ಸಂತೃಪ್ತ ನಗೆ. ನಮ್ಮ ಮನಸ್ಸಿನ ನೋವನ್ನು ಅರ್ಥಮಾಡಿಕೊಂಡ ಅವರು ನಮ್ಮನ್ನು ಕರೆದು ಹೇಳಿದ ಮಾತು: "ನೋಡ್ರಿ ಈ ಜನ ಹೊಟ್ಟೆಯ ಹಿಟ್ಟಿಗಾಗಿ ಒಬ್ಬರ ಮೇಲೊಬ್ಬರು ಬಿದ್ದುಕಿತ್ತಾಡ್ತಾ ಇಲ್ಲ. ತಮ್ಮ ಹೊಲಗಳಲ್ಲಿ ನೆಡಲು ಸಸಿಗಳಿಗಾಗಿ ಕಿತ್ತಾಡುತ್ತಿದ್ದಾರೆ. ಇರ್ಲಿ ಬಿಡಿ. ನಿಮಗಿಂತ ಚೆನ್ನಾಗಿ ಸಾಕ್ತಾರೆ." ಗ್ರಾಮೀಣ ಜನರ ನಾಡಿಯ ಮಿಡಿತವನ್ನು ಬಲ್ಲ ವೈ.ಕೆ.ಆರ್.ರಂತಹ ಜನಪ್ರತಿನಿಧಿಗೆ ಮಾತ್ರ ಈ ಸತ್ಯ ಅರ್ಥವಾಗಬಲ್ಲದು."

ನನ್ನ ಅಭಿಪ್ರಾಯದಲ್ಲಿ ರಾಮಯ್ಯನವರ ಪಾದಯಾತ್ರೆಯ ಮೂಲಮಂತ್ರ ಪರಿಸರ ಸಂರಕ್ಷಣೆ. ಪರಿಸರದ ಮೇಲಿನ ಒತ್ತಡ ಕಡಿಮೆಯಾಗಬೇಕಿದ್ರೆ ಜನಸಂಖ್ಯೆ ಕಡಿಮೆ ಯಾಗಬೇಕು. ಜನಸಂಖ್ಯೆ ಇಳಿಮುಖವಾಗಬೇಕಿದ್ರೆ ಜನರಲ್ಲಿ ಅರಿವು, ಜ್ಞಾನ ಬೇಕು ಶಿಕ್ಷಣ ಬೇಕು. ಅದಕ್ಕಾಗಿಯೇ ಈ ಮೂರು ಮಂತ್ರಗಳೊಂದಿಗೆ ಜನರ ಮನೆಬಾಗಿಲಿಗೆ ಹೊರಟ ಇತ್ತೀಚಿನ ಅಪರೂಪದ ಜನಪ್ರತಿನಿಧಿ ವೈ.ಕೆ. ರಾಮಯ್ಯನವರು.

ಕರ್ನಾಟಕ ಅರಣ್ಯ ಇಲಾಖೆಯ ಹಿರಿಯ ಅಧಿಕಾರಿಯಾಗಿದ್ದ ಗಾಂಪ್‌ಕರ್ ರಾಮಯ್ಯನವರ ಅಭಿಮಾನಿಗಳು. ರಾಮಯ್ಯನವರ ಎಲ್ಲಾ ಪಾದಯಾತ್ರೆ ಕಾರ್ಯಕ್ರಮ ಗಳಲ್ಲಿ ಭಾಗವಹಿಸುತ್ತಿದ್ದರು. ರಾಜ್ಯದ ಎಲ್ಲಾ ಜನಪ್ರತಿನಿಧಿಗಳು ರಾಮಯ್ಯನವರಂತೆ ಕ್ರಿಯಾಶೀಲರಾದಲ್ಲಿ, ನಮ್ಮ ಇಲಾಖೆಯ ಸಿಬ್ಬಂದಿವರ್ಗವನ್ನು ಅರ್ಧದಷ್ಟು ಕಡಿಮೆ ಮಾಡಬಹುದೆಂದು ಆಗಾಗ್ಗೆ ಅವರು ಹೇಳುತ್ತಿದ್ದರು.

ಹುಲಿಯೂರುದುರ್ಗ ಅವರ ಹುಟ್ಟೂರಿನ ಕ್ಷೇತ್ರ. ಆದರೆ ಹೆಚ್ಚು ಸಲ ವಿಧಾನಸಭೆಗೆ ಆಯ್ಕೆಯಾದದ್ದು ಕುಣಿಗಲ್ ಕ್ಷೇತ್ರದಿಂದ. ಆದರೆ ಎಂದೂ ಅವರು ಹುಲಿಯೂರು ದುರ್ಗವನ್ನು ಕಡೆಗಣಿಸಲಿಲ್ಲ. ಇಡೀ ಜಿಲ್ಲೆಯೇ ತನ್ನ ಕಾರ್ಯಕ್ಷೇತ್ರದ ಕೇಂದ್ರಸ್ಥಾನ ಎಂದು ನಂಬಿದ್ದ ವೈ.ಕೆ.ಆರ್.ಗೆ ತನ್ನ ತವರು ಎನಿಸಿದ ಹುಲಿಯೂರು ದುರ್ಗದ ಬಗ್ಗೆ ಅಂತರ್ಯದ ಪ್ರೀತಿಯೊಂದಿತ್ತು. ಅವರ ಒಳಮನಸ್ಸಿನ ಆಸೆಯೋ ಎಂಬಂತೆ ಕಾಂಗ್ರೆಸ್ ಪಕ್ಷಕ್ಕೆ ಸೇರಿದ ನಂತರ

ಹುಲಿಯೂರು ದುರ್ಗದಿಂದ ವಿಧಾನಸಭೆಗೆ ನಿಲ್ಲುವ ಅವಕಾಶವೂ ಅವರಿಗೆ ಉಂಟಾಯಿತು. ಅದು ಆ ಕ್ಷೇತ್ರದ ಪುಣ್ಯ ಎಂದೇ ಹೇಳಬೇಕು. ಹುಲಿಯೂರು ದುರ್ಗ ಕ್ಷೇತ್ರದಲ್ಲಿ ಹಮ್ಮಿಕೊಳ್ಳಲಾಗಿದ್ದ ಬಹುಶಃ ಅವರ ಜೀವನದ ಅಂತಿಮ ಪಾದಯಾತ್ರೆ ಮತ್ತು ಗಿಡ ನೆಡುವ ಕಾರ್ಯಕ್ರಮದ ವಿಶಿಷ್ಟತೆಯನ್ನು ಪ್ರಜಾವಾಣಿಯ ವರದಿಗಾರರೊಬ್ಬರು ಹೀಗೆ ವರ್ಣಿಸುತ್ತಾರೆ.

"ಹುಲಿಯೂರುದುರ್ಗಕ್ಕೆ ಬನ್ನಿ ಯಾವುದೋ ಐತಿಹಾಸಿಕ ಕ್ರಾಂತಿಗೆ ಹೊರಟಂತೆ ಸಮರೋಪಾದಿ ಸಿದ್ಧತೆ ಇಲ್ಲಿ ನಡೆದಿದೆ."

ಸರ್ಕಾರಿ ಯಂತ್ರ, ಜನಪ್ರತಿನಿಧಿಗಳು, ಧರ್ಮಗುರುಗಳು, ಹಳ್ಳಿಹಳ್ಳಿಗಳ ಜನರೆಲ್ಲ ಹಗಲು ರಾತ್ರಿ ಎನ್ನದೆ ಸಿದ್ಧತೆಯಲ್ಲಿ ಮುಳುಗಿದ್ದಾರೆ. ರಸ್ತೆ ಬದಿ, ಗೋಮಾಳ, ಕೆರೆ ಬದಿ ಪಾಳುಭೂಮಿ, ನಾಲೆ ಬದಿ, ಪಂಚಾಯ್ತಿ ಆವರಣ, ದೇವಸ್ಥಾನ, ಮಸೀದಿ, ಚರ್ಚ್, ಶೇಂದಿ ವನ, ಕಚೇರಿ ಆವರಣ, ರೈತರ ಹೊಲಗದ್ದೆ ಒಟ್ಟಿನಲ್ಲಿ ಶಾಲೆಯಿಂದ ಹಿಡಿದು ಸ್ಮಶಾನದವರೆಗೆ ಎಲ್ಲವೂ ಹಸಿರು ಸಮವಸ್ತ್ರಕ್ಕೆ ಸಿದ್ಧವಾಗಿವೆ.

ಈ ಜನರಿಗೆ ನಾಗಪಂಚಿ, ವರಮಹಾಲಕ್ಷ್ಮಿ, ಉಪಾಕರ್ಮ, ಶ್ರಾವಣ ಎಲ್ಲ ಹಬ್ಬಗಳೂ ಮರೆತೇ ಹೋಗಿವೆ. ನಾನು ಹಿಂದು, ನೀನು ಮುಸ್ಲಿಂ, ಅವನು ಕ್ರೈಸ್ತ ಎಂಬ ಬೇಧಭಾವವಿಲ್ಲ ಎಲ್ಲರಿಗೂ ಒಂದೇ ಹಬ್ಬ ಅದು ಹಸಿರು ಹಬ್ಬ.

ಮಳೆ ಬಂದ ದಿನ ಸಾಲು ಸಾಲಾಗಿ ಹೊರಡುವ ಇರುವೆಗಳಂತೆ ಹಳ್ಳಿ ಹಳ್ಳಿಗಳಲ್ಲಿ ಚುರುಕಿನ ಚಲನೆ. ಗುಂಪುಗುಂಪಾಗಿ ಪ್ರತಿಯೊಬ್ಬರ ಹೊಲಗಳ ಸುತ್ತಮುತ್ತ ಗುಂಡಿಗಳನ್ನು ತೊಡುತ್ತಿದ್ದರೆ, ಮತ್ತೊಂದೆಡೆ ಹತ್ತು ಜೆ.ಸಿ.ಬಿ. ಯಂತ್ರಗಳು ಸರ್ಕಾರಿ ಸ್ಥಳಗಳಲ್ಲಿ, ರಸ್ತೆಬದಿಗಳಲ್ಲಿ ಗಿಡ ನಡೆಲು ಸಿದ್ಧತೆ ನಡೆಸುತ್ತಿವೆ.

ಜಲಾನಯನ ತೋಟಗಾರಿಕೆ, ಅರಣ್ಯ, ಸಾಮಾಜಿಕ ಅರಣ್ಯ, ಕೃಷಿ ಕ್ಷೇತ್ರಗಳಲ್ಲಿ, ಹೊಂಗೆ, ಬಿದಿರು, ಸರ್ವೆ, ಹಲಸು, ನುಗ್ಗೆ, ನೀಲಗಿರಿ, ಸಾಗುವಾನಿ, ತೇಗ, ಬೇವು, ಸಿಲ್ವರ್‌ಓಕ್, ಬಸರಿ, ಆಲ, ನೇರಳೆ, ಮಾವು, ಸಪೋಟ, ತೆಂಗು ಹೀಗೆ ವಿವಿಧ ಜಾತಿಯ ಲಕ್ಷಾಂತರ ಸಸಿಗಳು ಹಬ್ಬವನ್ನು ಎದುರು ನೋಡುತ್ತಿವೆ.

ಇಲ್ಲಿ ಈಗಾಗಲೇ ಹಸಿರುಕ್ರಾಂತಿಗೆ ರಂಗಸಜ್ಜಿಕೆ ನಡೆದಿದೆ. ಸ್ಥಳೀಯ ಶಾಸಕ ವೈ.ಕೆ. ರಾಮಯ್ಯನವರು ಇಷ್ಟೆಲ್ಲ ವರ್ಷಗಳಿಂದ ಜನರಿಗೆ, ಸರಕಾರಿ ಅಧಿಕಾರಿಗಳಿಗೆ ದುಂಬಾಲು ಬಿದ್ದು ಹಸಿರು ಹುಚ್ಚು ಹಚ್ಚಿಸಿದ್ದಾರೆ. 'ಅಂತರ್ಜಲ ಕಣ್ಣೆದುರೇ ನೂರಾರು ಅಡಿ ಆಳಕ್ಕೆ ಹೋಗಿ, ನೀರಿಗೆ ಪರದಾಡುವ ಸ್ಥಿತಿ ಬಂತಲ್ಲ?' ಎಂದು ಚಿಂತಿಸಿ, ರಾಮಯ್ಯ ನಾಳಿನ ತಮ್ಮ ಊರಿನ ಭವಿಷ್ಯಕ್ಕೆ ತಂಪು ಕೊಡಲು ನಿರ್ಧರಿಸಿದರು.

ಕಬ್ಬಿನ ತೋಟಕ್ಕೆ ನೀರೆರೆಯಲು ಹೋಗುವಾಗ ಸಿಕ್ಕ ಆಲದ ಟೊಂಗೆಗಳನ್ನು ಕಡಿದು, ಜಾಗ ಸಿಕ್ಕಲ್ಲೆಲ್ಲ ನೆಡುವಲ್ಲಿಂದ ಗಿಡ ಬೆಳೆಸುವ ಹುಚ್ಚು ಅಂಟುಕೊಂಡಿತು. ನಂತರ ಜಿಲ್ಲಾ ಉಸ್ತುವಾರಿ ಸಚಿವರಾದಾಗ ಅಧಿಕಾರವೂ ಇತ್ತು. ಲಕ್ಷಾಂತರ ಗಿಡಗಳನ್ನು ನೆಡಲು, ನೆಡಿಸಲು ಸಾಧ್ಯವಾಯಿತು ಎಂದು ರಾಮಯ್ಯ ನೆನಪಿಸಿಕೊಳ್ಳುತ್ತಾರೆ.

ಸಚಿವರಾಗಿದ್ದಾಗ ಹಳ್ಳಿಹಳ್ಳಿಗಳಿಗೆ ಪಾದಯಾತ್ರೆ, ಪರಿಸರದ ಬಗ್ಗೆ ಭಾಷಣ, ಖಾಲಿ ಜಾಗದಲ್ಲೆಲ್ಲ ಗಿಡ ನೆಡುವ, ನೆಡಿಸುವ ಕೈಂಕರ್ಯ ಕೈಗೊಂಡರು. ಗಿಡಗಳನ್ನು ರಕ್ಷಿಸುವ

ಹೊಣೆಯನ್ನು ಗ್ರಾಮಸ್ಥರಿಗೇ ಕೊಟ್ಟರು. ಇಂದು ಸೊಂಪಾಗಿ ಬೆಳೆದ ಮರ ಕಡಿಯಲು ಹೋದರೆ, ಗ್ರಾಮಸ್ಥರೇ ಸೇರಿ ನಿಮ್ಮನ್ನು ಮರಕ್ಕೆ ಕಟ್ಟಿ ಹಾಕಿ ಹೊಡೆಯುವಷ್ಟರ ಮಟ್ಟಿಗೆ ಪರಿಸರ ಪ್ರಜ್ಞೆ ಇಲ್ಲಿ ಮೂಡಿದೆ.

"ರಾಮಯ್ಯನವರಂಥ ಉತ್ಸಾಹಿಗಳಿಂದಾಗಿ ಈಗ ಹುಲಿಯೂರುದುರ್ಗ ಬರಪೀಡಿತ ಜಿಲ್ಲೆಗೆ ಸೇರಿದ ಒಂದು ಊರೆಂದು ಅನ್ನಿಸುವುದೇ ಇಲ್ಲ, ಹಸಿರುಟ್ಟ ಬೆಟ್ಟಗುಡ್ಡಗಳ ಸಾಲು, ರಸ್ತೆಯ ಇಕ್ಕೆಲಗಳಲ್ಲಿ ತೋರಣ, ಹದಿನೆಂಟು ವರ್ಷಗಳಿಂದ ಸದ್ದು ಗದ್ದಲ ವಿಲ್ಲದೆ ಪರಿಸರ ಕ್ರಾಂತಿ ನಡೆಯುತಿರುವ ದುರ್ಗ ಈಗ ಹಸಿರು ಕಾಶಿ." (ಪ್ರಜಾವಾಣಿ)

೧೯೮೦ ರಿಂದ ೨೦೦೪ರವರೆಗಿನ ಅವರ ರಾಜಕೀಯ ಜೀವನ ಅತ್ಯಂತ ಕಿರಿದು ಅವಧಿಯದಾದರೂ ಅದೊಂದು ಧ್ರುವನಕ್ಷತ್ರದಂಥ ಚಿರಸ್ಥಾಯಿ ಸಾಧನೆ. ಕಳೆದ ೨೫ ವರ್ಷಗಳಲ್ಲಿ ನಿರಂತರವಾಗಿ ಹಮ್ಮಿಕೊಂಡು ಬಂದ ಈ ಪಾದಯಾತ್ರೆಯ ಜೊತೆಗಿನ ಸಸಿ ನೆಡುವ ಕಾರ್ಯಕ್ರಮ ಇಡೀ ಕುಣಿಗಲ್ ಮತ್ತು ಹುಲಿಯೂರುದುರ್ಗ ಕ್ಷೇತ್ರವನ್ನು ಹಸಿರಿನ ತಪೋವನವನ್ನಾಗಿ ಮಾಡಿದೆ. ಇಂದು ಆ ಪ್ರದೇಶದ ಯಾವ ರಸ್ತೆಗಳೂ ಸಾಲುಮರಗಳಿಲ್ಲದೆ ಇಲ್ಲ. ಇಂದು ಸಮೃದ್ಧವಾಗಿ ಬೆಳೆದು ನಭೋಮಂಡಲಕ್ಕೆ ಹಿಡಿದ ಚಿತ್ರದಂತೆ ನಿಂತ ಹಲವು ವಿಧದ ಹಲವು ತಳಿಯ ಮರಗಿಡಗಳು ನಾಡಿನ ಜೈವಿಕ ಸಂಪತ್ತಿಗೆ ನೀಡಿದ ಕೊಡುಗೆಯಾಗಿವೆ. ಆ ಮರಗಿಡಗಳ ಹಣ್ಣುಹಂಪಲು, ಹೂ ಮೊಗ್ಗುಗಳನ್ನು ಅರಸಿ ಬರುತ್ತಿರುವ ಲಕ್ಷಾಂತರ ಪಕ್ಷಿಗಳು ರಾಮಯ್ಯನವರ ಆತ್ಮಕ್ಕೆ ಶಾಂತಿಯನ್ನು ಬಯಸುತ್ತಿವೆ. ಅಲ್ಲಿ ಬೆಳೆದು ನಿಂತ ಪ್ರತಿ ಮರದ ಬೇರು ಮತ್ತು ಚಿಗುರು ರಾಮಯ್ಯನವರ ಜೀವನಗಾಥೆಯನ್ನು ಹಾಡುತ್ತಿವೆ.

## ವ್ಯಕ್ತಿತ್ವದ ಹಿರಿಮೆ

"ನಾನು ತುಂಬಾ ಅದೃಷ್ಟಶಾಲಿ, ಬಂಗಲೆ, ಕಾರು, ಆಸ್ತಿ, ಅಧಿಕಾರ, ವಿದ್ಯೆ, ಅಂತಸ್ತು ಮತ್ತು ಸವಲತ್ತುಗಳನ್ನು ಪಡೆದುಕೊಂಡ ಕಾರಣಕ್ಕಾಗಿ ಅಲ್ಲ, ಹಸಿದಾಗ ಅನ್ನವಿಲ್ಲದೆ ಬಳಲಿದ ಅನುಭವ, ಅಂತೆಯೇ ಭಕ್ಷ್ಯಭೋಜನಗಳು ರಾಶಿರಾಶಿಯಾಗಿ ಲಭ್ಯವಾದ ಅನುಭವ ನನ್ನದು. ಕಾಡಹಳ್ಳಿ ಒಂದರಲ್ಲಿ ದನಕುರಿಗಳನ್ನು ಮೇಯಿಸಿ, ಸೋಣೆಯ ನೀರು ಕುಡಿದು, ಜಿಡಿ ಮಳೆಯಲ್ಲಿ ನೆನೆದು, ಹಿಪ್ಪು ನೇರಳೆ ಸೊಪ್ಪು ಕಿತ್ತು ಹುಳು ಸಾಕಿದ್ದ ಅನುಭವ ಒಂದು ಕಡೆಯಾದರೆ, ಅತ್ಯಾಧುನಿಕ ಸಮಾಜವನ್ನು ನೋಡುವ ಅನುಭವ ಮತ್ತೊಂದು ಕಡೆ. ಒಬ್ಬ ವ್ಯಕ್ತಿಯ ಜೀವನದಲ್ಲಿ ಇಷ್ಟೊಂದು ವಿಭಿನ್ನ ಅನುಭವ ಪಡೆದುಕೊಂಡ ತಲೆಮಾರಿಗೆ ಸೇರಿದವನು ನಾನು. ಅದೃಷ್ಟಶಾಲಿ ಎನ್ನುವುದಕ್ಕೆ ಕಾರಣ" ಇದು ವೈ.ಕೆ.ಆರ್. ತಮ್ಮ "ನಾನು ಮತ್ತು ರೇಷ್ಮೆ" ಎಂಬ ಪುಸ್ತಕದ ಮೊದಲ ಪ್ಯಾರಾದಲ್ಲಿ ವ್ಯಕ್ತಪಡಿಸಿದ ಅನುಭವ. ನಿಜ, ಇದು ಹಳ್ಳಿಯಿಂದ ಪಟ್ಟಣದ ಕಡೆಗೆ ಮುಖ ಮಾಡಿದ ಮೊದಲ ತಲೆಮಾರಿನ ಅನೇಕರ ಅನುಭವ. ಇತಿಹಾಸದಲ್ಲಿಯೇ ಮೊದಲಬಾರಿಗೆ ಅಕ್ಷರಾಭ್ಯಾಸ ಮಾಡಿ, ಪದವಿ ಪಡೆದು, ಅಧಿಕಾರ ಅಂತಸ್ತುಗಳನ್ನು ಪಡೆದ ಸಾವಿರಾರು ಜನ ಇಂದು ಇಂಥ ಎರಡೂ ರೀತಿಯ ಅನುಭವ ಪಡೆದಿದ್ದಾರೆ. ಅದರಲ್ಲಿ ನೂರಕ್ಕೆ ತೊಂಬತ್ತರಷ್ಟು ಮಂದಿ ತಾವು ಹತ್ತಿದ ಏಣಿಯ ಮೆಟ್ಟಿಲುಗಳನ್ನು ಮರೆತು, ಐಷಾರಾಮಿ ಜೀವನಕ್ಕೆ ಮಾರುಹೋಗಿ ಹಳ್ಳಿಗಳನ್ನು ಮರೆತಿದ್ದಾರೆ. ಆದರೆ ರಾಮಯ್ಯ ಹಾಗಾಗಲಿಲ್ಲ. ಯಾವ ಹಳ್ಳಿ ತನ್ನ ಹುಟ್ಟಿಗೆ, ತನ್ನ ಅನುಭವಕ್ಕೆ, ಜಗತ್ ಪ್ರಜ್ಞೆಗೆ ನಾಂದಿ ಹಾಕಿತೋ ಆ ಹಳ್ಳಿಯನ್ನು, ಆ ಹಳ್ಳಿಯ ಪರಿಸರವನ್ನು ಅವರು ಸದಾ ತಮ್ಮ ಕೇಂದ್ರ ಪ್ರಜ್ಞೆಯಲ್ಲಿ ಜೋಪಾನವಾಗಿರಿಸಿಕೊಂಡು, ಅಂಥ ಹಳ್ಳಿಗಳ ಉದ್ಧಾರಕ್ಕಾಗಿ

ಕಾರ್ಯತತ್ಪರರಾದರು. ಆದ್ದರಿಂದಲೇ ಅವರ ವ್ಯಕ್ತಿತ್ವವೂ ಕೇವಲ ನಯನಾಜೂಕಿನ ತೋರಿಕೆಯ ರೀತಿಯದಾಗದೆ, ಸಹಜ ದೇಸಿ ಶೈಲಿಯಲ್ಲಿ ರೂಪು ತಾಳಿತು. ಒಳ್ಳೆಯದನ್ನು ಸ್ವೀಕರಿಸುತ್ತಾ, ಕೆಟ್ಟದ್ದನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸುತ್ತಾ ಸಾಗುವುದು ಅವರ ಜೀವನ ಶೈಲಿಯಾಯಿತು.

ನಾವೆಲ್ಲ ಕಂಡಂತೆ ಇವತ್ತಿನ ರಾಜಕಾರಣವಾಗಲೀ, ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯಾಗಲೀ ಅತ್ಯಂತ ಸಂಕೀರ್ಣವಾಗಿದೆ. ಹಣವಿಲ್ಲದೆ, ತೋಳ್ಬಲವಿಲ್ಲದೆ, ಜಾತಿಯ ಆಧಾರವಿಲ್ಲದೆ ರಾಜಕಾರಣದಲ್ಲಿ ಅಸ್ತಿತ್ವ ಉಳಿಸಿಕೊಳ್ಳುವುದೇ ಕಷ್ಟ ಸಾಧ್ಯ. ಸಂಪೂರ್ಣವಾಗಿ ಭ್ರಷ್ಟಗೊಂಡ ವ್ಯವಸ್ಥೆಯಲ್ಲಿ ಎಲ್ಲವೂ ರೋಗಗ್ರಸ್ಥವಾಗಿಯೇ ಕಾಣತೊಡಗಿದೆ. ಆಧುನಿಕ ವ್ಯವಸ್ಥೆ ಪಟ್ಟಣಗಳನ್ನು ಮಾತ್ರ ಪೋಷಿಸುತ್ತಾ ಗ್ರಾಮೀಣ ಪ್ರದೇಶಗಳನ್ನು ನಿರ್ಲಕ್ಷ್ಯಕ್ಕೆ ಈಡು ಮಾಡಿವೆ. ಇವೆಲ್ಲಕ್ಕೂ ಬಲಿಯಾಗುತ್ತಿರುವವರೆಂದರೆ ಮುಖ್ಯವಾಗಿ ರೈತರು ಮತ್ತು ಕೂಲಿ ಕಾರ್ಮಿಕರು. ಯಾವುದೇ ಒಬ್ಬ ಪ್ರಾಮಾಣಿಕನಾದ ಸಾಮಾಜಿಕ ಕಾಳಜಿಯ ವ್ಯಕ್ತಿ ಇಂಥ ವ್ಯವಸ್ಥೆಯಿಂದ ಪ್ರಕ್ಷುಬ್ಧಗೊಳ್ಳಲೇಬೇಕಾದ ಅನಿವಾರ್ಯತೆ ಇರುತ್ತದೆ. ಲೋಹಿಯಾ, ಅಂಬೇಡ್ಕರ್ ಮತ್ತು ಗೋಪಾಲಗೌಡರು ಅಂಥ ಪ್ರಕ್ಷುಬ್ಧ ವ್ಯಕ್ತಿತ್ವಗಳಾಗಿಯೇ ನಮಗೆ ಕಾಣುತ್ತಾರೆ. ವೈ.ಕೆ. ರಾಮಯ್ಯ ಅಂಥ ವ್ಯಕ್ತಿತ್ವಗಳ, ಚಳವಳಿಗಳ ಮುಂದುವರಿದ ಅಧ್ಯಾಯವಾಗಿ ನಮಗೆ ಗೋಚರಿಸುತ್ತಾರೆ.

ವೈ.ಕೆ. ರಾಮಯ್ಯನವರು ಕೂಡಾ ಸದಾ ಪ್ರಕ್ಷುಬ್ಧ ವ್ಯಕ್ತಿಯಾಗಿಯೇ ನಮಗೆ ಕಾಣುತ್ತಿದ್ದರು. ನಾನು ಈಗಾಗಲೇ ಹೇಳಿದಂತೆ, ಸಾಮಾಜಿಕವಾದ ಅನೇಕ ಅಸಂಗತಗಳು ಅವರ ಮನಸ್ಸಿನ ಮೇಲೆ ಗಾಢ ಪ್ರಭಾವವನ್ನು ಬೀರಿದ್ದವು. ಅದರಲ್ಲಿಯೂ ಜನಸಾಮಾನ್ಯರ ವಿಚಾರದಲ್ಲಿ ಅಸಡ್ಡೆ, ನಿರ್ಲಕ್ಷ್ಯ ತೋರುವ ಅಧಿಕಾರಶಾಹಿ ವ್ಯವಸ್ಥೆಯ ವಿರುದ್ಧ ಸಿಡಿದೇಳುತ್ತಿದ್ದರು. ಹಾಗಾಗಿಯೇ ಅವರನ್ನು ಅಧಿಕಾರಿಗಳ ವಿರೋಧಿ ಎಂದು ಬಿಂಬಿಸಲಾಯಿತು. ಸಿಟ್ಟಿನ ಮನುಷ್ಯ ಎಂಬ ವಿಶೇಷಣ ನೀಡಲಾಯಿತು. ದೂರ್ವಾಸಮುನಿ ಎಂಬ ಬಿರುದನ್ನು ಕೆಲವರು ಕೊಟ್ಟರು. ಆದರೆ ಅವರ ಸಿಟ್ಟಿಗೆ, ಪ್ರಕ್ಷುಬ್ಧತೆಗೆ ಸಕಾರಣಗಳಿದ್ದವು. ಒಬ್ಬ ಹಿರಿಯ ಅಧಿಕಾರಿಯ ಮಾತಿನಲ್ಲಿಯೇ ಇದನ್ನು ಸಮರ್ಥಿಸುವುದಾದರೆ "ಸರ್ಕಾರಿ ನೌಕರರಿಗೆ ವೈ.ಕೆ.ರಾಮಯ್ಯನವರು ಸಿಂಹಸ್ವಪ್ನ ಅಂತ ಜನ ಹೇಳುತ್ತಾರೆ. ಈ ಮಾತು ಅಕ್ಷರಶಃ ನಿಜ. ಕೆಲಸ ಮಾಡದೇ ಇರೋರಿಗೆ, ಕಚೇರಿಗೆ ಬರದೇ ಇರೋರಿಗೆ, ಲಂಚರುಷುವತ್ತು ಪಡೆಯೋರಿಗೆ ರಾಮಯ್ಯನವರು ಖಂಡಿತವಾಗಿಯೂ ಸಿಂಹಸ್ವಪ್ನವೇ. ಆದರೆ ಅದೇ ಸತ್ಯವಂತರು ಮತ್ತು ಪ್ರಾಮಾಣಿಕ ಅಧಿಕಾರಿಗಳನ್ನು ತುಂಬು ಗೌರವದಿಂದ ಕಾಣುತ್ತಾರೆ. ಅಂತಹ ವ್ಯಕ್ತಿತ್ವ ಇವರದು. ಹಾಗೆಯೇ ಜನರನ್ನು ವೃಥಾ ಅಲೆಸುವ ನೌಕರರನ್ನು ಸುಮ್ಮನೆ ಬಿಡುವವರೂ ಅಲ್ಲ. ಆದ್ದರಿಂದಲೇ ಭ್ರಷ್ಟ ಅಧಿಕಾರಿಗಳು ಇವರ ಕ್ಷೇತ್ರಕ್ಕೆ ಹೋಗಲು ಹಿಂಜರಿಯುತ್ತಾರೆ. ಆದರೆ ಪ್ರಾಮಾಣಿಕ ಅಧಿಕಾರಿಗಳು ಸಂತೋಷದಿಂದ ಕೆಲಸ ಮಾಡುತ್ತಾರೆ." ನಮ್ಮ ಕರ್ನಾಟಕದ ಎಲ್ಲ ಶಾಸಕರೂ ವೈ.ಕೆ.ಆರ್. ತರವೇ ಆದರೆ ಈ ಅಧಿಕಾರಶಾಹಿ ಸರಿಹೋಗುತ್ತದೆ. ವೈ.ಕೆ. ರಾಮಯ್ಯನವರು ಅನಾವಶ್ಯಕವಾಗಿ, ಸಕಾರಣಗಳಿಲ್ಲದೆ ಎಂದೂ ಯಾರ ಮೇಲೂ ರೇಗಾಡಿದ್ದನ್ನಾಗಲೀ, ಅಸಂಬದ್ಧವಾಗಿ ನಡೆದುಕೊಂಡದ್ದನ್ನಾಗಲೀ ನಾನು ಕಂಡಿಲ್ಲ. ಒಳ್ಳೆಯ ವ್ಯಕ್ತಿಗಳನ್ನು ಕಂಡಾಗ, ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದ ಜನರನ್ನು ನೋಡಿದಾಗ ಪ್ರಾಮಾಣಿಕ ಅಧಿಕಾರಿಗಳನ್ನು ಭೇಟಿ ಮಾಡಿದಾಗ, ಹಿರಿಯರನ್ನು ಸಂಧಿಸಿದಾಗ ಅವರು ಅತ್ಯಂತ ಸುಸಂಸ್ಕೃತರಾಗಿ ನಡೆದುಕೊಳ್ಳುತ್ತಿದ್ದರು. ಎಲ್ಲ ಕ್ಷೇತ್ರಗಳ ಬಗ್ಗೆಯೂ ಅಪಾರವಾದ ಜ್ಞಾನವಿದ್ದ ಕಾರಣ ಯಾವುದೇ ಉಪಯುಕ್ತ ಚರ್ಚೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಿದ್ದರು.

ಅಸಹಾಯಕರನ್ನು ಕಂಡಾಗ ಸಹಜವಾಗಿಯೇ ಮರುಗುತ್ತಿದ್ದರು. ಆದರೆ, ಜನರ ಸೇವೆಗಾಗಿ ನಿರತರಾದ ಅಧಿಕಾರಿವರ್ಗ ಅಪ್ರಮಾಣಿಕವಾದಾಗ ಸಬೂಬು ಹೇಳಿದಾಗ ಸಿಡಿದೇಳುತ್ತಿದ್ದರು. ಅಂಥ ಒಂದೆರಡು ಪ್ರಸಂಗಗಳಲ್ಲಿ ಸಿಟ್ಟು ತಾಳಲಾರದೆ ನೌಕರರ ಮೇಲೆ ಕೈ ಮಾಡಿದ್ದೂ ಇದೆ. ಅನಂತರದಲ್ಲಿ ಅದಕ್ಕಾಗಿ ಮರುಕ ವ್ಯಕ್ತಪಡಿಸಿದ್ದೂ ಇದೆ. ವೈ.ಕೆ.ಆರ್.ರವರ ಮತ್ತೊಂದು ವಿಶೇಷ ಗುಣವೆಂದರೆ ಅವರು ಯಾರ ಮೇಲೂ ದ್ವೇಷ ಸಾಧಿಸಿದ ಉದಾಹರಣೆಗಳಿಲ್ಲ. ಅವರ ಸಿಟ್ಟು ಆಕ್ರೋಶ ಏನಿದ್ದರೂ ತತ್ಕಾಲದ್ದು ಅಥವಾ ವ್ಯವಸ್ಥೆಯ ವಿರುದ್ಧವಾದದ್ದು. ವ್ಯಕ್ತಿ ದ್ವೇಷ ಎಂದೂ ಅವರಲ್ಲಿ ಕಂಡುಬರಲಿಲ್ಲ. ಅವರು ಎಂದೂ ತಾನು ಮಾಡಿದ್ದೇ ಸರಿ, ಅಥವಾ ತಾನು ಹೇಳಿದ್ದೇ ನಡೆಯಬೇಕೆಂಬ ಕೆಟ್ಟ ಹಠದವರೂ ಆಗಿರಲಿಲ್ಲ. ತಮ್ಮ ಅಭಿಪ್ರಾಯ ಸರಿಯಲ್ಲ ಅನ್ನಿಸಿದಾಗ ವಿದ್ಯಾರ್ಥಿಯಂತೆ ಅದನ್ನು ತಿದ್ದಿಕೊಳ್ಳುತ್ತಿದ್ದರು. ಆದರೆ, ಸಾರ್ವಜನಿಕ ಹಿತಾಸಕ್ತಿ ಬಂದಾಗ ಯಾವುದೇ ಕಾರಣಕ್ಕೂ ಯಾವುದೇ ವಿಚಾರದಲ್ಲೂ ರಾಜಿಯಾಗುತ್ತಿರಲಿಲ್ಲ. ಅಂಥ ಸಂದರ್ಭದಲ್ಲಿ ಅವರು ತೋರುತ್ತಿದ್ದ ಅಸಾಧಾರಣ ಛಲ, ನಿರ್ಭೀತಿಯೊಡಗೂಡಿದ ಆತ್ಮವಿಶ್ವಾಸ ಅನನ್ಯವಾಗಿರುತ್ತಿತ್ತು. ತಾವೇ ಪ್ರತಿನಿಧಿಸುತ್ತಿದ್ದ ಆಡಳಿತ ಪಕ್ಷವನ್ನೇ ಎದುರು ಹಾಕಿಕೊಂಡ ಎಷ್ಟೋ ಪ್ರಸಂಗಗಳೂ ಉಂಟು. ತಾವು ನಂಬಿದ ಜನತೆಯಲ್ಲಿ ಚೈತನ್ಯ ತುಂಬುವ, ಆತ್ಮವಿಶ್ವಾಸ ತುಂಬುವ ಕೆಲಸವನ್ನು ಅವರು ಮಾಡುತ್ತಿದ್ದರು. ಸಾಮಾಜಿಕ ಎಚ್ಚರವನ್ನು ಉಂಟು ಮಾಡುವುದು ಕೂಡ ಅಭಿವೃದ್ಧಿ ಕೆಲಸದಷ್ಟೇ ಮುಖ್ಯ ಎಂಬುದು ಅವರ ನಂಬಿಕೆಯಾಗಿತ್ತು. ಅತ್ಯುತ್ತಮ ವಾಗ್ಮಿಯೂ ಆಗಿದ್ದ ಅವರು ಜನತೆಯಲ್ಲಿ ಅಂಥ ಶಕ್ತಿ ತುಂಬುವ ಚೈತನ್ಯಶಾಲಿಯೂ ಆಗಿದ್ದರು.

ವೈ.ಕೆ. ರಾಮಯ್ಯನವರ ವ್ಯಕ್ತಿತ್ವವನ್ನು ಕುರಿತು ಅನೇಕರು ಬಗೆಬಗೆಯ ವ್ಯಾಖ್ಯಾನಗಳನ್ನು ಮಾಡಿದ್ದಾರೆ. ಅಂಥ ಕೆಲವು ವ್ಯಾಖ್ಯಾನಗಳನ್ನು ಇಲ್ಲಿ ಉಲ್ಲೇಖಿಸುವ ಅಗತ್ಯವಿದೆ ಎಂಬ ದೃಷ್ಟಿಯಿಂದ ಅವುಗಳ ಸಂಕ್ಷಿಪ್ತ ರೂಪಗಳನ್ನು ಇಲ್ಲಿ ನೀಡಬಯಸುತ್ತೇನೆ.

"ನಾನಾಗ ಹಾಸನ ಜಿಲ್ಲೆಯಲ್ಲಿ ಪ್ರಜಾವಾಣಿಯ ಜಿಲ್ಲಾ ವರದಿಗಾರನಾಗಿ ಕೆಲಸ ಮಾಡುತ್ತಿದ್ದೆ. ಆಗ ತೋಟಗಾರಿಕೆ ಸಚಿವರಾಗಿದ್ದ ವೈ.ಕೆ. ರಾಮಯ್ಯ ಅವರು ಇಲಾಖೆಯ ಕಾರ್ಯವೈಖರಿ ಪರಿಶೀಲನೆಗೆ ಬಂದಿರುವ ವಿಷಯ ತಿಳಿದು, ಅವರನ್ನು ಭೇಟಿ ಮಾಡಲು ಹೋಗಿದ್ದೆ. ಆಗ ಹಾಸನ ಜಿಲ್ಲಾ ಪರಿಷತ್ತಿನ ಸದಸ್ಯ ಹಾಗೂ ಲೋಕೋಪಯೋಗಿ ಸಚಿವ ಎಚ್.ಡಿ. ದೇವೇಗೌಡ ಅವರ ಪುತ್ರ ಎಚ್.ಡಿ. ರೇವಣ್ಣ ಅವರೂ ಸಚಿವರನ್ನು ಕಾಣಲು ಬಂದಿದ್ದವರಲ್ಲಿದ್ದರು. ರೇವಣ್ಣ ಅವರ ಮುಖ ಕಂಡ ತಕ್ಷಣ ಏನೋ ರೇವಣ್ಣ, ನಿನ್ನ ಅರ್ಭಟ ಜಾಸ್ತಿ ಆಗಿರುವಂತಿದೆ. ನಿಮ್ಮಪ್ಪನ ಹೆಸರಿಗೆ ಮಸಿ ಬಳಿತೀಯೆ ಹುಷಾರ್ ಎಂದು ಎಲ್ಲರ ಸಮ್ಮುಖದಲ್ಲೇ ಅಂದುಬಿಟ್ಟರು. ಹೀಗೆ ತಮ್ಮ ಮನದಲ್ಲಿರುವುದನ್ನು ಹೊರಗೆಡಹುವಾಗ ಮುಚ್ಚುಮರೆಯಿಲ್ಲ, ಅದರ ಪರಿಣಾಮದ ಬಗ್ಗೆ ಅಂಜಿಕೆಯಿಲ್ಲ, ಇದ್ದದ್ದನ್ನು ಇದ್ದಂತೆ, ಕಂಡದ್ದನ್ನು ಕಂಡಂತೆ ಹೇಳುತ್ತಾ ತಕ್ಷಣಕ್ಕೆ ಪ್ರತಿಕ್ರಿಯಿಸುವುದು, ರಾಮಯ್ಯನವರು ಕಾರ್ಯನಿರ್ವಹಿಸಿದ ಕ್ಷೇತ್ರಗಳಲ್ಲೆಲ್ಲಾ ಒಳ್ಳೆಯದು ಕೆಟ್ಟದ್ದು ಎರಡನ್ನೂ ಅವರಿಗೆ ತಂದುಕೊಟ್ಟಿದೆ.

ರಾಮಯ್ಯನವರನ್ನು ಹತ್ತಿರದಿಂದ ನೋಡಿದ ನನ್ನ ಹಲವಾರು ಗೆಳೆಯರ ಪ್ರಕಾರ ಅವರ ಮುಂಗೋಪ ಅವರ ಮೊದಲ ಶತ್ರು. ನನ್ನ ಪ್ರಕಾರ ಸಾಮಾಜಿಕ ಅನ್ಯಾಯಗಳು ಪಾಪಗಳ ವಿರುದ್ಧ ಸಿಟ್ಟು, ಆಕ್ರೋಶ ಬರದಿದ್ದಲ್ಲಿ ಅಂತಹ ವ್ಯಕ್ತಿ ಕ್ರಿಯಾಶೀಲನಲ್ಲ, ಅವಕಾಶವಾದಿ. ಸಾತ್ವಿಕ ಸಿಟ್ಟು ಕೆಲವರಿಗೆ ವಕ್ರತೆ ಆದರೆ ಸ್ವಾಭಿಮಾನಿಗೆ ಅದು ಆತ್ಮಗೌರವದ ಸಂಕೇತ.

ಶ್ರೀ ವೈ.ಕೆ. ರಾಮಯ್ಯ : ಈ ನೂಲು ಬಿಚ್ಚುವವರ ಮುಷ್ಕರ ಯಾರ ವಿರುದ್ಧ ಸ್ವಾಮಿ? ಸರ್ಕಾರದ ವಿರುದ್ಧವಾದರೆ ನಾನು ಒಪ್ಪಿಕೊಳ್ಳುತ್ತೇನೆ. ಯಾರು ಈ ನೇಕಾರರಿಗೆ ಮತ್ತು ದಾರಬಿಚ್ಚುವವರಿಗೆ ಅನ್ನ ಕೊಡುವ ದಾತನಿದ್ದಾನೋ, ಅವನ ವಿರುದ್ಧವಾಗಿ ಇವರು ಮುಷ್ಕರ ಮಾಡುತ್ತಿರುವುದು ನಾನು ಅವತ್ತು ಹೇಳಿದೆ, ಮಾನವೀಯ ಮೌಲ್ಯಗಳನ್ನು ನಾವ್ಯಾರೂ ಗುತ್ತಿಗೆ ತೆಗೆದುಕೊಂಡಿಲ್ಲ ಎಲ್ಲರಿಗೂ ಇದೆ. ಈ ಪ್ರಶ್ನೆ ಬಹಳ ದಿವಸಗಳಿಂದ ಇದೆ. ಅವರ ಅಸೋಷಿಯೇಷನ್ ಶಿಡ್ಲಘಟ್ಟದಲ್ಲಿ ಒಂದಿದೆ, ರಾಮನಗರದಲ್ಲಿ ಒಂದಿದೆ, ಚಾಮರಾಜನಗರಗದಲ್ಲಿ ಒಂದಿದೆ. ಹೀಗೆ ಬೇರೆ ಬೇರೆ ಅವರಲ್ಲಿಯೇ ಇದೆ, ಅದರ ಬಗ್ಗೆ ಚರ್ಚೆ ಬೇಡ. ಬಡ್ತಿಮನ್ನಾ ಮಾಡಬೇಕೆ ಇಲ್ಲವೇ ಎನ್ನುವ ಬಗ್ಗೆ ನಾನು ಏನೂ ಹೇಳುವುದಕ್ಕೆ ಹೋಗುವುದಿಲ್ಲ. ಆ ವಿಚಾರವನ್ನು ಸರ್ಕಾರಕ್ಕೆ ಬಿಡುತ್ತೇನೆ. ಇವತ್ತು ಪ್ರಶ್ನೆ ಇರುವುದು ಇಷ್ಟೇ, ನೂಲು ಬಿಚ್ಚುವವರು ಇವತ್ತು ಯಾರ ವಿರುದ್ಧ ಮುಷ್ಕರ ಮಾಡುತ್ತಿದ್ದಾರೆ? ನಾಳೆ ಬೆಳಿಗ್ಗೆ ಗೂಡನ್ನು ಬೆಳೆಯದೇ ಇದ್ದರೆ, ಬೆಳೆಗಾರ ಇವರ ರಾಟೆ ಎಲ್ಲಿಗೆ ಹೋಗುತ್ತಿದೆ? ಇವರ ದಾರ ಎಲ್ಲಿ ಹೋಗುತ್ತದೆ? ಇವರು ಅನ್ನಕ್ಕೆ ಯಾರನ್ನು ಅವಲಂಬಿಸಬೇಕಾಗುತ್ತದೆ? ಅವರ ವಿರುದ್ಧ ಮುಷ್ಕರ ಮಾಡುವುದನ್ನು ನಿಲ್ಲಿಸಿ, ಸರ್ಕಾರದ ಮುಂದೆ ಕುಳಿತು ಚರ್ಚೆ ಮಾಡುವುದು ಸರಿಯಾದ ಮಾರ್ಗವಾಗಿದೆ. ಅವರು ಮುಷ್ಕರವನ್ನು ನಿಲ್ಲಿಸದಿದ್ದರೆ, ನಾನು ಸರ್ಕಾರದಲ್ಲಿ ಇದೇನು ಮೊದಲನೆ ಸಾರಿ ಪ್ರಾರ್ಥನೆ ಮಾಡಿಕೊಳ್ಳುತ್ತಿಲ್ಲ, They are theating the farmers since several years. I think the govt will have to interfere and protect the farmers. ಆ ರಕ್ಷಣೆಯನ್ನು ಈ ಸರ್ಕಾರ ಮಾಡೇ ಮಾಡುತ್ತದೆ, ನಾವೆಲ್ಲಾ ಸರ್ಕಾರದ ಮೇಲೆ ಒತ್ತಾಯ ತರುತ್ತೇವೆ. ಅದಕ್ಕಿಂತ ಮೊದಲು ಯಾರು ಅನ್ನದಾನಿದ್ದಾನೋ, ಅವನ ವಿರುದ್ಧ ಮುಷ್ಕರ ಮಾಡುವುದುನ್ನು, ಅನ್ನದಾತನ ಅನ್ನವನ್ನೇ ಕಿತ್ತುಕೊಳ್ಳುವುದನ್ನು, ರೈತರ ಅನ್ಯಾಯ ಮಾಡುವುದಕ್ಕಾಗಿ ಮುಷ್ಕರ ಮಾಡುವುದನ್ನು ಅವರು ನಿಲ್ಲಿಸಬೇಕೆಂದು ಈ ಸದನ ಮುಖೇನ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಇದು ಮೊದಲನೆ ಸಾರಿಯಲ್ಲ, ರಾಜಮಹಾರಜಾರ ಕಾಲದಿಂದಲೂ ಬಂದಿದೆ. ಇದಕ್ಕೆ ಒಳಗಡೆ ಬಹಳಷ್ಟು ಫ್ಲೋರ್ಣವಿದೆ ಉಪಾಧ್ಯಕ್ಷರೆ, ಇದನ್ನು ಅರಿತುಕೊಂಡ ಇವರು ಇದೆ ರೀತಿಯಾಗಿ ರೈತರಿಗೆ ತೊಂದರೆ ಕೊಡುತ್ತಾರೆಂದು ಮೈಸೂರು ಮಹಾರಾಜರು ಫಿಲೇಚರ್ಸ್ ತೆಗೆದರು. ಆದರೆ ಕಾಲಾಂತರದಲ್ಲಿ ಖಾಸಗೀಕರಣ ಜಾಸ್ತಿಯಾದಂತೆ ಇವತ್ತು ಇವರು ಮುಷ್ಕರ ಮಾಡುವುದು ರೈತರ ವಿರುದ್ಧ, ಅದನ್ನು ಇವರು ವಾಪಸ್ ತೆಗೆದುಕೊಳ್ಳಲಿ, ಸರ್ಕಾರದ ಜೊತೆ ಚರ್ಚೆ ಮಾಡಲಿ, ಅವರದ್ದು ಲೆಜಿಟಿಮೇಟ್ ಡಿಮಾಂಡ್ಸ್ ಇದ್ದರೆ ನಾವೂ ಸೇರಿಕೋಳ್ಳಣ. ಅವರೇನಾದರೂ ಅದನ್ನು ಮಾಡದೇ ಇದ್ದರೆ, ಭೈರೇಗೌಡರು ಒಬ್ಬರೆ ಅಲ್ಲ. (ಪಿ.ಜಿ.ಆರ್. ಸಿಂಧ್ಯಾರವರನ್ನು ಉದ್ದೇಶಿಸಿ) ಇವರೆಲ್ಲಾ ಮಾತನಾಡುವಾಗ ನಾವು ಇಲ್ಲಿ ಸುಮ್ಮನೆ ಕುಳಿತುಕೊಳ್ಳುವುದಿಲ್ಲವೆ, ನನಗೆ ಅರ್ಥವಾಗುತ್ತಿಲ್ಲ, ಯಾವುದಾದರೂ ಒಂದು ವಿಷಯ ಬಂದರೆ ಯಾವುದಾದರೂ ಒಂದು ಸಮಸ್ಯೆ ಬಂದರೆ ಇದು ಕೆಲವರಿಗೆ ಸಂಬಂಧಿಸಿದ ಸಮಸ್ಯೆ ಎಂದು ಸೀಮಿತಗೊಳಿಸುವುದು ಸರಿಯಲ್ಲ. ಅವರು ಹತ್ತು ಸಾರಿ ಎದ್ದು ನಿಲ್ಲುತ್ತಾರೆ. ನಾನು ಯಾವಾತ್ತಾದರೂ ಅಡ್ಡಿ ಮಾಡುತ್ತೇನೆಯೇ? ನೀವು ಹೇಳುವುದು ಸರಿಯಿಲ್ಲವೆಂದು ಹೇಳುತ್ತಿನಾ? ಏನು ಅವರು ಹೇಳುವುದೆಲ್ಲಾ ಪರಮ ಸತ್ಯವೇ? ಎಷ್ಟು ಸತ್ಯ ಎಷ್ಟು ಸತ್ಯವಲ್ಲವೆನ್ನುವುದು ನನಗೆ ಗೊತ್ತಿದೆ. ಆದರೂ ಕೂಡ ನಾವು ಕುಳಿತುಕೊಂಡು ಕೇಳುತ್ತಿರುತ್ತೇವೆ. ಪ್ರಜಾಪ್ರಭುತ್ವದಲ್ಲಿ ಇದು ಸಹಜವಾದುದು, ಅವರು ಏನು ಹೇಳತ್ತಾರೆಯೋ ಅದನ್ನೆಲ್ಲಾ ಬಹಳ

ಗಂಭೀರವಾಗಿ ಕುಳಿತುಕೊಂಡು ಕೇಳುತ್ತಿರುತ್ತೇನೆ. ಅದಕ್ಕೆ ಎಷ್ಟೆಷ್ಟು ಬೆಲೆ ಕೊಡಬೇಕೋ ಅದನ್ನು ನನ್ನ ಮನಸ್ಸಿನಲ್ಲಿ ಕೊಡುತ್ತೇನೆ. ಕೇಳಬೇಕಾಗುತ್ತದೆ ಕೇಳುತ್ತೇನೆ. ಆದುದರಿಂದ ನಾನುಹೇಳಿದ್ದನ್ನು ಕೇಳುವಂತಹ ಸಹನೆ ಅವರು ಇಟ್ಟುಕೊಳ್ಳಬೇಕಾಗುತ್ತದೆ. ನೀವು ಆರೂವರೆ, ಏನು ಗಂಟೆಯವರೆಗೆ ಭಾಷಣವನ್ನು ಮಾಡಿದ್ದನ್ನು ನಾವು ಇಲ್ಲಿ ಕುಳಿತುಕೊಂಡು ಕೇಳಬೇಕು. ನಾನು ಎರಡು ನಿಮಿಷ ಹೇಳಿದ್ದನ್ನು ಕೇಳುವುದಕ್ಕಾಗುವುದಿಲ್ಲವೆಂದರೆ ಹೇಗೆ ಸ್ವಾಮಿ? ಅಯ್ಯೊ ರಾಮ ಎಂದು ಅಸಹ್ಯ-ಪಟ್ಟುಕೊಂಡರೆ ನಾನು ಹೇಳುವುದೇನು ಉಪಯೋಗವಿಲ್ಲವೆಂದು ಅರ್ಥವೇ?

**ಶ್ರೀ ಸಿ. ಭೈರೇಗೌಡ :** ರಾಮನ ಹೆಸರಲ್ಲ ಸ್ವಾಮಿ, ರಾಮಯ್ಯನವರೇ, ಎಂದು ಹೆಸರು ಇರುವುದು.

**ಶ್ರೀ ವೈ.ಕೆ. ರಾಮಯ್ಯ :** ಭೈರೇಗೌಡರೆ, ನೀವು ಹೇಳುವುದು ನೋಡಿದರೆ, ನಾವು ಹೇಳುವುದೆಲ್ಲಾ ನಿರುಪಯುಕ್ತವಾದುದು, ನಾವು ಹೇಳವುದೆಲ್ಲಾ ಕೆಲಸಕ್ಕೆ ಬಾರದಿರುವುದು, What is that gesture? Tell me. ಮಾನ್ಯ ಉಪಾಧ್ಯಕ್ಷರೆ, ನಮ್ಮ ಪ್ರಾರ್ಥನೆ ಇಷ್ಟೆ, ಅವರು ರೈತರ ವಿರುದ್ಧವಾಗಿ ಮುಷ್ಕರವನ್ನು ಮಾಡುತ್ತಿದ್ದಾರೆ. ನಾಳೆ ರೈತರು ಇವರ ವಿರುದ್ಧವಾಗಿ ಮುಷ್ಕರವನ್ನು ಮಾಡುತ್ತಾರೆ. ಅದನ್ನು ಇವರನ್ನು ಕೇಳಿಕೊಂಡು ಮಾಡಬೇಕಾಗಿಲ್ಲ, ಅದಕ್ಕೂ ಸಂಘಟನೆ ಇದೆ. ಕರ್ನಾಟಕ ರೇಷ್ಮೆ ಬೆಳೆಗಾರರ ಸಂಘ ಇದೆ, ನಾನೇ ಅದರ ಅಧ್ಯಕ್ಷನಾಗಿದ್ದೆ, ನಾನೇ ಅವರ ವಿರುದ್ಧ ಮುಷ್ಕರಕ್ಕೆ ಕರೆ ಕೊಡುತ್ತೇನೆ. ಆದುದರಿಂದ ಸಿಂಧ್ಯಾರವರು ಹೇಳಿದಂತೆ ಸಂಘರ್ಷ ಬೇಡ, ಸಂಘರ್ಷದಿಂದ ಸಮಸ್ಯೆಯನ್ನು ಬಗೆಹರಿಸಿಕೊಳ್ಳುವುದಕ್ಕೆ ಸಾಧ್ಯತೆ ಇಲ್ಲ. ಇಲ್ಲಿ ಮೂರು ಹಿತಾಸಕ್ತಿಗಳಿವೆ, ನೂಲು ತೆಗೆಯುವವರಿದ್ದಾರೆ, ನೇಯ್ಗೆ ಮಾಡುವವರಿದ್ದಾರೆ ಮತ್ತು ಬೆಳೆ ಮಾಡತಕ್ಕಂಥವರಿದ್ದಾರೆ. ಈಗ ನೂಲು ತೆಗೆಯುವಂಥವರು ಬೆಳೆ ಮಾಡುವವರ ವಿರುದ್ಧ ಮುಷ್ಕರವನ್ನು ಮಾಡುತ್ತಿದ್ದಾರೆ, ಬೆಳೆಗಾರರು ಇವತ್ತು, ನಾಳೆ ನೋಡುತ್ತಾರೆ, ನಂತರ ಬೆಳೆಗಾರರೂ ಅವರ ವಿರುದ್ಧವಾಗಿ ಮುಷ್ಕರವನ್ನು ಪ್ರಾರಂಭ ಮಾಡುತ್ತಾರೆ. ಆದ್ದರಿಂದ ಸಂಘರ್ಷಕ್ಕೆ ಎಡೆಮಾಡಿಕೊಡುವುದು ಬೇಡ. ಸಮಸ್ಯೆಯನ್ನು ಬಗೆಹರಿಸಿ ಎಂದು ಅವರು ಹೇಳಿರುವುದಕ್ಕೆ ನಾನೂ ಅವರ ಜೊತೆಯಲ್ಲಿ ಧ್ವನಿಗೂಡಿಸುತ್ತೇನೆ. ಸಂಘರ್ಷದಿಂದ ರೈತರಿಗೆ ಅನ್ಯಾಯವಾಗುತ್ತದೆ. ಆದ್ದರಿಂದ, ಅವರು ಮುಷ್ಕರವನ್ನು ವಾಪಸ್ಸು ತೆಗೆದುಕೊಂಡು ಸಹಕಾರ ಮಾಡಲಿ. ಸರ್ಕಾರ ಅವರಿಗೆ ಏನು ಸಹಾಯ ಮಾಡಬೇಕೋ ಅದನ್ನು ಮಾಡಲಿ, ನಾನು ಸರ್ಕಾರದಲ್ಲಿ ಕೊನೆಯದಾಗಿ ಅತ್ಯಂತ ವಿನಯದಿಂದ ಒತ್ತಾಯ ಮಾಡುತ್ತಿದ್ದೇನೆ. ಇದು ಆಗದಿದ್ದರೆ, ರೈತನು ಬೆಳೆದಿರುವಂತಹ ಗೂಡನ್ನು ಕೊಂಡುಕೊಂಡು, ರೀಲರ್‌ಗಳಿಂದ ಅನ್ಯಾಯವಾಗುತ್ತಿರುವ ಬೆಳೆಗಾರರಿಗೆ ರಕ್ಷಣೆ ಕೊಡಬೇಕು ಎಂದು ಮತ್ತೊಂದು ಸಾರಿ ಒತ್ತಾಯಪೂರ್ವಕವಾಗಿ ಸರ್ಕಾರವನ್ನು ಕೇಳಿಕೊಳ್ಳುತ್ತೇನೆ.

**ಶ್ರೀ ಬಿ. ಸೋಮಶೇಖರ್** (ಮಳವಳ್ಳಿ) **:** ಇವತ್ತು ನಾವು ಎಂಥ ಸಂದಿಗ್ಧ ಪರಿಸ್ಥಿತಿಯಲ್ಲಿದ್ದೇವೆಂದರೆ, ಸುಮಾರು ೨-೩ ಗಂಟೆಗಳು ತಡವಾದರೂ ಕೂಡ ಕಷ್ಟಕ್ಕೆ ಸಿಕ್ಕಿ ಹಾಕಿಕೊಳ್ಳತಕ್ಕಂಥವರು ರೇಷ್ಮೆ ಬೆಳೆಗಾರರು, ಮಾನ್ಯ ರೇಷ್ಮೆ ಸಚಿವರು ಹೇಳಿದ ಹಾಗೆ, ರೀಲರ್ಸ್‌ಗಳು ಅವರ ಹತ್ತಿರ ಬಂದು ಚರ್ಚೆ ಮಾಡದೇ ಇರಬಹುದು, ಅವರದೂ ಕೆಲವು ಲ್ಯಾಪ್ಸ್‌ಸ್ ಇದ್ದರೂ ಇರಬಹುದು. ನಮಗೆಲ್ಲಾ ಗೊತ್ತಿರುತಕ್ಕಂಥ ಒಂದು ಅನುಭವೆಂದರೆ, ಟೀಚರ್‌ಗಳೂ ಒಂದು ಸಂದರ್ಭದಲ್ಲಿ ಸ್ಟ್ರೈಕ್ ಮಾಡುತ್ತಾರೆ. ರೀಲರ್ಸ್‌ಗಳೂ ಒಂದು ಸಂದರ್ಭದಲ್ಲಿ ಸ್ಟ್ರೈಕ್ ಮಾಡುತ್ತಾರೆ. ಈ ಸ್ಟ್ರೈಕ್‌ಗಳು ಏಕೆಂದರೆ, ಅವರ ಹಿತವನ್ನು ಕಾಪಾಡಿಕೊಳ್ಳತಕ್ಕಂಥಾದ್ದಕ್ಕೆ. ಟೀಚರ್ಸ್‌ಗಳು ಮುಷ್ಕರ ಮಾಡಿದರೆ,

ಈ ರಾಜ್ಯದ ಪೋಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಹಾಗು ರೀಲರ್ಸ್‌ಗಳು ಮುಷ್ಕರ ಮಾಡಿದರೆ ರೇಷ್ಮೆ ಬೆಳೆಗಾರರಿಗೆ ಅನಾನುಕೂಲವಾಗುತ್ತದೆ. ಇಂಥ ಪರಿಸ್ಥಿತಿಯಲ್ಲಿ ಎರಡು ವಿಚಾರಗಳನ್ನು ತಾವು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ತಾವು ಅವರನ್ನು ಕರೆದು ಚರ್ಚೆ ಮಾಡತಕ್ಕಂಥಾದ್ದು ಒಂದು ವಿಚಾರ, ನಮ್ಮ ಸರ್ಕಾರವಿದ್ದಾಗ, ನಾವು ಒಂದು ತೀರ್ಮಾನ ತೆಗೆದುಕೊಂಡು, ಕೊಡಬೇಕು ಎನ್ನುವ ಆದೇಶವನ್ನು ಹೊರಡಿಸಿದ್ದೆವು. ಆದರೆ ಅದಕ್ಕೆ ಹಣವನ್ನು ಒದಗಿಸಿಕೊಡಲು ಆಗಲಿಲ್ಲ. ಅದು ನಮ್ಮ ತಪ್ಪು ಆಗಿರಬಹುದು. ನಾವು ಇನ್ನೂ ಸ್ವಲ್ಪ ಕಾಲ ಇದ್ದಿದ್ದರೆ ಅದನ್ನು ಕೊಡುತ್ತಿದ್ದೆವು. ಆದರೆ, ಈಗ ಅವರು ಹೇಳಿರತಕ್ಕಂಥ ಬೇಡಿಕೆ ಸಮಂಜಸವಾಗಿದೆ ಎಂದು ತಮಗೆ ಗೊತ್ತಾದಾಗ, ನಾವು ಅದನ್ನು ಒಪ್ಪಿದ್ದೇವೆ ಎಂದು ತಾವು ಹೇಳುವುದರಲ್ಲಿ ತಪ್ಪೇನಿದೆ? ಸಮಂಜಸವಲ್ಲ ಎಂದು ಗೊತ್ತಾದಾಗ ಅದು ಬೇರೆ ವಿಚಾರ, ಇವತ್ತು ಅವರ ಎರಡು ಬೇಡಿಕೆಗಳು ಸಮಂಜಸ ಎಂದು ಕಂಡ ಮೇಲೆ ಅವುಗಳನ್ನು ತಾವು ಒಪ್ಪಿಕೊಂಡರೆ, ತಕ್ಷಣ ಅವರು ಗೂಡನ್ನು ಖರೀದಿ ಮಾಡಬಹುದು. ಆದ್ದರಿಂದ, ಈ ವಿಚಾರದಲ್ಲಿ ತಾವು ಪ್ರೆಸ್ಟೀಜನ್ನು ಇಟ್ಟುಕೊಳ್ಳದೇ, ಸಂಘರ್ಷಕ್ಕೂ ಎಡೆ ಮಾಡಿಕೊಡದೇ, ಎರಡು ಬೇಡಿಕೆಗಳನ್ನಾದರೂ ನಾವು ಒಪ್ಪಿಕೊಂಡಿದ್ದೇವೆ ಎಂದು ತಾವು ಘೋಷಣೆ ಮಾಡಿದರೆ ಬಹುಶಃ ಈ ಎಲ್ಲ ಸಮಸ್ಯೆಗಳು ಪರಿಹಾರವಾಗಬಹುದು ಎಂದು ನಾನೂ ಸಹ ತಮ್ಮಲ್ಲಿ ಒತ್ತಾಯ ಮಾಡುತ್ತೇನೆ.

**ಶ್ರೀ ವೈ.ಕೆ. ರಾಮಯ್ಯ :** ರೈತರ ಎಲ್ಲಾ ಬೇಡಿಕೆಗಳನ್ನು ತಾವು ಒಪ್ಪಿಕೊಳ್ಳುವಿರಾ, ಸ್ವಾಮಿ? ಕಳೆದ ೩೨ ವರ್ಷಗಳಿಂದ, ರೈತರ ಬೇಡಿಕೆಗಳನ್ನು ನಮ್ಮ ಸರ್ಕಾರದ ಮುಂದೆಯೂ ಇಟ್ಟಿದ್ದೇನೆ, ಅವರ ಸರ್ಕಾರದ ಮುಂದೆಯೂ ಇಟ್ಟಿದ್ದೇನೆ. ನಾನು ಮಂತ್ರಿಯಾಗಿದ್ದಾಗಲೂ ಸಹ, ಈ ರಾಜ್ಯದ ರೈತರ ಸಮಸ್ಯೆಯನ್ನು ಬಗೆಹರಿಸಲು ಆಗಲಿಲ್ಲ. ಸರ್ಕಾರ ನಡೆಸಿದಂಥ ಇವರು, ಬೆಳೆಯುವ ಬೆಳೆಗಾರರಿಗೆ ಒಂದು ರೂಪಾಯಿಯ ಬೋನಸ್ಸನ್ನೂ ಕೊಡಲಿಲ್ಲ. ಇವತ್ತು ನನ್ನ ಬೇಡಿಕೆಯನ್ನು ಮುಂದಿಡುತ್ತಿದ್ದೇನೆ. ಅದನ್ನು ನೆರವೇರಿಸಿರುತ್ತಾರೆಯೇ? This 1% reelers dictate terms to the 99% of the benficiaries. can the 99% beneficiaries should tolerate this? ನಾನು ಒಪ್ಪಿಕೊಳ್ಳುತ್ತೇನೆ. ರೀಲರ್ಸ್ ಡಿಮ್ಯಾಂಡ್ ಏನೇನಿದೆ ಎಂದು ಸರ್ಕಾರದ ಮೇಲೆ [illegible] ತರುತ್ತೇನೆ. ವ್ಯಾಪಕವಾಗಿ ಚರ್ಚೆ ನಡೆಯಲಿ, ಆದರೆ, ಅಷ್ಟು ಕಷ್ಟಬಿದ್ದು [illegible] ಕೊಡುವಂಥ ರೈತರಿಗೆ ನೀವು ಸರ್ಕಾರದಿಂದ ಬೋನಸ್ ಕೊಡಿಸಿದ್ದೀರೇನು? ನನ್ನ [illegible] ಇಲ್ಲವೇನು? ಬೆಳೆಗಾರರು ಪಿ ಎಲ್ ಡಿ ಬ್ಯಾಂಕಿನಲ್ಲಿ ಸಾಲ ಮಾಡಿಲ್ಲವೇನು. ಆದರೆ, [illegible] ಹೇಳಿದ ಹಾಗೆ, ಇದರಲ್ಲಿ ಸಂಘರ್ಷ ಬೇಡ ಸಮಸ್ಯೆ ಬಗೆಹರಿಯಲಿ ಎಂದು ನಾನು [illegible] ಸಾರಿಸಿಕೊಂಡು ಹೋಗುತ್ತಿದ್ದೇನೆ. ಅರ್ಥವಾಯಿತೇ, ಸ್ವಾಮಿ ಬೆಳೆಗಾರರ ಡಿಮ್ಯಾಂಡ್[illegible], ರೀಲರ್ಸ್ ಡಿಮ್ಯಾಂಡ್ಸ್ ವೀವರ್ಸ್ ಡಿಮ್ಯಾಂಡ್ಸ್ ಎಲ್ಲದರ ಬಗ್ಗೆ ಚರ್ಚೆ ಮಾಡೋಣ. ಅವರಿಗೂ ಕೂಡ ಪರಿಹಾರ ಕೊಡಿ. ಅಂತೆಯೇ ಇವರಿಗೂ ಪರಿಹಾರ ಕೊಡಿ, ನನ್ನದೇನೂ ಅಭ್ಯಂತರವಿಲ್ಲ. ಬೆಳೆಗಾರರ ಡಿಮ್ಯಾಂಡ್‌ಗಳೇನು ಎಂದು ಹೇಳಬೇಕು ಎಂದರೆ, ನಾನು ಈ ಘಳಿಗೆಯಲ್ಲಿ ಹೇಳಲು ಸಿದ್ಧನಾಗಿದ್ದೇನೆ. ಅವರೂ ಸಹ ಪಿಎಲ್‌ಡಿ ಬ್ಯಾಂಕಿನಲ್ಲಿ ಸಾಲ ಮಾಡಿದ್ದಾರೆ, ಕೆ.ಎಸ್.ಎಫ್.ಸಿ.ಯಲ್ಲಿ ಸಾಲ ಮಾಡಿದ್ದಾರೆ. ಗೊಬ್ಬರದ ಅಂಗಡಿಯಲ್ಲಿ ಸಾಲ ಮಾಡಿದ್ದಾರೆ. ಅವರ ಈ ಎಲ್ಲಾ ಸಾಲಗಳನ್ನೂ ಕೂಡ ಮನ್ನಾ ಮಾಡಿ ಸ್ವಾಮಿ, ಇವರ ಜೊತೆಯಲ್ಲಿ ಅವರದೂ ಮನ್ನಾ ಮಾಡಿ. ನಾನು ಇವತ್ತು ಹೇಳುತ್ತಿದ್ದೇನೆ. ರೀಲರ್‌ಗಳ ಸಾಲವನ್ನು ಮನ್ನಾ ಮಾಡುವ ಹಂತಕ್ಕೆ

ಬರುವುದಾದರೆ, ರೈತರ ಬೇಡಿಕೆಗಳು ಈಡೇರುವವರೆಗೆ ಬೇರೆ ವರ್ಗದವರ ಬೇಡಿಕೆಗಳನ್ನು ಈಡೇರಿಸಲು ನಮ್ಮ ಒಪ್ಪಿಗೆಯಿಲ್ಲ. ಈ ಬಗ್ಗೆ ನಾನು ಸರ್ಕಾರದ ಮೇಲೆ ಒತ್ತಾಯ ತರುತ್ತೇನೆ.

**ಶ್ರೀ ಬಿ. ಸೋಮಶೇಖರ್ :** ಸಾಲ ಮನ್ನಾ ಅಲ್ಲ, ಬಡ್ಡಿ ಅಷ್ಟೇ.

**ಶ್ರೀ ವೈ.ಕೆ. ರಾಮಯ್ಯ :** ಇವರದ್ದೂ ಅಷ್ಟೇ. ಬೆಳೆಗಾರರ ಬಡ್ಡಿಯನ್ನೂ ಮನ್ನಾ ಮಾಡಿ. ಈಗ ಹೇಳಿ ನೀವು ನೀವೇ ತೀರ್ಮಾನ ಮಾಡಿ. ಶೇಕಡ ಒಂದರಷ್ಟಿರುವ ರೀಲರ್‌ಗಳು ಬೇಕೋ ಅಥವಾ ಶೇಕಡ ತೊಂಬತ್ತೊಂಭತ್ತರಷ್ಟಿರುವ ಬೆಳೆಗಾರರು ಬೇಕೋ? ನನ್ನ ಜೊತೆಯಲ್ಲಿ ಎಲ್ಲರೂ ಬನ್ನಿ. ಸುಮ್ಮನೆ ವಾದ ಮಾಡಿಕೊಂಡು ಮುಂದಕ್ಕೆ ಹೋಗಲು ಆಗುವುದಿಲ್ಲ. ರೀಲರ್ಸ್ ಕೇವಲ ಶೇಕಡ ಒಂದರಷ್ಟಿದ್ದಾರೆ. ಅವರ ಬಡ್ಡಿಯನ್ನು ಮನ್ನಾ ಮಾಡುವುದಾದರೆ, ಶೇಕಡ ತೊಂಬತ್ತೊಂಭತ್ತರಷ್ಟಿರುವ ನಮ್ಮ ರೈತರ ಬಡ್ಡಿಯನ್ನು ಮನ್ನಾ ಮಾಡಿ.

### ರಾಜ್ಯಪಾಲರ ಭಾಷಣಕ್ಕೆ ವಂದನೆ

**ಶ್ರೀ ವೈ.ಕೆ. ರಾಮಯ್ಯ (ಹುಲಿಯೂರು ದುರ್ಗ) :** ಮಾನ್ಯ ಅಧ್ಯಕ್ಷರೆ, ಮಾನ್ಯ ರಾಜ್ಯಪಾಲರು ಮಾಡಿದ ಭಾಷಣಕ್ಕೆ ವಂದನೆಯನ್ನು ಅರ್ಪಿಸುವ ನಿರ್ಣಯಕ್ಕೆ ಬೆಂಬಲ ಕೊಡುತ್ತಾ ಕೆಲವು ವಿಷಯಗಳನ್ನು ಪ್ರಸ್ತಾಪ ಮಾಡಲಿಕ್ಕೆ ನಾನು ಪ್ರಯತ್ನ ಮಾಡುತ್ತೇನೆ. ಈ ವಂದನಾನಿರ್ಣಯದ ಮೇಲೆ ಭಾಷಣ ಮಾಡಿದಂತಹ ನನ್ನ ಸ್ನೇಹಿತರ ಭಾಷಣ ಕೇಳಿದ್ದೇನೆ. ಮತ್ತೆ ಐದು ವರ್ಷಗಳಿಂದ ನಾನು ಈ ಸದನದಲ್ಲಿ ಇಲ್ಲದೇ ಇದ್ದುದರಿಂದ ಐದು ವರ್ಷಗಳ ಕಾಲ ಮಾನ್ಯ ರಾಜ್ಯಪಾಲರು ಮಾಡಿರುವ ಎಲ್ಲ ಭಾಷಣಗಳ ಪ್ರತಿಯನ್ನು ತರಿಸಿ ಒಂದು ವಾರದಿಂದ ಓದಿದ್ದೇನೆ. ನಾಲ್ಕೈದು ವಿಧಾನಸಭೆ ಅಧಿವೇಶನಗಳಲ್ಲಿದ್ದರೂ ಕೂಡ, ಕಳೆದ ವಿಧಾನಸಭೆ ಅಧಿವೇಶನದಲ್ಲಿ ನಾನು ಇರಲಿಲ್ಲ. ಆ ಐದು ವರ್ಷಗಳಲ್ಲಿ ರಾಜ್ಯಪಾಲರ ಭಾಷಣದ ಜೊತೆಗೆ ಕಳೆದ ಐದು ವರ್ಷಗಳ ರಾಜ್ಯಪಾಲರುಗಳ ಭಾಷಣಗಳನ್ನು ಓದಿದ್ದೇನೆ. ಈ ಹಿನ್ನೆಲೆಯಲ್ಲಿ ಒಂದೆರಡು ಮಾತುಗಳನ್ನು ಹೇಳಲಿಕ್ಕೆ ನಾನು ಪ್ರಯತ್ನ ಮಾಡುತ್ತೇನೆ. ರಾಜ್ಯಪಾಲರ ಭಾಷಣ ಅಂದರೇನು ಎನ್ನುವುದರ ಬಗ್ಗೆ ಒಂದು ಮಾತನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ಇದು ಸರ್ಕಾರ ಆ ವರ್ಷ ಹಾಕಿಕೊಳ್ಳುವಂತಹ ಕಾರ್ಯಕ್ರಮದ ಒಂದು ದಿಕ್ಸೂಚಿ. ತಾನು ತಳೆಯಬೇಕಾದ ತಳೆದಿರುವ ಧೋರಣೆಗಳನ್ನು ಸೂಚಿಸುವಂತಹ ಒಂದು ಸೂಚನೆ ಅಷ್ಟೆ. ಅದು ಪಟ್ಟಿಯಲ್ಲ ವಿವರ ಅಲ್ಲ. ಅದು ಆಯವ್ಯಯವೂ ಅಲ್ಲ. ಈ ಧೋರಣೆಯನ್ನು ಪ್ರಕಟಿಸುವಂತಹ ರಾಜ್ಯಪಾಲರ ಭಾಷಣದಲ್ಲಿ ಏನಿರಬೇಕು ಏನಿರಬಾರದು ಎಂದು ಯಾವ ನಿಯಮವೂ ಇಲ್ಲ. ಸಂವಿಧಾನವನ್ನು ಕೂಲಂಕಷವಾಗಿ ತಿರುವಿ ಹಾಕಿದರೆ ರಾಜ್ಯಪಾಲರ ಭಾಷಣ What should it contain and what it should not contain. ಎಂದು ಎಲ್ಲೂ ನನ್ನ ಗಮನಕ್ಕೆ ಬರಲಿಲ್ಲ. ಆದ್ದರಿಂದ ರಾಜ್ಯಪಾಲರ ಭಾಷಣ, ಒಂದು ಸಾರಿ ನಾನು ಹೇಳಿದ್ದೆ. ೧೦-೧೫ ವರ್ಷಗಳ ಹಿಂದೆ ಇದೇ ಜಾಗದಲ್ಲಿ ಈ ಕಡೆ ಕುಳಿತಿದ್ದೆನೊ ಆ ಕಡೆ ಕುಳಿತಿದ್ದೆನೊ ಮರೆತಿದ್ದೇನೆ. ಇದು ನಾವು ಹಳ್ಳಿಯ ಕಡೆ ವರ್ಷದ ತಿಥಿಯ ಹಾಗೆ ಅಥವಾ ಪಟ್ಟಣದವರು ಶ್ರಾದ್ಧ ಮಾಡಿದ ಹಾಗೆ. ಅದು ಏಕೆ ಮಾಡುತ್ತೇವೆನ್ನುವುದು ಗೊತ್ತಿಲ್ಲ. ಆದರೂ ಮಾಡುತ್ತೇವೆ. ಅದರಿಂದ ಮೂರು ಕಾಸಿನ ಉಪಯೋಗವಿಲ್ಲ. ಇದೇನು ಕೆಟ್ಟ ಪದವೇನೂ ಅಲ್ಲ. ಇದರ ಬಗ್ಗೆ ಹಿಂದೆ ಚರ್ಚೆಯಾಗಿದೆ. ಇವತ್ತು ಕೂಡ ಆ ಮಾತನ್ನು ಹೇಳಲಿಕ್ಕೆ ಇಷ್ಟಪಡುತ್ತೇನೆ. ಈ ರಾಜ್ಯಪಾಲರ ಭಾಷಣದಿಂದ ಯಾವ ಪುರುಷಾರ್ಥದ ಸಾಧನೆಯಾಗುತ್ತದೊ ನನಗಂತೂ ಗೊತ್ತಿಲ್ಲ.

ಆದರೆ ಈ ರಾಜ್ಯಪಾಲರ ಭಾಷಣವನ್ನು ಕುರಿತು ಮಾತನಾಡುವಾಗ ನನ್ನ ಸ್ನೇಹಿತರು ಒಂದು ಮಾತನ್ನು ಹೇಳಿದರು. ರಾಜ್ಯಪಾಲರ ಭಾಷಣ ಬಹಳ ಸುಂದರವಾಗಿದೆ ಎಂದು ಎಸ್.ಎಸ್.ಪಾಟೀಲರು ಹೇಳಿದರು. ಯಾರ್‍ಯಾರು ಏನೇನು ಹೇಳಿದರು ಎಂದು ನಾನು ಬರೆದುಕೊಂಡಿದ್ದೇನೆ. ಅವರಿಗೆ ಬಹಳ ಸುಂದರವಾಗಿದೆ ರಾಜ್ಯಪಾಲರ ಭಾಷಣ. (ಎರಡು ರಾಜ್ಯಪಾಲರ ಭಾಷಣದ ಪ್ರತಿಗಳನ್ನು ಸಭೆಗೆ ತೋರಿಸುತ್ತಾ) ಇವೆರಡರಲ್ಲಿ ಯಾವ್ಯದು ಸುಂದರವಾಗಿದೆ. ಅವರದೇ ಬಹಳ ಸುಂದರವಾಗಿದೆ. ಮಾನ್ಯ ಎಸ್.ಎಸ್.ಪಾಟೀಲರೇ ನಮಗೆ ಅತ್ಯಂತ ಸುಂದರವಾದ ಮುಖ್ಯಮಂತ್ರಿಗಳಿದ್ದಾರೆ.

ಶ್ರೀ ಎಸ್.ಎಸ್. ಪಾಟೀಲ್ : ಸುಂದರವಾದದ್ದು ನೀವು ತೋರಿಸಲಿಲ್ಲ. ಯಾವುದೋ ಒಂದು ತಂದಿದ್ದೀರಿ. ನಾನು ತೋರಿಸಿದ್ದು ನೀವು ತೋರಿಸಲೇ ಇಲ್ಲ.

ಶ್ರೀ ವೈ.ಕೆ. ರಾಮಯ್ಯ : ಬೆಳಿಗ್ಗೆ ಅಧ್ಯಕ್ಷರು ನನಗೊಂದು ಕಟ್ಟಪ್ಪಣೆ ಮಾಡಿದ್ದಾರೆ. ಅದೇನೆಂದರೆ ಕೆಲವು ವಿಷಯಗಳನ್ನು ನಾನು ಪ್ರಸ್ತಾಪ ಮಾಡಬಾರದು ಕಾಂಟ್ರವರ್ಸಿಯಾಗಿ ಎಂದು. ಅಪ್ರಸ್ತುತವಾದ ವಿಷಯಗಳ ಬಗ್ಗೆ ಅಪ್ರಸ್ತುತವಾದ ವ್ಯಕ್ತಿಗಳ ಬಗ್ಗೆ ಪ್ರಸ್ತಾಪ ಮಾಡಲಿಕ್ಕೆ ನನಗೆ ಆಸಕ್ತಿಯಿಲ್ಲ. ಆದ್ದರಿಂದ ಅದನ್ನು ನಾನು ಪ್ರಸ್ತಾಪ ಮಾಡುವುದಕ್ಕೆ ಹೋಗುವುದೂ ಇಲ್ಲ. ಅಧ್ಯಕ್ಷರು ಅದರ ಬಗ್ಗೆ ತಲೆಕೆಡಿಸಿಕೊಳ್ಳುವ ಅವಶ್ಯಕತೆಯೂ ಇಲ್ಲ. ಆದರೆ ಏನು ಮಾಡುವುದು ಒಂದು ಮಾತನ್ನು ಮಾನ್ಯ ಪಾಟೀಲರು ಹೇಳಿದ್ದರಿಂದ ಹೇಳಬೇಕಾಗಿದೆ. ಅವರು ಸುಂದರವಾಗಿದೆಯೆಂದು ಹೇಳಿದ್ದನ್ನು ಹೇಳಬೇಕಾಗಿದೆ. ನಮಗೆ ಅತ್ಯಂತ ಸುಂದರವಾದ ಮುಖ್ಯಮಂತ್ರಿಗಳು ಇರುವುದರಿಂದ ಸುಂದರವಾದ ಪುಸ್ತಕದ ಅವಶ್ಯಕತೆ ಇಲ್ಲ. ಈ ರಾಷ್ಟ್ರದ ನಾಯಕರೊಬ್ಬರು ಪ್ರಸ್ತಾಪ ಮಾಡಿದ್ದಾರೆ. ಸುಂದರವಾಗಿದ್ದರೆ ಸಾಲದು, ಜನಗಳ ಜನತೆಯ ಕೆಲಸ ಮಾಡುವಂತಹ ಇಚ್ಛಾಶಕ್ತಿಯ ಪ್ರದರ್ಶನವನ್ನು ಮುಖ್ಯಮಂತ್ರಿಗಳು ಮಾಡಬೇಕಾಗಿತ್ತು. ನನ್ನ ಸ್ನೇಹಿತರಿಂದ ಪ್ರಕ್ರಿಯನ್ನು ನಾನು ಕೇಳಲಿಕ್ಕೆ ಇಷ್ಟಪಡುತ್ತೇನೆ. ಆ ಇಚ್ಛಾಶಕ್ತಿಯ ಪ್ರದರ್ಶನವನ್ನು ಮುಖ್ಯಮಂತ್ರಿಗಳು ಹೇಗೆ ಮಾಡಬೇಕು. ಅದರೊಳಗೆ ಹೇಳಿಕೆಯನ್ನು ಕೊಟ್ಟರತಕ್ಕ ಪಕ್ಷದ ನಾಲ್ಕು ಜನ ಸದಸ್ಯರು ಇಲ್ಲಿದ್ದಾರೆ. ಅವರು ನಾಲ್ಕಕ್ಕೆ ಇಳಿದುಬಿಟ್ಟಿದ್ದಾರೆ. ಅವರನ್ನು ನೋಡಿದರೆ ಅಯ್ಯೋ ಪಾಪ ಅನ್ನಿಸುತ್ತದೆ. ಅವರಿಗೆ ನಾನು ಕೇಳಲಿಕ್ಕೆ ಇಚ್ಛಿಸುತ್ತೇನೆ. ಮುಖ್ಯಮಂತ್ರಿಗಳು ಸುಂದರವಾಗಿದ್ದರೆ ಸಾಲದು, ಅವರು ಜನತೆಯ ಕೆಲಸ ಮಾಡುವಂತಹ ಇಚ್ಛಾಶಕ್ತಿಯ ಪ್ರದರ್ಶನವನ್ನು ಮಾಡಬೇಕು. ಅವರು ಯಾವುದಾದರೂ ಸಂದರ್ಭದಲ್ಲಿ ಮುಖ್ಯಮಂತ್ರಿಗಳೂ ಯಾವ ಇಚ್ಛಾಶಕ್ತಿಯನ್ನು ಪ್ರದರ್ಶನವನ್ನು ಮಾಡಬೇಕೆಂದು ಅವರಾದರೂ ಹೇಳಬಹುದು ಅಥವಾ ಅವರ ಅಣ್ಣ ತಮ್ಮಂದಿರು ಇದ್ದಾರೆ, ಅವರ ಪಕ್ಷಕ್ಕೆ ಅಣತಮ್ಮಂದಿರು ಅವರು ಬೇಕಾದರೂ ನಮಗೆ ತಿಳಿಸಬಹುದು. ನನ್ನ ಸ್ನೇಹಿತರೊಬ್ಬರು ಹೇಳಿದರು, ನಿಮ್ಮ ಪಕ್ಷದ ಪ್ರಣಾಳಿಕೆಗೂ ರಾಜ್ಯಪಾಲರ ಭಾಷಣಕ್ಕೂ ಒಂದಕ್ಕೊಂದು ಸಂಬಂಧವಿಲ್ಲ ಎಂದು ಸಂಬಂಧ ಇರಬೇಕಾಗಿತ್ತು ಎರಡು ಕಾರಣಕ್ಕಾಗಿ ಮೊದಲನೆಯ ಕಾರಣ ಪಕ್ಷದ ಪ್ರಣಾಳಿಕೆ ಚುನಾವಣೆಯ ಸಮಯದಲ್ಲಿ ಓಟು ಕೇಳಲಿಕ್ಕಾಗಿ ಸಿದ್ಧನಾಗುವಂತಹ ಒಂದು ಪ್ರಕಟಣೆ. It is an appela at the time of Elections to seek votes. ಓಟು ಕೇಳುವುದಕ್ಕೆ ಪ್ರಕಟ ಮಾಡುವಂತಹ ಪ್ರಕಟಣೆಗೆ ನಾವು ಏನೇನು ಹೇಳಿರುತ್ತೇವೆಯೋ ಅದನ್ನೆಲ್ಲಾ ಕಾರ್ಯರೂಪಕ್ಕೆ ತಂದಂತಹ ಸರ್ಕಾರ ಇವತ್ತಿನವರೆಗೆ ಯಾವುದೂ ಇಲ್ಲ. ಹಿಂದೆ ಬಂದಿಲ್ಲ ಮುಂದೆ ಬರುವುದೂ ಇಲ್ಲ. ಯಾವುದಾದರೂ ಇಂತಹ ಸರ್ಕಾರ ಇಂತಹ ಪಕ್ಷದ ಸರ್ಕಾರ ತನ್ನ ಪಕ್ಷದ ಪ್ರಣಾಳಿಕೆಯಲ್ಲಿ ತಂದಿರುವಂತಹ ಎಲ್ಲಾ ಆಶ್ವಾಸನೆಗಳನ್ನು ಕಾರ್ಯರೂಪಕ್ಕೆ ತಂದಿದೆ ಅನ್ನುವಂತಹ

ಒಂದೇ ಒಂದು ಪ್ರಣಾಳಿಕೆಯನ್ನು ನನ್ನ ಗಮನಕ್ಕೆ ತಂದರೆ ನನ್ನ ತಪ್ಪನ್ನು ನಾನು ಒಪ್ಪಿಕೊಳ್ಳುತ್ತೇನೆ. ಅದು ಇಲ್ಲವೆಂದರೆ ನಾನು ಇವತ್ತು ಸ್ಪಷ್ಟಪಡಿಸಲಿಕ್ಕೆ ಇಷ್ಟಪಡುತ್ತೇನೆ. ೫೦ ವರ್ಷಗಳ ನಮ್ಮ ಭಾರತದ ಆಡಳಿತದಲ್ಲಿ, ಹೊರದೇಶಗಳಲ್ಲಿ ಯಾರು ತಂದಿದ್ದಾರೋ ಗೊತ್ತಿಲ್ಲ. ನಮ್ಮ ದೇಶದಲ್ಲಿ ಯಾವ ರಾಜ್ಯ ಸರ್ಕಾರವೇ ಆಗಲಿ, ಯಾವ ಕೇಂದ್ರ ಸರ್ಕಾರವೇ ಆಗಲಿ, ಯಾವ ಪಕ್ಷದ್ದೇ ಆಗಲಿ ತನ್ನ ಪ್ರಣಾಳಿಕೆಯಲ್ಲಿ ಹೇಳಿದ ಎಲ್ಲಾ ಆಶ್ವಾಸನೆಗಳನ್ನು ಕಾರ್ಯರೂಪಕ್ಕೆ ತಂದಂತಹ ನಿದರ್ಶನ ಇಲ್ಲ. ಮುಂದೆ ಇರಲಾರದು. ಆದ್ದರಿಂದ ಪ್ರಣಾಳಿಕೆಯಲ್ಲಿ ಹೇಳಿದ ಎಲ್ಲವನ್ನೂ ರಾಜ್ಯಪಾಲರ ಭಾಷಣದಲ್ಲಿ ಆಗಲಿ, ಆಯವ್ಯಯದಲ್ಲಾಗಲೀ ತರಲಿಕ್ಕೆ ಸಾಧ್ಯವಿಲ್ಲವೆನ್ನುವ ಮಾತನ್ನು ನನ್ನ ಸ್ನೇಹಿತರ ಗಮನಕ್ಕೆ ತರಲಿಕ್ಕೆ ಇಷ್ಟಪಡುತ್ತೇನೆ. ಇನ್ನು ಆಯವ್ಯಯ ಕೂಡ ಬಂದು ಬಿಟ್ಟಿದೆ ಅದೊಂದು ವಿಶೇಷ.

**ಶ್ರೀ ಕೆ. ಶ್ರೀನಿವಾಸಗೌಡ :** ಹಾಗಾದರೆ ಪ್ರಣಾಳಿಕೆಯನ್ನು ಪಕ್ಷಗಳು ಏಕೆ ತರಬೇಕು? ಪ್ರಣಾಳಿಕೆ ಮೊದಲು ನಾವು ಜನಗಳಿಗೆ ಕೊಡುವಂತಹ ಆಶ್ವಾಸನೆ. ಈ ಪ್ರಣಾಳಿಕೆ ಪ್ರಕಾರ ನಾವು ಅದಕ್ಕೆ ಬದ್ಧರಾಗಿದ್ದೇವೆ. ಆ ಪ್ರಕಾರ ಸರ್ಕಾರ ನಡೆಸುತ್ತೇವೆಂದು ಹೇಳುತ್ತಾರೆ. ಹಾಗೆ ಇದ್ದರೆ ಪ್ರಣಾಳಿಕೆಯನ್ನು ಏಕೆ ತರಬೇಕು?

**ಶ್ರೀ ವೈ.ಕೆ. ರಾಮಯ್ಯ :** ಮಾನ್ಯ ಅಧ್ಯಕ್ಷರೆ, ಮಾನ್ಯ ಸದಸ್ಯರು ಮಾತನಾಡುವಾಗ ನನ್ನ ಮಾತಿಗೆ ಉತ್ತರ ಕೊಡಲಿ. ನನ್ನ ಅಭಿಪ್ರಾಯವನ್ನು ನಾನು ಹೇಳುತ್ತೇನೆ. ಪ್ರಣಾಳಿಕೆ ಅಂದರೆ ಏನು ಎಂದು ನಾನು ಹೇಳಿದ್ದೇನೆ. ಓಟು ಕೇಳುವುದಕ್ಕೆ ಹೋದಾಗ, ಹೆಣ್ಣು ಕೇಳುವುದಕ್ಕೆ ಹೋದಾಗ, ಯಾರೂ ಕೂಡ ನಮ್ಮ ಹುಡುಗನಿಗೆ ಕಣ್ಣು ಕಾಣುವುದಿಲ್ಲ ಕಿವಿ ಕೇಳುವುದಿಲ್ಲವೆಂದು ಯಾರೂ ಹೆಣ್ಣು ಕೊಡಿಯೆಂದು ಕೇಳುವುದಿಲ್ಲ. ನಮ್ಮ ಹುಡುಗನ ಕೈ ಇಷ್ಟು ಉದ್ದ ಇದೆ, ಅವನು ಸುಂದರಾಂಗ, ಅಷ್ಟು ದಪ್ಪ ಅವನೆ, ಏನು ಮಾತನಾಡುತ್ತೀರಿ ಸ್ವಾಮಿ? It is very simple ಹೆಣ್ಣು ಕೇಳುವುದಕ್ಕೆ ಹೋದಾಗ ಯಾರೂ ಗಂಡನಿಗೆ ಕುರುಡು ಹೇಳುವುದಿಲ್ಲರೀ. ಹೆಣ್ಣಿನ ಕುರುಡು ಯಾರೂ ಮುಚ್ಚಿಕೊಳ್ಳುವುದಿಲ್ಲ. ಹಾಗೆಯೇ ಓಟು ಕೇಳುವುದಕ್ಕೆ ಹೋದಾಗ ಯಾರೂ ಏನೂ ಹೇಳುವುದಿಲ್ಲ. ಬಹಳ ಸುಂದರಾಂಗ ಎಂದು ನಾವು ಹೇಳುತ್ತೇವೆ.

**ಛೇರ್ಮನ್ :** ಅಪಾರ್ಥ ಮಾಡುವ ಅವಶ್ಯಕತೆಯಿಲ್ಲ.

**ಶ್ರೀ ವೈ.ಕೆ. ರಾಮಯ್ಯ :** ಸನ್ಮಾನ್ಯ ಅಧ್ಯಕ್ಷರೇ, ಇನ್ನು ಬಹಳ ಜನ ಆಯವ್ಯಯದ ಗ್ಗೆ ಮಾತನಾಡಿರತಕ್ಕಂಥ ಭಾಷಣವನ್ನು ನಾನು ಕೇಳಿದ್ದೇನೆ.

**ಶ್ರೀ ಅರಗಜ್ಞಾನೇಂದ್ರ :** ಅದು ರೆಕಾರ್ಡಿನಲ್ಲಿ ಇದೆ. ಅದು ಸರಿಯಿದೆಯೋ ಇಲ್ಲವೋ ಎಂದು ನೋಡಿ.

**ಶ್ರೀ ವೈ.ಕೆ. ರಾಮಯ್ಯ :** ಏನೂ ಇಲ್ಲ. ನಮ್ಮ ಹುಡುಗನಿಗೆ ತೋಳು ಇಷ್ಟು ಉದ್ದ ಇದೆ ಎಂದು ಹೇಳುತ್ತಾರೆ ಎಂದು ಹೇಳಿದ್ದೇನೆ.

**ಶ್ರೀ ಅರಗ ಜ್ಞಾನೇಂದ್ರ :** ಅದು ರೆಕಾರ್ಡಿನಲ್ಲಿ ಸರಿಯಾಗುತ್ತದೆಯೇ ಎಂದು ನೋಡಬೇಕಾಗುತ್ತದೆ.

**ಛೇರ್ಮನ್ :** ಅದು ಆಬ್ಜೆಕ್ಷನ್‌ಬಲ್ ಇದ್ದರೆ ಅದರ ಬಗ್ಗೆ ಕ್ರಮತೆಗೆದುಕೊಳ್ಳುತ್ತೇವೆ. ಅನ್‌ಪಾರ್ಲಿಮೆಂಟರಿ ಆಗಿದ್ದರೆ ಕ್ರಮ ತೆಗೆದುಕೊಳ್ಳುವುದಕ್ಕೆ ಬರುತ್ತದೆ. ಅವರು ತೋಳು ಎಂದು ಸೇರಿಸಿದ್ದಾರೆ.

**ಶ್ರೀ ಎಸ್.ಎಸ್. ಪಾಟೀಲ್ :** ಅವರು ಹಾಗೆ ಶಬ್ದ ಪ್ರಯೋಗ ಮಾಡಿಲ್ಲ.

**ಛೇರ್ಮನ್ :** ಅನ್‌ಪಾರ್ಲಿಮೆಂಟರಿ ಆಗಿದ್ದರೆ ತೆಗೆಸೋಣ ಬಿಡಿ.

**ಶ್ರೀ ವೈ.ಕೆ. ರಾಮಯ್ಯ :** ಆಯವ್ಯಯದ ಬಗ್ಗೆ ಮಾತನಾಡುತ್ತ ಆಯವ್ಯಯ ಸರಿಯಿಲ್ಲ, ಆಯವ್ಯಯದಲ್ಲಿ ಏನೂ ಇಲ್ಲ ಎಂದು ಹೇಳುತ್ತಾ ನನ್ನ ಸ್ನೇಹಿತರೊಬ್ಬರು ಇನ್ನೂ ಮುಂದಕ್ಕೆ ಹೋದರು.

**ಛೇರ್ಮನ್ :** ರಾಮಯ್ಯನವರೇ, ಸ್ವಲ್ಪ ಇರಿ. ಒಂದು ನಿಮಿಷ ಒಬ್ಬರು ಯಾರಾದರೂ ಎದ್ದುನಿಂತು ಹೇಳಿದರೆ ಸರಿಯಾಗುತ್ತದೆ.

**ಶ್ರೀ ಎಸ್.ಎಸ್. ಪಾಟೀಲ್ :** ಸನ್ಮಾನ್ಯ ಅಧ್ಯಕ್ಷರೇ, ಅವರು ಹೇಳಿದಾಗ ನಾನು ಸುಮ್ಮನೆ ಕುಳಿತಿದ್ದೆ. ನಾನು ಹೇಳಿದ್ದು ರಾಜ್ಯಪಾಲರ ಭಾಷಣದ ಬಗ್ಗೆ ಅಲ್ಲ. ಆಯವ್ಯಯದ ಮೇಲೆ ನಾನು ಹೇಳಿದ್ದೆ, ಎರಡೂ ಆಯವ್ಯಯವನ್ನು ಈಗ ತೋರಿಸಿ ನೋಡೋಣ. ಈ ಆಯವ್ಯಯ ಯಾವುದು ಸುಂದರವಾಗಿದೆಯೆಂದು ಕೇಳಿದಿರಲ್ಲ.......

**ಛೇರ್ಮನ್ :** ಅದಲ್ಲ ಬಿಡಿ.

**ಶ್ರೀ ಎಸ್. ಸುರೇಶ್‌ಕುಮಾರ್ :** ಮಾನ್ಯ ಸಭಾಧ್ಯಕ್ಷರೇ, ಹಿರಿಯ ಸದಸ್ಯರಾದ ಶ್ರೀ ರಾಮಯ್ಯನವರು ಆವೇಶದಲ್ಲಿ ಆ ಕಾಂಗ್ರೆಸ್ ಮ್ಯಾನಿಫೆಸ್ಟೊ ಜತೆ ಗುಂಡು ತೋರಿಸುವುದರ ಬಗ್ಗೆ ಹೋಲಿಸುತ್ತ ಕೆಲವು ಶಬ್ದಗಳನ್ನು ಏನು ಪ್ರಯೋಗಿಸಿದ್ದಾರೆ ಅದು ಈ ಸದನಕ್ಕೆ ಭೂಷಣ ಅಲ್ಲ. ಅದನ್ನು ತಾವು ವಾಪಸ್ಸು ತೆಗೆಸಬೇಕು.

(ಗೊಂದಲ)

**ಛೇರ್ಮನ್ :** ತೆಗೆಸಿ ಹಾಕೋಣ ಬಿಡಿ.

**ಶ್ರೀ ವೈ.ಕೆ. ರಾಮಯ್ಯ :** ಮಾನ್ಯ ಅಧ್ಯಕ್ಷರೇ. ನಾನು ತಮ್ಮನ್ನು ಕನ್ವಿನ್ಸ್ ಮಾಡುತ್ತೇನೆ. ನನ್ನ ೨೫ ವರ್ಷ ಸಂಸದೀಯ ಜೀವನದಲ್ಲಿ ಯಾವ ಪದವನ್ನೂ ತೆಗೆದುಹಾಕಿದ್ದಿಲ್ಲ.

**ಛೇರ್ಮನ್ :** ನೀವು ಆ ಅರ್ಥದಲ್ಲಿ ಹೇಳಿಲ್ಲ. ಅದರ ಅರ್ಥ ಹಾಗೆ ಆಗಬಾರದು. ಅದು ರೆಕಾರ್ಡಿನಲ್ಲಿ ಹೋಗಿಬಿಟ್ಟಿದೆ.

**ಶ್ರೀ ವೈ.ಕೆ. ರಾಮಯ್ಯ :** ಅರ್ಥ ಏನಿಲ್ಲ. ಗಂಡು ಕೇಳುವುದಕ್ಕೆ ಹೋದಾಗ ನಮ್ಮ ಹುಡುಗನ ಕೈ ಇಷ್ಟು ಉದ್ದ ಇದೆ, ಕಾಲು ಇಷ್ಟು ಉದ್ದ ಇದೆ, ಅವನ ಮುಖ ಇಷ್ಟು ದಪ್ಪವಿದೆ....

ಒಬ್ಬ ಸದಸ್ಯರು : ತಾವು ಕೈ ಕೆಂದು ಹೇಳಲಿಲ್ಲ.

**ಶ್ರೀ ವೈ.ಕೆ. ರಾಮಯ್ಯ :** ಹೌದು, ನಾನು ಹೇಳಿರುವುದು ಕೈಗೆ. ಆಯ್ತಾ?

(ಗೊಂದಲ)

**ಛೇರ್ಮನ್ :** ಅವರು 'ಕೈ' ಎಂದು ಹೇಳಿದರಲ್ಲ?

ಒಬ್ಬ ಸದಸ್ಯರು : 'ಕೈ' ಅನ್ನುವುದನ್ನು ಸೇರಿಸಿಕೊಳ್ಳಬೇಕು.

**ಛೇರ್ಮನ್ :** ಆಯಿತು. ಈಗ ಅವರು ವಿವರಣೆ ಕೊಟ್ಟಿರುವುದರಿಂದ ನಾವು ಮುಂದಕ್ಕೆ ಹೋಗೋಣ.

**ಶ್ರೀ ವೈ.ಕೆ. ರಾಮಯ್ಯ :** ನಾನು ಹೇಳಿರುವ ಕೈಗೆ ಸ್ವಾಮಿ. ನಮ್ಮ ಕಡೆ ಎಲ್ಲಿಯಾದರೂ ಸ್ವಲ್ಪಗಳಗಿಲ ಸವರಬೇಕಾದರೆ, ಬದೆ ಸವರಬೇಕಾದರೆ, ಬೇಲಿ ಸವರಬೇಕಾದರೆ ಕೈ ಸ್ವಲ್ಪ

ಉದ್ದವಾಗಿರಬೇಕು. ಅದಕ್ಕೆ ನಾವು ಕೈ ಉದ್ದವಿರುವ ಗಂಡು ಹುಡುಕುತ್ತೇವೆ. ಈಗ ಸಮಾಧಾನ ಆಯಿತಾ?

**ಛೇರ್ಮನ್ :** ಕೈ ತೋರಿಸಿದರೆ ಸರಿ. ಮುಂದುವರಿಸಿ.

**ಶ್ರೀ ವೈ.ಕೆ. ರಾಮಯ್ಯ :** ಮಾನ್ಯ ಅಧ್ಯಕ್ಷರೇ, ಎಲ್ಲಿಯವರೆಗೆ ಈ ಆಯವ್ಯಯ ಸರಿಯಾಗಿಲ್ಲ ಎಂದು ಹೇಳುತ್ತ ಪದಪ್ರಯೋಗ ನಡೆಯಿತು ಎಂದರೆ 'ಇದು ಮುಖ್ಯಮಂತ್ರಿಗಳ ಬೊಗಳೆ ಭಾಷಣ' ಎಂದರು. ಅಧ್ಯಕ್ಷರು ಅದನ್ನು ತೆಗೆದುಹಾಕಲಿಲ್ಲ. ಅದನ್ನು ಕಡತದಲ್ಲಿದೆ. ನಾನು ಉದ್ದ ಕೈ ಇರುವ ಗಂಡು ಬೇಕು ಎಂದು ಹೇಳಿರುವುದನ್ನು ಏಕೆ ತೆಗೆದುಹಾಕುತ್ತೀರಿ? ಆಯವ್ಯಯ ಭಾಷಣದ ಬಗ್ಗೆ ಹೇಳುತ್ತಾ 'ಇದು ಮುಖ್ಯಮಂತ್ರಿಗಳ ಬೊಗಳೆ ಭಾಷಣ' ಎಂದು ಹೇಳಿದರು. ನಾನು ಸುಮ್ಮನೆ ಕೇಳುತ್ತಾ ಕುಳಿತಿದ್ದೆ. ಆದರೆ, ಅದನ್ನು ಹೇಳಿದವರು Which is the best for judge ಅದನ್ನು ಅವರು ಹೇಳದೇ ಇದ್ದಿದ್ದರೆ ನಾನು ಸಂತೋಷಪಡುತ್ತಿದ್ದೆ. Which is the best for judge. ಅಧ್ಯಕ್ಷರೇ, ನಾನು ಆರ್ಥಿಕ ತಜ್ಞ ಅಲ್ಲ. ಪ್ರೊ. ವೆಂಕಟಗಿರಿಗೌಡರು ಕೊಟ್ಟಿರುವ ಪ್ರಶ್ನೆಗಳನ್ನು ಉರುಹಚ್ಚಿ ಎಕನಾಮಿಕ್ಸ್ ಪಾಸ್ ಮಾಡಿದವನು ನಾನು. ಆದರೆ ಯಾರು ಅರ್ಥಶಾಸ್ತ್ರಜ್ಞರು ಮಾಡಿದ ವ್ಯಾಖ್ಯಾನವನ್ನು ಮಾತ್ರ ಓದಿದರೆ- Which is the best for judge ಅವರು ಹೇಳುತ್ತಾರೆ. ಉತ್ತಮವಾದಂಥ ಆಯವ್ಯಯ ಯಾವುದು ಎಂದರೆ ತೆರಿಗೆ ಕಡಿಮೆ ಇರತಕ್ಕಂಥಾದ್ದು, ಅಭಿವೃದ್ಧಿ ಕೆಲಸಗಳಿಗೆ ಹಣವನ್ನು ಹೆಚ್ಚಿಗೆ ಮಾಡುವಂಥಾದ್ದು ಎಂದು. ತೆರಿಗೆಯನ್ನೇ ಹಾಕಬೇಡಿ, ಹಣ ಅಭಿವೃಧಿಗೆ ಜಾಸ್ತಿ ಖರ್ಚು ಮಾಡುವಂಥ ಆಯವ್ಯಯವನ್ನು ಹೇಗೆ ತರುವುದಕ್ಕೆ ಆಗುತ್ತದೆ? Yes,it is possible. ಅವರು ಅದಕ್ಕೂ ಮುಂದೆ ಹೇಳುತ್ತಾರೆ. ಅದನ್ನು ಹೇಗೆ ಇದರ ಮೂಲಕ ಸಂಪತ್ತನ್ನು ಕ್ರೋಢೀಕರಿಸಿಕೊಂಡು Less tax, more expenditure for the welfare programme is the best budget. ಬಹುಶಃ ಈ ಒಂದು ದೃಷ್ಟಿಯಿಂದ ನಾನು ಈ ವರ್ಷ ನಮ್ಮ ಸರ್ಕಾರ ತಂದಿರುವಂತ ಆಯವ್ಯಯ ಒಂದು ಉತ್ತಮವಾದಂಥ ಆಯವ್ಯಯ ಎಂದು ಹೇಳುವುದಕ್ಕೆ ಇಷ್ಟಪಡುತ್ತೇನೆ. ಸನ್ಮಾನ್ಯ ಅಧ್ಯಕ್ಷರೇ, ಈ ನಾರ್ಮ್ಸ್‌ನ್ನು, ಸ್ಟ್ಯಾಂಡರ್ಡ್‌ನ್ನು ಅಪ್ಲೈ ಮಾಡಿ ನಾವು ಪಕ್ಷಬಿಟ್ಟು ನೋಡಿದಾಗ, ಇದನ್ನು ಗಂಭೀರವಾಗಿ ತೆಗೆದುಕೊಂಡು ಓದಿದರೆ- ರಿಸೋರ್ಸಸ್ ಮೊಬಿಲೈಸೇಶನ್ ಮಾಡುವುದು ಮತ್ತು ಸೋರಿಕೆಯನ್ನು ತಡೆಯುವುದು, ಅಭಿವೃದ್ಧಿ ಕೆಲಸಗಳಿಗೆ ಹಣವನ್ನು ಹೆಚ್ಚಾಗಿ ವೆಚ್ಚ ಮಾಡುವುದು- ಈ ಒಂದು ಕ್ಯಾರಕ್ಟಲಿಸ್ಟಿಕ್‌ನ್ನು ಅಪ್ಲೈ ಮಾಡಿದಾಗ ಇದು ಒಂದು ಉತ್ತಮವಾದಂಥ ಭಾಷಣ ಎಂದು ಹೇಳುವುದಕ್ಕೆ ನಾನು ಇಷ್ಟಪಡುತ್ತೇನೆ. ಅಧ್ಯಕ್ಷರೇ, ಈ ರಾಜ್ಯಪಾಲರ ಭಾಷಣದ ಬಗ್ಗೆ ನನಗೆ ಒಂದು ಗಂಭೀರವಾದಂಥ ಅನುಮಾನ ಇದೆ. ಅದು ಏನಪ್ಪ ಎಂದರೆ 'ಸುಳ್ಳು' ಎನ್ನುವ ಪದವನ್ನು ಉಪಯೋಗಿಸಬಹುದೆ ಬೇಡವೇ ಎನ್ನುವುದರ ಬಗಗ ವ್ಯಾಖ್ಯಾನ ಇರುವುದರಿಂದ ನಾನು ಸುಳ್ಳು ಎನ್ನುವುದನ್ನು ಉಪಯೋಗಿಸಬಹುದೇ ಬೇಡವೇ ಎನ್ನುವುದರ ಬಗ್ಗೆ ವ್ಯಾಖ್ಯಾನ ಇರುವುದರಿಂದ ನಾನು ಸುಳ್ಳು ಎನ್ನುವುದನ್ನು ಉಪಯೋಗಿಸವ್ವೇನೆ. ಸತ್ಯಕ್ಕೆ ದೂರವಾದಂಥ ಮಾತನ್ನು ರಾಜ್ಯಪಾಲರ ಭಾಷಣ ಮುಖಾಂತರ ಅವರ ಭಾಷಣದಲ್ಲಿ ಈ ಸದನಲ್ಲಿ ಹೇಳಿಸಲಿಕ್ಕೆ ಸಾಧ್ಯತೆ ಇದೆಯೆ? ಸತ್ಯಕ್ಕೆ ದೂರವಾದಂಥ ಸುಳ್ಳು ಮಾತನ್ನು ಹೇಳಿಸುವುದು ಅಷ್ಟೇ ಅಲ್ಲ. ಆ ಸುಳ್ಳು ಮಾತನ್ನು ಹೇಳುವ ಮೂಲಕ ರಾಜ್ಯದ ಜನತೆಯನ್ನು ಮೋಸಗೊಳಿಸುವುದಕ್ಕೆ ಸಾಧ್ಯನಾ? ರಾಜ್ಯಪಾಲರು ತಮ್ಮ ಭಾಷಣದಲ್ಲಿ ಸುಳ್ಳು ವಿಷಯವನ್ನು ಓದಿದರೆ ಅದಕ್ಕೆ ಎಲ್ಲಿಯಾದರೂ ಶಿಕ್ಷೆ ಇದೆಯಾ? ನಾನು ಎಲ್ಲಿಂದ ಎಲ್ಲಿಗೆ ಹೋಗುತ್ತಿದ್ದೇನೆ ಎಂದು ಯಾರೂ

ಭಾವಿಸಬೇಕಾದ ಅವಶ್ಯಕತೆ ಇಲ್ಲ. ಅದು ನಡೆದು ಹೋಗಿದೆ. ಎಲ್ಲೂ ನಡೆದಿಲ್ಲ, ಕರ್ನಾಟಕದಲ್ಲಿ ನಡೆದಿದೆ. ಇವತ್ತು ನಡೆದಿಲ್ಲ, ಕಳೆದ ವರ್ಷ ನಡೆದಿದೆ. ಆದ್ದರಿಂದ ಈ ರಾಜ್ಯಪಾಲರು ಮಾಡಿದಂಥ ಅವರ ಭಾಷಣದಲ್ಲಿ ಕೊಟ್ಟಿರುವಂಥ ಸುಳ್ಳು ಹೇಳಿಕೆಯೊಂದನ್ನು ತಮ್ಮ ಗಮನಕ್ಕೆ ತರುವುದಕ್ಕೆ ನಾನು ಇಚ್ಛಿಪಡುತ್ತೇನೆ. ಇದು ಸುಳ್ಳು ಭಾಷಣ, ಸತ್ಯಕ್ಕೆ ದೂರವಾದಂಥ ಭಾಷಣ ಎನ್ನುವುದನ್ನು ನಾನು ಗುರುತುಪಡಿಸಲು, ಸಾಬೀತುಪಡಿಸಲು ಸಿದ್ಧನಿದ್ದೇನೆ. ಇದು ಕಳೆದ ವರ್ಷ ರಾಜ್ಯಪಾಲರ ಭಾಷಣದ ೨೮ನೇ ಕಾಲಮು, ಕಾವೇರಿ ನೀರಿನ ಟ್ರಿಬ್ಯುನಲ್ ವಿಷಯದಲ್ಲಿ ಇರುವುದನ್ನು ಓದುವುದಕ್ಕೆ ಮೊದಲು ಒಂದು ವಿಷಯವನ್ನು ಹೇಳುವುದುಕ್ಕೆ ಇಚ್ಛಿಪಡುತ್ತೇನೆ. "In order to resolve the Inter state dispute between Karnataka, Tamil Nadu and Kerala, the Central Government have constituted a Tribunal". I am emphasising the word "Tribunal" not the "Authority", inspite of the much opposition by the State." ಇದು ಈ ಸರ್ಕಾರದ ವಿರೋಧ ಇದ್ದಾಗ್ಯೂ ಕೂಡ ಈ ನೀರಿನ ವಿವಾದವನ್ನು ಬಗೆಹರಿಸುವುದಕ್ಕೆ ಕೇಂದ್ರ ಸರ್ಕಾರ ಒಂದು ನ್ಯಾಯ ಮಂಡಲಿಯನ್ನು ರಚನೆ ಮಾಡಿದೆ. ಈ ನ್ಯಾಯ ಮಂಡಲಿ ಒಂದು ಮಧ್ಯಂತರ ವರದಿಯನ್ನು ಕೊಟ್ಟಿದೆ ಇದರ ಬಗ್ಗೆ ಪ್ರಸ್ತಾಪ ಮಾಡುತ್ತ ರಾಜ್ಯಪಾಲರು ೧೯೯೯ರ ಅವರ ಭಾಷಣದಲ್ಲಿ ಈ ರೀತಿ ಹೇಳುತ್ತಾರೆ. "The consistent stand of the Governement that the river water disputes are to be resolved amicably through the negotiations among the riparian states keeping in view the interest of the farmers, has been vihdicated but theconstitution of the cavuery River Authoriry." Here, I am again emphasisingthe word "Authority." "It is the first of its kind in the history of solving the National Water dispute. The prime Minister is designed as the Chairman. The Chief Ministers of the Basintates are the Members of the Authority This has given a new dimension in resolving the river water dispute."

ಮಾನ್ಯ ಅಧ್ಯಕ್ಷರೇ, ನಾನು ಆಗಲೇ ಹೇಳಿದ್ದೇನೆ. ಹೋದ ಒಂದು ಸಭೆಯಲ್ಲಿ ನಾನು ಐದು ವರ್ಷದಿಂದ ಈ ಸದನದಲ್ಲಿ ಇರಲಿಲ್ಲ. ವಿಧಿ ಇಲ್ಲದೆ ಊರೂರಿನಲ್ಲಿ ಭಾಷಣ ಮಾಡಬೇಕಾಗಿ ಬಂತು. Because this was the issue in Karnataka at that time. ಯಾವ ಮಧ್ಯಂತರ ತೀರ್ಪನ್ನು ಜಾರಿಗೊಳಿಸುವುದನ್ನು ಈ ಎಲ್ಲ ಸ್ನೇಹಿತರು ವಿರೋಧ ಮಾಡಿದರು. ಈ ಸದನದಲ್ಲಿ ರೆಸ್ಯುಲೇಶನ್, ಠರಾವು ಪಾಸ್ ಆಗಿತ್ತು. ಮಾನ್ಯ ಬಂಗಾರಪ್ಪನವರು ಮುಖ್ಯಮಂತ್ರಿಗಳಾಗಿದ್ದಾಗ ಈ ಠರಾವು ಆಗಿತ್ತು. ಈ ಮಧ್ಯಂತರ ತೀರ್ಪನ್ನು ಜಾರಿಗೊಳಿಸುವುದಕ್ಕೆ ಕರ್ನಾಟಕ ಸರ್ಕಾರ ಸಿದ್ಧವಿಲ್ಲ. "We are not going to implement the interim order passed by the Tribunal" ಎಂದು ಅದು ಬಹಳ ದಿವಸ ನಡೆಯಿತು. ಆದಾದ ಮೇಲೆ ಏನೇನೋ ಆಯಿತು. ಅದನ್ನು ಯಾರ್‍ಯಾರು ವಿರೋಧ ಮಾಡಿದ್ದರೋ, ಅವರೇ ಅದಕ್ಕೆ ಒಪ್ಪಿಗೆ ಕೊಟ್ಟರು. ಏನೋ ಆಯಿತು. ಭಾರತೀಯ ಜನತಾಪಕ್ಷ ಸರ್ಕಾರ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಮೇಲೆ ವಾಜಪೇಯಿ ಅವರು ಅಲ್ಲಿ ಪ್ರಧಾನಮಂತ್ರಿ ಆದಮೇಲೆ ಈ ಮಧ್ಯಂತರ ತೀರ್ಪನ್ನು ಜಾರಿಗೊಳ್ಳಿಸುವುದಕ್ಕಾಗಿ ಒಂದು ಅಥಾರಿಟಿಯನ್ನು ಕಾನ್ಸ್ಟಿಟ್ಯೂಟ್ ಮಾಡಿದರು. ಇದನ್ನು ಬಹುಶಃ ಯಾರೂ ಡಿಸಪ್ಯೂಟ್

ಮಾಡಲಾರರು. Because it is a hard fact. The Central Governemnt have constituted an Authority. Why? Not to resolve the dispute, but to implement the interim order. This was the difference. ಆದರೆ ಅಧ್ಯಕ್ಷರೇ, ಈ ರಾಜ್ಯಪಾಲರ ಭಾಷಣದಲ್ಲಿ ಈ ರಾಜ್ಯಗಳ ಮಧ್ಯೆ ಇರುವ ನೀರಿನ ವ್ಯಾಜ್ಯವನ್ನು ಪರಿಹರಿಸುವುದಕ್ಕಾಗಿ ಅಥಾರಿಟಿಯನ್ನು, ಒಂದು ಪ್ರಾಧಿಕಾರವನ್ನು ರಚನೆ ಮಾಡಿದ್ದಾರೆ ಎನ್ನುವಂಥ ಸುಳ್ಳನ್ನು, ಸತ್ಯಕ್ಕೆ ದೂರವಾದ ವಿಷಯವನ್ನು ಅವರ ಭಾಷಣದಲ್ಲಿ ಹೇಳಿಸಿ, ಈ ರಾಜ್ಯದ ಜನರನ್ನು ಅಡ್ಡದಾರಿಗೆ ಎಳೆದಿದ್ದಾರೆ, ಮೋಸಕ್ಕೆ ಒಳಗು ಮಾಡಿದ್ದಾರೆ. ನಾನು ಈ ವಿಷಯವನ್ನು ಸದನದಲ್ಲಿ, ರಾಜ್ಯದಲ್ಲಿ ಮತ್ತು ರಾಷ್ಟ್ರದಲ್ಲಿ ಚರ್ಚೆಗೆ ಬಿಡಲಿಕ್ಕೆ ಇಷ್ಟಪಡುತ್ತೇನೆ. Whethere the Government can lie in its speech? Is there any punishment for such a thing in the Constitution? ಇದರಬಗ್ಗೆ ಚರ್ಚೆ ಆಗಬೇಕು. ನಾನು ಆಗಲೇ ಸ್ಪಷ್ಟವಾಗಿ ಹೇಳಿದ್ದೇನೆ. ನಾನು ಹೇಳಿದ ಯಾವುದೇ ಮಾತಿನಲ್ಲಿ ತಪ್ಪಿದ್ದರೆ, ಅದಕ್ಕೆ ಬೇಕಾದ ಶಿಕ್ಷೆಯನ್ನು ನಾನು ಅನುಭವಿಸುತ್ತೇನೆ. ಪ್ರಾಧಿಕಾರವನ್ನು ರಚನೆ ಮಾಡಿದ್ದು ಕೇಂದ್ರಸರ್ಕಾರ. ಇದರ ಉದ್ದೇಶ ಮಧ್ಯಂತರ ತೀರ್ಪಿನಲ್ಲಿ ಏನು ತೀರ್ಮಾನವನ್ನು ಕೊಟ್ಟಿದ್ದಾರೆ. ಅದನ್ನು ಜಾರಿಗೊಳಿಸುವುದಕ್ಕಾಗಿ ಆದರೆ, ಸನ್ಮಾನ್ಯ ಅಧ್ಯಕ್ಷರೇ, ರಾಜ್ಯಪಾಲರ ಮುಖಾಂತರ ಈ ರಾಜ್ಯದ ಜನತೆಗೆ, ಈ ಸದನದಲ್ಲಿ ಅವತ್ತು ಕುಳಿತಿದ್ದ ಸದಸ್ಯರಿಗೆ ಭಾಷಣ ಮಾಡಿಸುತ್ತಾರೆ. ರಾಜ್ಯಗಳ ಮಧ್ಯದಲ್ಲಿರುವ ನೀರಾವರಿ ವ್ಯಾಜ್ಯವನ್ನು ತೀರ್ಮಾನ ಮಾಡುವುದಕ್ಕೆ ಒಂದು ಪ್ರಾಧಿಕಾರವನ್ನು ರಚನೆ ಮಾಡಿದ್ದೇವೆಂದು. And they claim that it is a feather in their cap. ಕಾವೇರಿ ಕೊಳ್ಳದ ಜನರ ಕೊರಳನ್ನು ಕೊಯ್ದಂಥ ಜನರ ನಡವಳಿಕೆಯನ್ನು, By agreeing for the constitution of an authority, they have withdrawn the confidence of the people during 1994 elections. ಸಮೃದ್ಧ ಕರ್ನಾಟಕವನ್ನು ಕಟ್ಟುತ್ತೇವೆಂದು ಹೇಳಿ ಅಧಿಕಾರಕ್ಕೆ ಬಂದಂಥ ಜನ, ಯಾವ ಮಧ್ಯಂತರ ತೀರ್ಪನ್ನು ಜಾರಿಗೊಳಿಸುವುದಿಲ್ಲವೆಂದು ಹೇಳಿದ್ದರೋ, ಆ ಮಧ್ಯಂತರ ತೀರ್ಪನ್ನು ಜಾರಿಗೊಳಿಸುವುದಕ್ಕೆ ಒಪ್ಪಿಗೆ ಕೊಡುವುದರ ಮೂಲಕ ಕಾವೇರಿ ಕೊಳ್ಳದ ಜನರ ಕೊರಳನ್ನು ಕೊಯ್ದಂಥ ಜನ, ಇವರ ನಡವಳಿಕೆಯನ್ನು ಅಲ್ಲಿಗೆ ನಿಲ್ಲಿಸಲಿಲ್ಲ. ನಾನು ಮುಂದಕ್ಕೆ ಪದಪ್ರಯೋಗದ ಮಾತನ್ನು ಹೇಳಬೇಕಾಗುತ್ತದೆ. ಇದು ನೀಚತನದ ಪರಮಾವಧಿ. ಒಂದು ಮಾತನ್ನು ನನ್ನ ಸ್ನೇಹಿತರಾದ ಸೋಮಶೇಖರರವರು ಹೇಳಿದರು. ನಿಮ್ಮನ್ನು ಪ್ರೀತಿಯಿಂದ ಜನ ಗೆಲ್ಲಿಸಲಿಲ್ಲ. ಹೌದು ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ರೊಚ್ಚಿಗೆದ್ದು ಜನ ನಿಮ್ಮನ್ನು ಗೆಲ್ಲಿಸಿದರು ಎಂದು ನಮ್ಮ ಕಡೆ ಬೆರಳು ತೋರಿಸಿದರು. ಇದು ನೂರಕ್ಕೆ ನೂರು ಸತ್ಯವಾದಂಥ ಮಾತು. It is true that it is an anti-establishment vote. What is that anti-establisament who is responsile for that and who was in power at that time? ಸನ್ಮಾನ್ಯ ಅಧ್ಯಕ್ಷರೇ. ನಾನು ತಮ್ಮನ್ನು ಮತ್ತು ತಮ್ಮ ಮೂಲಕ ನನ್ನ ಸ್ನೇಹಿತರನ್ನು ಕನ್ವಿನ್ಸ್ ಮಾಡುವುದಕ್ಕೆ ಪ್ರಯತ್ನ ಮಾಡಿದ್ದು ಇಷ್ಟೆ. "The Prime Minister is desiganted as the Chairman." "This has given a new dimension to resolve the river water dispute." As i said, i am not an authority on any matter. I am an ordinary man. Let this matter be refered to any right thinking persons. Let there be a committee. I request the Chief Minister to

constitute a committee on this matter. ದಯಮಾಡಿ ಕ್ಷಮಿಸಬೇಕು. ನನಗೆ ಕನ್ನಡದ ಕಾಪಿ ಸಿಕ್ಕಲಿಲ್ಲ. ಇಂಗ್ಲಿಷ್ ಕಾಪಿ ಸಿಕ್ಕಿದ್ದರಿಂದ ಅದನ್ನೇ ಓದಬೇಕಾಗಿದೆ. "This has given a new dimension in resolving the river water dispute." ಯಾವ ಪ್ರಾಧಿಕಾರವನ್ನು ಮಧ್ಯಂತರ ತೀರ್ಪನ್ನು ಜಾರಿಗೊಳಿಸುವುದಕ್ಕೆ ಉಸ್ತುವಾರಿ ನೋಡಿಕೊಳ್ಳುವುದಕ್ಕೆ ರಚನೆ ಮಾಡಿದರೋ, ಆ ಪ್ರಾಧಿಕಾರ ನೀರಿನ ವಿಷಯವನ್ನು ತೀರ್ಮಾನ ಮಾಡುವುದಕ್ಕೆ ಮಾಡಿದ್ದು ಎಂದು ಹೇಳಿ ರಾಜ್ಯಪಾಲರ ಮುಖಾಂತರ ಭಾಷಣವನ್ನು ಮಾಡಿಸಿ, ಈ ರಾಜ್ಯದ ಜನತೆಗೆ ಮೋಸವನ್ನು ಮಾಡಿದಂಥ ಈ ಸುಳ್ಳಿನ ನಡವಳಿಕೆಗೆ ಯಾವ ಶಿಕ್ಷೆ ಕೊಡಬೇಕೋ ನನಗೆ ಗೊತ್ತಿಲ್ಲ. ತಾವು ಆ ತೀರ್ಮಾನವನ್ನು ಮಾಡಬೇಕು. ಇದು ಅಲ್ಲಿಗೇ ನಿಲ್ಲಲಿಲ್ಲ.

**ಛೇರ್ಮನ್ :** ಮಾನ್ಯ ರಾಮಯ್ಯನವರೇ, ನೀವು ಸುಳ್ಳು, ಸುಳ್ಳು ಎಂದು ಎರಡು ಮೂರು ಸಾರಿ ಹೇಳಿದಿರಿ. ಇವೆಲ್ಲಾ ಅನ್ ಪಾರ್ಲಿಮೆಂಟರಿ ಪದಗಳಾಗುತ್ತವೆ. ಇವುಗಳನ್ನು ಮಾಡಿ. ಸತ್ಯಕ್ಕೆ ದೂರವಾದುದು ಎಂದು ಹೇಳಿ.

**ಶ್ರೀ ವೈ.ಕೆ. ರಾಮಯ್ಯ :** ಮೊನ್ನೆ ಯಡಿಯೂರು ಜಾತ್ರೆಯಾಗುತ್ತಾ ಇದೆ. ಕರೆಂಟ್ ಇಲ್ಲ, ನಾನು ನಿದ್ದೆ ಮಾಡುವುದಕ್ಕೆ ಬಿಡುತ್ತಾ ಇಲ್ಲ. ಜನ ಎಲ್ಲಾ ಬೈಯ್ಯುತ್ತಿದ್ದಾರೆ ಎಂದು ಯಾರೋ ಒಬ್ಬರು ಮೊನ್ನೆ ಹೇಳುತ್ತಾ ಇದ್ದರು. ಅದಕ್ಕೆ, ನೀವು ರಾಜಕಾರಣಿಗಳು ಇರುವುದೇ ಬೈಸಿಕೊಳ್ಳುವುಕ್ಕೆ ಎಂದು ಹೇಳುತ್ತಿದ್ದಾರೆ. ಇಲ್ಲಿ ಕೆ.ಇ.ಬಿ. ಮಂತ್ರಿಗಳು ಇದ್ದಾರೋ ಏನೋ ನನಗೆ ಗೊತ್ತಿಲ್ಲ. How courageeous he is? How adamant he is? ನೀವು ಇರುವುದೇ ಬೈಸಿಕೊಳ್ಳುವುದಕ್ಕೆ ನಾವೇನೋ ಬಿಡಿ. We are the last resort of the Scoundrais. ಎಲ್ಲಿಯೂ ಸಲ್ಲದವರು. ರಾಜ್ಯಪಾಲರು ಎಲ್ಲಾ ಕಡೆಯೂ ಸಲ್ಲುವಂತಹವರು ಆ ಸ್ಥಾನಕ್ಕೆ ಗೌರವ ಇದೆ. ಅವರ ಮಾತಿಗೆ ಪೂಜ್ಯ ಭಾವನೆ ಇದೆ. ಇಲ್ಲಿ ಅವರು ಬಂದಾಗ ನಾವೆಲ್ಲಾ ಎದ್ದುನಿಂತುಕೊಳ್ಳುತ್ತೇವೆ. ದೇವರು ಬಂದಹಾಗೆ, ನಮ್ಮ ಕಡೆ ದೇವರು ಬಂದಾಗ ಎದ್ದು ನಿಲ್ಲುತ್ತೇವಲ್ಲ ಹಾಗೆ. ಅಷ್ಟೊಂದು ಗೌರವಪೂರ್ವಕವಾಗಿ ನಾವು ಅವರನ್ನು ಕಾಣುತ್ತೇವೆ. ಅಂತಹವರ ಕೈಯಲ್ಲಿ ನೀವು xxx ಹೇಳಿಸಿದ್ದೀರಲ್ಲ ಸ್ವಾಮಿ. xxx ಹೇಳಿಸುವಂತಹ ನೀಚತನ ಅಲ್ಲಿಗೆ ನಿಲ್ಲಲಿಲ್ಲ.

**ಒಬ್ಬ ಮಾನ್ಯ ಸದಸ್ಯರು :** ಪುನಃ ಅವರು ಸುಳ್ಳು, ಸುಳ್ಳು ಎಂದೇ ಹೇಳುತ್ತಾ ಬರುತ್ತಿದ್ದಾರೆ.....

**ಶ್ರೀ ವೈ.ಕೆ. ರಾಮಯ್ಯ :** ಕ್ಷಮಿಸಿ, ಸತ್ಯಕ್ಕೆ ದೂರವಾದ ಮಾತು.

**ಶ್ರೀ ಕೆ.ಹೆಚ್. ರಂಗನಾಥ್ :** ಸುಳ್ಳು ಎಂಬ ಪದವನ್ನು ಹೇಳಬಹುದೆಂದು ಈ ಸಭೆಯಲ್ಲಿಯೇ ಅಧ್ಯಕ್ಷರು ತೀರ್ಮಾನಕೊಟ್ಟಿದ್ದಾರೆ.

**ಶ್ರೀ ವೈ.ಕೆ. ರಾಮಯ್ಯ :** ಆಯಿತು. ಹಿರಿಯರು ಹೇಳಿದ ಮಾತನ್ನು ಕೇಳೋಣ.

**ಶ್ರೀ ಎಸ್.ಎಸ್. ಪಾಟೀಲ್ :** ನಮ್ಮ ಕಡೆ ಒಂದು ಗಾದೆ ಇದೆ. ಅಳಿಯ ಅಲ್ಲ, ಮಗಳ ಗಂಡ ಎಂದು. ಹಾಗೆಯೇ ಸುಳ್ಳು, ಸತ್ಯಕ್ಕೆ ದೂರವಾದ ಮಾತು. ಸುಳ್ಳು ಎಂದು ಹೇಳಿದರೆ ತಪ್ಪೇನಿಲ್ಲ.

**ಶ್ರೀ ಪಿ.ಜಿ.ಆರ್. ಸಿಂಧ್ಯ :** ಅಧ್ಯಕ್ಷರೇ, ಶ್ರೀಮಾನ್ ವೈ.ಕೆ. ರಾಮಯ್ಯನವರು ನಮ್ಮ ಜೊತೆಯಲ್ಲಿ ಇದ್ದವರು ಬಹಳಷ್ಟು ವರ್ಷಗಳ ಕಾಲ ನಮ್ಮ ಮಂತ್ರಿಮಂಡಲದಲ್ಲಿ ಮಂತ್ರಿಗಳಾಗಿದ್ದವರು. ಕಾವೇರಿಗೆ ಸಂಬಂಧಪಟ್ಟಂತೆ ಎಲ್ಲಾ ವಿಚಾರದಲ್ಲೂ ಸಹಿತ ನಮ್ಮ ಪಕ್ಷ ಏಕೆಂದರೆ ಸರ್ಕಾರಗಳೆಲ್ಲ ಆಯಾ ಪಕ್ಷದ ಆದೇಶದಂತೆ ನಡೆಯುವುದು. ನಮ್ಮ ಪಕ್ಷ ಏನು

ತೀರ್ಮಾನವನ್ನು ತೆಗೆದುಕೊಂಡಿತ್ತು. ಆ ತೀರ್ಮಾನಕ್ಕೆ ಬೇರೆ ಅಭಿಪ್ರಾಯವನ್ನು ಶ್ರೀಮಾನ್ ವೈ.ಕೆ. ರಾಮಯ್ಯನವರು ಯಾವತ್ತೂ ಸಹಿತ ವ್ಯಕ್ತಮಾಡಿಲ್ಲ. ಪಕ್ಷದ ವೇದಿಕೆಯಲ್ಲಾಗಲೀ ಅಥವಾ ಸಚಿವ ಸಂಪುಟದಲ್ಲಾಗಲೀ ಹೇಳಿಲ್ಲ. ಇದು ಮೊದಲನೆಯದು. ಎರಡನೆಯದಾಗಿ, ಅವರು ಏನು ಹೇಳುತ್ತಿದ್ದಾರೆ. ೨೦೦೦ ಇಸವಿಯಲ್ಲಿ ಮಾಡಿರತಕ್ಕ ರಾಜ್ಯಪಾಲರ ಬಾಷಣದ ಬಗ್ಗೆ ಅವರಿನ್ನೂ ಬಂದಿಲ್ಲ. ೧೯೯೯ರಲ್ಲಿ ಅವತ್ತಿನ ಜೆ.ಹೆಚ್. ಪಟೇಲರ ಸರ್ಕಾರ ರಾಜ್ಯಪಾಲರ ಮೂಲಕ ಸತ್ಯಕ್ಕೆ ದೂರವಾದ ವಿಷಯಗಳನ್ನು ಹೇಳಿ ನೀಚತನವನ್ನು ಮಾಡಿತು ಎನ್ನುವ ವಿಚಾರವನ್ನು ಅವರು ಹೇಳಿದ್ದಾರೆ. ನಾವು ನೀಚರು ಎಂದೇ ಜನ ನಮ್ಮನ್ನು ಈ ಕಡೆ ಕೂರಿಸಿದ್ದಾರೆ ಎಂಬುದನ್ನು ನಾವು ಒಪ್ಪಿಕೊಂಡಿದ್ದೇವೆ. ಜೆ.ಹೆಚ್.ಪಟೇಲರು ಮತ್ತು ನಾವೆಲ್ಲಾ ಪರಮ ನೀಚರು. ನಾವು ೧೮ ಜನಕ್ಕೆ ಇಳಿದಿದ್ದೇವೆ. ನಿಮಗೆ ಜನ ಪಾಸಿಟೀವ್ ಆಗಿ ಓಟು ಕೊಟ್ಟಿದ್ದಾರೆ. ೧೩೦ ಜನ ಗೆದ್ದಿದೀರಿ ಬಹಳ ಪಾಸಿಟೀವ್ ಆಕ್ಷನ್, ಸಿ.ಎಂ. ರವರು ಡಿಪೆಂಡ್ ಮಾಡಿಕೊಂಡಿದ್ದಾರೆ. ಇನ್ನೂ ೨೫ ಜನಕ್ಕೆ ಸೇರಿಸಿಕೊಂಡಿದ್ದೀರಿ. ಇನ್ನೂ ೫-೬ ಜನರನ್ನು ಸೇರಿಸಿಕೊಳ್ಳಲುಬಹುದು. ಅದಕ್ಕೆ ನಮ್ಮದೇನೂ ತಕರಾರು ಇಲ್ಲ. ನಾನು ಹೇಳುವುದು, ಈ ಕಾವೇರಿ ವಿವಾದದ ಬಗ್ಗೆ, ನಾವೆಲ್ಲಾ ಪರಮ ನೀಚರೇ. ಜೆ.ಹೆಚ್.ಪಟೇಲರು ಮತ್ತು ನಮ್ಮ ಸರ್ಕಾರದವರು ಬಹಳ ನೀಚ ಕೆಲವನ್ನು ಮಾಡಿಬಿಟ್ಟಿದ್ದೇವೆ. ಇವರು ಪೂರ್ವಕ್ಕೆ ಹರಿಯತಕ್ಕ ಹೊಳೆಗಳನ್ನೆಲ್ಲಾ ಪಶ್ಚಿಮಕ್ಕೆ ಹರಿಸಿ, ಕರ್ನಾಟಕದ ಸಮೃದ್ಧಿ ಮಾಡುವುದನ್ನು ನಾವು ಮುಂದೆ ೫ ವರ್ಷದಲ್ಲಿ ನೋಡೋಣ. ನಾನು ಶ್ರೀಮಾನ್ ವೈ.ಕೆ. ರಾಮಯ್ಯನವರಿಗೆ ಕೇಳುತ್ತಾ ಇರುವುದೇನೆಂದರೆ, ಕಾವೇರಿ ವಿವಾದದ ಬಗ್ಗೆ ಸುಪ್ರೀಂಕೋರ್ಟಿನಲ್ಲಿ ತೀರ್ಮಾನವಾಗಿರುವುದು ನಿಜ. ಟ್ರಿಬ್ಯುನಲ್‌ಗೆ ಅವಾರ್ಡ್ ಕೊಟ್ಟಿರುತಕ್ಕಂಥದ್ದು ನಿಜ. ಶ್ರೀಮಾನ್ ಅಟಲ್ ಬಿಹಾರಿ ವಾಜಪೇಯಿಯವರು ಇಬ್ಬರು ಮುಖ್ಯಮಂತ್ರಿಗಳನ್ನೂ ಕರೆಸಿ ಅದಕ್ಕೊಂದು ರೆಗ್ಯುಲೇಟರಿ ಕಮಿಟಿ ಎಂದು ಮಾಡಿರತಕ್ಕಂಥಾದ್ದು ನಿಜ. ನೀರನ್ನು ಬಿಟ್ಟಿರತಕ್ಕಂಥಾದ್ದು ನಿಜ. ಇವೆಲ್ಲಾ ಸತ್ಯಾಂಶಗಳು, ಇದನ್ನೆಲ್ಲಾ ಯಾರೂ ಡಿನೈ ಮಾಡುವುದಕ್ಕಾಗುವುದಿಲ್ಲ. ಕೊನೇ ಪಕ್ಷ ಈ ಸದನಕ್ಕೆ ಅಥವಾ ರಾಜ್ಯಕ್ಕೆ ಅದನ್ನು ಬಿಟ್ಟು ಏನು ಮಾಡಬಹುದಿತ್ತು ಎಂಬುದನ್ನು ತಾವು ದಯವಿಟ್ಟು ಸಜೆಸ್ಟ್ ಮಾಡಿ.

**ಶ್ರೀ ವೈ.ಕೆ. ರಾಮಯ್ಯ :** ಕರ್ನಾಟಕ ರಾಜ್ಯದಲ್ಲಿರುವಂತಹ ನೀರಾವರಿ ಯೋಜನೆಗಳ ಅನುಷ್ಠಾನ ಅದರಲ್ಲೂ ಬೃಹತ್ ನೀರಾವರಿ ಯೋಜನೆಗಳ ಅನುಷ್ಠಾನದ ಬಗ್ಗೆ ಚರ್ಚೆ ಆಗಲೇಬೇಕೆಂದು ನಾನು ಅಧ್ಯಕ್ಷರಲ್ಲಿ ಹಠ ಹಿಡಿದ್ದಿದ್ದೇನೆ. ಆ ಅನುಷ್ಠಾನ ನಿಧಾನ ವಾಗಿರುವುದರ ಬಗ್ಗೆ ಚರ್ಚೆ ಮಾಡಬೇಕು. ನಾನು ಮುಖ್ಯಮಂತ್ರಿಗಳಲ್ಲೂ ಪ್ರಾರ್ಥನೆ ಮಾಡಿಕೊಂಡಿದ್ದೇನೆ. ಹಾಗೆ ಚರ್ಚೆ ಮಾಡುವಾಗ ನನ್ನ ಸ್ನೇಹಿತರು ಹೇಳಿತಂದಹ ಪ್ರಶ್ನೆಗೆ ಉತ್ತರ ಹೇಳುತ್ತೇನೆ. My contention in now confined to convince that the then governement lied through the Governor's speech. ಕಾವೇರಿ ಬಗ್ಗೆ ಏನು ಮಾಡಬೇಕೆಂಬುದಕ್ಕೆ ನನ್ನ ಅಭಿಲಾಷೆ ಏನಿದೆಯೋ ನನಗೆ ಗೊತ್ತಿದೆ ಕೆಲವು ಸಂಗತಿಗಳು ಇವೆ. ಆ ಸಂದರ್ಭದಲ್ಲಿ ಅವುಗಳನ್ನು ಹೇಳುತ್ತೇನೆ. ಅದು ಅಲ್ಲಿಗೆ ನಿಲ್ಲಲಿಲ್ಲ. ನಾನು ಏಕೆ ಈ ಮಾತನ್ನು ಹೇಳುತ್ತಿದ್ದೇನೆಂದರೆ, ರಾಜ್ಯಪಾಲರ ಮೂಲಕ ಈ ಭಾಷಣ ಮಾಡಿಸುತ್ತೇವಲ್ಲ ಇದೇನಿದು. ನನಗೆ ಗೊತ್ತಿಲ್ಲದೆ ಹೇಳುತ್ತಿದ್ದೇನೆ. ಇಂತಾದ್ದನ್ನೆಲ್ಲಾ ರಾಜ್ಯಪಾಲರ ಭಾಷಣದಲ್ಲಿ ಮಾಡುವುದಕ್ಕೆ ಸಾಧ್ಯವೇ ಎಂದು ತಿಳಿದುಕೊಳ್ಳುವುದಕ್ಕೆ ಒಬ್ಬ ವಿದ್ಯಾರ್ಥಿಯಾಗಿ ಹೇಳುತ್ತಿದ್ದೇನೆ. ಮತ್ತೆ ಹೇಳುತ್ತಾರೆ. ಇದು

೧೯೯೦ರ ರಾಜ್ಯಪಾಲರ ಭಾಷಣ. "In coordination with the Japan International Co-operative Agency, a new and vigorous rafe of bivoltine silk work has been introduced." ಇದನ್ನು ಹಸಿ ಸುಳ್ಳು ಎಂದು ನಮ್ಮ ಕಡೆ ಹೇಳುತ್ತಾರೆ. I would like to mnow from anybody, not in Karnataka, in this country, is there any new bivoltine race that has been evolved. If so, tell me the name. Then why you have said so? ಅಧಿಕಾರಿಗಳು ಯಾವುದೂ ಇಲ್ಲವೆಂದು ಹೇಳುತ್ತಾರೆ. Then, why you have said? ನಮ್ಮ ಮುಖ್ಯಮಂತ್ರಿಗಳ ಆಯವ್ಯಯದ ಭಾಷಣ ಜೊಗಳೆ ಭಾಷಣ ಎಂದು ಅವರು ಹೇಳಿದ್ದಾರೆ. ಅದು ಕಡತದಲ್ಲಿದೆ. ಇದಕ್ಕೆ ಏನು ಹೇಳುತ್ತೀರಿ?

**ಶ್ರೀ ಡಿ.ವಿ. ಸದಾನಂದಗೌಡ :** ಮಾನ್ಯ ಅಧ್ಯಕ್ಷರೆ, ಅಜೆಂಡಾದಲ್ಲಿ 'ರಾಜ್ಯಪಾಲರ ಭಾಷಣಕ್ಕೆ ಸಂಬಂಧಿಸಿದ ವಂದನಾರ್ಪಣಾ ಪ್ರಸ್ತಾವ' ಅಡಿಯಲ್ಲಿ "೨೦೦೦ದ ಮಾರ್ಚ್ ೧೫ರಂದು ವಿಧಾನ ಮಂಡಲದ ಉಭಯ ಸದನಗಳ ಸದಸ್ಯರುಗಳನ್ನು ಉದ್ದೇಶಿಸಿ, ದಯಪಾಲಿಸಿ ಭಾಷಣಕ್ಕಾಗಿ ಈ ಅಧಿವೇಶನದಲ್ಲಿ ಸೇರಿರುವ ವಿಧಾನಸಭೆಯ ಸದಸ್ಯರಾದ ನಾವು ರಾಜ್ಯಪಾಲರಿಗೆ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಸಮರ್ಪಿಸಲು ಅಪ್ಪಣೆ ಕೋರುತ್ತೇವೆ." ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಇದರ ಮೇಲೆ ಈಗ ಚರ್ಚೆಯಾಗುತ್ತಿದೆ. ಆದರೆ ಮಾನ್ಯ ವೈ.ಕೆ. ರಾಮಯ್ಯನವರು ಕಳೆದ ಸದನದಲ್ಲಿ ಇರಲಿಲ್ಲ. ಆದರೆ ಅವರು ಈ ರಾಜ್ಯಪಾಲರ ಭಾಷಣದ ಮೇಲೆ ಚರ್ಚೆ ಮಾಡುವುದರ ಬದಲಾಗಿ ಕಳೆದ ವರ್ಷದ ರಾಜ್ಯಪಾಲರ ಭಾಷಣದ ಮೇಲೆ ಚರ್ಚೆ ಮಾಡುತ್ತಿದ್ದಾರೆಯೋ ಎಂದು ಅನುಮಾನ ಬರುತ್ತಿದೆ.

**ಶ್ರೀ ವೈ.ಕೆ. ರಾಮಯ್ಯ :** ಒಂದು ನಿಮಿಷ ನನ್ನ ಸ್ನೇಹಿತರು ತಮ್ಮ ಸಹನೆ ತೋರಿದರೆ ನನ್ನ ವಾದವನ್ನು ಅದಕ್ಕೆ ತಳುಕು ಹಾಕುತ್ತೇನೆ. ಅವರ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ. ಆದ್ದರಿಂದ ನಾನು, I am prepared to swear. I am aprepared to file an Affedavit that no new bivoltine race has been evolved in this country. ಬೇಕಾದರೆ ಇದ್ದರೆ ಹೇಳಿ, ಮಂತ್ರಿಗಳು ಇದ್ದಾರೆ. ಯಾವ ರೇಸಿದೆಯೋ ಆದ್ದರಿಂದ ನಾನು ಇದನ್ನು ಕೇವಲ ಉದಾಹರಣೆಯಾಗಿ ಮಾತ್ರ ಹೇಳಿದ್ದೇನೆ. ಇನ್ನು ಮುಂದಾದರೂ ರಾಜ್ಯಪಾಲರು ಭಾಷಣವನ್ನು ಓದುವಾಗ ಅದನ್ನು ಮೊದಲೇ ಓದಿಕೊಂಡು ಅದರಲ್ಲಿ ಯಾವುದು ಸರಿಯಾಗಿದೆ, ಯಾವುದು ಸರಿಯಾಗಿಲ್ಲ ಎಂಬುದನ್ನು ತಿಳಿದುಕೊಂಡು ಅನಂತರ ಇಲ್ಲಿ ಬಂದು ಓದಬೇಕೆಂದು ಸದನದ ಮೂಲಕ ರಾಜ್ಯಪಾಲರಿಗೆ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಏಕೆಂದರೆ ನಮ್ಮ ತಪಲಿಗೆ In ourder to serve our political ends, we may write so many things. ಟ್ರಿಬ್ಯುನಲ್‌ನ್ನು ಅಥಾರಿಟಿ ಮಾಡಬಹುದು, ಅಥಾರಿಟಿಯನ್ನು ಟ್ರಿಬ್ಯುನಲ್ ಮಾಡಬಹುದು. ಕತ್ತೆಯನ್ನು ಕುದುರೆ ಮಾಡುತ್ತೇವೆ. ಕುದುರೆಯನ್ನು ಕತ್ತೆ ಮಾಡುತ್ತೇವೆ. ಆದರೆ ಅವೆಲ್ಲವನ್ನೂ ಇಲ್ಲಿ ಬಂದು ಓದಬೇಡಿ. ಇನ್ನು ಮುಂದಾದರೂ ರಾಜ್ಯಪಾಲರು ತಮ್ಮ ಭಾಷಣವನ್ನು ಒಂದು ಸಲ ನೋಡಿ ಅದು ಸರಿಯಾಗಿದೆಯೆ, ಇಲ್ಲವೇ ಎಂಬುದನ್ನು ಪರಿಶೀಲನೆ ಮಾಡಿ ಅವರ ಭಾಷಣವನ್ನು ಓದಬೇಕೆಂದು ಹೇಳಬಯಸುತ್ತೇನೆ. ಮಾನ್ಯ ಸದಾನಂದಗೌಡರು ಹೋದ ಸದನದಲ್ಲಿ ನಾನು ಇರಲಿಲ್ಲ. ನಾನು ಈ ವರ್ಷದ ಭಾಷಣದ ಬಗ್ಗೆ ಮಾತನಾಡುತ್ತಿದ್ದಾನೋ ಹಿಂದಿನ ವರ್ಷದ ಭಾಷಣದ ಬಗ್ಗೆ ಮಾತನಾಡುತ್ತಿದ್ದಾರೋ ಎಂಬ ಅನುಮಾನ ಬರುತ್ತಿದೆ ಎಂದು ಹೇಳಿದ್ದಾರೆ. ಖಂಡಿತ ನಾನು ಹಿಂದಿನ ರಾಜ್ಯಪಾಲರ ಭಾಷಣದ

ಹಿನ್ನೆಲೆಯನ್ನು ಹೇಳಿದಂಥ ಉದ್ದೇಶವೇನೆಂದರೆ ಯಾವುದೇ ಮುಂದಿನ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದಕ್ಕಿಂತ ಮೊದಲು ನಮ್ಮ ಹಳೆಯ ಅನುಭವವನ್ನು, ಹಳೆಯ ಪಾಠವನ್ನು ಆಧಾರವಾಗಿಟ್ಟುಕೊಳ್ಳಬೇಕು ಎಂಬುದಾಗಿದೆ. ಆ ದೃಷ್ಟಿಯಿಂದ ಹಿಂದೆ ರಾಜ್ಯಪಾಲರ ಭಾಷಣದಲ್ಲಿ ಏನನ್ನು ಹೇಳಿದ್ದರು. ಅದನ್ನೆಲ್ಲಾ ಮಾಡಿದ್ದಾರಾ ಎಂಬ ಪರಿಜ್ಞಾನವನ್ನು ಪ್ರದರ್ಶನ ಮಾಡದೆ ಈ ರಾಜ್ಯಪಾಲರ ಬೊಗಳೆ ಭಾಷಣದ ಮೇಲೆ ಮಾತನಾಡಲು ಇಷ್ಟವಿಲ್ಲವೆಂದು ಅವರದ್ದೇ ಆದ ಭಾಷೆಯಲ್ಲಿ ಅವರು ಹೇಳಿದ್ದಾರೆ. ಜೊತೆಗೆ ಇದು ಒಂದು ಪಕ್ಷಕ್ಕೆ ಸೀಮಿತವಾದ ವಿಚಾರವಲ್ಲ. ಇಂಥ ವಿಷಯಗಳನ್ನು ರಾಜ್ಯಪಾಲರ ಮೂಲಕ ಯಾವುದೇ ಸರ್ಕಾರ ಹೇಳಿಸಲು ಸಾಧ್ಯವೆ? ಅದು ಸಮಂಜಸವೆ? ಇದರ ಬಗ್ಗೆ ಚರ್ಚೆ ನಡೆಯಲಿ ಎಂಬ ಸುದುದ್ದೇಶದಿಂದ ತಮ್ಮ ಗಮನಕ್ಕೆ ತರುವ ಪ್ರಯತ್ನವನ್ನು ನಾನು ಮಾಡಿದ್ದೇನೆ.

## ನೀರಾವರಿ

## ಹೇಮಾವತಿ

೭ ಜುಲೈ ೧೯೮೪-೨೭ ಜುಲೈ ೧೯೮೪

ಮಾನ್ಯ ಅಧ್ಯಕ್ಷರೇ, ಭಾರತ ದೇಶ ವ್ಯವಸಾಯ ಪ್ರಧಾನವಾದುದು. ಈ ದೇಶದಲ್ಲಿ ವ್ಯವಸಾಯಗಾರನಿಗೆ ನೀರಿನ ಪ್ರಾಮುಖ್ಯತೆ, ನೀರಿನ ಅವಶ್ಯಕತೆ ಎಷ್ಟು ಇರಬೇಕೋ ಅಷ್ಟು ಇಲ್ಲ ಎನ್ನುವುದನ್ನು ಒತ್ತಿ ಹೇಳುವ ಅವಶ್ಯಕತೆ ಇಲ್ಲ. ವ್ಯವಸಾಯಗಾರನಿಗೆ ಉತ್ತಮವಾದ ಬೀಜ ಮತ್ತು ಉತ್ತಮವಾದ ಗೊಬ್ಬರ ಕೊಟ್ಟರೂ ಕೂಡ ಅವನಿಗೆ ನೀರು ಇಲ್ಲದೇ ಹೋದರೆ, ಸಾಕಷ್ಟು ಒದಗಿಸದೆ ಹೋದರೆ ಅವನ ಬೆಳೆಯೆಲ್ಲಾ ಹಾಳಾಗಿ ಹೋಗುತ್ತದೆ. ಇಂತಹ ದಾರುಣ ಪರಿಸ್ಥಿತಿಯನ್ನು ನಾವು ಪ್ರತಿವರ್ಷವೂ ನೋಡುತ್ತಾ ಇದ್ದೇವೆ. ಈ ಒಂದು ಪರಿಸ್ಥಿತಿಯನ್ನು ನೀಗಲಿಕ್ಕಾಗಿ ಹೇಮಾವತಿ ಯೋಜನೆಯನ್ನು ಸುಮಾರು ೧೯೭೦ರಲ್ಲೇ ಪ್ರಾರಂಭ ಮಾಡಿದರು. ಈ ಒಂದು ಯೋಜನೆಗೆ ಇವತ್ತಿನ ವೆಚ್ಚ ೩೮೭ ಕೋಟಿ ರೂಪಾಯಿಗಳು. ಈ ಒಂದು ಯೋಜನೆಯ ಪ್ರಕಾರ ೬ ಲಕ್ಷ ೫೫ ಸಾವಿರ ಎಕರೆ ಭೂಮಿಗೆ ನೀರನ್ನು ಉಣಿಸಿ ರೈತನ ಒಂದು ಆರ್ಥಿಕ ಪರಿಸ್ಥಿತಿಯನ್ನು ಉತ್ತಮಪಡಿಸಬೇಕಾಗಿತ್ತು. ಇದು ೧೯೭೦ರಲ್ಲಿ ಮೊದಲು ಪ್ರಾರಂಭ ಮಾಡಿದರೂ ಕೂಡ ೧೯೭೩ನೇ ಇಸವಿಗೆ ತುಮಕೂರು ಜಿಲ್ಲೆಯ ಗುಬ್ಬಿ, ತಿಪಟೂರು, ತುಮಕೂರು ಮತ್ತು ಕುಣಿಗಲ್ ಇದರ ಜೊತೆಗೆ ಮಂಡ್ಯ ಜಿಲ್ಲೆಯ ಯಾವಾಗಲೂ ಬರಗಾಲ ಆಗಿರತಕ್ಕಂತಹ ನಾಗಮಂಗಲ ತಾಲ್ಲೂಕಿನ ಕೆಲವು ಸ್ಥಳಗಳಿಗೆ ಈ ನೀರನ್ನು ಕೊಡಬೇಕೆನ್ನುವ ತೀರ್ಮಾನವನ್ನು ತೆಗೆದುಕೊಳ್ಳಲಾಯಿತು. ಇದು ಅದೃಷ್ಟವೋ ದುರಾದೃಷ್ಟವೋ ನನಗೆ ಗೊತ್ತಿಲ್ಲ. ೧೯೭೩ನೇ ಇಸವಿಗೆ ಆ ಸ್ಥಳಗಳಿಗೆ ಈ ನೀರನ್ನು ಒದಗಿಸಲಿಲ್ಲ. ಅಷ್ಟೇ ಅಲ್ಲ, ಬಾಗೂರು ನವಿಲೆ ಸುರಂಗ ಮಾರ್ಗವನ್ನು ತೋಡುವ ಕೆಲಸವನ್ನೂ ಸಹ ೧೯೮೪ನೇ ಇಸವಿಯವರೆಗೂ ಮಾಡಲಿಲ್ಲ. ಈ ರೀತಿಯಾಗಿ ಇದುವರೆಗೆ ಈ ಯೋಜನೆಯಲ್ಲಿ ಹಿಡಿದಿಟ್ಟಿರುವ ನೀರನ್ನು ಉಪಯೋಗಿಸಿಕೊಳ್ಳದೆ ಇರುವುದು ನಮ್ಮ ದುರಾದೃಷ್ಟಕರ. ಈ ಬಗ್ಗೆ ತೀರ್ಮಾನ ತೆಗೆದುಕೊಂಡು ೬ ವರ್ಷವಾದರೂ ಕೂಡ ಈ ಬಾಗೂರು ನವಿಲೆ ಸುರಂಗ ಮಾರ್ಗವನ್ನು ಇದುವರೆಗೂ ಏತಕ್ಕೆ ಮಾಡಲಿಲ್ಲ? ಈ ಬಗ್ಗೆ ಹಿಂದಿನ ಸರ್ಕಾರವೇ ಆಗಲೀ ಯಾವ ಸರ್ಕಾರವೇ ಆಗಲೀ, ಇವತ್ತಿನ ಸರ್ಕಾರ ಉತ್ತರ ಹೇಳಬೇಕು

ಎಂದು ನಾನು ಬಯಸುತ್ತೇನೆ. ಲಕ್ಷಾಂತರ ಜನರ ಒಕ್ಕಲಿಗರ ಪರವಾಗಿ ನಾನು ಈ ಮಾತನ್ನು ಕೇಳುತ್ತಿದ್ದೇನೆ. ಏಕೆಂದರೆ ಈ ಬಾಗೂರು ನವಿಲೆ ಸುರಂಗ ಮಾರ್ಗ ೧೯೭೩ ರಿಂದ ೧೯೭೯ನೇ ಇಸವಿಯವರೆಗೂ ತೋಡುವ ಕೆಲಸವನ್ನು ಏತಕ್ಕೆ ಮಾಡಲಿಲ್ಲ? ಎಂದು. ಆಗಿನ ಸರ್ಕಾರ ಇದನ್ನು ಏತಕ್ಕೆ ಮಾಡಲಿಲ್ಲ? ಇದಕ್ಕೆ ತಾವು ಉತ್ತರ ಹೇಳಬೇಕು. ಈ ಅವಧಿಯಲ್ಲಿ ಈ ಕೆಲಸ ಮಾಡದೇ ಇರುವುದರಿಂದ ನನಗೆ ಅಪಾರವಾದ ದುಃಖವಾಗುತ್ತದೆ. ೬ ಲಕ್ಷ ೫೫ ಸಾವಿರ ಎಕರೆಗೆ ನೀರು ಒದಗಿಸುವಂತಹ ಈ ಒಂದು ಯೋಜನೆಯನ್ನು ನಿರೂಪಿಸಿತಕ್ಕಂತಹ ಅಧಿಕಾರ ಸ್ಥಾನದಲ್ಲಿರುವವರನ್ನು ನಾವು ಕೇಳಬೇಕಾಗಿದೆ. ಮತ್ತು ಅಧಿಕಾರ ಮಾಡಬೇಕು ಎಂದು ಬಡುಬುಡಿಕೆ ಹೊಡೆದುಕೊಂಡು ತಿರುಗಾಡುತ್ತಾ ಇತರಕ್ಕಂತಹ ರಾಜಕಾರಣಿಗಳನ್ನು ನಾನು ಪ್ರಶ್ನೆ ಮಾಡುತ್ತೇನೆ. ಮೊದಲು ೬ ಲಕ್ಷ ೫೫ ಸಾವಿರ ಎಕರೆಗೆ ನೀರನ್ನು ಕೊಟ್ಟು, ಉಳಿದ ೭೫ ಸಾವಿರ ಎಕರೆಗೆ ನೀರನ್ನು ಕೊಡುವ ಹಾಗೆ ಯೋಜನೆಯನ್ನು ನಿರೂಪಿಸಿದ್ದಾರೆ. ಅವರು ಅಧಿಕಾರದಲ್ಲಿರುವಾಗ ಈ ಒಂದು ಯೋಜನೆಯನ್ನು ನಿರೂಪಿಸಲು ಅಧಿಕಾರ ಚಲಾಯಿಸಿದಂತಹ ರಾಜಕಾರಣಿಗಳು ತಮ್ಮ ಕಾಲದಲ್ಲೇ ಏನೂ ಮಾಡಲಿಲ್ಲ. ಇಂದಿನ ಪರಿಸ್ಥಿತಿ ನೋಡಿದರೆ ಇನ್ನು ೧೦ ವರ್ಷವಾದರೂ ಕೂಡ ಈ ಕಾಲುವೆ ಕೆಲಸಗಳು ಮುಗಿಯುವಂತೆ ಕಾಣುತ್ತಿಲ್ಲ. ಇನ್ನೂ ಸಾಧ್ಯವಾಗಿಲ್ಲ. ೧೯೮೦ನೇ ಇಸವಿಯಿಂದ ಇದನ್ನು ಪ್ರಾರಂಭ ಮಾಡಿದರೂ ಇನ್ನೂ ಮುಗಿದಿಲ್ಲ. ೧೯೯೦ನೇ ಇಸವಿಯಾದರೂ ಮುಗಿಯುವುದಿಲ್ಲ. ಅಲ್ಲಿಗೆ ೧೯೮೦ನೇ ಇಸವಿಯಿಂದ ೧೯೯೦ನೇ ಇಸವಿಯವರೆಗೆ ೫ ಲಕ್ಷ ೯೦ ಸಾವಿರ ಎಕರೆಗೆ ನೀರು ಕೊಟ್ಟಿದ್ದರೆ ಎಷ್ಟು ಬೆಳೆ ಬೆಳೆಯುತ್ತಿತ್ತು ಅನ್ನುವುದನ್ನು ಲೆಕ್ಕ ಹಾಕಿ ನೋಡಿದರೆ ಎಷ್ಟು ಉತ್ಪನ್ನ ಕಡಿಮೆಯಾಗಿದೆ ಅನ್ನುವುದನ್ನು ತಿಳಿದುಕೊಳ್ಳಬಹುದು. ಅದರಿಂದ ಬರುವ ಆದಾಯ ಎಷ್ಟು? ಇದರಿಂದ ದೇಶದ ಬೊಕ್ಕಸಕ್ಕೆ ಬರುತ್ತಿದ್ದ ಆದಾಯ ಎಷ್ಟು? ರೈತನ ಕಣಜಕ್ಕೆ ಹಾನಿಮಾಡಿದಂಥ ಅಧಿಕಾರಿಯಾಗಲೀ, ಸರ್ಕಾರವಾಗಲೀ, ಅರಕಲು ಚಡ್ಡಿಯ ಬಡ ರೈತನ ಶಾಪಕ್ಕೆ ತುತ್ತಾಗದೇ ಇರುವುದಿಲ್ಲ. ಇವತ್ತು ಕಟ್ಟೆಯಲ್ಲಿ ೫ ಲಕ್ಷ ೯೦ ಸಾವಿರ ಎಕರೆಗೆ ಬೇಕಾಗುವಷ್ಟು ನೀರು ಇದೆ. ಇಂಥ ಒಂದು ಕಟ್ಟೆ, ವ್ಯವಸ್ಥೆಯನ್ನು ಮಾಡಿದವರು ಕಾಂಗ್ರೆಸ್‌ನವರು ಇರಲಿ, ಜನತಾ ಸರ್ಕಾರದವರಿರಲಿ, ತುತ್ತು ಅನ್ನ ಇಲ್ಲದೆ ನರಳುತ್ತಿರುವ ಬಡ ರೈತನ ಶಾಪಕ್ಕೆ ನೀವು ಗುರಿಯಾಗುತ್ತೀರೆಂದು ಖಡಾಖಂಡಿತವಾಗಿ ಹೇಳುತ್ತೇನೆ. ಇದಕ್ಕೆ ರಾಜಕೀಯ ಬಣ್ಣವನ್ನು ಕೊಡದೆ ಉಳಿದಿರುವಂತಹ ನೀರನ್ನು ಉಪಯೋಗಿಸಿಕೊಳ್ಳುವ ದಿಸೆಯಲ್ಲಿ ಸೂಕ್ತ ಕ್ರಮವನ್ನು ಮಾನ್ಯ ಮಂತ್ರಿಗಳು ಕೈಗೊಳ್ಳಬೇಕೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ. ಸ್ವಾಮಿ, ನಾವು ಪತ್ರಿಕೆಯಲ್ಲಿ ಓದಿದ ಪ್ರಕಾರ ಮಾನ್ಯ ಮಂತ್ರಿಯವರು ನಮ್ಮನ್ನು ಸ್ಥಳಕ್ಕೆ ಕರೆದುಕೊಂಡು ಹೋಗಿದ್ದರು. ತುಮಕೂರು ಜಿಲ್ಲೆಗೆ ನೀರು ಕೊಡುವುದಕ್ಕೆ ನಿಧಾನವಾಗಿರುವುದಕ್ಕೆ ಕಾರಣ ಏನು ಎನ್ನುವುದನ್ನು ತೋರಿಸಲಿಕ್ಕೆ ಕರೆದುಕೊಂಡು ಹೋಗಿದ್ದರು. ಬಹಳ ಪ್ರಮುಖವಾದ ಕಾರಣ 'ಬಾಗೂರು ನವಿಲೆ ಸುರಂಗ' ಮಾರ್ಗದ ಕೆಲಸ ಆಗದೇ ಇರುವುದು; ಇದರ ನಿಧಾನಕ್ಕೆ ಕಾರಣವನ್ನು ಕೊಟ್ಟರು. ಸುರಂಗ ಮಾರ್ಗದ ಉದ್ದ ಸುಮಾರು ೯,೮೦೦ ಮೀಟರುಗಳು. ಸುರಂಗ ಮಾರ್ಗದ ಕೆಲಸ ಮಾಡಬೇಕೆಂದು ತೀರ್ಮಾನವಾದುದು ೧೯೭೩ರಲ್ಲಿ. ಕೆಲಸ ಪ್ರಾರಂಭವಾದುದು ೧೯೭೯ರಲ್ಲಿ. ೧೯೭೯ ರಿಂದ ಇಲ್ಲಿಯವರೆಗೆ ೧,೩೦೦ ಮೀಟರ್ ಕೆಲಸ ಮಾತ್ರವಾಗಿದೆ. ಶೇ. ೫೦ ಭಾಗದ ಕೆಲಸ ಕೂಡ ಆಗಿಲ್ಲ. ತುಮಕೂರು ಜಿಲ್ಲೆಗೆ ನೀರು ಕೊಡಬೇಕೇ, ಕೊಡಬಾರದೇ. ಕೊಡಲೇಬಾರದು ಎನ್ನುವ ಪ್ರಶ್ನೆಯನ್ನು ರಾಜಕಾರಣಿಗಳು ಎತ್ತಿದ್ದಾರೆ. ಸುರಂಗ ಮಾರ್ಗದ ಕೆಲಸ ನಿಧಾನವಾಗಿರುವುದಕ್ಕೆ ನಿಜವಾದಂಥ

ಕಾರಣ ಏನು ಎನ್ನುವುದನ್ನು ಮಾನ್ಯ ಮಂತ್ರಿಗಳಿಂದ ನಾನು ಬಯಸುತ್ತೇನೆ. ತುಮಕೂರು ಜಿಲ್ಲೆಯ ಕೆಲವು ಕೆಲವು ರಾಜಕಾರಣಿಗಳು ಪ್ರಕಾರ "ಶ್ರೀಮಾನ್ ದೇವೇಗೌಡರು ಹಾಸನ ಜಿಲ್ಲೆಯವರು. ಹಾಸನ ಜಿಲ್ಲೆಯ ರೈತರಿಗೆ ಅನುಕೂಲ ಮಾಡಿಕೊಡಲು, ತುಮಕೂರು ಜಿಲ್ಲೆಯ ರೈತರಿಗೆ ದ್ರೋಹ ಮಾಡುತ್ತಿದ್ದಾರೆ. ಅದಕ್ಕಾಗಿ ಸುರಂಗ ಮಾರ್ಗದ ಕೆಲಸವನ್ನು ನಿಧಾನ ಮಾಡುತ್ತಿದ್ದಾರೆ, ಬೇಕೆಂದು ಕೆಲಸ ಸ್ಥಗಿತಗೊಳಿಸಿದ್ದಾರೆ. ಆದ್ದರಿಂದ ಜಿಲ್ಲೆಯಾದ್ಯಂತ ರೈತರು ಹೋರಾಟ ಮಾಡಬೇಕು. ಶ್ರೀಮಾನ್ ದೇವೇಗೌಡರನ್ನು ಮಂತ್ರಿಪದವಿಯಿಂದ ಕಿತ್ತುಹಾಕಬೇಕು" ಎನ್ನುವ ಅಪಾದನೆ ಮಾಡುತ್ತಿದ್ದಾರೆ. ಇದು ಅಪವಾದ ಅಲ್ಲ ಎಂದು ಹೇಳುವವರಿಗೆ ಅಪವಾದ ಅಂತ ಹೇಳುತ್ತೇನೆ. ೫ ವರ್ಷಗಳಿಗೊಂದು ಸಾರಿ ರಾಜಕೀಯ ಬುಡುಬುಡಿಕೆ ಆಡಿಸಿಕೊಂಡು ಬರುವುದನ್ನು ನಾನು ನೋಡಿದ್ದೇನೆ. ಲೋಕಸಭೆ ಚುನಾವಣೆ ಮೇ ತಿಂಗಳಲ್ಲಿ ಬರುತ್ತಿದೆ. ಆಗ ನೋಡೋಣ.

ಶ್ರೀಮಾನ್ ಬೈರಪ್ಪಾಜಿಯವರು ರಾಜಕೀಯ ಬುಡಬುಡಿಕೆ ಸರಿಯಾದ ಪದ ಅಲ್ಲ, ಅಂಥ ಹೇಳುತ್ತಿದ್ದಾರೆ. ತಾವೂ 'ನಾನು ಒಬ್ಬ ರಾಜಕಾರಣಿ' ಎನ್ನುವುದನ್ನು ಮಾನ್ಯ ಬೈರಪ್ಪಾಜಿಯವರು ಮರೆಯಬಾರದು. ಚುನಾವಣೆ ಹತ್ತಿರ ಬಂದಾಗ ಬುಡಬುಡಿಕೆ ಆಡಿಸಿಕೊಂಡು ನಾನೂ ಹೋಗುತ್ತೇನೆ. ಸೂರ್ಯಚಂದ್ರರ ಬೆಳಕು ಎಷ್ಟು ಸತ್ಯವೋ ಅಷ್ಟೇ ಸತ್ಯ 'ನಾನು ಒಬ್ಬ ರಾಜಕಾರಣಿ' ಎನ್ನುವುದು. ಯಾವುದೇ ಒಬ್ಬ ವ್ಯಕ್ತಿಗಾಗಲೀ, ಗುಂಪಿಗಾಗಲಿ ಕುರಿತು ನಾನು ಮಾತನಾಡುತ್ತಿಲ್ಲ. ಸ್ವಾಮಿ, ಬಾಗೂರು-ನವಿಲೆ ಸುರಂಗ ಮಾರ್ಗದ ಕೆಲಸ ನನ್ನ ಮಿತ್ರರು ಹೇಳಿದಂತೆ ನಿಧಾನವಾಗಿದ್ದರೆ, ನಿಧಾನವಾಗಿರುವುದಕ್ಕೆ ಅವರು ಹೇಳಿರತಕ್ಕಂತಹ ಕಾರಣ ನಿಜ ಇದ್ದರೆ, ನಾನು ಇದು ನಿಜ ಎಂದು, ಹೇಳುವುದಿಲ್ಲ. ಅಂಥ ಕಾರಣ ಇದ್ದರೆ, ದಯವಿಟ್ಟು ಆ ಕೆಲಸವನ್ನು ಆದಷ್ಟು ಜಾಗ್ರತೆ ಮುಗಿಸಿ, ತುಮಕೂರು ಜಿಲ್ಲೆಯ ಬಡ ರೈತನ ಜಮೀನಿಗೆ ನೀರು ಕೊಡಿಸಿ, ಒಳ್ಳೆಯ ಹೆಸರು ಪಡೆಯಿರಿ ಎಂದು ಹೇಳುತ್ತೇನೆ. ಸುರಂಗದ ಕೆಲಸವನ್ನು ಚುರುಕಾಗಿ ಮಾಡುವುದಕ್ಕೆ ಸಾಧ್ಯವಿಲ್ಲ. ಬಲವಾದಂಥ ಭೂಮಿ ಸಿಗದೆ ಜಿಯಾಜಿಕಲ್ ಪಾಟ್ಸ್ ಸಿಕ್ಕಿದ್ದರಿಂದ ನಿಧಾನವಾಗುತ್ತಿದೆ ಎನ್ನುವ ಕಾರಣ ಹೇಳುತ್ತಿದ್ದೀರಿ. ನನ್ನ ಹತ್ತಿರ ಸಂಪೂರ್ಣ ಮಾಹಿತಿ ಇಲ್ಲ. ೧೦ ಕೋಟಿ ರೂಪಾಯಿ ವೆಚ್ಚದ "ಆರಿಸಾಂಟಲ್ ಬೋರ್" ತರಿಸಿ, ಶೀಘ್ರವಾಗಿ ಸುರಂಗದ ಕೆಲಸವನ್ನು ಮುಗಿಸಬೇಕೆಂದು ಹೇಳುತ್ತೇನೆ. ೧೦ ಕೋಟಿ ರೂಪಾಯಿ ಖರ್ಚು ಮಾಡಿ ತಂದರೆ, ನಮ್ಮ ರಾಜ್ಯಕ್ಕೆ ಉಪಯೋಗ ಮಾಡಿಕೊಡುವುದಲ್ಲದೆ, ಪಕ್ಕದ ರಾಜ್ಯಗಳಿಗೂ ಅದನ್ನು ಕೊಡಬಹುದು. ೧೯೮೦ರಲ್ಲಿ ಅಣೆಕಟ್ಟಿನ ಕೆಲಸ ಮುಗಿದರೂ ಇವತ್ತಿನವರೆಗೂ ರೈತರ ಜಮೀನಿಗೆ ನೀರು ಕೊಡುವುದಕ್ಕಾಗಿಲ್ಲ. ಮಂತ್ರಿಗಳ ಪ್ರಕಾರ, ಹಿಂದಿನ ಸರ್ಕಾರದ ಪ್ರಕಾರ ಸುರಂಗದ ಕೆಲಸ ಮುಗಿದ ಮೇಲೆ ತುಮಕೂರು ಜಿಲ್ಲೆಯಲ್ಲಿ ಕಾಲುವೆಗಳ ಕೆಲಸ ಪ್ರಾರಂಭ ಮಾಡುತ್ತೇವೆ. ಸುರಂಗದ ಕೆಲಸ ಒಂದೆರಡು ವರ್ಷಗಳಲ್ಲಿ ಮುಗಿಯುವ ಸೂಚನೆ ಕಂಡುಬಂದ ಮೇಲೆ ಕಾಲುವೆ ಕೆಲಸ ಪ್ರಾರಂಭ ಮಾಡುತ್ತೇವೆಂದು ಹೇಳಿದ್ದಾರೆ. ರಾಜ್ಯದ ಯೋಜನಾ ಇಲಾಖೆಯಲ್ಲಿ ಒಂದು ಕಾನೂನು ಇದೆ: ಇವತ್ತು ಹಣ ಖರ್ಚು ಮಾಡಿದರೆ ಇನ್ನು ಮೂರು ವರ್ಷಗಳಲ್ಲಿ ಹಾಕಿದ ಹಣಕ್ಕೆ ಪ್ರತಿಫಲ ಬರಬೇಕೆಂದು. ಇದನ್ನು ಹುಚ್ಚುತನ, ದಡ್ಡತನ ಎಂದು ಕರೆಯಬೇಕೆ? ಈ ಯೋಜನೆಯನ್ನು ಮಾಡಿದಂತವರಿಗೆ ಕಾನೂನು ಪ್ರಜ್ಞೆ ಇದ್ದರೆ ೧೯೮೦ಕ್ಕೆ ಮುಗಿಯುವಷ್ಟರಲ್ಲಿ ಕಾಲುವೆಗಳ ಕೆಲಸವನ್ನು ಮುಗಿಸಬೇಕಾಗಿತ್ತು. ಈ ಕಾನೂನು ತೀರ್ಮಾನವನ್ನು ಅಧಿಕಾರಿಗಳು ಏತಕ್ಕೆ ಮಾಡಿದರೋ ಗೊತ್ತಿಲ್ಲ. ಮೂರು ವರ್ಷಕ್ಕೆ ಹಣ ಹಿಂದಿರುಗಿ ಬರಬೇಕೆಂದು ಕಾನೂನು ಇದ್ದರೂ ಅದನ್ನು ಏತಕ್ಕೆ ಪರಿಗಣಿಸಲಿಲ್ಲ? ಇವತ್ತು

ಮಾನ್ಯ ಮಂತ್ರಿಯವರ ಮೇಲೆ ಗುರುತರವಾದ ಅಪವಾದ ಇದೆ. ಮೊದಲು ನನ್ನ ಮನೆ, ನನ್ನ ಮಕ್ಕಳ ವಿದ್ಯಾಭ್ಯಾಸ, ನನ್ನ ಗದ್ದೆಗೆ ನೀರು ಬರಬೇಕೆಂಬುದು ಮಾನವ ಸಹಜವಾದ ಬಯಕೆ. ಇಂತಹ ಮಾನವ ಸಹಜವಾದ ಮನೋಭಾವ ಮಾನ್ಯ ಮಂತ್ರಿಗಳಿಗೆ ಇಲ್ಲವೆಂದು ತೋರಿಸಿಕೊಡಬೇಕಾದರೆ, ಆದಷ್ಟು ಕೂಡಲೇ ತುಮಕೂರು ಜಿಲ್ಲೆಯಲ್ಲಿ ಒಂದು ಡಿವಿಷನ್ ಮಾಡಿ ಕಾಲುವೆಗಳ ಕೆಲಸ ಮಾಡುವಂತಹ ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ.

ನಾನು ಇದನ್ನು ಬಹು ಕಟುವಾಗಿ ಹೇಳುತ್ತಿದ್ದೇನೆ. ಪರಿಹಾರ ಮಾಡತಕ್ಕಂತಹ ಕೆಲಸವನ್ನು ಕೂಡಲೇ ಮಾಡಬೇಕಾಗುತ್ತದೆ. ವಿಷಯವನ್ನು ತಮ್ಮ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ಮೊದಲನೆಯದಾಗಿ ಈ ಕೆಲಸ ನಿಧಾನವಾಗಲಿಕ್ಕೆ ತಾಂತ್ರಿಕ ದೋಷಗಳು ಕಾರಣವಿರಬಹುದು. ದೋಷಗಳ ತೊಂದರೆಗಳನ್ನು ತಪ್ಪಿಸಲಿಕ್ಕೆ ಏನು ಮಾಡಬೇಕು ಗಮನಕ್ಕೆ ತಂದಿದ್ದೇನೆ. ಎರಡನೆಯದಾಗಿ ಈ ಯೋಜನೆಗೆ ಕೊಟ್ಟಿರುವಂತಹ ಹಣದಿಂದ ಈ ಯೋಜನೆಯ ಕೆಲಸ ಸ್ಥಗಿತಗೊಂಡಿದೆ, ವೇಗದ ಮಿತಿ ಕಡಿಮೆಯಾಗಿದೆ ಎಂದು ಹೇಳುವುದಾದರೆ, ಅದರ ಬಗ್ಗೆ ಹಣ ಕೊಟ್ಟಿರತಕ್ಕದ್ದನ್ನು ಸಹ ನೋಡಿದರೆ, ಅದು ಸರಿಯಲ್ಲವೆಂದು ಅನ್ನಿಸುತ್ತದೆ.

ಈ ಯೋಜನೆಗೆ ೧೯೮೩-೮೪ರಲ್ಲಿ ೨೦ ಕೋಟಿ ರೂ.ಗಳು, ೧೯೮೪-೮೫ರಲ್ಲಿ ೩೫ ಕೋಟಿ ರೂ.ಗಳನ್ನು ಒದಗಿಸಿದೆ. ನೀರನ್ನು ನಾವು ಎಷ್ಟು ಉಪಯೋಗಿಸಿಕೊಳ್ಳುತ್ತೇವೆ, ಎಷ್ಟು ಉಳಿಯುತ್ತದೆ ಎನ್ನುವ ಬಗ್ಗೆ ನಾನು ಶ್ರಮಪಟ್ಟು, ಕೆಲವು ಅಂಕಿ ಅಂಶಗಳನ್ನು ಸಂಗ್ರಹಣೆ ಮಾಡಿಕೊಂಡು ಬಂದಿದ್ದೇನೆ. ಇದನ್ನು ಮಾನ್ಯ ಸದನದ ಗಮನಕ್ಕೆ ತರುವುದಕ್ಕೆ ಇಷ್ಟ ಪಡುತ್ತೇನೆ.

ಅಧ್ಯಕ್ಷರೇ, ಕರ್ನಾಟಕ ರಾಜ್ಯದ ಹಿತವನ್ನು ಕಾಪಾಡುವುದರಲ್ಲಿ ಮಾನ್ಯ ಸದಸ್ಯರುಗಳಿಗೆ ಏನು ಆತುರವಿದೆಯೋ, ನಮಗೂ ಅದೇ ಆತುರ ಕಾತುರವಿದೆ. ಹೇಮಾವತಿ ನದಿಯಿಂದ ಉಪಯೋಗಿಸಿಕೊಳ್ಳತಕ್ಕ ನೀರಿನ ಬಗ್ಗೆ ಹೇಳುವುದಾದರೆ ೫ ಹಿತದ ನೀರಾವರಿಗೆ ಉಪಯೋಗಿಸಿಕೊಳ್ಳುತ್ತಿದ್ದೇವೆ. ಅನಂತರ ಯುಗಾದಿಯಿಂದ ನೀರನ್ನು ಉಪಯೋಗಿಸಿಕೊಳ್ಳುತ್ತಿದ್ದೇವೆ. ಇಷ್ಟೆಲ್ಲಾ ನೀರನ್ನು ಉಪಯೋಗ ಮಾಡಿದ ಮೇಲೂ ನಮಗೆ ಏನಾದರೂ ನೀರು ಕಡಿಮೆಯಾಗುತ್ತದೆಯೇ? ಎನ್ನುವ ಬಗ್ಗೆ ನಾನು ಅಂಕಿಅಂಶಗಳನ್ನು ಕೊಡುವುದಕ್ಕೆ ಇಷ್ಟಪಡುವುದಿಲ್ಲ. ಇದರಿಂದ ತುಮಕೂರಿಗೆ ನೀರನ್ನು ಕೊಡಲು ಯಾವುದೇ ಧಕ್ಕೆ ಬರುವುದಿಲ್ಲ. ಧಕ್ಕೆ ಬಾರದ ರೀತಿಯಲ್ಲಿ ಎಲ್ಲಾ ಏರ್ಪಾಟನ್ನು ಮಾಡಿಕೊಂಡಿದ್ದಾರೆ ಎನ್ನುವ ಬಗ್ಗೆ ಉತ್ತರವನ್ನು ಮಾನ್ಯ ಮಂತ್ರಿಗಳವರು ನೀಡುತ್ತಾರೆಂದು ಬಯಸುತ್ತೇನೆ.

ಅಧ್ಯಕ್ಷರೇ, ಈ ವಿಷಯವನ್ನು ನಾನು ಈ ಸದನದಲ್ಲಿ ತರುವುದರ ಉದ್ದೇಶವೇನೆಂದರೆ, ಮಾನ್ಯ ಶ್ರೀ ಬೈರಪ್ಪಾಜಿಯವರು ಹೇಳಿದ ಹಾಗೆ, ಯಾವುದೇ ರಾಜಕಾರಣವನ್ನು ತರಲಿಕ್ಕೋಸ್ಕರವಾಗಿ ತಂದಿಲ್ಲ; ಅಥವಾ ಸರ್ಕಾರವನ್ನು ಇಕ್ಕಟ್ಟಿಗೆ ಸಿಕ್ಕಿಸುವ ದೃಷ್ಟಿಯಿಂದ ಈ ವಿಷಯವನ್ನು ನಾನು ಸದನದಲ್ಲಿ ತಂದಿಲ್ಲ. ನಾನು ಹೊಟ್ಟೆಪಾಡಿಗೆ ರಾಜಕಾರಣ ಮಾಡಿ, ಅಧಿಕಾರಕ್ಕಾಗಿ ಅಧಿಕಾರವನ್ನೇ ಅಂಟಿಕೊಂಡಿದ್ದು, ಮಾಡಬಾರದ್ದನ್ನು ಮಾಡಿ, ಕ್ಷುಲ್ಲಕ ರಾಜಕೀಯ ಮಾಡುವಂತಹ ಉದ್ದೇಶದಿಂದ ನಾನು ಶಾಸಕನಾಗಿ ಬಂದವನಲ್ಲವೆಂದು ಈ ಸದನದಲ್ಲಿ ಸ್ಪಷ್ಟಪಡಿಸುವುದಕ್ಕೆ ಇಷ್ಟಪಡುತ್ತೇನೆ. ಆದುದರಿಂದ ಇದನ್ನು ಹೇಳಿದರೆ ರಾಜಕೀಯವಾಗಲಾರದು ಎಂದು ತಿಳಿದುಕೊಂಡಿದ್ದೇನೆ. ನನ್ನ ತಾಲ್ಲೂಕಿನಲ್ಲಿ ಒಂದು ಸಕ್ಕರೆ ಕಾರ್ಖಾನೆಯನ್ನು ಮಾಡಬೇಕೆಂದು ಒಂದು ಯೋಜನೆ

ತಯಾರಾಯಿತು. ಸುಮಾರು ಲಕ್ಷಾಂತರ ರೂಪಾಯಿಗಳ ಸಂಗ್ರಹಣೆ ಮಾಡಿ ಬ್ಯಾಂಕಿನಲ್ಲಿಡಲಾಯಿತು. ಆದರೆ ಈ ನನ್ನ ತಾಲ್ಲೂಕಿನಲ್ಲಿ ರೈತರಿಗೆ ಒಂದು ಸಕ್ಕರೆ ಕಾರ್ಖಾನೆಯನ್ನು ಕುಣಿಗಲ್‌ನಲ್ಲಿ ಮಾಡಲು ಆಗಲಿಲ್ಲ. ಇದಕ್ಕೆ ಕಾರಣ ಹೇಳುವುದಕ್ಕೆ ಹೋದರೆ ಶ್ರೀ ಬೈರಪ್ಪಾಜಿಯವರು ನಾವು ರಾಜಕೀಯ ಮಾಡುತ್ತೇವೆಂದು ಹೇಳುತ್ತಾರೆ. ಆದರೆ ಈ ಸಹಕಾರ ಸಕ್ಕರೆ ಕಾರ್ಖಾನೆ ಏತಕ್ಕೆ ನಿಂತುಹೋಯಿತು? ಯಾರ ಹಿತವನ್ನು ಕಾಪಾಡುವುದಕ್ಕೋಸ್ಕರವಾಗಿ ನಿಂತುಹೋಯಿತು? ಎನ್ನುವುದು ಅಲ್ಲಿಯ ರೈತಾಪೀ ಜನತೆಗೆಲ್ಲಾ ಗೊತ್ತಿದೆ. ಆದುದರಿಂದ ಅದನ್ನು ಪುನಃ ನಾನು ಇಲ್ಲಿ ಹೇಳುವುದಕ್ಕೆ ಇಷ್ಟಪಡುವುದಿಲ್ಲ. ಶ್ರೀಮಾನ್ ಹೆಚ್.ಡಿ. ದೇವೇಗೌಡರವರು ಲೋಕೋಪಯೋಗಿ ಇಲಾಖೆಯ ಮಂತ್ರಿಗಳಾಗಿದ್ದಾರೆ. ಜನತಾ ಸರ್ಕಾರ ಅಧಿಕಾರವನ್ನು ನಡೆಸುತ್ತಿದೆ. ಯಾವುದೋ ಒಂದು ರಾಜಕೀಯ ಉದ್ದೇಶದಿಂದ ಜನಗಳ ಹಿತವನ್ನು, ಸಾರ್ವಜನಿಕರ ಹಿತವನ್ನು, ಅದರಲ್ಲೂ ತುಮಕೂರಿನ ಬಡ ರೈತರ ಹಿತವನ್ನು ಕಾಪಾಡುವುದರಲ್ಲಿ ಪಕ್ಷವಾಗಲೀ ಅಥವಾ ಈ ಒಂದು ಶಾಸನ ಸಭೆಯಾಗಲೀ ಅಡ್ಡಿ ಬರಬಾರದು ಎನ್ನುವುದನ್ನು ನನ್ನ ಮಿತ್ರರಿಗೆ ಹೇಳುವುದಕ್ಕೆ ಇಷ್ಟ ಪಡುತ್ತೇನೆ. ಇದಕ್ಕೆ ಕಾರಣವಿಷ್ಟೆ, ಶ್ರೀಮಾನ್ ದೇವೇಗೌಡರವರು ಒಬ್ಬ ರೈತನ ಮಗನಾಗಿದ್ದಾರೆ ಎಂದು ನಾನಾದರೂ ತಿಳಿದುಕೊಂಡಿದ್ದೇನೆ. ರೈತ ಎಂದರೆ ಅವನು ಹಾಸನದವನಾಗಿರಲೀ, ಕೇರಳದವನಾಗಿರಲೀ, ಪಂಜಾಬಿನವನಾಗಿರಲೀ ಎಲ್ಲಾ ರೈತರೂ ಒಂದೇ ಎನ್ನುವ ಬಗ್ಗೆ ಅವರು ನಂಬಿಕೆಯನ್ನಿಟ್ಟುಕೊಂಡಿದ್ದಾರೆ ಎನ್ನುವ ಬಗ್ಗೆ ಜನರಲ್ಲಿ ವಿಶ್ವಾಸ ಬರಬೇಕಾಗಿದ್ದರೆ, ಇವತ್ತಿನ ದಿವಸ ತುಮಕೂರಿನಲ್ಲಿ ಏನು ಕೆಲಸವಾಗಬೇಕಾಗಿದೆ, ಅದನ್ನು ಎಷ್ಟು ದಿವಸದಲ್ಲಿ ಮಾಡಿ ಮುಗಿಸುತ್ತಾರೆ ಎನ್ನುವ ಬಗ್ಗೆ, ನಿರ್ದಿಷ್ಟವಾದ ಹೇಳಿಕೆಯನ್ನು ಅವರು ಕೊಡಬೇಕೆಂದು ಪ್ರಾರ್ಥನೆ ಮಾಡಿಕೊಂಡು ನನ್ನ ಮಾತನ್ನು ಮುಗಿಸುತ್ತೇನೆ.

ಟಿಪ್ಪಣಿ

ಶ್ರೀ ವೈ.ಕೆ. ರಾಮಯ್ಯನವರ ಪ್ರಶ್ನೆಗಳು

ಹೇಮಾವತಿ ಯೋಜನೆಯ ಈಗಿನ ಅಂದಾಜು ಎಷ್ಟು ವೆಚ್ಚವಾಗಿದೆ? ಬಾಗೂರು ನವಿಲೆ ಸುರಂಗ ಯಾವಾಗ ಪೂರ್ಣಗೊಳ್ಳುತ್ತದೆ? ಹೆಬ್ಬೂರಿನಲ್ಲಿ ಕೇಂದ್ರ ಹೊಂದಿರುವ ವಿಭಾಗ ಕಛೇರಿ ಈವರೆಗೆ ಏನೇನು ಕೆಲಸ ಮಾಡಿದೆ? ಹೇಮಾವತಿ ಯೋಜನೆಯಲ್ಲಿ ತುಮಕೂರು ನಗರ ಕುಡಿಯುವ ನೀರಿನ ಪೂರೈಕೆ ಯೋಜನೆಗೆ ಸೇರಿದೆಯೇ? ಸೇರಿಲ್ಲದಿದ್ದಲ್ಲಿ ಸೇರಿಸುವುದು ಅಗತ್ಯವಲ್ಲವೆ?

ಕುಣಿಗಲ್‌ನಿಂದ ವಿಧಾನಸಭೆಗೆ ಆಯ್ಕೆಯಾಗಿ ಬಂದ ಶ್ರೀ ವೈ.ಕೆ. ರಾಮಯ್ಯನವರು 'ಲೋಕೋಪಯೋಗಿ ಮತ್ತು ನೀರಾವರಿ' ಸಚಿವರಾಗಿದ್ದ ಶ್ರೀ ಹೆಚ್.ಡಿ. ದೇವೇಗೌಡರಿಗೆ ಹಾಕಿದ ಪ್ರಶ್ನೆಗಳಿವು. ೭.೩.೧೯೮೫ ರಿಂದ ದಿನಾಂಕ ೨೭.೩.೧೯೮೫ರ ನಡುವೆ ವಿಧಾನಸಭೆಯಲ್ಲಿ ಶ್ರೀ ವೈ.ಕೆ. ರಾಮಯ್ಯನವರು ಈ ವಿಷಯ ಕುರಿತು ಮಾತನಾಡಿದರು. ಆ ಸಂದರ್ಭದಲ್ಲಿ ಶ್ರೀ ಹೆಚ್.ಡಿ. ದೇವೇಗೌಡ, ಶ್ರೀ ಎನ್. ಹುಚ್ಚಮಾಸ್ತಿಗೌಡ, ಶ್ರೀ ಎಂ. ವೀರಪ್ಪಮೊಯಿಲಿ, ಶ್ರೀ ಭೈರಪ್ಪಾಜಿ, ಶ್ರೀ ಕೆ.ಹೆಚ್. ರಂಗನಾಥ್ ಅವರು ಪಾಲ್ಗೊಂಡಿದ್ದರು.

# ಕಾವೇರಿ

೩ ಅಕ್ಟೋಬರ್ ೧೯೮೮

ಅಧ್ಯಕ್ಷರೇ, ಕಾವೇರಿ ಕರ್ನಾಟಕದಲ್ಲಿ ಹುಟ್ಟಿ ಹರಿಯುತ್ತಿರುವ ಜೀವವಾಹಿನಿ. ಕನ್ನಡಿಗರ ಬಾಳು ಬದುಕನ್ನು ಬೆಳಗುವ ನದಿ. ಪರಂಪರಗಾತ ಸಂಸ್ಕೃತಿಯ ಜೊತೆ ಬೆರೆತ ಪೂಜ್ಯಮಾತೆ. ದಕ್ಷಿಣ ರಾಜ್ಯಗಳ ಮಧ್ಯೆ ಕಾವೇರಿ ನೀರಿನ ಹಂಚಿಕೆಯ ವಿವಾದ ಕುರಿತಂತೆ ಸರ್ವೋಚ್ಚ ನ್ಯಾಯಾಲಯವು ತೀರ್ಪು ನೀಡಿತು. ಆ ತೀರ್ಪಿನ ಆಧಾರದ ಮೇಲೆ ಕೇಂದ್ರ ಸರ್ಕಾರ ಗೆಜೆಟ್ ಪ್ರಕಟಣೆಯನ್ನು ಹೊರಡಿಸಿತು. ಸಂಶಯಾಸ್ಪದವಾದ ಈ ತೀರ್ಪಿನಿಂದಾಗಿ ಕರ್ನಾಟಕದಲ್ಲಿ ಪ್ರಕ್ಷುಬ್ಧತೆ ಉಂಟಾಗಿ ಆಸ್ತಿಪಾಸ್ತಿ ಮತ್ತು ಪ್ರಾಣಹಾನಿ ಆಯಿತು. ಕರ್ನಾಟಕದ ಚರಿತ್ರೆಯಲ್ಲಿಯೇ ರೈತರ ಪಾಲಿಗೆ ಅದು ಒಂದು ಕರಾಳ ಅಧ್ಯಾಯವಾಗಿ ಪರಿಣಮಿಸಿತು.

ಅಧ್ಯಕ್ಷರೇ, ತಮ್ಮ ಅಟೆನ್‌ಷನ್‌ನನ್ನು ಡೈವರ್ಟ್ ಮಾಡಬೇಕಾದರೆ ಕಿರುಚಿಕೊಳ್ಳಬೇಕೆ? ಮಾನ್ಯ ಅಧ್ಯಕ್ಷರೇ, ರೈತರ ಸಮಸ್ಯೆ ಬಗ್ಗೆ ಆದ್ಯತೆ ಕೊಡಬೇಕು ಎಂದು ಹೇಳುವ ತಮ್ಮಂಥ ವ್ಯಕ್ತಿಗಳಿಗೆ ನಾನು ಒತ್ತಾಯ ಮಾಡಿ ಹೇಳಬೇಕೆ? ೧೯೮೮ನೇ ಇಸವಿ ಇದೇ ಸೆಪ್ಟೆಂಬರ್ ತಿಂಗಳ ೨೭ನೇ ತಾರೀಖು ಕಾವೇರಿ ನೀರಿನ ವಿವಾದದ ಬಗ್ಗೆ ಸುಪ್ರೀಂ ಕೋರ್ಟಿನಿಂದ ಅವಧಿ ನಿರ್ಧಾರ ಮಾಡಿದ್ದಾರೆ. ಬೇರೆ ಯಾವುದೇ ವಿಷಯವನ್ನು ಮುಂದುವರೆಸಬಹುದು. ಆದರೆ ಸುಪ್ರೀಂಕೋರ್ಟಿನ ನಡವಳಿಕೆಯನ್ನು ಮುಂದುವರೆಸುವುದಕ್ಕೆ ಈ ಸದನದಿಂದ ಸಾಧ್ಯ ಇಲ್ಲ. ತಮ್ಮನ್ನು ಕೈಜೋಡಿಸಿ ಕೇಳಿಕೊಳ್ಳುತ್ತೇನೆ. ಕಾವೇರಿ ನದಿ ನೀರಿನ ವಿವಾದದ ಬಗ್ಗೆ ೨೭ನೇ ತಾರೀಖು ನೀಡಿದ ಗಡುವಿನ ಬಗ್ಗೆ, ಸರ್ಕಾರದ ನಿಲುವಿನ ಬಗ್ಗೆ ದಯವಿಟ್ಟು ಚರ್ಚೆ ಮಾಡುವುದಕ್ಕೆ ಅವಕಾಶ ಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಮಾನ್ಯ ಸಭಾಧ್ಯಕ್ಷರೆ. ಮೊದಲನೆಯದಾಗಿ ಹೇಳುವುದಾದರೆ ಕೊನೆಯಪಕ್ಷ ಬೇರೆ ವಿಷಯಗಳನ್ನು ಬದಿಗೊತ್ತಿ ಈ ರಾಜ್ಯದ ಸಮಸ್ಯೆಗಳ ಚರ್ಚೆಯ ಆದ್ಯತೆಯ ಬಗ್ಗೆ ಗಮನಹರಿಸಿ ಇದನ್ನು ತೆಗೆದುಕೊಂಡಿರುವುದು ಈ ರಾಜ್ಯದ ಬಗ್ಗೆ ತಮಗೆ ಇರಬಹುದಾದ ಕಳಕಳಿಗಾಗಿ ತಮ್ಮನ್ನು ನಾನು ಆರಂಭದಲ್ಲಿಯೇ ಅಭಿನಂದಿಸುತ್ತೇನೆ.

ಸನ್ಮಾನ್ಯ ಸಭಾಧ್ಯಕ್ಷರೇ, ಅನೇಕ ವರ್ಷಗಳಿಂದ ಕರ್ನಾಟಕ ಮತ್ತು ತಮಿಳ್ನಾಡಿನ ಮಧ್ಯೆ ಕಾವೇರಿ ನೀರಿನ ಪಂಚಿಕೆಯ ಪಿಚಾರದಲ್ಲಿ ವಾದ ವಿವಾದಗಳು ನಡೆಯುತ್ತಲೇ ಇವೆ. ಅನೇಕ ಒಪ್ಪಂದಗಳು, ತಿಳುವಳಿಕೆಗಳು, ಪತ್ರಗಳು, ವ್ಯವಹಾರಗಳು ನಡೆದಿವೆ. ಇತ್ತೀಚಿನ ವರ್ಷಗಳಲ್ಲಿ ತಮಿಳ್ನಾಡಿನ ರೈತರ ಸಂಘ ಪದಾಧಿಕಾರಿಗಳು ಭಾರತ ಸರ್ಕಾರದ ಉಚ್ಚನ್ಯಾಯಾಲಯದಲ್ಲಿ ಒಂದು ಅರ್ಜಿಯನ್ನು ಸಲ್ಲಿಸಿ ಈ ವಿವಾದವನ್ನು ಆದಷ್ಟು ಬೇಗ ಬಗೆಹರಿಸಬೇಕು ಮತ್ತು ಸಂಬಂಧಪಟ್ಟ ಸರ್ಕಾರಗಳಿಗೆ ಅಂದರೆ ಕೇಂದ್ರ ಸರ್ಕಾರಕ್ಕೆ, ಕರ್ನಾಟಕ ಸರ್ಕಾರಕ್ಕೆ, ತಮಿಳ್ನಾಡು ಸರ್ಕಾರಕ್ಕೆ ನಿರ್ದೇಶನ ಕೊಡಬೇಕೆಂದು ಪರಿಹಾರಕ್ಕಾಗಿ ಕೇಳಿಕೊಂಡಿದ್ದಾರೆ. ಈ ಅರ್ಜಿಯಲ್ಲಿ ಈ ವಿವಾದವನ್ನು ತೀರ್ಮಾನ ಮಾಡಲು, ಅವರು ಸೂಚಿಸಿರತಕ್ಕ ಪರಿಹಾರ ಇದಕ್ಕಾಗಿ ಒಂದು ಟ್ರಿಬ್ಯುನಲ್ ರಚನೆ ಮಾಡಬೇಕೆಂದು ತಮಗೆಲ್ಲಾ ಗೊತ್ತಿರುವಂತೆ ಕಳೆದ ೩ನೇ ತಾರೀಖು ಉಚ್ಚ ನ್ಯಾಯಾಲಯದಲ್ಲಿ ಒಂದು ತೀರ್ಮಾನವನ್ನು ತೆಗೆದುಕೊಂಡಿದ್ದಾರೆ. ಬಹುಶಃ ಈ ತೀರ್ಮಾನ ಈ ದೇಶದ ರೈತರ

ದುರಾದೃಷ್ಟವೋ ಅಥವಾ ಯಾರ ದುರಾದೃಷ್ಟವೋ ಎಂಬುದು ನನಗೆ ಗೊತ್ತಿಲ್ಲ. ಏಕೆಂದರೆ ಯಾರೂ ಕೂಡ ಇದರ ಬಗ್ಗೆ ಗಂಭೀರವಾದ ರೀತಿಯಲ್ಲಿ ಯೋಚನೆಯನ್ನು ಮಾಡತಕ್ಕ ಪರಿಸ್ಥಿತಿಗೆ ಬರಲಿಲ್ಲ. ಈ ಮಾತನ್ನು ನಾನು ಏತಕ್ಕೆ ಹೇಳುತ್ತಿದ್ದೇನೆಂದರೆ ಬೆಂಗಳೂರಿನಲ್ಲಿ ೪ ಪಕ್ಷಗಳು ಒಟ್ಟಿಗೆ ಸೇರಿ ಒಂದು ವಿರೋಧ ಪಕ್ಷವಾಗುತ್ತದೆಂಬ ವಿಷಯಕ್ಕೆ ಪತ್ರಿಕೆಗಳು ಏನು ಮಹತ್ವವನ್ನು, ಪ್ರಾಮುಖ್ಯತೆಯನ್ನು ಕೊಟ್ಟವೋ ಅಷ್ಟು ಪ್ರಾಮುಖ್ಯತೆಯನ್ನು ಈ ನೀರಿನ ವಿಷಯಕ್ಕೆ ಕೊಡಲಿಲ್ಲ. ನಾನು ಊರಿನಲ್ಲಿಲ್ಲದ ಕಾರಣ ಪತ್ರಿಕೆಗಳನ್ನು ನಾನು ನೋಡಲು ಸಾಧ್ಯವಾಗಲಿಲ್ಲ. ಈ ರಾಜ್ಯದ ಲಕ್ಷಾಂತರ ಜನರಿಗೆ ಆಗತಕ್ಕ ಅನ್ಯಾಯದ ಬಗ್ಗೆ ಯಾವುದಾದರೂ ಪತ್ರಿಕೆಗಳು ತಮ್ಮ ಸಂಪಾದಕೀಯವನ್ನು ಬರೆದವೋ, ಇಲ್ಲವೋ ಗೊತ್ತಿಲ್ಲ. ಈ ಪರಿಸ್ಥಿತಿಯನ್ನು ಯಾರೂ ಕೂಡ ಗಂಭೀರವಾಗಿ ಪರಿಗಣಿಸಲಿಲ್ಲ. ನಾನು ನಿನ್ನೆಯವರೆಗೂ ನೋಡಿದೆ, ಈ ವಿಚಾರವನ್ನು ವಿರೋಧಪಕ್ಷದವರು ಯಾರಾದರೂ ಈ ಸದನದಲ್ಲಿ ತರುತ್ತಾರೇನೋ ಎಂದು. ಆದರೆ ಯಾರೂ ಕೂಡ ಈ ವಿಚಾರವನ್ನು ಇಲ್ಲಿ ತರಲಿಲ್ಲ.

ಮಾನ್ಯ ಸಭಾಧ್ಯಕ್ಷರೇ, ಈಗ ಸಭೆಯ ಮುಂದಿರತಕ್ಕ ಪ್ರಶ್ನೆ ಇಷ್ಟೆ: ಉಚ್ಚ ನ್ಯಾಯಾಲಯದ ಮುಂದೆ ಈ ತೀರ್ಮಾನ ತೆಗೆದುಕೊಂಡಿದೆ. ನಮ್ಮ ಸರ್ಕಾರಕ್ಕೆ ಏನು ವರದಿ ಬಂದಿದೆಯೋ, ಏನೋ ನನಗೆ ಗೊತ್ತಿಲ್ಲ. ಏನಾದರೂ ವರದಿ ಸರ್ಕಾರಕ್ಕೆ ಬಂದಿದ್ದರೆ ಅದನ್ನು ಮಾನ್ಯ ಮಂತ್ರಿಗಳು ಹೇಳಬಹುದು. ನಾನು ಈಗ ಈ ಪತ್ರಿಕಾ ವರದಿಯ ಆಧಾರದ ಮೇಲೆ ಈ ವಿಷಯವನ್ನು ಪ್ರಸ್ತಾಪ ಮಾಡುತ್ತಿದ್ದೇನೆ. ಅದು ಈ ರೀತಿ ಇದೆ :

"ಕರ್ನಾಟಕ ಮತ್ತು ತಮಿಳುನಾಡು ರಾಜ್ಯಗಳ ನಡುವಣ ಕಾವೇರಿ ಜಲ ವಿವಾದದ ಬಗ್ಗೆ ಅಕ್ಟೋಬರ್ ೨೭ರ ಹೊತ್ತಿಗೆ ನಿರ್ಧಾರ ಕೈಗೊಳ್ಳುವಂತೆ ಕೇಂದ್ರ ಸರ್ಕಾರಕ್ಕೆ ಸುಪ್ರೀಂಕೋರ್ಟ್ ಇಂದು ಕಾಲಾವಕಾಶ ನೀಡಿತು. ತಮಿಳುನಾಡು ರೈತರ ಅರ್ಜಿಗಳ ವಿಚಾರಣೆಯ ಪುನರಾರಂಭ ಕಾಲದಲ್ಲಿ ಸುಪ್ರೀಂಕೋರ್ಟ್ ಈ ಕಾಲಾವಕಾಶ ನೀಡಿತು. ಅಂತರರಾಜ್ಯ ಜಲವಿವಾದಗಳ ಕಾನೂನಿನ ಮೇರೆಗೆ ಈ ವಿವಾದವನ್ನು ಪಂಚಾಯ್ತಿಗೆ ಒಪ್ಪಿಸಲಾಗುವುದೆ - ಇಲ್ಲವೇ ಎಂಬುದನ್ನು ಅಕ್ಟೋಬರ್ ೨೭ರ ಹೊತ್ತಿಗೆ ತಿಳಿಸುವಂತೆಯೂ ಸುಪ್ರೀಂಕೋರ್ಟ್ ಕೇಂದ್ರಸರ್ಕಾರಕ್ಕೆ ಆದೇಶ ನೀಡಿತು. ಈ ಎರಡೂ ರಾಜ್ಯ ಸರ್ಕಾರಗಳ ನಡುವೆ ಈ ತಿಂಗಳು ೧೯ ರಂದು ನಡೆದ ಮಾತುಕತೆಯಲ್ಲಿ ಈ ವಿವಾದ ಇತ್ಯರ್ಥ ವಿಫಲವಾಗಿರುವುದೇ ಇದಕ್ಕೆ ಕಾರಣ. ಅಕ್ಟೋಬರ್ ೨೭ರವರೆಗೆ ಈ ವಿವಾದ ಕುರಿತ ಅರ್ಜಿ ವಿಚಾರಣೆಯನ್ನು ಮುಂದಕ್ಕೆ ಹಾಕಿದ ನ್ಯಾಯಮೂರ್ತಿ ರಂಗನಾಥ ಮಿಶ್ರಾ ಮತ್ತು ನ್ಯಾಯಮೂರ್ತಿ ವೆಂಕಟಾಚಲಯ್ಯ ಅವರು "ವಿಚಾರಣೆಯನ್ನು ಮತ್ತೆ ಮುಂದಕ್ಕೆ ಹಾಕಬೇಕೆಂಬ ಯಾವುದೇ ಮನವಿಯನ್ನೂ ಅಂಗೀಕರಿಸುವುದಿಲ್ಲ" ಎಂದರು.

ಸ್ವಾಮಿ, ೭೮ನೇ ನಿಯಮ ಸ್ಯಾಟಿಸ್‌ಫೈ ಮಾಡಬೇಕಾದರೆ ಇದು ಬಹಳ ಪ್ರಮುಖವಾದದ್ದು. ಕೇಸನ್ನು ಮುಂದುವರೆಸುತ್ತಾ ನ್ಯಾಯ ಪೀಠದಲ್ಲಿದ್ದ ನ್ಯಾಯಮೂರ್ತಿಗಳು ಏನು ಹೇಳಿದ್ದಾರೆ ಎಂದರೆ "ವಿಚಾರಣೆಯನ್ನು ಮತ್ತೆ ಮುಂದಕ್ಕೆ ಹಾಕಬೇಕೆಂಬ ಯಾವುದೇ ಮನವಿಯನ್ನೂ ಅಂಗೀಕರಿಸುವುದಿಲ್ಲ" ಎಂದು ಹೇಳಿದ್ದಾರೆ.

"ಈ ವಿವಾದವನ್ನು ಪಂಚಾಯ್ತಿಗೆ ಒಪ್ಪಿಸುವಂತೆ ತಮಿಳುನಾಡು ಸರಕಾರ ೧೯೭೦ರ ಜುಲೈನಷ್ಟು ಹಿಂದೆಯೇ ಕೋರಿತ್ತು" ಎಂದು ತಮಿಳುನಾಡು ರೈತರ ಸಂಘದ ಪರ ವಕೀಲರು ಹೇಳಿದರು. ಜುಲೈ ೧೮ ರಂದು ಅರ್ಜಿಗಳ ವಿಚಾರಣೆಗೆ ಬಂದಾಗ, ಒಪ್ಪಂದ ಸಾಧ್ಯವೇ ಇಲ್ಲವೇ ಎಂಬುದನ್ನು

1758-7

ಕಂಡುಕೊಳ್ಳುವುದಕ್ಕಾಗಿ ಮಾತುಕತೆ ನಡೆಸುವಂತೆ ಎರಡೂ ರಾಜ್ಯಗಳಿಗೆ ಸುಪ್ರೀಂಕೋರ್ಟ್ ಪಂಚಾಯ್ತಿ ನೇಮಕ ಮಾಡುವುದರ ಜೊತೆಗೆ ಆದೇಶ ನೀಡಿತ್ತು. ಇದು ಬಹಳ ಮುಖ್ಯವಾದುದು.

"ಪಂಚಾಯ್ತಿ ನೇಮಕ ಮಾಡುವುದರ ಜೊತೆಗೆ ಕರ್ನಾಟಕ ಸರ್ಕಾರ ಯಾವುದೇ ಹೊಸ ಯೋಜನೆಗಳನ್ನು ಕೈಗೊಳ್ಳದಂತೆ ಸಮಯ ತಳೆಯುವಂತೆ ಹಾಗೂ ೧೯೨೪ರ ಒಪ್ಪಂದದ ಮೇರೆಗೆ ಕಾವೇರಿ ನೀರು ಸರಬರಾಜನ್ನು ತರುವಂತೆ ಆದೇಶ ನೀಡಬೇಕೆಂದು" ನ್ಯಾಯಾಲಯವನ್ನು ಅರ್ಜಿದಾರರು ಕೋರಿದ್ದರು.

ಇವತ್ತು ಈ ಉಚ್ಚನ್ಯಾಯಾಲಯದಲ್ಲಿ ಇರತಕ್ಕ ಪ್ರಶ್ನೆ ಇದು. ತಮಿಳುನಾಡು ಮತ್ತು ಕರ್ನಾಟಕದ ಮಧ್ಯೆ ಇರುವ ಜಲವಿವಾದವನ್ನು ಬಗೆಹರಿಸಬೇಕಾದರೆ ಒಂದು ಪಂಚಾಯ್ತಿಯನ್ನು ಏರ್ಪಾಡು ಮಾಡಬೇಕು. ಒಂದು ಟ್ರಿಬ್ಯೂನಲ್‌ನ್ನು ಮಾಡಬೇಕು ಎಂಬುದು. ನಾನು ತಮ್ಮ ಮುಖಾಂತರ ಸರ್ಕಾರಕ್ಕೆ ನಿವೇದನೆ ಮಾಡಿಕೊಳ್ಳುವುದಕ್ಕೆ ಇಷ್ಟಪಡುತ್ತೇನೆ. ಈ ಒಂದು ಪಂಚಾಯ್ತಿಯನ್ನು ಮಾಡಿದರೆ, ಟ್ರಿಬ್ಯುನಲ್‌ನ್ನು ಮಾಡಿದರೆ ಸರ್ಕಾರಕ್ಕೆ ಯಾವ ವಿಧದಲ್ಲಿ ತೊಂದರೆಯಾಗುತ್ತದೆ? ಪಂಚಾಯ್ತಿಯನ್ನು ಯಾವ ಕಾರಣಕ್ಕೆ ಸರ್ಕಾರ ವಿರೋಧಿಸುತ್ತ ಇದೆ? ಮೊದಲನೆಯದಾಗಿ ಇದಕ್ಕೆ ನಾವು ವಿವರವನ್ನು ಕೊಡಬೇಕಾಗಿದೆ.

ಈ ದೇಶದಲ್ಲಿ ಯಾರೂ ಅನ್ಯಾಯ ಮಾಡಿದವರಿಗೆ ಇನ್ನೂ ಚಾಟೀಲೂ ಹೊಡೆದಿಲ್ಲ, ಜೈಲಿಗೂ ಹಾಕಿಲ್ಲ; ಫೋನ್‌ಟ್ಯಾಪ್ ಮಾಡಿದವರಿಗೂ ಮಾಡಿಲ್ಲ, ಲಂಚ ತಿಂದವರಿಗೂ ಮಾಡಿಲ್ಲ, ಭ್ರಷ್ಟಾಚರ ಮಾಡಿದವರಿಗೂ ಮಾಡಿಲ್ಲ. ಮತ್ತೆ ಅವಕ್ಯಾಕೆ ತಲೆಕೆಡಿಸಿಕೊಳ್ಳಬೇಕು? ಜುಟ್ಟಿಗೆ ಮಲ್ಲಿಗೆ ಆಮೇಲೆ, ಮೊದಲು ಹೊಟ್ಟೆಗೆ ಅನ್ನ ಸಿಗಲಿ. ಇದರ ಬಗ್ಗೆ ನಾವು ಚರ್ಚೆ ಮಾಡೋಣ. ನನ್ನ ಪ್ರಶ್ನೆ ಇಷ್ಟೇ. ೨೭ನೇ ತಾರೀಖು ಉಚ್ಚನ್ಯಾಯಾಲಯದಿಂದ ಈ ರಾಜ್ಯದ ರೈತರ ಹಿತಾಸಕ್ತಿಯನ್ನು ಕಾಪಾಡುವುದಕ್ಕೆ, ಈ ರೈತರಿಗೆ ನ್ಯಾಯವಾಗಿ ದೊರಕಬೇಕಾದ ನೀರಿನ ಪಾಲನ್ನು ಉಳಿಸಿಕೊಳ್ಳುವುದಕ್ಕೆ, ಈ ಸಾರ್ಕರ ತೆಗೆದುಕೊಂಡಿರುವ ಕಾರ್ಯಕ್ರಮ ಏನು? ಎರಡನೆಯದಾಗಿ, ಮುಖ್ಯವಾಗಿ ಕೇಂದ್ರ ಸರ್ಕಾರದ್ದು. ಕೇಂದ್ರದಲ್ಲಿ ಯಾವ ಪಕ್ಷ ಅಧಿಕಾರ ನಡೆಸುತ್ತಿದೆ ಎಂದು ನಾನು ಅದರ ಬಗ್ಗೆ ವ್ಯತ್ಯಾಸವಾಗಿ ಕಾಣುವುದಕ್ಕೆ ಇಷ್ಟಪಡುವುದಿಲ್ಲ. ಇಲ್ಲಿ ಇರತಕ್ಕ ಪ್ರಶ್ನೆ ಎಂದರೆ ಈ ರಾಜ್ಯದ ರೈತರ ಹಿತ ಪ್ರಶ್ನೆ ಇರುವುದರಿಂದ ಅದು ಕಾಂಗ್ರೆಸ್ ಸರ್ಕಾರವೇ ಬೇರೆ ಸರ್ಕಾರವೇ ಎನ್ನುವುದು ಮುಖ್ಯವಲ್ಲ. ಈ ವಿಷಯದಲ್ಲಿ ಕೇಂದ್ರದ ಸ್ಪಷ್ಟವಾದ ನಿಲುವು ಏನು ಎಂಬುದನ್ನು ನಾನು ತಿಳಿಯಬಯಸುತ್ತೇನೆ. What is the definite stand, specific plea of the Central Government before the Supreme Court? We don't know so far, Whether the Central Government is agreeing for the consitution of the tribinal or whether it is opposing it. we don't know. ಈ ವಿಷಯದಲ್ಲಿ ಕೇಂದ್ರ ಸರ್ಕಾರದ ನಿಲುವೇನು ಎಂಬುದನ್ನು ತಿಳಿಯಬಯಸುತ್ತೇನೆ. ಮೂರನೆಯದಾಗಿ, ಈ ವಿವಾದವನ್ನು ಬಗೆಹರಿಸುವುದಕ್ಕೆ ಇರುವ ಕಾನೂನು, ನಿಯಮಾವಳಿ ಹಾಗೂ ಕಟ್ಟಳೆಗಳನ್ನು ಈ ರಾಜ್ಯದಲ್ಲಿ ಎಷ್ಟರಮಟ್ಟಿಗೆ ನಾವು ಪರಿಪಾಲಿಸುತ್ತಿದ್ದೇವೆ ಎಂಬುದು ನಮಗೆ ಗೊತ್ತಿಲ್ಲ. Irrespective of the parties ನಾವು ಯಾರನ್ನೂ ಕೂಡ ದೂಷಿಸುವುದಕ್ಕೆ ಇಷ್ಟವಿಲ್ಲ. ೧೮೯೨ನೇ ಇಸವಿಯಲ್ಲಿ ಮೈಸೂರು ರೆಪ್ರೆಸೆಂಟೆಟೀವ್ ಅಸೆಂಬ್ಲಿಯಿಂದ ಹಿಡಿದು (ಆಗ ಇದು ೭ನೇ ಸಪ್ಲಿಕ್ಟ್ ಇತ್ತು) ಇವತ್ತಿನವರೆಗೂ ಈ

ರಾಜ್ಯದ ರೈತ ಬದುಕಿಗೆ ಬುನಾದಿ ಆಗಬೇಕಾದ, ರೈತನು ಭೂಮಿಯಲ್ಲಿ ಬೆಳೆಯುವ ಪೈರಿಗೆ ತಂಪನ್ನು ಕೊಡುವ ಕಾವೇರಿ ನೀರಿನ ಶೇರಿಗೆ ಈ ರಾಜ್ಯದ ಜನತೆಯ ಪ್ರತಿನಿಧಿಗಳು ಹೋರಾಡಿದರು. ಇಲ್ಲ ಎಂದು ನಾನು ಹೇಳುವುದಿಲ್ಲ. ಆದರೆ ಯಾವ ಕಾರಣಕ್ಕೋಸ್ಕರವಾಗಿಯೋ ಏನೋ, ಯಾವ ಅನಿಷ್ಟವೋ ದುರಾದೃಷ್ಟವೋ ಏನೋ, ಎಷ್ಟು ಸಫಲತೆಯನ್ನು ಇದು ಪಡೆಯಬೇಕಾಗಿತ್ತೋ ಅಷ್ಟು ಸಫಲತೆಯನ್ನು ಪಡೆಯಲಿಲ್ಲ.

ರಾಜ್ಯದ ರೈತರಿಗೆ ನ್ಯಾಯ ದೊರೆತಿಲ್ಲ. ಈ ರಾಜ್ಯದ ಪಾಲಿಗೆ ಎಷ್ಟು ನೀರು ದೊರೆಯಬೇಕಾಗಿತ್ತೋ ಅಷ್ಟು ದೊರೆತಿಲ್ಲ. ಇಷ್ಟು ಯೋಜನೆಗಳನ್ನು ಮಾಡಿದ್ದೇವೆಂದು ಯಾವುದೇ ಸರ್ಕಾರದವರು ಬೆರಳು ಮಾಡಿ ತೋರಿಸುವುದಕ್ಕೆ ಸಾಧ್ಯವಿಲ್ಲ. ಇನ್ನೊಂದು ಮಾತು ಹೇಳಲಿಕ್ಕೆ ಇಚ್ಛೆಪಡುತ್ತೇನೆ. ಬಹುಶಃ ಆದ್ಯತೆಗಳನ್ನು ಗುರುತಿಸುವಾಗ ಅಸಮಂಜಸ ಯೋಜನೆಗಳನ್ನು ರೂಪಿಸುವುದು ನಮ್ಮ ಪ್ರವೃತ್ತಿ. ಅದು ನಮ್ಮ ಪರಿಸ್ಥಿತಿಯನ್ನು ಇಲ್ಲಿಗೆ ತಂದು ದೂಡಿದೆಯೆಂದು ಕಾಣುತ್ತದೆ. ಯಾವುದಕ್ಕೆ ಎಷ್ಟು ಹಣವನ್ನು ಖರ್ಚು ಮಾಡಬೇಕು, ಯಾವ ಯೋಜನೆಯನ್ನು ಯಾವ ಹಂತದಲ್ಲಿ ಎತ್ತಿಕೊಳ್ಳಬೇಕು ಎನ್ನುವಂತಹ ವ್ಯವಸ್ಥೆಯಿಲ್ಲದೆ, ಆ ವಿವೇಚನೆ ಇಲ್ಲದೆ ಆಡಳಿತ ವಿಫಲತೆಯ ಸೃಷ್ಟಿಯ ಪಾಪದ ಫಲದಿಂದ ನಾವು ಇಲ್ಲಿಗೆ ಬಂದು ನಿಂತಿದ್ದೇವೆ. ನಮ್ಮ ಸ್ನೇಹಿತರೊಬ್ಬರು ಮೊನ್ನೆ ನಡೆದಂತಹ ಘಟನೆಯ ಬಗ್ಗೆ ಹೇಳಿದರು. ಮಾನ್ಯ ಅಧ್ಯಕ್ಷರಿಗೆ ಸೀಗೆಮೇಳೆ ಗೊತ್ತಿದೆಯೋ, ಗೊತ್ತಿಲ್ಲವೋ, ಅದು ಹರಾಜಿಗೆ ಬಂದು ಕನ್‌ಫರ್ಮೇಷನ್ ಆಗಿ ೫೦೦-೬೦೦ಕ್ಕೆ ಬಂದು ನಿಂತಿತು. ದೊಡ್ಡ ಅಧಿಕಾರಿಯೊಬ್ಬರು ಆಸೀಗೆಮೆಳೆಗೆ ಎಷ್ಟು ವಯಸ್ಸಾಗಿದೆಯೆಂದು ಕೇಳಿದರಂತೆ. ಅದಕ್ಕೆ ಕೆಳಗಿನವರು ೧೦೦ ವರ್ಷಗಳಾಗಿವೆಯೆಂದು ಹೇಳಿದಾಗ, 'ಅದನ್ನು ೫೦೦ ರೂಪಾಯಿಗಳಿಗೆ ಏತಕ್ಕೆ ಕೊಡಬೇಕು? ಅದರಲ್ಲಿ ಹಲಗೆ ಕುಯ್ಯಿಸಿಬಿಡಿ'' ಎಂದರಂತೆ. ಸೀಗೆಮೆಳೆಯಲ್ಲಿ ಹಲಗೆ ಕುಯ್ಯಿಸಲಿಕ್ಕೆ ಸಾಧ್ಯವೆ? ಸೀಗೆಮೆಳೆಯಲ್ಲಿ ಹಲಗೆ ಕುಯ್ಯಿಸಿ ಎಂದು ಬರೆದಿದ್ದಾರೆ. ಮಾನ್ಯ ಕೆ.ಹೆಚ್. ಪಾಟೀಲ್‌ರವರು ಬೆಳಿಗ್ಗೆ ಹೇಳುತ್ತಿದ್ದರು: ''ಸಕ್ಕರೆ ಅಂದರೆ ಏನೂ ಗೊತ್ತಿಲ್ಲ ಕಬ್ಬು ಅಂದರೆ ಏನೂ ಗೊತ್ತಿಲ್ಲ'' ಎಂದು. ಇಂತಹವರು ರಾಜ್ಯದ ಪರಿಸ್ಥಿತಿಯನ್ನು ರೂಪಿಸುತ್ತಿದ್ದಾರೆ. ಅದನ್ನು ನಾವು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತಿದ್ದೇವೆ. ರಾಷ್ಟ್ರದ ಮತ್ತು ರಾಜ್ಯದ ಪರಿಸ್ಥಿತಿ ಇಲ್ಲಿಗೆ ಬಂದಿದೆ. ಆದ್ಯತೆಯನ್ನು ಗುರುತಿಸುವುದರಲ್ಲಿ, ಅಸಮಂಜಸವಾದ ಯೋಜನೆಗಳನ್ನು ರೂಪಿಸುವಂತಹ ನಮ್ಮ ಪ್ರವೃತ್ತಿ ಬಹುಶಃ ನಮ್ಮನ್ನು ಇಲ್ಲಿಗೆ ದೂಡಿದೆ. ಕಾಂಗ್ರೆಸ್‌ನವರು ತಪ್ಪು ಮಾಡಿದ್ದಾರೆ, ಜನತಾದವರು ತಪ್ಪು ಮಾಡಿದೆ, ಈ ಮಂತ್ರಿಮಂಡಲ ತಪ್ಪು ಮಾಡಿದೆಯೆಂದು ಹೇಳಲಿಕ್ಕೆ ನಾನು ಸಿದ್ಧನಿಲ್ಲ. ಕಳೆದುಹೋದ ದಿನಗಳು ಕಳೆದುಹೋಗಿವೆ. ಈ ಸರ್ಕಾರಕ್ಕೆ ತಮ್ಮ ಮೂಲಕ ಈ ರಾಜ್ಯದ ಲಕ್ಷಾಂತರ ರೈತರ ಮುಖಾಂತರ ನಾನು ನೇರವಾಗಿ ಒಂದು ಪ್ರಶ್ನೆಯನ್ನು ಕೇಳಲಿಕ್ಕೆ ಇಚ್ಛೆಪಡುತ್ತೇನೆ. ತಮಗೆ ಈಗಲಾದರೂ ಪ್ರಾಮಾಣಿಕವಾದ ಆಸ್ಥೆ ಇದೆಯೆ? ಕೇಂದ್ರ ಸರ್ಕಾರದ ಕಾಲು ಹಿಡಿಯುವ, ಟ್ರಿಬ್ಯೂನಲ್ ಮಾಡಿದ್ದೀರಿ ಏಕೆ? ಎಂದು ಅವರಲ್ಲಿಗೆ ಹೋಗೋಣ. ಬೇರೆ ವ್ಯವಸ್ಥೆ ಮಾಡೋಣ. ಇನ್ನೂ ಸ್ವಲ್ಪ ಕಾಲವನ್ನು ಪಡೆಯೋಣ. ಈ ಯೋಜನೆಯನ್ನು ತೀವ್ರಗತಿಯಲ್ಲಿ ತೆಗೆದುಕೊಂಡು ಹೋಗುವಂತಹ ಪ್ರಾಮಾಣಿಕವಾದಂತಹ ಆಸ್ಥೆ ಈ ಸರ್ಕಾರಕ್ಕೆ ಇದೆಯೆ? ಇದು ಒಂದು. ಪ್ರಾಮಾಣಿಕವಾಗಿ ಆಸ್ಥೆ ಇದ್ದರೂ ಕೂಡ ಇರುವಂತಹ ಅಡ್ಡಿ ಆತಂಕಗಳನ್ನು ದಯಮಾಡಿ ಒಪ್ಪಬೇಡಿ. ನನಗೆ ಗೊತ್ತಿದೆ ಪ್ರತಿಯೊಂದು ಹಂತದಲ್ಲೂ ಆರ್ಥಿಕ ಮುಗ್ಗಟ್ಟು ಈ ಯೋಜನೆಗೆ ಕುಂಠಿತ ಮಾಡುತ್ತದೆಂದು ನಾನು ಆಗಲೇ ಹೇಳಿದ್ದೇನೆ. ಆದ್ಯತೆ ಗುರುತಿಸಿಸುವುದರಲ್ಲಿ ನಾವು

ವಿಫಲರಾಗಿದ್ದೇವೆ. ಅನುತ್ಪಾದನಾ ವೆಚ್ಚವನ್ನು ಕಡಿಮೆ ಮಾಡುವಂತಹ ದೊಡ್ಡತನವನ್ನು ಪರಿಶೀಲನೆ ಮಾಡಬೇಕು. ನೀವು ಯಾರನ್ನಾದರೂ ಮೆಚ್ಚಿಸಲಿಕ್ಕೆ ಅಥವಾ ಒಂದು ಗುಂಪನ್ನು ಮೆಚ್ಚಿಸಲಿಕ್ಕೆ ಅಥವಾ ಓಟಿಗಾಗಿ ಕೆಲಸ ಮಾಡುವುದಾದರೆ ನನ್ನ ಅಭ್ಯಂತರವಿಲ್ಲ. ಆದರೆ ಈ ರಾಜ್ಯದ ಜನತೆಯ ಬಗ್ಗೆ ಪ್ರಾಮಾಣಿಕ ಪ್ರಯತ್ನ, ರಾಜ್ಯದ ಹಿತ, ರೈತರ ಬಗ್ಗೆ ತಮಗೆ ಅನುಕಂಪವಿದ್ದರೆ ಒಳ್ಳೆಯ ಕೆಲಸ ಮಾಡಿ. ಓಟಿಗಾಗಿ ನೀವು ತೀರ್ಮಾನ ತೆಗೆದುಕೊಳ್ಳದೆ ರಾಜ್ಯದ ಜನತೆಯ ಹಿತವನ್ನು ಕಾಪಾಡಲಿಕ್ಕೆ ದೊಡ್ಡ ನಿರ್ಧಾರವನ್ನು ಈ ಸರ್ಕಾರ ತೆಗೆದುಕೊಳ್ಳಬೇಕು. ಅನುತ್ಪಾದನಾ ವೆಚ್ಚಕ್ಕಾಗಿ ಖರ್ಚು ಮಾಡತಕ್ಕ ಹಣದಲ್ಲಿ, ನಮ್ಮ ಸಂಬಳದಲ್ಲಿ ಹಿಡಿದು ಕೆಲಸಮಾಡಿ. ನಿಮಗೆ ಆ ಗಂಡಸುತನ ಇದ್ದರೆ, ಆ ಧೈರ್ಯವಿದ್ದರೆ, ತಾಕತ್ತು ಇದ್ದರೆ ಎಲ್ಲಾ ವೆಚ್ಚಗಳನ್ನು ಕಟ್ ಮಾಡಿ ರಾಜ್ಯದ ಹಿತವನ್ನು ಕಾಪಾಡುವಂತಹ ನಿಲುವನ್ನು ತೆಗೆದುಕೊಳ್ಳುತ್ತೀರಿ. ಅಥವಾ ಅಂತಹ ನಿರ್ಧಾರವನ್ನು ತೆಗೆದುಕೊಳ್ಳುವುದಕ್ಕೆ ಆಗುವುದಿಲ್ಲವೆ? ಏಕೆಂದರೆ ಬರುವ ೨೭ನೇ ತಾರೀಖು ಬರುವಂತಹ ಒಂದು ಸಮಸ್ಯೆ ಈ ರಾಜ್ಯದ ಚರಿತ್ರೆಯ ಸಮಸ್ಯೆ. ಇಡೀ ರಾಜ್ಯದ ಲಕ್ಷಾಂತರ ರೈತರ ಶಾಪಕ್ಕೆ ಗುರಿಯಾಗುವ ಸಮಸ್ಯೆ ಬರುತ್ತದೆ. ಇಂತಹ ಸಂದರ್ಭದಲ್ಲಿ ಜನಪ್ರತಿನಿಧಿಗಳಾಗಿ ಕೆಲಸ ಮಾಡುವಂತಹ ನಾವೂ ನೀವೂ ಆ ಪಾಪದ ಅಧ್ಯಾಯಕ್ಕೆ ಗುರಿಯಾಗಿ ಅದರ ಪಾಲುದಾರರಾಗುತ್ತೇವೆ. ಇದರ ಬಗ್ಗೆ ಚರ್ಚೆ ಮಾಡುವಂತಹ ಸಂದರ್ಭದಲ್ಲಿ ನಾನು ಮತ್ತೊಂದು ಸಾರಿ ಸರ್ಕಾರದ ಗಮನವನ್ನು ಸೆಳೆಯಲಿಕ್ಕೆ ಇಚ್ಛೆಪಡುತ್ತೇನೆ. ಕಾವೇರಿ ನದಿ ನೀರು ಆಗಿರಬಹುದು, ಲಕ್ಷಾಂತರ ಜನರ ತಳಮಳ, ಆಸೆ ಏನಿದೆ, ಅದು ತುಂಗಭದ್ರಾಕ್ಕೂ ಅಷ್ಟೇ ಆಗುತ್ತದೆ. ಹೇಮಾವತಿಗೂ ಅನ್ವಯವಾಗುತ್ತದೆ. ಗೋದಾವರಿಗೂ ಅಷ್ಟೇ ಆಗುತ್ತದೆ, ಕೃಷ್ಣಾಗೂ ಅಷ್ಟೇ ಆಗುತ್ತದೆ. ನೀರಾವರಿ ಯೋಜನೆಗಳಿಗಾಗಿ ಹೆಚ್ಚಿನ ಹಣವನ್ನು ಒದಗಿಸಬೇಕೆಂದು ನನ್ನ ವೈಯಕ್ತಿಕವಾದ ಒತ್ತಾಯ. ನೀವು ಎಷ್ಟು ಪ್ರಭಾವ ಬೀರಬೇಕೋ ಅಷ್ಟನ್ನು ಬೀರಿ ಈ ಯೋಜನೆಗಳನ್ನು ಕಾರ್ಯರೂಪಕ್ಕೆ ತರಬೇಕು ಎಂದು ನಾನು ಕೇಳಿಕೊಳ್ಳುತ್ತೇನೆ. ೨೭ನೇ ತಾರೀಖು ಇರುವಂತಹ ಸಮಸ್ಯೆಯನ್ನು ಬಗೆಹರಿಸಲಿಕ್ಕೆ ಬಹುಶಃ ನಮಗೆ ನನ್ನ ದೃಷ್ಟಿಯಿಂದ ಮೂರು ದಾರಿಗಳಿವೆ ಎಂದು ಕಾಣುತ್ತದೆ. ಲೀಗಲ್ ಆಗಿ, ಟೆಕ್ನಕಲ್ ಆಗಿ, ಆಮೇಲೆ ಪೊಲಿಟಿಕಲ್ ಆಗಿ ಕೂಡ. ಈ ಒಂದು ಅರ್ಜಿಯನ್ನು ಹಾಕಿದಂಥವರು ತಮಿಳುನಾಡಿನ ರೈತರು. ಇದು ಹೇಗೆ ಎಂದರೆ ಕಾನೂನಿನ ದೃಷ್ಟಿಯಿಂದ ತಮಿಳುನಾಡಿನ ರೈತರು ತಮ್ಮ ಹಿತವನ್ನು ಪ್ರಶ್ನೆಮಾಡಿ ಸುಪ್ರೀಂಕೋರ್ಟಿಗೆ ಅರ್ಜಿಯನ್ನು ಹಾಕಿಕೊಳ್ಳುವುದಾದರೆ, ಕರ್ನಾಟಕದ ರೈತರೂ ಕೂಡ ಒಂದು ಪಿಟಿಶನ್‌ನಲ್ಲಿ ನಮ್ಮನ್ನು ಭಾಗಸ್ತರನ್ನಾಗಿ ಮಾಡಿ ಎಂದು ಅರ್ಜಿಯನ್ನು ಹಾಕುವಷ್ಟು ಕಾನೂನಿನ ಪರಿಜ್ಞಾನದ ಅಭಾವವನ್ನು ದಿವಾಳಿತನವೆಂದು ಹೇಳಬೇಕಾಗುತ್ತದೆ.

ಈ ವಿವಾದ ಅನೇಕ ವರ್ಷಗಳಿಂದ ಸುಪ್ರೀಂಕೋರ್ಟಿನ ಮುಂದೆ ಇದೆ. ತಮಿಳುನಾಡಿನ ರೈತರು ಹಾಕುವಂಥ ಒಂದು ಅರ್ಜಿ ಉಚ್ಚನ್ಯಾಯಾಲಯದಲ್ಲಿ ಮೆಯಿಂಟೇನೇಬಲ್ ಆಗುವುದಾದರೆ ಅದನ್ನು ವಿಚಾರಣೆಗೆ ಸ್ವೀಕರಿಸುವಂಥ ವ್ಯಾಪ್ತಿ ಕೂಡ ಅದಕ್ಕೆ ಇರಬೇಕಾಗುತ್ತದೆ. If the Supreme Court has jurisdiction to maintain the petition or writ or whatsoever on behalf of the farmers of Tamil Nadu. the same principles should be applied in case of Karnataka also. A petition or impleading application of the farmers of Karnataka must also be maintained. I don't know why this has not come to the notice of the Government or our so called ledgal experts. ಇಷ್ಟೊಂದು ಸಣ್ಣ ವಿಷಯ,

ಏಕೆಂದರೆ ನಾನು ಹತ್ತಾರು ವರ್ಷದಿಂದ ವಕೀಲಗಿರಿ ಮಾಡುತ್ತಿದ್ದೇನೆ. ನನ್ನದು ತಪ್ಪಿದೆಯೋ ಗೊತ್ತಿಲ್ಲ. ನನ್ನ ಒಂದು ಮಟ್ಟದಲ್ಲಿ ಹೇಳಬೇಕೆಂದರೆ ಆ ರಾಜ್ಯದ ಅರ್ಜಿಯನ್ನು ಸುಪ್ರೀಂಕೋರ್ಟಿನಲ್ಲಿ ಎಂಟರ್‌ಟೇನ್ ಮಾಡುವುದಾದರೆ ಈ ರಾಜ್ಯದ ರೈತರ ಅರ್ಜಿಯನ್ನು ಸಹ ಎಂಟರ್‌ಟೇನ್ ಮಾಡಬೇಕಾಗುತ್ತದೆ. ಆದ್ದರಿಂದ ಸರ್ಕಾರಕ್ಕೆ ನನ್ನ ಕಳಕಳಿಯ ಪ್ರಾರ್ಥನೆ ಇಷ್ಟೆ. ಆದಷ್ಟು ಬೇಗ ಈ ರಾಜ್ಯದ ಸರ್ಕಾರಿ ವಕೀಲರ ಮುಖಾಂತರ ಈ ರಾಜ್ಯದ ರೈತರ ಮುಖಾಂತರ ಇಂಪ್ಲೀಡಿಂಗ್ ಅಪ್ಲಿಕೇಶನ್ ಅನ್ನು  ಹಾಕಿ ಸುಪ್ರೀಂಕೋರ್ಟ್‌ನಲ್ಲಿ ರಾಜ್ಯದ ಜನರ ಹಿತವನ್ನು ಕಾಪಾಡುವ ಪ್ರಯತ್ನ ಮಾಡಬೇಕು ಎನ್ನುವುದು ನನ್ನ ಮೊದಲನೇ ಕೋರಿಕೆ. ಎರಡನೆಯದ್ದು ಏನೆಂದರೆ, ೨೭ನೇ ತಾರೀಖು ಸುಪ್ರೀಂಕೋರ್ಟ್‌ನವರು ಆರ್ಡರ್ ಮಾಡಿಬಿಟ್ಟರು ಎಂದು ತಿಳಿದುಕೊಳ್ಳೋಣ.

ಸುಪ್ರೀಂಕೋರ್ಟಿನ ಜ್ಯೂರಿಸ್‌ಡಿಕ್ಷನ್‌ನಲ್ಲಿ ಅದಕ್ಕೆ ಸೆಂಟ್ರಲ್ ಗವರ್ನ್‌ಮೆಂಟ್‌ನವರಿಗೆ ಟ್ರಿಬ್ಯುನಲ್ ಕಾನ್‌ಸ್ಟಿಟ್ಯೂಟ್ ಮಾಡಲಿಕ್ಕೆ, ನಿರ್ದೇಶನ ಕೊಡಲಿಕ್ಕೆ, ಅದರ ವ್ಯಾಪ್ತಿಯಲ್ಲಿ ಇದೆಯೋ ಇಲ್ಲವೋ ಎಂದು ಚರ್ಚೆ ಮಾಡುವುದಕ್ಕೆ ನಾನು ಸಿದ್ಧನಿಲ್ಲ. ತೀರ್ಮಾನ ತೆಗೆದುಕೊಂಡರೆ ಏನು ಮಾಡಬಹುದು? ನಾನು ಸರ್ಕಾರಕ್ಕೆ ಕೇಳಿಕೊಳ್ಳುತ್ತಿದ್ದೇನೆ. ಏನೆಂದರೆ ಈ ತೀರ್ಮಾನ ಆದ ಮೇಲೆ ಅಪೀಲ್, ರಿವಿಜನ್, ರಿವ್ಯೂ ಯಾವುದರ ಮುಖಾಂತರ ಅದನ್ನು ಪ್ರಶ್ನೆ ಮಾಡಲಿಕ್ಕೆ ಸಾಧ್ಯವೇ ಎಂದು ದಯಮಾಡಿ ಸರ್ಕಾರ ಪರಿಶೀಲನೆ ಮಾಡಬೇಕಾಗುತ್ತದೆ.

ಸನ್ಮಾನ್ಯ ಅಧ್ಯಕ್ಷರೇ, ಈ ವಿವಾದವನ್ನು ಬಗೆಹರಿಸುವುದಕ್ಕೆ ಒಂದು ಪಂಚಾಯ್ತಿಯನ್ನು ನೇಮಿಸಬೇಕು, ಟ್ರಿಬ್ಯುನಲ್ ಕಾನ್‌ಸ್ಟಿಟ್ಯೂಟ್ ಮಾಡಬೇಕೆಂಬ ವಾದವನ್ನು ತಮಿಳುನಾಡಿನವರು ಮುಂದೆ ಇಟ್ಟಿದ್ದಾರೆ. ನನಗೆ ಗೊತ್ತಿಲ್ಲ, ಕಾನೂನು ಇಲಾಖೆಯವರು ಇದ್ದಾರೋ, ಇಲ್ಲವೋ, Under What basis? Is there any basis in this nation to decide the water dispute?

ನಾನಾಗಲೇ ಹೇಳಿದ ಹಾಗೆ ಮೂರು ಪರಿಹಾರ ಮಾರ್ಗಗಳನ್ನು ಪರಿಶೀಲಿಸಬಹುದು. There are 3 remedial measures, legal, Political and technical ಎಂದು ಹೇಳಿದ್ದೇನೆ. ಈ ಒಂದು ಕಾನೂನು ಪರಿಹಾರ, ಕಾನೂನೂ ಚೌಕಟ್ಟಿನಲ್ಲಿ ಪಡೆಯತಕ್ಕ ಪರಿಹಾರ ಎಂದರೆ ಮೊದಲನೆಯದು ರೈತನ ಮುಖಾಂತರ ಅರ್ಜಿ ಹಾಕುವುದು: ಎರಡನೆಯದು ೧೯೨೪ರ ಒಪ್ಪಂದ ಏನಿದೆ, ಇದು ಪ್ರಮುಖವಾದುದು. ನಾನು ಇದನ್ನೇ ಮತ್ತೆ ಓದಿ, ಅದೇ ಮಾತನ್ನೇ ಹೇಳಬೇಕಾಗಿದೆ. ಈ ವಿವಾದ ಇಷ್ಟೊಂದು ದಿವಸ ಜೀವಂತವಾಗಿ ಉಳಿದಿದ್ದರೂ ಕೂಡ ಇಷ್ಟೊಂದು ದಿವಸ, ಈ ವೇದಿಕೆಯ ಮೇಲೆ ಗಂಭೀರವಾಗಿ ಚರ್ಚೆ ನಡೆದಿದ್ದರೂ ಕೂಡ, ೧೯೨೪ನೇ ಇಸವಿಯಲ್ಲಿ ಆಗಿರುವಂತಾದ್ದನ್ನು ಒಂದು ಅಗ್ರಿಮೆಂಟ್ ಎಂದು ಕರೆಯುತ್ತೀರೋ, ರೂಲ್ಸ್ ಎಂದು ಕರೆಯುತ್ತೀರೋ, Whether it is implied, I do not know what it is. ಈ ಘಳಿಗೆಯವರೆಗೆ ೧೯೨೪ನೇ ಇಸವಿಯ ಒಪ್ಪಂದ ಅಥವಾ ನಿಯಮವನ್ನು ಯಾವುದೇ ಕೋರ್ಟಿಗೆ ಒಯ್ದು, Whether it is enforceable or not. ಎನ್ನುವುದನ್ನು ಪರೀಕ್ಷಿಸಿಲ್ಲ.

ಸನ್ಮಾನ್ಯ ಉಪಾಧ್ಯಕ್ಷರೇ, ದಯವಿಟ್ಟು ಕ್ಷಮಿಸಬೇಕು. ತಮ್ಮ ಮನಸ್ಸು ನೋಯಿಸುವ ಇಚ್ಛೆ ನನಗೆ ಇಲ್ಲ. ಮಾತನಾಡುವ ಚಟವೂ ಇಲ್ಲ. ೧೫ ವರ್ಷಗಳ ಕಾಲ ಲಾಯರ್ ಆಗಿ ಮಾತನಾಡಿಕೊಂಡು ಬದುಕಿದ್ದೇನೆ. ಈ ವಿಷಯದ ಬಗ್ಗೆ ಚಟಕ್ಕಾಗಲೀ, ಬೇರೆ ದೃಷ್ಟಿಯಿಂದಾಗಲೀ

ನಾನು ಮಾತಾನಾಡುತ್ತಿಲ್ಲ. ಈ ಮನೆಯ ಮುಖಾಂತರ ಈ ದೇಶದ ಜನತೆಗೆ ಪ್ರಾಮುಖ್ಯವಾದಂಥ ಈ ವಿಷಯವನ್ನು ಗಮನಕ್ಕೆ ತರಬೇಕೆಂಬ ಒಂದೇ ಒಂದು ಆಸೆಯಿಂದ ಮಾತನಾಡುತ್ತಿದ್ದೇನೆ. ದಯವಿಟ್ಟು ಕಾಲ ಕೊಡಿ.

ಕಾನೂನು ಚೌಕಟ್ಟಿನಲ್ಲಿ ಮತ್ತೊಂದು ವಿಷಯವನ್ನು ನಾವು ಪ್ರಸ್ತಾಪ ಮಾಡಬೇಕು. ನಾನು ಆಗಲೇ ತಿಳಿಸಿದ ಹಾಗೆ; ಈ ವಿಷಯವನ್ನು ಕುರಿತಾಗಿ ೧೮೭೮ರಲ್ಲಿ ಒಂದು ನಿಯಮಾವಳಿ ಆಯಿತು, ೧೮೯೨ರಲ್ಲಿ ಒಂದು ನಿಯಮಾವಳಿ ಆಗಿದೆ, ೧೯೨೪ರಲ್ಲಿ ಒಂದು ಒಪ್ಪಂದ ಆಗಿದೆ. ಇದನ್ನೆಲ್ಲಾ ಆಧಾರವಾಗಿ ಇಟ್ಟುಕೊಂಡು ಈ ವಿವಾದವನ್ನು ತೀರ್ಮಾನ ಮಾಡುವುದಕ್ಕೆ ಸಾಧ್ಯವೇ ಎಂಬ ಒಂದು ಪ್ರಶ್ನೆ ಬಂತು. ಉಚ್ಚ ನ್ಯಾಯಾಲಯದ ನಿರ್ದೇಶನದ ಮೇರೆಗೆ ಅಥವಾ ಸ್ವಇಚ್ಛೆಯಿಂದ ಕೇಂದ್ರ ಸರಕಾರ ಒಂದು ಪಂಚಾಯಿತಿಯನ್ನು ಮಾಡಲು ಅಥವಾ ಟ್ರಿಬ್ಯೂನಲ್ ತೀರ್ಮಾನವನ್ನು ಕೊಡಬೇಕಾಗುತ್ತದೆ. ಸನ್ಮಾನ್ಯ ಮಂತ್ರಿಗಳು ಈಗತಾನೆ ಹೇಳಿದರು. ೧೯೨೪ರ ಅಗ್ರಿಮೆಂಟ್ ಈಸ್ ನಾಟ್ ಎನ್‌ಫೋರ್ಸಬಲ್, ಅದು ಸತ್ತಿದೆ ಎಂದರು. ಅವರ ಪ್ರಕಾರ ಅಂದರೆ ಸರಕಾರದ ಪ್ರಕಾರ ಅದು ಸತ್ತಿದೆ. ಇದಕ್ಕೆ ಟ್ರಿಬ್ಯೂನಲ್ ಕಾನ್‌ಸ್ಟಿಟ್ಯೂಟ್ ಮಾಡುವುದಾದರೆ, ಯಾವ ನಿಯಮಾವಳಿಗಳನ್ನು ಆಧರಿಸಿ, ಯಾವ ನಾರ್ಮ್ಸ್ ಅಥವಾ ಬೇಸಿಸ್ ಇಟ್ಟುಕೊಂಡು ಆ ಟ್ರಿಬ್ಯೂನಲ್ ತೀರ್ಮಾನವನ್ನು ಕೊಡಬೇಕು. ನನಗೆ ಗೊತ್ತಿದ್ದ ಹಾಗೆ ಈ ರಾಷ್ಟ್ರದಲ್ಲಿ ಅನೇಕ ವರ್ಷಗಳಿಂದ ಒಂದು ನ್ಯಾಷನಲ್ ವಾಟರ್ ಪಾಲಿಸಿ ಅಥವಾ ರಾಷ್ಟ್ರೀಯ ಜಲನೀತಿಯನ್ನು ರೂಪಿಸಬೇಕೆಂದು ಒಂದು ಬೇಡಿಕೆ ಇದೆ. ಈ ಒಂದು ನೀತಿಯನ್ನು ರೂಪಿಸಿ ಆ ನೀತಿನಿಯಮಗಳ ಚೌಕಟ್ಟಿನಲ್ಲಿ Within the frame work of the norms that is prescribed under the National Water Supply scheme or the plan or whatever it is the tribunal can take its decision.

ಆದರೆ ಇವತ್ತು ಈ ರಾಷ್ಟ್ರದಲ್ಲಿ ಯಾವುದೇ ಒಂದು ರಾಷ್ಟ್ರಮಟ್ಟದಲ್ಲಿ ನೀರಿನ ವಿವಾದ ತೀರ್ಮಾನ ಮಾಡುವಂತಹ ನಿಯಮಾವಳಿಗಳು, ಅಂತಹ ಕಾನೂನಿನ ಚೌಕಟ್ಟನ್ನು ನಿರ್ಮಿಸತಕ್ಕಂಥ ಪರಿಸ್ಥಿತಿ ಇಲ್ಲ. ಅಂತರ ರಾಜ್ಯಗಳ ನೀರಿನ ವಿವಾದವನ್ನು ತೀರ್ಮಾನ ಮಾಡುವಂತಹ ವಿಷಯದ ಬಗ್ಗೆ ಮಾನ್ಯ ಸದಸ್ಯರಾದ ವೀರಪ್ಪ ಮೊಯಿಲಿಯವರಿಗೆ ಚೆನ್ನಾಗಿ ಗೊತ್ತಿರಬಹುದು. ಅವರು ಮಾತನಾಡುವಾಗ ಹೇಳಬಹುದು. ಆದರೆ ಈ ಅಂತರ ರಾಜ್ಯ ನೀರಿನ ವಿವಾದದ ಬಗ್ಗೆ ನನ್ನ ತಕರಾರು ಇಷ್ಟೇ. Under inter - State Water Disputes Act, they have not prescribed any norms not the principles or the basis on which decision is to be taken. They have prescribed only the procedure i.e., in case if there is a dispute, will be refereed to the Tribunal or to soeme Such thing. ಆದ್ದರಿಂದ ಕಾನೂನು ಮೀರಿ ಹೋಗುವಂತಹ ಸಂದರ್ಭದಲ್ಲಿ ಈ ಸರ್ಕಾರ ಕೇಂದ್ರ ಸರ್ಕಾರಕ್ಕೆ ಮನವಿ ಮಾಡಿಕೊಳ್ಳಬಹುದು. ಕೇಂದ್ರ ಸರ್ಕಾರದಲ್ಲಿ ನಿರ್ದಿಷ್ಟವಾದ ಸ್ಪಷ್ಟವಾದ ಒಂದು ರಾಷ್ಟ್ರೀಯ ನಿಯಮವನ್ನು, ತತ್ವವನ್ನು ಒಂದು ಚೌಕಟ್ಟಿನ ನಿಯಮ ಮಾಡುವವರೆವಿಗೂ, ಪಂಚಾಯತಿ ನೇಮಿಸುವುದನ್ನು ಮುಂದುವರಿಸಬೇಕೆಂದು ಕೇಂದ್ರ ಸರ್ಕಾರದ ಗಮನಕ್ಕೆ ನಾವು ತರಬೇಕು. ಇದನ್ನು ನಾನು ಸರ್ಕಾರದ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ಅಗ್ರಿಮೆಂಟ್ಸ್ ವಿಷಯಗಳ ಬಗ್ಗೆ ಈಗಾಗಲೇ ಮಾನ್ಯ ಮಂತ್ರಿಗಳು ಅಪ್ಪಣೆ ಕೊಡಿಸಿದ್ದಾರೆ. ಒಂದು ಮಾತನ್ನು ನಾನು ಹೇಳುವಾದರೆ, Any agreement of the contract entered into by a Government will blind the succeeding

Governments but the agreement or the contract entered into between those authorities in those days was between the British Government and the Maharaja of Mysore. But the decision will blind only if there is an agreement between two sovereign States but fortunately for the people of Karnataka particularly for the forunate of the farmers of Karnataka , this is not attracted. Then, the Presidency Government was not in our State. The British Government was not a sovereign State and the Maharaja was not a sovereign State, Under these circumstances; if there is any agreement, it is not enforceable and it will not bind any succeeding Governments.

ಈ ಒಂದು ವಿಷಯವನ್ನು ಕೂಡ ನಮ್ಮ ಕಾನೂನು ತಜ್ಞರು ಪರಿಶೀಲನೆ ಮಾಡಿ, ಇದರ ಮುಖಾಂತರ ಪರಿಹಾರ ಒದಗಿಸುವುದಕ್ಕೆ ಪ್ರಯತ್ನ ಮಾಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಕಾನೂನಿನ ಚೌಕಟ್ಟಿನಲ್ಲಿ ಪಡೆಯುವಂತಹ ಪರಿಹಾರ ಎಷ್ಟು ಇದೆ, ರಾಜಕೀಯವಾಗಿ ಯಾವ ಅಸ್ತ್ರ ಉಪಯೋಗಿಸಬೇಕಾಗುತ್ತದೆ. ರಾಜಕೀಯವಾಗಿ ನಾವು ಯಾವ ಒಂದು ತೀರ್ಮಾನ ತೆಗೆದುಕೊಳ್ಳಬಹುದು. ಈ ಸಮಸ್ಯೆಯನ್ನು ಬಗೆಹರಿಸಬೇಕಾದರೆ, ರಾಜ್ಯದ ಜನತೆಯ ಹಿತವನ್ನು ರಾಷ್ಟ್ರಮಟ್ಟದಲ್ಲಿ ಸರ್ಕಾರ ತೀರ್ಮಾನ ಮಾಡಬೇಕಾಗುತ್ತದೆ. ಈ ಟ್ರಿಬ್ಯುನಲ್ ಅನ್ನು ರಚನೆ ಮಾಡುವ ನಿರ್ಧಾರಕ್ಕೆ, ಆ ಒಂದು ನಿರ್ಣಯ ಬರುವುದಕ್ಕೆ, ಬಹುಶಃ ಸುಪ್ರೀಂಕೋರ್ಟಿನ ವ್ಯಾಪ್ತಿಯಲ್ಲಿ ಅವಕಾಶ ಇಲ್ಲವೆಂದು ನಾನು ಭಾವಿಸಿದ್ದೇನೆ. The Supreme Court cannot direct, according to me, I don't known, the Central Government can constitute a Tribunal but the Central Government can take a decision to constitute a Tribuanl. ಈಗ ನಾವು ರಾಜಕೀಯವಾಗಿ ಸಮಸ್ಯೆ ಬಗೆಹರಿಸುವಂತಹ ಸಂದರ್ಭದಲ್ಲಿ, ನಾವು ಕೇಂದ್ರ ಸರ್ಕಾರದ ಮೇಲೆ ಒತ್ತಡ ತರಬೇಕಾಗುತ್ತದೆ. ಕೇಂದ್ರ ಸರ್ಕಾರಕ್ಕೆ ರಾಜ್ಯದ ಜನತೆಗೆ ಆಗುವ ಅನ್ಯಾಯವನ್ನು ಕೇಂದ್ರ ಸರ್ಕಾರದ ಗಮನಕ್ಕೆ ತರಬೇಕಾಗುತ್ತದೆ. ಕೇಂದ್ರ ಸರ್ಕಾರ ಪಂಚಾಯಿತಿ ನೇಮಿಸುವುದರಿಂದ ಮುಂದೆ ಆಗುವಂತಹ ಅನ್ಯಾಯದ ಬಗ್ಗೆ ಅವರ ಗಮನಕ್ಕೆ ತರಬೇಕಾಗುತ್ತದೆ. ಈ ಕೆಲಸವನ್ನು ಸರ್ಕಾರ ಎಷ್ಟರಮಟ್ಟಿಗೆ ನಿರ್ವಹಣೆ ಮಾಡಿದೆ ಎಂದು ನಾನು ಕೇಳಬಯಸುತ್ತೇನೆ. ಕೇಂದ್ರ ಸರ್ಕಾರಕ್ಕೆ ಕರ್ನಾಟಕ ರಾಜ್ಯದ ಜನತೆಗೆ ಎಷ್ಟು ಅನ್ಯಾಯವಾಗಿದೆ ಎನ್ನುವ ಒಂದು ವಿಷಯವನ್ನು ಅವರ ಗಮನಕ್ಕೆ ತರುತ್ತಾ, ಕೆಲವು ಅಂಕಿ ಅಂಶಗಳನ್ನು ಕೇಂದ್ರ ಸರ್ಕಾರಕ್ಕೆ ಒದಗಿಸಿದರೆ ಅನುಕೂಲವಾಗಬಹುದೆಂದು ನಾನು ಭಾವಿಸುತ್ತೇನೆ. ಬಹುಶಃ ನಾಲ್ಕು ರಾಜ್ಯಗಳಾದ ಕರ್ನಾಟಕ, ತಮಿಳುನಾಡು, ಕೇರಳ, ಪಾಂಡಿಚೇರಿ ಇವರು ನಮ್ಮನ್ನು ಲೆಕ್ಕಕ್ಕೇ ಇಟ್ಟಿಲ್ಲ. ಇನ್ನು ಕೇರಳ ಮತ್ತು ಪಾಂಡಿಚೇರಿಯನ್ನು ಏನು ಮಾಡಬಲ್ಲರು? ಬಹುಶಃ ಕರ್ನಾಟಕ ರಾಜ್ಯದ ಜನತೆಗೆ ಆಗಿದೆ ಎನ್ನುವುದನ್ನು ನಾನು ತಮ್ಮ ಗಮನಕ್ಕೆ ತರಬಯಸುತ್ತೇನೆ. ಕರ್ನಾಟಕದಲ್ಲಿ ಡ್ರೈ ಏರಿಯಾ ಇರುವುದು ೩೪,೨೭೩ ಇದೆ. ಇದು ಬಹಳ ಪ್ರಮುಖವಾದುದು. ಗ್ರಾಸ್ ಏರಿಯಾ ಆಫ್ ದಿ ಇರಿಗೇಷನ್, ಲ್ಯಾಂಡ್ ಇನ್ ಸ್ಕ್ವೇವೆಯರಂ ಕಿಲೋಮೀಟರ್‌ನಲ್ಲಿ ಎಂದರೆ, ೧೯೭೧ನೇ ಇಸವಿಯಲ್ಲಿ ಕರ್ನಾಟಕದ್ದು ೨೭೬೦, ೧೯೮೮ರಲ್ಲಿ ೪,೨೪೦ ಇದರಿಂದ ಕರ್ನಾಟಕ ರಾಜ್ಯಕ್ಕೆ ಎಷ್ಟು ಅನ್ಯಾಯವಾಗಿದೆ ಎಂಬುದು ಗೊತ್ತಾಗುತ್ತದೆ. ಇದನ್ನು ನಾವೇ ಕೇಂದ್ರ ಸರ್ಕಾರದ ಗಮನಕ್ಕೆ ತಂದು,

ಕರ್ನಾಟಕ ರಾಜ್ಯಕ್ಕೆ ಆಗಿರುವ ಅನ್ಯಾಯವನ್ನು ಸರಿಮಾಡಲಿಕ್ಕೆ ತಿಳಿಸಬೇಕಾಗುತ್ತದೆ. ಮತ್ತೊಂದು ವಿಷಯವನ್ನು ತಮ್ಮ ಗಮನಕ್ಕೆ ತರಲಿಚ್ಛಿಸುತ್ತೇನೆ. ರಿಗಾರ್ಡಿಂಗ್ Water utilisation in TMCFt in ೧೯೭೦, Karnataka ೧೭೭, Kerala ೫ TMcft but in case of Tamil Nadu, it is ೫೬೬. ಇದನ್ನು ನೋಡಿದರೆ ನಮ್ಮ ಭಾಗದ ರೈತರಿಗೆ ಆಗಿರುವ ಅನ್ಯಾಯ ಎಷ್ಟು ಎಂದು ಗೊತ್ತಾಗುತ್ತದೆ. ಇದರ ಬಗ್ಗೆ ನಾವು ಮಾತನಾಡದೇ ಇದ್ದರೆ ನಮ್ಮ ರಾಜ್ಯದಲ್ಲಿ ಒಂದು ಪಾಪದ ಅಧ್ಯಾಯ ಶುರುವಾಗುತ್ತದೆ. ಈ ಅಧ್ಯಾಯದಲ್ಲಿ ನಮ್ಮ ಹೆಸರು ಸೇರುವುದು ಬೇಡ. ಕರ್ನಾಟಕವು ೧೭೭ ಟಿ.ಎಂ.ಸಿ.ಯನ್ನು ಉಪಯೋಗಿಸಿ, ತಮಿಳುನಾಡು ೫೬೬ ಟಿ.ಎಂ.ಸಿ.ಯಷ್ಟು ನೀರನ್ನು ಉಪಯೋಗಿಸಿರುವ ವಿಷಯವನ್ನು ಕೇಂದ್ರ ಸರ್ಕಾರದ ಗಮನಕ್ಕೆ ತಂದು, ನಮ್ಮ ಕರ್ನಾಟಕ ರಾಜ್ಯಕ್ಕೆ ಆಗಿರುವಂಥ ಅನ್ಯಾಯವನ್ನು ಸರಿಪಡಿಸಬೇಕೆಂದು ಒತ್ತಾಯಪೂರ್ವಕವಾಗಿ ಕೇಳಬೇಕಾಗುತ್ತದೆ. ಇನ್ನು ಎರಡನೆಯದು, ಕೇಂದ್ರ ಸರ್ಕಾರದ ಮೇಲೆ ಪ್ರಭಾವ ಬೀರುವಂಥ ಶಕ್ತಿ ನಮಗಿಂತಲೂ ನಮ್ಮ ವಿರೋಧ ಪಕ್ಷದ ಸ್ನೇಹಿತರಿಗೆ ಹೆಚ್ಚು ಇದೆ. ಬಹುಶಃ ಈ ರಾಜ್ಯದ ಹಿತವನ್ನು ಕಾಪಾಡುವುದರಲ್ಲಿ ಅವರು ಯಾವ ವಿಧದಿಂದಲೂ ನಮಗಿಂತಲೂ ಕಡಿಮೆ ಇಲ್ಲವೆಂದು ಭಾವಿಸಿಕೊಳ್ಳುತ್ತೇನೆ. ನಮ್ಮಂತೆ ಅವರೂ ಕೂಡ ಮಣ್ಣಿನ ವಾಸನೆಯಲ್ಲಿ ಹುಟ್ಟಿ ಬೆಳೆದವರಾಗಿದ್ದಾರೆ. ಹೊಲ ಒಣಗಿ, ಪೈರು ಬಾಡಿದಾಗ ಮನಸ್ಸು ಬಾಡುವಂಥ ಸ್ನೇಹಿತರು ಆ ಕಡೆಯೂ ಬಹಳ ಜನ ಇದ್ದಾರೆ. ದನಕರುಗಳಿಗೆ ಹುಲ್ಲು ಇಲ್ಲದೆ ಮೂಳೆ ಬಿಟ್ಟಿರುವುದನ್ನು ನೋಡಿದಾಗ ಮನಸ್ಸು ಕರಗುವ ಸ್ನೇಹಿತರೂ ಇಲ್ಲಿದ್ದಾರೆ. ಇಂತಹವರುಗಳೆಲ್ಲಾ ಒಟ್ಟಾಗಿ ಕೇದ್ರ ಸರ್ಕಾರದ ಮೇಲೆ ಒತ್ತಡ ತಂದು ನ್ಯಾಯ ದೊರಕಿಸಿಕೊಳ್ಳಬೇಕು. ವಿರೋಧ ಪಕ್ಷದ ಮಿತ್ರರ ಸಹಾಯವನ್ನು ಇದರ ಬಗ್ಗೆ ಕನಿಷ್ಟವಲ್ಲ, ಗರಿಷ್ಠ ಪ್ರಮಾಣದಲ್ಲಿ ಉಪಯೋಗಿಸಿಕೊಳ್ಳಬೇಕೆಂದು ನಾನು ಸರ್ಕಾರಕ್ಕೆ ಪ್ರಾರ್ಥನೆ ಮಾಡಲಿಕ್ಕೆ ಇಷ್ಟಪಡುತ್ತೇನೆ. ಇನ್ನು ರಾಜಕೀಯವಾಗಿ ಮತ್ತೊಂದು ವಿಷಯವನ್ನು ಪ್ರಸ್ತಾಪ ಮಾಡಲಿಕ್ಕೆ ಇಷ್ಟಪಡುತ್ತೇನೆ. ಇವತ್ತು ತಮಿಳುನಾಡಿನಲ್ಲಿ ಜನರಿಂದ ಆರಿಸಿ ಬಂದಂಥ ಸರ್ಕಾರ ಇಲ್ಲ. ನನಗೆ ತಿಳಿದ ಮಟ್ಟಿಗೆ ಶ್ರೀಮತಿ ಇಂದಿರಾಗಾಂಧಿಯವರು ಪ್ರಧಾನಮಂತ್ರಿಯಾಗಿದ್ದಾಗ ಇದೇ ರೀತಿ ಕಾವೇರಿ ಜಲದ ಬಗ್ಗೆ ವಿವಾದ ಉಂಟಾಗಿದ್ದಾಗ ಮತ್ತು ಆ ಸಮಯದಲ್ಲಿ ಕರ್ನಾಟಕದಲ್ಲಿ ಚುನಾಯಿತ ಸರ್ಕಾರ ಬರುವವರೆಗೂ ಸಮಸ್ಯೆಯನ್ನು ತಡೆಹಿಡಿಯಬೇಕೆಂದು ಚರ್ಚೆಯನ್ನು ಮುಂದಕ್ಕೆ ಹಾಕಿದ್ದರು. ಅದೇ ರೀತಿ ತಮಿಳುನಾಡಿನಲ್ಲಿ ಈ ದಿವಸ ಚುನಾಯಿತ ಸರ್ಕಾರ ಇಲ್ಲ. ಆದ್ದರಿಂದ, ಈ ವಿವಾದವನ್ನು ಮುಂದಕ್ಕೆ ಹಾಕತಕ್ಕಂಥ ಸಂದರ್ಭ ನಮ್ಮ ಮುಂದಿದೆ. Precedent is before us. On the basis of this precedent, we may request the present Hon'ble Prime Minister to postpone this decision till the popular Government is established in Tamil Nadu. ಇದೊಂದು ವಿಷಯವನ್ನು ಕೇಂದ್ರ ಸರಕಾರದವರ ಗಮನಕ್ಕೆ ತಂದು, ತಮಿಳುನಾಡಿನಲ್ಲಿ ಈಗ ಜನರ ಸರಕಾರ ಬರುವವರೆಗೆ ಈ ವಿಷಯವನ್ನು ಮುಂದಕ್ಕೆ ಹಾಕಬೇಕೆಂದು ಹೇಳುವ ಮೂಲಕ, ಆ ಒಂದು ರಾಜಕೀಯ ಲಾಭವನ್ನು ಪಡೆಯಬಹುದು ಎಂದು ನಾನು ಸರಕಾರದವರ ಗಮನಕ್ಕೆ ತರಬಯಸುತ್ತೇನೆ. ಬಹುಶಃ ಇಲಾಖೆಯ ಮತ್ತು ಸರಕಾರದವರ ಗಮನಕ್ಕೆ ಈ ಒಂದು ವಿಷಯ ಬಂದಿದೆ ಎಂದು ನಾನು ಭಾವಿಸುತ್ತೇನೆ. Violation of any agreement, contract will make the party to lose his right and obligations.

ಯಾವುದೇ ಒಂದು ಒಪ್ಪಂದ ಆದಾಗ, ಅದರ ಪ್ರಕಾರ, ಆ ಒಪ್ಪಂದಕ್ಕೆ ಒಳಪಟ್ಟಿರತಕ್ಕಂಥ ಯಾವುದೇ ಒಂದು ವ್ಯಕ್ತಿಯು ನಡೆದುಕೊಳ್ಳದಿದ್ದರೆ, ಆ ಒಪ್ಪಂದದಿಂದ ಬರುವಂಥ ಅನುಕೂಲಗಳಿಗೆ ಆ ಒಪ್ಪಂದ ಮುರಿದ ವ್ಯಕ್ತಿಯು ಹೊರತಾಗುತ್ತಾನೆ. ಬಹುಶಃ ತಮಿಳುನಾಡನ್ನು ತರಾಟೆಗೆ ತೆಗೆದುಕೊಳ್ಳುವದಕ್ಕೆ ಈ ಒಂದು ಅವಕಾಶವು ಇದೆ ಎಂದು ನಾನು ಭಾವಿಸುತ್ತೇನೆ. ಕರ್ನಾಟಕ ಮತ್ತು ತಮಿಳುನಾಡು ಸರ್ಕಾರಗಳ ನಡುವೆ ಆಗಿರತಕ್ಕಂಥ ಒಪ್ಪಂದದ ಮೇರೆಗೆ, ಕರ್ನಾಟಕ ರಾಜ್ಯಕ್ಕೆ ಎಷ್ಟು ನೀರು, ತಮಿಳುನಾಡಿಗೆ ಎಷ್ಟು ನೀರು ಎಂದು ಏನಾದರೂ ತೀರ್ಮಾನವಾಗಿದ್ದರೆ, ಅದನ್ನು ಮುರಿದು ಅದಕ್ಕೆ ಬೆಲೆ ಕೊಡದೆ ಆ ಒಪ್ಪಂದವನ್ನು ಕಸದ ಬುಟ್ಟಿಗೆ ಒಗೆದವರು ತಮಿಳುನಾಡಿನವರು ಎಂದು ಹೇಳಬೇಕಾಗುತ್ತದೆ. ಹೀಗೆ ಇಬ್ಬರ ನಡುವೆ ಆದಂಥ ಒಂದು ಒಪ್ಪಂದವನ್ನು ಮುರಿದವರಿಗೆ ಇಲ್ಲಿ ಬೆಲೆ ಹೊರಟುಹೋಯಿತು. ಹೀಗೆ ಒಪ್ಪಂದವನ್ನು ಮುರಿದಂಥ ರಾಜ್ಯಕ್ಕೆ ಯಾವುದೇ ಹಕ್ಕನ್ನು ಪ್ರತಿಪಾದನೆ ಮಾಡುವಂಥ ಹಕ್ಕು ಇಲ್ಲ. ಶೇ. ೬೨ ರಷ್ಟು ಪ್ರಮಾಣವನ್ನು ಉಪಯೋಗಿಸಿಕೊಂಡು ಹಿಂದೆ ರಾಜ್ಯಗಳ ನಡುವೆ ಆದಂಥ ಒಪ್ಪಂದವನ್ನು ಮುರಿದಿದ್ದಾರೆ. ಆದುದರಿಂದ ಈ ಒಂದು ಒಪ್ಪಂದದ ಸೂತ್ರವನ್ನು ಮುರಿದಿರುವಂಥ ತಮಿಳುನಾಡಿಗೆ ಮತ್ತೆ ಪುನಃ ಪಂಚಾಯತಿಯ ಮುಂದೆ ಬರುವುದಕ್ಕೆ ನೈತಿಕವಾದಂಥ ಮತ್ತು ಕಾನೂನಿನ ಚೌಕಟ್ಟಿನಲ್ಲಿ ಕೂಡ ಯಾವುದೇ ಶಕ್ತಿ ಇಲ್ಲ ಎಂದು ಹೇಳುವುದಕ್ಕೆ ಇಷ್ಟಪಡುತ್ತೇನೆ.

ನಾನು ಈಗಾಗಲೇ ಪ್ರಸ್ತಾಪ ಮಾಡಿರುವ ವಿಷಯಗಳ ಜೊತೆಗೆ ಇನ್ನೂ ಒಂದು ವಿಷಯದಲ್ಲಿ ನಿರ್ಣಯವನ್ನು ಸರ್ಕಾರದ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ನಮಗೆ ಕಾನೂನಿನ ಚೌಕಟ್ಟಿನಲ್ಲಿ ಏನು ಪರಿಹಾರವನ್ನು ದೊರಕಿಸಿಕೊಳ್ಳುವುದಕ್ಕೆ ಸಾಧ್ಯವೋ ಅದನ್ನು ಪಡೆಯುವುದಕ್ಕೆ ಈಗ ಪ್ರಯತ್ನಗಳನ್ನು ಮಾಡಿದ್ದಾರೆ. ಆದರೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆ ಮತ್ತು ಸರಕಾರ ತಾಂತ್ರಿಕವಾಗಿ ಯಾವುದೇ ನಿಲುವನ್ನು ತಾಳುವುದರಿಂದ, ಕರ್ನಾಟಕ ರಾಜ್ಯದ ಜನತೆಯ ಅನುಕೂಲಕ್ಕಾಗಿ ಯಾವ ಪರಿವರ್ತನೆಯನ್ನು ಮಾಡಿಕೊಳ್ಳುವುದಕ್ಕೆ ಸಾಧ್ಯ ಎನ್ನುವುದರ ಬಗ್ಗೆ, ಸರಕಾರದವರು ಈ ಸದನದ ಗಮನಕ್ಕೆ ತರಬೇಕೆಂದು ನಾನು ತಮ್ಮ ಮೂಲಕ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಈ ವಿಷಯವು ೩ನೇ ತಾರೀಖು ಉಚ್ಚನ್ಯಾಯಾಲಯದ ಮುಂದೆ ಬಂದ ಮೇಲೆ, ರಾಜ್ಯದ ಮುಖ್ಯಮಂತ್ರಿಗಳಲ್ಲಿ ಮತ್ತು ಸಂಬಂಧಪಟ್ಟ ಮಂತ್ರಿಗಳವರಲ್ಲಿ ಪ್ರಾರ್ಥನೆ ಮಾಡಿಕೊಂಡ ಮೇರೆಗೆ, ಈಗಾಗಲೇ ಸಂಬಂಧಪಟ್ಟ ಲೋಕಸಭಾ ಸದಸ್ಯರನ್ನು ಮತ್ತು ಶಾಸಕರನ್ನು ಕರೆದು ಒಂದು ಸಭೆಯನ್ನು ಮಾನ್ಯ ಮುಖ್ಯಮಂತ್ರಿಗಳು ಮಾಡಿದ್ದಾರೆ. ಅದಕ್ಕಾಗಿ ನಾನು ಅವರನ್ನು ಅಭಿನಂದಿಸುತ್ತೇನೆ. ಆದರೆ ಇಂಥ ಸಭೆಗಳನ್ನು ಮಾಡುವುದರಿಂದ ಈ ನಮ್ಮ ಮುಂದಿರುವ ಸಮಸ್ಯೆಗೆ ಪರಿಹಾರ ಸಿಗುತ್ತದೆ ಎಂದು ಹೇಳುವಷ್ಟು ಭ್ರಮೆ ನನಗಿಲ್ಲ.

ವಿರೋಧಪಕ್ಷದ ಸದಸ್ಯರು ಅಥವಾ ಆಡಳಿತ ಮಾಡುತ್ತಿರುವ ನಾವು ಈ ಜನರ ಹಿತವನ್ನು ರಕ್ಷಣೆ ಮಾಡುವುದರಲ್ಲಿ, ಒಣಗಿದ ಪೈರಿಗೆ ನೀರನ್ನು ಕುಡಿಸುವುದರಲ್ಲಿ ಹಿಂದೆ ಬಿದ್ದಲ್ಲಿ, ಈ ರಾಜ್ಯದ ಜನ ಎಚ್ಚೆತ್ತುಕೊಳ್ಳಬೇಕಾಗುತ್ತದೆ. ಅವರು ರಾಜ್ಯ ಸರ್ಕಾರದ ಮೇಲೆ, ಕೇಂದ್ರದ ಮೇಲೆ, ಜಿಲ್ಲಾ ಪರಿಷತ್ತುಗಳ ಮೇಲೆ, ಎಂಎಲ್‌ಎಗಳ ಮೇಲೆ ತಿರುಗಿ ಬೀಳುವ ಪರಿಸ್ಥಿತಿಯನ್ನು ನೋಡಬೇಕಾಗುತ್ತದೆ. ಈ ರಾಜ್ಯದ ಹಿತವನ್ನು ಕಾಪಾಡುವುದರಲ್ಲಿ, ರೈತನ ಪೈರಿಗೆ ನೀರುಣಿಸುವ ಪವಿತ್ರ ಕೆಲಸ ಮಾಡುವುದರಲ್ಲಿ, ಆದ್ಯತೆಯನ್ನು ಗುರುತಿಸುವುದರಲ್ಲಿ ಮೀನಾಮೇಷ ಎಣಿಸುವುದಾದರೆ ಕಾವೇರಿ

ಕೊಳ್ಳದ ಜನ ರೊಚ್ಚಿಗೆದ್ದಾರು ಎಂದು ಈ ಸದನದ ಮೂಲಕ ಎಚ್ಚರಿಸುವುದಕ್ಕೆ ಇಷ್ಟಪಡುತ್ತೇನೆ. ಪ್ರತಿಯೊಂದಕ್ಕೂ ಮಿತಿ ಇದೆ. ಈ ರಾಜ್ಯದಲ್ಲಿ ಸಾರ್ಕ್ ಸಮ್ಮೇಳನ ಮಾಡುವುದಕ್ಕೆ ೪ ಕೋಟಿ ಖರ್ಚು ಮಾಡಲು ಹಣ ಇದೆ! ಆದರೆ ಹೇಮಾವತಿ ಕಾಲುವೆ ಅಗೆದವನಿಗೆ ಕೊಡುವುದಕ್ಕೆ ಹಣ ಇಲ್ಲ ಎಂದರೆ ಏನು?

ಸರ್ಕಾರಕ್ಕೆ ಈ ಮೂಲಕ ಒಂದು ಎಚ್ಚರಿಕೆ ಕೊಡಲು ಬಯಸುತ್ತೇನೆ. ರೈತನ ಸಂಯಮಕ್ಕೆ ಒಂದು ಮಿತಿ ಇದೆ. ಅವನ ಕಷ್ಟ ಕಾರ್ಪಣ್ಯಕ್ಕೆ, ನೋವಿಗೆ ದುಃಖ ದುಮ್ಮಾನಕ್ಕೆ ಸರ್ಕಾರ ಸ್ಪಂದಿಸದೇ ಹೋದಲ್ಲಿ ಅವನ ಕೆಂಗಣ್ಣಿಗೆ ನಾವು ತುತ್ತಾಗುತ್ತೇವೆ.

ನನ್ನ ಅಭಿಮಾನಿಯಾದ ಹಿರಿಯ ಸದಸ್ಯರಾದ ಶ್ರೀಮಾನ್ ಬಿ. ಬಸವಲಿಂಗಪ್ಪನವರು 'ವೈ.ಕೆ. ರಾಮಯ್ಯನವರ ವೀರಾವೇಶ ಯಾರ ಮೇಲೆ? ಆವರನ್ನು ನೋಡಿದರೆ ನಮಗೂ ಕುಣಿದಾಡುವ ಹಾಗಾಗುತ್ತದೆ!' ಎಂದು ಹೇಳಿದರು. I Would like to remind what Benjamin Johnson said. He said :

"Sell not the virutes to purchase the wealth nor the liberty to puchase the power". I am not in a position to sell my liberty to purchase the power. ನನ್ನ ವೀರಾವೇಶ ಯಾರ ಬಗ್ಗೆ ಎಂದು ಈಗ ತಮಗೆ ಗೊತ್ತಿದೆ. ಯಾರೇ ಆಡಳಿತ ನಡೆಸುತ್ತಿರಬಹುದು. ನಮ್ಮ ಸರಕಾರ ಇರಬಹುದು. ಇಲ್ಲವೇ ನಿಮ್ಮ ಸರಕಾರ ಇರಬಹುದು. ಅದರ ಬಗ್ಗೆ ನನಗೆ ಚಿಂತೆ ಇಲ್ಲ. ವ್ಯಾಮೋಹ ಇಲ್ಲ. ಕೇಂದ್ರ ಸರಕಾರಕ್ಕೆ ಒಂದು ಮಾತನ್ನು ಮಾತ್ರ ಗಮನಕ್ಕೆ ತರಬೇಕು. ದಕ್ಷಿಣಭಾರತ ಎಂದರೆ ತಮಿಳುನಾಡು ಎಂಬ ಅಭಿಪ್ರಾಯ ಬಂದಿದೆ. ಅದು ನಮ್ಮ ದುರಾದೃಷ್ಟವೋ ಅಥವಾ ಅದೃಷ್ಟವೋ ಗೊತ್ತಿಲ್ಲ. ತಮಿಳುನಾಡು ಮತ್ತು ಕರ್ನಾಟಕಕ್ಕೆ ಸಂಬಂಧಪಟ್ಟಂತೆ ಯಾವುದೇ ವಿವಾದ ಬಂದಾಗ ಕರ್ನಾಟಕದ ದೃಶ್ಯ. ದೃಷ್ಟಿ ಕಾಣುವಂಥಾದ್ದು ಕರ್ನಾಟಕ ಒಂದು ಚಿಕ್ಕ ಭಾಗವಾಗಿಯೂ, ತಮಿಳುನಾಡು ಒಂದು ದೊಡ್ಡ ಭಾಗವಾಗಿಯೂ ಕಾಣುವಂತ ಒಂದು ಪರಿಸ್ಥಿತಿ ಮೊದಲಿನಿಂದಲೂ ಸೃಷ್ಟಿಯಾಗಿದೆ. ಅಂತಹ ಒಂದು ವೀಕ್‌ನೆಸ್ ಸೃಷ್ಟಿಯಾಗಿದೆ. ನಮ್ಮ ಕರ್ನಾಟಕ ಅಷ್ಟು ವೀಕ್ ಆಗುವುದು ನಮಗೆ ಬೇಕಾಗಿಲ್ಲ. ಅವರು ಸಬಲರಾಗುವುದು ಬೇಕಾಗಿಲ್ಲ. ತಮಿಳುನಾಡಿನ ಜೊತೆಗೆ ಕೋರ್ಟಿನಲ್ಲಿ ವಾದ ಮಾಡುವುದು ಇರಬಹುದು, ರಾಜಕೀಯವಾದ ಒತ್ತಡ ತರುವುದು ಇರಬಹುದು. ತಾಂತ್ರಿಕವಾಗಿರುವಂತಹ ಸಲಹೆಗಳನ್ನು ಕೇಂದ್ರ ಸರಕಾರದ ಮುಂದಿಡುವುದು ಇರಬಹುದು. ಇಲ್ಲವೇ ಯಾವುದೇ ವಿಚಾರದಲ್ಲಿಯಾಗಲೀ ಅವರಿಗಿಂತ ನಾವು ಯಾವುದೇ ವಿಧದಲ್ಲಿ ಹಿಂದೆ ಬೀಳದಂತಹ ರೀತಿಯಲ್ಲಿ, ನಮ್ಮ ಸರಕಾರ ತಮ್ಮ ಅಭಿಪ್ರಾಯವನ್ನು ಸಮರ್ಥಿಸಿಕೊಳ್ಳುವಂತಹ ಸಾಮರ್ಥ್ಯ ಪಡೆದುಕೊಳ್ಳಲಿ. ಅದಕ್ಕೆ ಸರಕಾರ ಸಿದ್ಧವಾಗಲಿ ಎಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಇನ್ನು ಒಂದು ಮಾತನ್ನು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ. ಈ ಚರ್ಚೆಯಿಂದ ಸಮಸ್ಯೆ ಬಗೆಹರಿಯಲಾರದು. ಅದನ್ನು ಕಾರ್ಯರೂಪಕ್ಕೆ ತರಬೇಕೆಂದು ನನ್ನ ಸ್ನೇಹಿತರು ಮಾತನಾಡುತ್ತಾ ಹೇಳಿದರು. ಈ ಕಾವೇರಿ ನೀರಿನ ಚರ್ಚೆ, ವಿವಾದ ಇವತ್ತು ನಿನ್ನೆಯದಲ್ಲ; ಮೈಸೂರಿನಲ್ಲಿ ನಡೆದಂತಹ ರೆಪ್ರಸಂಟೇಟಿವ್ ಅಸೆಂಬ್ಲಿಯಲ್ಲಿ ೧೬ನೇ ಅಕ್ಟೋಬರ್ ೧೮೯೧ ರಂದು ೬ನೇ ವಿಷಯದಲ್ಲಿ ಶ್ರೀ ಆರ್.ಎಸ್. ಇಲಿಯಟ್ ಎಂಬುವವರು ಪ್ರಸ್ತಾಪ ಮಾಡಿದ್ದಾರೆ. ಇದು ಒಂದನ್ನು ಓದಿದರೆ ಗೊತ್ತಾಗುತ್ತದೆ. ಈತ ಯಾವ ಪುಣ್ಯಾತ್ಮನ ಮಗನೋ ಗೊತ್ತಿಲ್ಲ. ಈ ರಾಜ್ಯದ ರೈತರಿಗೆ ಆಗುತ್ತಿರುವ ತೊಂದರೆ ನೀರಾವರಿಯ ಬಗ್ಗೆ, ಆತನ ರಕ್ತದಲ್ಲಿ ಏನು ಆವೇಶ ಬಂತೋ

ನನಗೆ ಗೊತ್ತಿಲ್ಲ. ಅವರ ಪ್ರತಿಪಾದನೆಯ ಕೆಲವು ಸಾಲುಗಳನ್ನು ಓದಿ ನನ್ನ ಮಾತನ್ನು ಮುಗಿಸುತ್ತೇನೆ.

Subject No. 6 British interference with proposed works in Mysore.

"Summary of Representation The Assmbly proposes that the Mysore should be allowed to have the full use of the water of Mysore for irrigation purposes and be freed from any interference on the part of it, is restored to its orginal channel. In Mr. Elliott's opinion the proper way of looking at the whole subject was this. It had once been proposed that Mysore should be annexed and had it been so, there could be no doubt that it would now form a part of the Madras Presidencey. Had it been so annexed would the Madras Government have limited the supply of water to the people in the mysore portrion of its dominion in order to benefit 'raiyats' in other parts of the Presidencey? Such a policy would be as impolitic as it would be wrong,, and for the smiple reason that the futher water was transmitted, the greater was the waste both from evaporation downward percolation. It was therefore obvious that such a polich would diminish the resources of the Government in contending against famine, by diminishing the available water supply of the country. He hoped that the Mysore Government would firmly uphold its right to be led away by quotations from books on international law relating to riparian rights of European Nations on the Rhine. He had been informed with reference to this subject that the late Sir Oliver St. John was reported to have said with extreme indignation that he "Supposed Mysore would soon not be allowed by the British Government to plant a tree in case it might precipitate moisture which would otherwise pass over in to the Madras Presidecny." Irrespective of questions of rights and obligations, the indisputable fact fremains that to prevent use of water where it falls is to allow much of it to run to waste, benefiting neither party."

ಆದುದರಿಂದ ೧೮೯೧ ರಿಂದ ಇವತ್ತಿನವರೆಗೆ ಈ ವಿವಾದದ ಬಗ್ಗೆ ಈ ಸದನದಲ್ಲಿ ಒಳಗೆ ಹೊರಗಡೆ ಚರ್ಚೆ ನಡೆದು ಬಂದಿದೆ. ಆದರೆ ಚರ್ಚೆ ಚರ್ಚೆಯಾಗಿಯೇ ಉಳಿದರೆ ಸಾಲದು, ಅದು ಕಾರ್ಯರೂಪಕ್ಕೆ ಬರಬೇಕು. ನನಗೆ ಗೊತ್ತಿದೆ. ಸ್ವಲ್ಪಮಟ್ಟಿಗೆ ನನಗೆ ಸುಮಾರಾಗಿ ಶಾಸ್ತ್ರ ಹೇಳುವುದಕ್ಕೂ ಬರುತ್ತದೆ. ಬಹುಶಃ ಸರ್ಕಾರದಿಂದ ಈ ರೀತಿಯ ಉತ್ತರವನ್ನು ನಾನು ನಿರೀಕ್ಷೆ ಮಾಡುತ್ತೇನೆ. ಆ ಉತ್ತರ ಏನು ಇರಬಹುದು ಎಂದರೆ ರಿಸೋರ್‌ಸಸ್, ಆರ್ಥಿಕ ಮುಗ್ಗಟ್ಟು ಇದೆ ಎಂದು ಹೇಳಬಹುದು. ರಸ್ತೆ ಕೆಲಸವನ್ನು ಇನ್ನು ಹತ್ತು ವರ್ಷದ ಮೇಲೆ ಮಾಡಿಕೊಂಡರೂ ನಮಗೇನೂ ತೊಂದರೆಯಾಗುವುದಿಲ್ಲ. ಡಿ.ಸಿ. ಆಫೀಸ್ ಕಟ್ಟಡವನ್ನು ಇನ್ನು ಹತ್ತು ವರ್ಷದ ಮೇಲೆ

ಮಾಡಿಕೊಂಡರೂ ಆಕಾಶ ಹಾರಿ ಹೋಗುವುದಿಲ್ಲ. ಶಾಲಾ ಕಟ್ಟಡ ಕಟ್ಟಬೇಕಾಗುತ್ತದೆ. ಆಸ್ಪತ್ರೆ ಕಟ್ಟಬೇಕಾಗುತ್ತದೆ. ಕಟ್ಟಿ ನನ್ನದೇನೂ ಅಭ್ಯಂತರವಿಲ್ಲ. ಆದುದರಿಂದ ನೀವು ಕೊಡುವಂಥ ಉತ್ತರವನ್ನು ನಿರೀಕ್ಷೆ ಮಾಡಿಕೊಂಡು ಈ ಸರ್ಕಾರಕ್ಕೆ ನಾನು ಪ್ರಾರ್ಥನೆಯನ್ನು ಮಾಡುತ್ತಿದ್ದೇನೆ. ನಿಮ್ಮ ಎಲ್ಲಾ ಅನುತ್ಪಾದನ ವೆಚ್ಚಗಳಿಗೆ ಫುಲ್‌ಸ್ಟಾಪ್ ಹಾಕಿ; ಕಾವೇರಿ ಮತ್ತು ಕೃಷ್ಣಾ ಮೇಲ್ದಂಡೆ ಯೋಜನೆಗೆ ಹೆಚ್ಚಿನ ಹಣವನ್ನು ಒದಗಿಸಿಕೊಡುವಂಥ ಪ್ರಾಮಾಣಿಕ ಪ್ರಯತ್ನ ನಿಮ್ಮದಾಗಲಿ. ಈ ವಿಷಯದ ಕಡೆಗೆ ಗಮನವನ್ನು ಕೊಟ್ಟು, ಇದನ್ನು ಗಂಭೀರವಾಗಿ ಪರಿಗಣಿಸಿ, ರಾಜ್ಯದ ರೈತರ ಹಿತವನ್ನು ಕಾಪಾಡಬೇಕೆಂದು, ಈ ಸದನದ ಮೂಲಕ ಸರ್ಕಾರದವರಲ್ಲಿ ಕೇಳಿಕೊಳ್ಳುತ್ತಾ, ಇಷ್ಟು ಕಾಲಾವಕಾಶವನ್ನು ಕೊಟ್ಟ ಅಧ್ಯಕ್ಷಿಣಿಯವರಿಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

* * *

## ಟಿಪ್ಪಣಿ

ಕುಣಿಗಲ್ ಕ್ಷೇತ್ರದಿಂದ ವಿಧಾನಸಭೆಗೆ ಸದಸ್ಯರಾಗಿ ಆಯ್ಕೆಯಾಗಿ ಬಂದ ಶ್ರೀ ವೈ.ಕೆ. ರಾಮಯ್ಯನವರಿಗೆ ೧೩.೧೦.೧೯೮೮ರಂದು ವಿಧಾನಸಭೆಯಲ್ಲಿ ಕಾವೇರಿ ನದಿ ನೀರಿನ ಹಂಚಿಕೆ ವಿವಾದದ ಬಗ್ಗೆ ತಮ್ಮ ವಿಚಾರಗಳನ್ನು ಮಂಡಿಸಲು ಕೋರಿಕೊಂಡಾಗ ಅಂದಿನ ವಿಧಾನಸಭೆಯ ಅಧ್ಯಕ್ಷಿಣಿ ಶ್ರೀಮತಿ ಶಕುಂತಲ ಚೌಗುಲೆ ಹಾಗೂ ಉಪಾಧ್ಯಕ್ಷರು ಅವಕಾಶ ಕಲ್ಪಿಸಿಕೊಟ್ಟರು. ಕೊನೆಗೆ ಈ ಚರ್ಚೆಯಲ್ಲಿ ಶ್ರೀ ಬಿ.ಎಂ. ಇದಿನಬ್ಬ, ಶ್ರೀ ಆರ್. ವೆಂಕಟರಾಮಯ್ಯ, ಶ್ರೀ ಹೆಚ್.ಡಿ. ದೇವೇಗೌಡ, ಕೆ.ಎಸ್. ನಾಗರತ್ನಮ್ಮ, ಶ್ರೀ ಬಿ. ಬಸವಲಿಂಗಪ್ಪ, ಶ್ರೀ ಡಿ.ಟಿ. ಬಸವನಗೌಡ, ಶ್ರೀಲಕ್ಕಪ್ಪ, ಶ್ರೀ ಬಿ.ಎಸ್. ಯಡಿಯೂರಪ್ಪ, ಶ್ರೀ ಕೆ.ಹೆಚ್. ಪಾಟೀಲ್ ಶ್ರೀ ಎಂ. ವೀರಪ್ಪಮೊಯಿಲಿ ಅವರು ಪಾಲ್ಗೊಂಡಿದ್ದರು.

ಭಾಷಣದ ನಡುವೆ ಉಪಾಧ್ಯಕ್ಷರು, "ಮಾನ್ಯ ರಾಮಯ್ಯನವರು ಈಗಾಗಲೇ ಅರ್ಧ ಗಂಟೆಯನ್ನು ಈ ವಿಷಯ ಮಂಡನೆಗೆ ತೆಗೆದುಕೊಂಡಿದ್ದಾರೆ" ಎಂದು ಆಕ್ಷೇಪ ಎತ್ತಿ ಮುಗಿಸುವಂತೆ ಸೂಚನೆ ಕೊಟ್ಟಾಗ ಶ್ರೀ ಹೆಚ್.ಡಿ. ದೇವೇಗೌಡರು ಪ್ರವೇಶಿಸಿ, "ಇದು ವಿಶೇಷವಾದ ಚರ್ಚೆ, ನಮ್ಮ ನಿಯಮ ೬೮ ಮೇರೆಗೆ ಅಲ್ಪಕಾಲಾವಧಿ ಚರ್ಚೆಯಾಗಿ ಪ್ರಾರಂಭ ಮಾಡಿದ ಸದಸ್ಯರು ೧೫ ನಿಮಿಷ ಮಾತ್ರ ಮಾತನಾಡಬೇಕೆಂದು ಇದ್ದರೂ ಕೂಡ, ಈ ಸದನದ ಒಪ್ಪಿಗೆಯನ್ನು ಪಡೆದು, ಕಾಲದ ಮಿತಿಯನ್ನು ವಿಸ್ತರಣೆ ಮಾಡಬಹುದು. ಇದು ಬಹಳ ಮಹತ್ವಪೂರ್ಣವಾದ ಚರ್ಚೆಯಾಗಿದೆ. ಸ್ವಲ್ಪಕಾಲ ಹೆಚ್ಚು ಕುಳಿತುಕೊಳ್ಳುವುದಕ್ಕೆ ಸರಕಾರ ಕೂಡ ಸಿದ್ಧ ಇದೆ. ಸದನ ಕೂಡ ಸಿದ್ಧ ಇದೆ. ಇದಕ್ಕೆ ಕಾಲಮಿತಿಯನ್ನು ಹೇರತಕ್ಕಂಥದ್ದು ಬೇಡ ಎಂದು ನಾನು ವಿನಂತಿ ಮಾಡಿಕೊಳ್ಳುತ್ತೇನೆ ಎಂದು ಹೇಳಿದ್ದುಂಟು.

ಕಾವೇರಿ ನೀರಿನ ಪ್ರಶ್ನೆ ಕರ್ನಾಟಕದ ಅಳಿವು ಉಳಿವಿನ ಪ್ರಶ್ನೆ. ಇದು ಬಹಳ ಮಹತ್ವವಾದ ವಿಷಯ ಆರು ಜನ ಅಲ್ಲ ಹದಿನಾರು ಜನ ಮಾತನಾಡಿದರೂ ಮುಗಿಯದಂಥ ಪ್ರಶ್ನೆ ಇದು. ಮಾನ್ಯ ವೀಪ್ಪಮೊಯಿಲಿಯವರು ಹೇಳಿದ ಹಾಗೆ ಈಗ ಇಲ್ಲಿ ಲಾ ಸೆಕ್ರೆಟರಿ ಇರಬೇಕು.ಲಾ ಮಿನಿಸ್ಟರ್ ಇರಬೇಕು. ಇದು ಏನು ಬಗೆಹರಿಯುವ ಪ್ರಶ್ನೆ ಅಲ್ಲ. ದಯವಿಟ್ಟು ಅವರನ್ನು ಕರೆಸುವುದಕ್ಕೆ ಹೇಳಿ. ಈ ವಿಚಾರದಲ್ಲಿ ರಾಮಯ್ಯನವರು ಮಾತನಾಡುವದಕ್ಕೆ ಶುರುಮಾಡಿ ಹದಿನೈದು ನಿಮಿಷ ಆಯಿತು. ಇಪ್ಪತ್ತು ನಿಮಿಷ ಆಯಿತು ಎಂದು ಚೌಕಾಶಿ ಮಾಡುವುದಕ್ಕೆ ಆಗುವುದಿಲ್ಲ. ಇದು ಜೀವಂತವಾದ ಪ್ರಶ್ನೆ" ಎಂದು ಶ್ರೀಮತಿ ಕೆ.ಎಸ್. ನಾಗರತ್ನಮ್ಮನವರೂ ರಾಮಯ್ಯನವರಿಗೆ ಬೆಂಬಲಿಸಿದ್ದರು.

## ಕಾವೇರಿ ನದಿ ನೀರಿನ ಬಗ್ಗೆ ಚರ್ಚೆ

೧೧ನೇ ಜುಲೈ ೧೯೯೨

ಸನ್ಮಾನ್ಯ ಉಪಾಧ್ಯಕ್ಷರೇ, ನಾನು ರುಜು ಮಾಡದಿದ್ದರೂ ಮಾತನಾಡುವುದಕ್ಕೆ ಅವಕಾಶ ಕೊಟ್ಟಿದ್ದೀರಿ. ಕಾವೇರಿ ನೀರಿನ ಬಗ್ಗೆ ಚರ್ಚೆ ನಡೆಯುವಾಗ ಸುಮ್ಮನೆ ಕುಳಿತು ಕೊಳ್ಳುವುದಕ್ಕೆ ನನ್ನ ಕೈಯಲ್ಲಿ ಆಗುವುದಿಲ್ಲ. ನಾನು ಮಾತನಾಡಲು ಅವಕಾಶ ಕೊಡಬೇಕೆಂದು ನನ್ನ ಮಿತ್ರರು ತಮ್ಮಲ್ಲಿ ಕೇಳಿದ್ದಕ್ಕೆ ಅವಕಾಶ ಕೊಟ್ಟಿದ್ದೀರಿ. ಅದಕ್ಕಾಗಿ ತಮಗೆ ವಂದನೆಗಳು.

ಈ ದಿವಸ ದಕ್ಷಿಣ ರಾಜ್ಯಗಳ ಮಧ್ಯದಲ್ಲಿ ಕಾವೇರಿ ನೀರಿನ ಹಂಚಿಕೆಯ ಬಗ್ಗೆ ನಮ್ಮ ಉಚ್ಚ ನ್ಯಾಯಾಲಯದಲ್ಲಿ ನಡೆಯುತ್ತಿರುವ ಪ್ರಸ್ತಾಪ, ಅದರಿಂದ ಬಂದಂತಹ ತೀರ್ಮಾನಗಳನ್ನು ಕುರಿತು ಚರ್ಚೆ ನಡೆಯುತ್ತಿದೆ. ಬಹುಶಃ ಕಾವೇರಿ ನೀರಿನ ವಿತರಣೆಯ ಬಗ್ಗೆ ಸದನದ ಒಳಗೆ ಹಾಗೂ ಹೊರಗೆ ಅನೇಕ ವೇದಿಕೆಗಳಲ್ಲಿ ಚರ್ಚೆಯಾಗುತ್ತಿದೆ. ಈ ಚರ್ಚೆ ಇವತ್ತಿನದಲ್ಲ, ನಿನ್ನೆ ಮೊನ್ನೆಯದಲ್ಲ. ಇದು ೧೬.೧೦.೧೯೮೧ ರಿಂದ ನಡೆಯುತ್ತಿದೆ. ನನ್ನಲ್ಲಿರುವ ಕಾಗದ ಪತ್ರಗಳ ಮಾಹಿತಿ ಪ್ರಕಾರ ಇಲ್ಲಿಗೆ ಸುಮಾರು ೧೧೧ ವರ್ಷಗಳಾಯಿತು. ೧೧೧ ವರ್ಷಗಳ ಹಿಂದೆ ಪೀಪಲ್ ರೆಪ್ರಸೆಂಟೀಟಿವ್ ಸಭೆಯಲ್ಲಿ ಸಾಕಷ್ಟು ಚರ್ಚೆಯಾಗಿದೆ. ಆವೊತ್ತಿನ ಚರ್ಚೆಯಲ್ಲಿ ಮೈಸೂರಿನ ಹಿತವನ್ನು ರಕ್ಷಣೆ ಮಾಡಬೇಕೆಂದು ವಾದ ಮಾಡಿದವರು ವೈ.ಕೆ. ರಾಮಯ್ಯನವರೂ ಅಲ್ಲ, ಬಂಗಾರಪ್ಪನವರೂ ಅಲ್ಲ ಅವನು ಯಾವ ತಾಯಿಯ ಮಗನೋ, ಎಲ್ಲಿ ಮಣ್ಣಾಗಿದ್ದಾನೋ, ಎಲ್ಲಿ ಬೂದಿಯಾಗಿದ್ದಾನೋ ನನಗೆ ಗೊತ್ತಿಲ್ಲ. ಇಲಿಯಟ್ ಎನ್ನುವ ಒಬ್ಬ ಇಂಗ್ಲೀಷ್ ಮನುಷ್ಯ. ಆನೆಯ ವಿಷಯದಲ್ಲಿ ಪ್ರಸ್ತಾಪ ಮಾಡಿ, ಆ ಪ್ರಸ್ತಾಪವಲ್ಲಿ ಒಂದು ಮಾತನ್ನು ಹೇಳುತ್ತಾನೆ. ಮೈಸೂರು ರಾಜ್ಯದ ಜನರ ದೇಣಿಗೆಯಿಂದ ಮೈಸೂರಿನ ಭೂಮಿಯ ಮೇಲೆ ಕಟ್ಟಿದಂತಹ ಅಣೆಕಟ್ಟೆಯ ಮೂಲಕ ನೀರನ್ನು ಬಿಟ್ಟು ಕೊಡುವಂತಹ ಯಾವುದೇ ಪ್ರಸ್ತಾಪ ಅನ್ಯಾಯ. ಅಷ್ಟೇ ಅಲ್ಲ, ಇದು ಅವಿವೇಕ ಕೂಡ ಎಂದು ಅಲ್ಲಿ ಅವರು ಪ್ರಸ್ತಾಪ ಮಾಡುತ್ತಾರೆ. ಅದನ್ನು ನಾನು ಇಲ್ಲಿ ಪೂರ್ತಿ ಓದುವುದಕ್ಕೆ ಹೋಗುವುದಿಲ್ಲ.

೧೯೯೨ನೇ ಇಸವಿಯವರೆಗೆ ಈ ರಾಜ್ಯದ ಎಲ್ಲ ಕ್ಷೇತ್ರಗಳಲ್ಲಿ, ಈ ಸದನದ ಹೊರಗಡೆ ಮತ್ತು ಒಳಗಡೆ ಈ ವಿಷಯ ಕುರಿತು ಚರ್ಚೆಯಾಗಿದೆ. ೧೯೮೮ರಲ್ಲಿ ಈ ವಿಷಯನ್ನು ಕುರಿತು ಸುಪ್ರೀಂ ಕೋರ್ಟಿನಲ್ಲಿ ಕೊನೆಯ ತೀರ್ಮಾನ ಆಗುವಂಥ ಹಂತದಲ್ಲಿ ೧೩.೧೦.೧೯೮೮ರಲ್ಲಿ ಈ ಸದನದಲ್ಲಿ ದೀರ್ಘವಾದಂಥ ಚರ್ಚೆಯಾಗಿದೆ. ಆ ಚರ್ಚೆ ಈ ಸದನದಲ್ಲಿ ಕಡತದಲ್ಲಿ ಸೇರಿ ಹೋಗಿದೆ. ಈ ಸಭೆಯ ಹಿರಿಯ ಸದಸ್ಯರಾದ ಶ್ರೀ ವೀರಪ್ಪಮೊಯ್ಲಿಯವರು, ಶ್ರೀಮತಿ ನಾಗರತ್ನಮ್ಮನವರು ಅವತ್ತು ಮಾತನಾಡಿದ್ದಾರೆ. ಆಗ ಈ ರಾಜ್ಯದ ಲಕ್ಷಾಂತರ ಜನರಿಗೆ ಸಂಬಂಧಪಟ್ಟ ಚರ್ಚೆ ಇದಾಗಿದ್ದು, ಈ ಚರ್ಚೆಯನ್ನು ಒಂದೆರಡುಗಂಟೆಗೆ ಸೀಮಿತವಾಗಿ ಮಾಡಬೇಡಿ. ಹತ್ತಾರು ದಿವಸ ಚರ್ಚೆಗೆ ಅವಕಾಶ ಮಾಡಿಕೊಡಿ ಅಂತ ಆ ದಿನ ಹೇಳಿದ್ದಾರೆ. ದುರಾದೃಷ್ಟವಶಾತ್ ಏನಾಗುತ್ತದೆ ಎಂದರೆ, ಆ ಕಡೆ ಕುಳಿತುಕೊಂಡು ಆಡಿದ ಮಾತು, ಆ ಕಡೆಗೆ ಹೋದಾಗ ಏಕೋ ಬದಲಾವಣೆಯಾಗುತ್ತದೆ. ಇದು ನನಗೂ ಅನ್ವಯಿಸುತ್ತದೆ. ಇದು ಮನುಷ್ಯನ ಸ್ವಭಾವ ಅಂತ

ಕಾಣುತ್ತದೆ. ಅವತ್ತು ಶ್ರೀಮತಿ ನಾಗರತ್ನಮ್ಮನವರು ಒಂದು ಮಾತನ್ನು ಹೇಳಿದ್ದಾರೆ. ಅವರು ವಿರೋಧ ಪಕ್ಷದ ನಾಯಕರು. ಟೈಮ್ ವೇಸ್ಟ್ ಆಗುತ್ತದೆ ಎಂದು ಹೇಳಿದರೆ, ನಾನು ಓದುವುದಿಲ್ಲ. ನನ್ನ ಪ್ರಶ್ನೆ ಇಷ್ಟೇನೆ ಇಲ್ಲಿ ಚರ್ಚೆಯಾಗುತ್ತಿದೆ ಮತ್ತು ಎಲ್ಲಕಡೆ ಚರ್ಚೆ ಆಗುತ್ತಿದೆ. ಆದರೆ ಸಮಸ್ಯೆಗೆ ಪರಿಹಾರ ದೊರೆತಿಲ್ಲ. ಅಷ್ಟೇ ನನ್ನಕಳಕಳಿ ಹೊರತು, ಮಾತನಾಡಿ ಚಟ ತೀರಿಸಿಕೊಳ್ಳಬೇಕು ಎನ್ನುವುದು ನನ್ನ ಉದ್ದೇಶ ಅಲ್ಲ. ಅದಕ್ಕಾಗಿ ನಾನು ತಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಸ್ವಲ್ಪ ಹೆಚ್ಚಿನ ಕಾಲಾವಕಾಶವನ್ನು ನನಗೆ ಕೊಡಬೇಕು ಅಂತ.

ಇದು ೧೮೯೧ರಲ್ಲಿ ತೀರ್ಮಾನ ಆಗಿದೆ. ೧೯೭೪ರಲ್ಲಿ ತೀರ್ಮಾನ ಆಗಿದೆ. ೧೯೭೭ರಲ್ಲಿ ತೀರ್ಮಾನ ಆಗಿದೆ. ಮತ್ತೆ ಈ ಸದನದಲ್ಲಿ ನಾನು ಇಲ್ಲದಿರುವ ಸಂದರ್ಭದಲ್ಲಿ ಅಂದರೆ ದಿನಾಂಕ ೨.೭.೧೯೯೧ರಲ್ಲಿ ಒಂದು ತೀರ್ಮಾನವಾಗಿದೆ. ೧೯೯೦ರಲ್ಲಿ ಆದಂಥ ತೀರ್ಮಾನ ಏನು ಅಂದರೆ, ಕಾವೇರಿ ನೀರಿನ ಹಂಚಿಕೆ ಬಗ್ಗೆ ಉಚ್ಚ ನ್ಯಾಯಾಲಯ ನೀಡಿರುವ ತೀರ್ಮಾನವನ್ನು ತಿರಸ್ಕರಿಸಬೇಕು, ಅದನ್ನು ಗಣನೆಗೆ ತೆಗೆದುಕೊಳ್ಳಬಾರದು. ರಾಜ್ಯ ಸರ್ಕಾರ ಅದನ್ನು ರಿಜೆಕ್ಟ್ ಮಾಡಬೇಕು ಅಂತ. ಉಚ್ಚನ್ಯಾಯಾಲಯದಿಂದ ರಚಿಸಲ್ಪಟ್ಟಂಥ ಟ್ರಿಬ್ಯುನಲ್ ಅದು. I know the whole story. It is the child of the Supreme Court. As sper the direction of the Supreme Court, the tribunal was constituted. ಆ ಒಂದು ಟ್ರಿಬ್ಯುನಲ್ ಕೊಟ್ಟಂಥ ತೀರ್ಪನ್ನು ತಿರಸ್ಕರಿಸಬೇಕು ಎಂದು ಈ ಸದನ ಒಂದು ಸರ್ವಾನುಮತದ ತೀರ್ಮಾನಕ್ಕೆ ಬಂದಿದೆ. ಅದು ಹಕ್ಕುಚ್ಯುತಿಯಾಗುತ್ತದೆಯೇ, ಪ್ರಿವಿಲೇಜ್ ಆಗುತ್ತದೆಯೇ, ಮಾನನಷ್ಟ ಇಲ್ಲವೇ ಅಧಿಕಾರ ನಷ್ಟವಾಗುತ್ತದೆಯೇ ಎಂದು ನನಗೆ ಗೊತ್ತಿಲ್ಲ.

ವಿರೋಧ ಪಕ್ಷದ ನಾಯಕರು ಕೊಟ್ಟಂಥ ಒಂದು ಪತ್ರಿಕಾ ಹೇಳಿಕೆಯನ್ನು ಸರ್ಕಾರ ಗಣನೆಗೆ ತೆಗೆದುಕೊಳ್ಳದೇ ಹೋಗಬಹುದು. ಒಬ್ಬ ಶಾಸಕರು ಬರೆದ ಪತ್ರವನ್ನು ಮಂತ್ರಿಗಳು ಗಣನೆಗೆ ತೆಗೆದುಕೊಳ್ಳದೇ ಹೋಗಬಹುದು. ಆದರೆ ಈ ರಾಜ್ಯದ ಇಡೀ ಸಮುದಾಯವನ್ನು, ಜನಾಂಗವನ್ನು ಪ್ರತಿನಿಧಿಸುವಂಥ ಈ ಸದನ ತೆಗೆದುಕೊಂಡಂಥ ತೀರ್ಮಾನಕ್ಕೂ ಕೂಡ ಮೂರು ಕಾಸಿನ ಬೆಲೆ ಸಿಗದಿದ್ದರೆ, ಅದನ್ನು ಪರಿಗಣನೆಗೆ ತೆಗೆದುಕೊಳ್ಳದಿದ್ದರೆ, ಅದನ್ನು ಗಂಭೀರವಾಗಿ ಪರಿಶೀಲಿಸದಿದ್ದರೆ, ಅದನ್ನು ಕಾರ್ಯರೂಪಕ್ಕೆ ತರದಿದ್ದರೆ, ಈ ರಾಜ್ಯದ ಜನತೆಗೆ ಇರುವ ಮತ್ತೊಂದು ದಾರಿಯನ್ನು ತಾವು ತೋರಬೇಕಾಗುತ್ತದೆ. ನಾನು ಈ ಹೇಳಿಕೆಯನ್ನು ಸುಮ್ಮನಾಗಿ ಕೊಟ್ಟಿಲ್ಲ, ಬೆಪ್ಪನಾಗಿ ಕೊಟ್ಟಿಲ್ಲ. ೧೮೯೧ನೇ ಇಸವಿಯಿಂದ ೧೯೯೨ನೇ ಇಸವಿಯವರೆಗೆ ನೂರು ವರ್ಷಕಾಲ ಈ ವಿಷಯ ಚರ್ಚೆಯಾಗಿದೆ. ೧೯೨೪ರಲ್ಲಿ ಹೀಗಾಯಿತು, ೭೪ರಲ್ಲಿ ಹೀಗಾಯಿತು, ಏನೇನು ತೀರ್ಮಾನವಾಯಿತು ಎಂದು ನನ್ನ ಹತ್ತಿರ ದಾಖಲೆಗಳಿವೆ. ಬೇಕಾದರೆ ಅದನ್ನು ಓದುತ್ತೇನೆ. ನನ್ನ ಹೇಳಿಕೆಯ ಉದ್ದೇಶ ಇಷ್ಟೇನೆ ಜನಪ್ರತಿನಿಧಿಗಳಾದ ನಾವು ತೆಗೆದುಕೊಳ್ಳುವಂಥ ತೀರ್ಮಾನಕ್ಕೆ ಈ ಸರ್ಕಾರ, ಯಾವ ಪಕ್ಷದ್ದೇ ಆಗಿರಲಿ, ಅದಕ್ಕೆ ಬೆಲೆ ಕೊಡದಿದ್ದರೆ, ಗಂಭೀರವಾಗಿ ಗಣನೆಗೆ ತೆಗೆದುಕೊಳ್ಳದಿದ್ದರೆ, ಕಾರ್ಯರೂಪಕ್ಕೆ ತರದೇ ಇದ್ದರೆ, ಕೋಟ್ಯಾಂತರ ಜನರ ಪ್ರತಿನಿಧಿಗಳ ಬಯಕೆಗೆ ಸ್ಪಂದಿಸದೇ ಇದ್ದರೆ ಏನು ಮಾಡಬೇಕು? ಪರಿಹಾರ ಯಾವುದು ಇದಕ್ಕೆ? ಶ್ರೀ ನಾಗರಾಜ್‌ರವರು With no either alternative wanted to burn that report What is the best alternative? !

request the Chief Minister where shall be go now? ಮತ್ತೇನು ಮಾಡಬೇಕು? ತಮ್ಮ ಮುಂದೆ ಪ್ರತಿಭಟನೆ ಮಾಡಿದ್ದು ಆಯಿತು. ಡಿ.ಸಿ. ಆಫೀಸಿನ ಮುಂದೆ ಪ್ರತಿಭಟನೆ ಮಾಡಿದ್ದಾಯಿತು. ಗವರ್ನರ್‌ರವರ ಹತ್ತಿರ ಹೋಗಿ ಅರ್ಜಿ ಕೊಟ್ಟಿದ್ದೂ ಆಯಿತು.

೧೯೮೮ರಲ್ಲಿ ನಮ್ಮೆಲ್ಲಾ ಹಿರಿಯ ಸದಸ್ಯರು ಕುಳಿತುಕೊಂಡು ಚರ್ಚೆ ಮಾಡಿದ ಸಂದರ್ಭದಲ್ಲಿ ನಾನು ಒಂದು ಮಾತನ್ನು ಹೇಳಿದ್ದೆ. ಏನೆಂದರೆ, ವಿರೋಧ ಪಕ್ಷದ ಸದಸ್ಯರು ಅಥವಾ ಆಡಳಿತ ಪಕ್ಷದ ಸದಸ್ಯರಾಗಿ ಮಾತನಾಡುತ್ತಿರುವ ನಾವು, ಈ ಜನರ ಹಿತರಕ್ಷಣೆ ಮಾಡದಿದ್ದಲ್ಲಿ, ಒಣಗಿದ ಪೈರಿಗೆ ನೀರನ್ನು ಕೊಡದೆ ಹಿಂದೆ ಬಿದ್ದಲ್ಲಿ, ಈ ರಾಜ್ಯದ ಜನ ಎಚ್ಚೆತ್ತುಕೊಳ್ಳಬೇಕಾಗುತ್ತದೆ. ಅವರು ರಾಜ್ಯ ಸರ್ಕಾರದ ಮೇಲೆ, ಜಿಲ್ಲಾ ಪರಿಷತ್ತುಗಳ ಮೇಲೆ, ಎಂ.ಎಲ್.ಎ.ಗಳ ಮೇಲೆ ತಿರುಗಿಬೀಳುವಂಥ ಪರಿಸ್ಥಿತಿಯನ್ನು ನೋಡಬೇಕಾಗುತ್ತದೆ. ಈ ರಾಜ್ಯದ ಹಿತವನ್ನು ಕಾಪಾಡುವುದರಲ್ಲಿ, ರೈತನ ಪೈರಿಗೆ ನೀರುಣಿಸುವ ಪವಿತ್ರ ಕೆಲಸ ಮಾಡುವುದರಲ್ಲಿ, ಆದ್ಯತೆಯನ್ನು ನೀಡುವುದರಲ್ಲಿ, ಮೀನಾಮೇಷ ಎಣಿಸಿದರೆ, ಕಾವೇರಿ ಕೊಳ್ಳದ ಜನ ರೊಚ್ಚಿಗೆದ್ದಾರು ಎಂದು ೧೯೮೮ನೇ ಅಕ್ಟೋಬರ್ ೧೩ರಂದು ಈ ಸದನದಲ್ಲಿ ನಾವು ಮಾಡಿದಂಥ ಚರ್ಚೆ. ನಾನು ಈ ಚರ್ಚೆಯಲ್ಲಿ ಬಹುಶಃ ಸುಮಾರು ೫೫ ನಿಮಿಷಗಳ ಕಾಲ ಮಾತನಾಡಿದ್ದೇನೆ. ನಾನು ಪಕ್ಷದ ದೃಷ್ಟಿಯಿಂದ ಮಾತನಾಡುತ್ತಿಲ್ಲ. ಆಡಳಿತ ಪಕ್ಷದಲ್ಲಿ ಕುಳಿತು, ಇಷ್ಟು ಕಠಿಣವಾದ ಶಬ್ದವನ್ನು ಬಳಸಿ, ನಾನು ಸರ್ಕಾರಕ್ಕೆ ಮನವಿ ಮಾಡಿಕೊಂಡಿದ್ದೇನೆ, ಎಚ್ಚರಮಾಡಿದ್ದೇನೆ ಎನ್ನುವ ಒಂದೇ ಉದ್ದೇಶದಿಂದಿ ಇದನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ.

೬.೭.೧೯೯೧ರಂದು ಒಂದು ತೀರ್ಮಾನವಾಗಿದೆ. ಈ ತೀರ್ಮಾನ ಏನು ಎಂದರೆ, ಈ ಟ್ರಿಬ್ಯುನಲ್ ಕೊಟ್ಟ ಆರ್ಡರ್‌ನಲ್ಲಿ ಮಾಡಬೇಕೆನ್ನ ಕ್ಕಂಥಾದ್ದು. ಸರಕಾರಕ್ಕೆ ನನ್ನ ಕೋರಿಕೆ ಇಷ್ಟೆ, ಒಬ್ಬ ಶಾಸಕನಾಗಿ ನಾನು ಬರೆದ ಕಾಗದಗಳನ್ನು ಅವರು ಕಸದ ಬುಟ್ಟಿಗೆ ಹಾಕಬಹುದು. ವಿರೋಧಪಕ್ಷದ ನಾಯಕರಾದ ಶ್ರೀಮಾನ್ ಚಂದ್ರೇಗೌಡರು ಕೊಟ್ಟ, ಪತ್ರಿಕಾ ಹೇಳಿಕೆಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಬಹುದು. ನಾನು ಮಾಡಿದ ಭಾಷಣವನ್ನು ಸಂಪೂರ್ಣವಾಗಿ ಗಮನಕ್ಕೆ ತೆಗೆದುಕೊಳ್ಳದೇ ಹೋಗಬಹುದು. ಆದರೆ ಕೋಟ್ಯಾಂತರ ಜನಪ್ರತಿನಿಧಿಗಳ ಈ ಸಭೆ ತೆಗೆದುಕೊಂಡಿದ್ದ ಯುನಾನಿಮಸ್ ಡಿಷಿಷನ್ ಅನ್ನು ಗೌರವಿಸದೆ ಇದ್ದ ಪಕ್ಷದಲ್ಲಿ ನಾವು ಏನು ಮಾಡಬೇಕು ಇಲ್ಲಿ ಮಾನ್ಯ ವಾಟಾಳ್‌ನಾಗರಾಜ್ ಮಾಡಿದ ತರಹ ಸುಡಬೇಕು. ಇಲ್ಲದೇ ಹೋದರೆ ಕಾನೂನನ್ನು ಕೈಗೆ ತೆಗೆದುಕೊಳ್ಳುವ ಕೊನೆಯ ಪ್ರಯತ್ನಮಾಡಬೇಕು.

If the Government fails to implement, fails to honour the decision of this House. I would like to know from the Government what is the alternate remedy available for the Hon'ble Members sitting here? It this is answered I will sit down. This House has taken an unanimous decison to reject the orders of the Tribunal but still you are considering it, you are honouring it, why? Please tell me what is the alternate remedy for us, that is why, I said it is a clear violation oif the directives given by this House. That is why it amounts to privilege. This is what I said.

ಸನ್ಮಾನ್ಯ ಅಧ್ಯಕ್ಷರೇ, ಬಹುಶಃ ನಮ್ಮ ಅಧ್ಯಕ್ಷರು ಈಗ ತಮ್ಮ ಸ್ಥಾನದಲ್ಲಿ ಇದ್ದಿದ್ದರೆ ನನಗೆ ತುಂಬಾ ಅನುಕೂಲವಾಗುತ್ತಿತ್ತು. ಕಾವೇರಿ ನೀರಿನ ವಿತರಣೆ ಬಗ್ಗೆ ಉಚ್ಚ ನ್ಯಾಯಾಲಯದ ಆದೇಶದ ಮೇಲೆ ಟ್ರಿಬ್ಯುನಲ್ ಏನು ತೀರ್ಮಾನ ಕೊಟ್ಟಿದೆ. ಆ ತೀರ್ಮಾನದಿಂದ ನನಗೆ ಹಾಗೂ ಶ್ರೀಮಾನ್‌ಮಂಜುನಾಥ್‌ರವರಿಗೆ, ಶ್ರೀಮಾನ್ ಹುಚ್ಚಮಾಸ್ತಿಗೌಡರಿಗೆ, ಸ್ವಲ್ಪಮಟ್ಟಿಗೆ ನಮ್ಮ ಅಧ್ಯಕ್ಷರಾದ ಶ್ರೀಮಾನ್ ಎಸ್.ಎಂ.ಕೃಷ್ಣರವರಿಗೆ ಹಾಗೂ ನಾಗಮಂಗಲದವರಿಗೆ ಹೆಚ್ಚಿನ ಅನುಕೂಲವಾಗಿದೆ. ಮಂಡ್ಯ ಜಿಲ್ಲೆಯಲ್ಲಿ ವಿಶ್ವೇಶ್ವರಯ್ಯ ಚಾನಲ್ ಕೆಳಗಡೆ ಬರತಕ್ಕ ನೀರನ್ನು ಉಪಯೋಗಿಸಿಕೊಂಡು ಆಗಲೇ ಗದ್ದೆ ಮಾಡುತ್ತಿದ್ದಾರೆ. ಹಾಸನ ಜಿಲ್ಲೆಯಲ್ಲಿ ಹೇಮಾವತಿ ನೀರಿನ ಬಳಕೆ ಎಷ್ಟಾಗುತ್ತದೋ ಅಷ್ಟನ್ನು ಮಾನ್ಯ ಶ್ರೀಕಂಠಯ್ಯನವರೂ, ದೇವೇಗೌಡರೂ ಉಪಯೋಗ ಮಾಡಿಕೊಳ್ಳುತ್ತಿದ್ದಾರೆ. ಇವತ್ತು ಹೇಮಾವತಿಯಲ್ಲಿ ತುಂಬಿರುವ ನೀರನ್ನು ಮೂರುವರೆ ಲಕ್ಷ ಎಕರೆ ಭೂಮಿಗೆ, ತುಮಕೂರು ಜಿಲ್ಲೆ ಹಾಗೂ ನಾಗಮಂಗಲ ತಾಲ್ಲೂಕಿಗೆ ಬಿಡಬೇಕಾಗಿದೆ. ಈ ನೀರನ್ನು ತಾವು ಮದ್ರಾಸಿಗೆಕೊಡುವುದಾದರೆ, ತುಮಕೂರು ಜಿಲ್ಲೆಯಲ್ಲಿ ನಡೆಸುವ ಕಾಮಗಾರಿಗಳನ್ನು ನಿಲ್ಲಿಸಿಬಿಡಿ, ಎಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. If this Government fials to protet the interest of karntaka people by preserving the cauvery water, which was preserved in Hemavathi, if you fails. then you stop all the channel works. There is no necessity, it is simply a waste.

ನನಗೆ ಪಕ್ಷದ ಗೊಂದಲ ಇಲ್ಲ ಅಥವಾ ನನಗೆ ಯಾರ ಹಿಡಿತವೂ ಇಲ್ಲ. ನಾನು ಅಕ್ಟೋಬರ್ ೧೯೮೮ರಲ್ಲಿ ಮಾಡಿದ ನನ್ನ ಭಾಷಣ ಮತ್ತು ನಾನು ಅವತ್ತು ಆಡಿರುವ ಮಾತುಗಳನ್ನು ನಾನು ಆಡಳಿತ ಪಕ್ಷದಲ್ಲಿ ಕುಳಿತುಕೊಂಡು ಮಾಡಿದ್ದು. ಬಹುಶಃ ಅಷ್ಟೊಂದು ಕಠಿಣವಾದ ಶಬ್ದಗಳನ್ನು ನಾನು ಇವತ್ತು ವಿರೋಧಪಕ್ಷದಲ್ಲಿ ಕುಳಿತುಕೊಂಡು ಉಪಯೋಗಿಸುತ್ತಾ ಇಲ್ಲ. ಆದ್ದರಿಂದ ನನ್ನ ಪ್ರಾರ್ಥನೆ ಇಷ್ಟೆ. ನೀರನ್ನು ಇವತ್ತು ತುಮಕೂರಿಗೆ ಕೊಡಬೇಕೋ ಅಥವಾ ತಮಿಳುನಾಡಿಗೆ ಕೊಡಬೇಕೋ ಎನ್ನುವುದಕ್ಕೆ ಆಜ್ಞೆ ಇದೆ. ಆ ಆಜ್ಞೆಯನ್ನು ಕಾರ್ಯರೂಪಕ್ಕೆ ತರುವುದಾದರೆ, ನೀವು ಕೇಂದ್ರ ಸರ್ಕಾರವನ್ನು ಮೆಚ್ಚಿಸಲಿಕ್ಕೋ ಅಥವಾ ಶ್ರೀಮತಿ ಜಯಲಲಿತರನ್ನು ಮೆಚ್ಚಿಸಲಿಕ್ಕೋ ಅಥವಾ ಇನ್ನಾರನ್ನಾದರೂ ಮೆಚ್ಚಿಸಲಿಕ್ಕೋ ಆ ನೀರನ್ನು For the best reasons known to the State Government. if they are going to implement the orders of the Tribunal - that is a death sentence to the farmer of Tumkur and Nagamangala Taluk, ಹರಿಯಬಿಡುವುದಾದರೆ ತುಮಕೂರು ಜಿಲ್ಲೆಗೆ ಬಿಡಿ.

ನಾನು ಮಾನ್ಯ ನೀರಾವರಿ ಮಂತ್ರಿಗಳನು ತಮ್ಮ ಮುಖಾಂತರ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಕೋಟ್ಯಾಂತರ ರೂಪಾಯಿಗಳು ಈಗಾಗಲೇ ಖರ್ಚಾಗಿವೆ. ನಾನು ಮತ್ತು ನಮ್ಮ ಮಂಜುನಾಥ್‌ರವರು ಶ್ರಮ ಬಿದ್ದು ಕಾಲುವೆ ಕೆಲಸ ಮಾಡಿಸಿದ್ದೇವೆ. ನೀರು ಬಿಡದಿದ್ದರೆ ಹೊಳಗೆ ಹುಣಸೆಹಣ್ಣು ಹಿಂಡಿದಂತಾಗುತ್ತದೆ. ದಯಮಾಡಿ ಅದನ್ನು ಮಾಡುವುದು ಬೇಡ. ಇವತ್ತು ಕಾವೇರಿ ನೀರನ್ನು ತಮಿಳುನಾಡಿಗೆ ಬಿಟ್ಟು, ಕೊಟ್ಟು, ಸರ್ಕಾರದವರು ಅಧಿಕಾರದಲ್ಲಿ ಉಳಿದುಕೊಳ್ಳುವಂಥ ಕಾರ್ಯದಲ್ಲಿ ಸಫಲರಾಗಬಹುದು. ಕೇಂದ್ರ ಸರ್ಕಾರವನ್ನು ಮೆಚ್ಚಿಸುವಂತಹ ಕಾರ್ಯದಲ್ಲಿ ಸಫಲರಾಗಬಹುದು.

ಆದರೆ ಕರ್ನಾಟಕ ರಾಜ್ಯದ ಚರಿತ್ರೆಯಲ್ಲಿ ಈ ಪಾಪ ಕಾರ್ಯವನ್ನು ಮಾಡಿದಂತಹ ಚಾಪ್ಟರ್‌ನಲ್ಲಿ ಅವರ ಹೆಸರು ಉಳಿದುಹೋಗುತ್ತದೆ.

ಆದ್ದರಿಂದ ಇವತ್ತು ಅಧಿಕಾರವನ್ನು ಉಳಿಸಿಕೊಳ್ಳುವ ಅಥವಾ ಕಳೆದುಕೊಳ್ಳುವ ಪ್ರಶ್ನೆ ಅಲ್ಲ. ನನ್ನ ಪ್ರಾರ್ಥನೆ ಏನೆಂದರೆ, ಜನತಾ ಪಕ್ಷದವರು ಇದನ್ನು ಮಾಡಲಿಲ್ಲ. ಕಮ್ಯುನಿಸ್ಟ್ ಪಕ್ಷದವರು ಮಾಡಲಿಲ್ಲ. ಕಾಂಗ್ರೆಸ್ ಪಕ್ಷದವರು ಮಾಡಲಿಲ್ಲ ಅಂತ ಅಲ್ಲ. ಈ ರಾಷ್ಟ್ರದ ದುರಾದೃಷ್ಟ ಅಂತ ಕಾಣುತ್ತದೆ. ಈ ರಾಷ್ಟ್ರದ ಬಡಜನರ ಸಮಸ್ಯೆಗಳ ಅರಿವು ಇಲ್ಲದೆ ಇರತಕ್ಕಂಥವರ ಕೈಲಿ ಯೋಜನೆಗಳನ್ನು ರೂಪಿಸುವಂತಹ ಅಧಿಕಾರವನ್ನು ಕೊಡುವ ಪಾಪವನ್ನು ನಾವು ಮಾಡಿದ್ದೇವೆ. ನೀರಿನ ಬಗ್ಗೆ, ಬೇಸಾಯದ ಬಗ್ಗೆ, ನೀರು ಇಲ್ಲದ ಭೂಮಿ ಒಣಗಿದಾಗ ಪಡುವಂತಹ ನೋವನ್ನು ಅರ್ಥ ಮಾಡಿಕೊಳ್ಳದೆ ಇರತಕ್ಕಂಥವರ ಕೈಲಿ ನಾವು ಅಧಿಕಾರವನ್ನು ಕೊಟ್ಟು ಕೆಟ್ಟಿದ್ದೇವೆ. ೧೯೮೦ರಲ್ಲಿ ಜನತಾಪಕ್ಷದ ಸರ್ಕಾರಕ್ಕೂ ನಾನು ಹೇಳಿದ್ದೇನೆ. ಈ ಸರ್ಕಾರಕ್ಕೂ ನಾನು ಹೇಳುತ್ತಿದ್ದೇನೆ. ಹಣವನ್ನು ಖರ್ಚು ಮಾಡಿ ಯೋಜನೆಗಳನ್ನು ಕಾರ್ಯ ರೂಪಕ್ಕೆ ತರುವುದರ ಮುಖಾಂತರ ಅತಿ ಜಾಗ್ರತೆಯಾಗಿ ಕಾವೇರಿ ಜಲಾನಯನ ಪ್ರದೇಶದಲ್ಲಿರುವ ಭೂಮಿಗೆ ನೀರನ್ನು ಕೊಡುವ ಕೆಲಸವನ್ನು ನಾವು ಮಾಡದೇ ಇದ್ದರೆ ಹೇಗೆ? ನೀರಾವರಿ ಮಂತ್ರಿಗಳು ಏತಕ್ಕೋ ಹೇಮಾವತಿ ಮತ್ತು ಕಾವೇರಿ ಕಡೆ ಗಮನ ಕೊಡುತ್ತಿಲ್ಲ....

ಮಾನ್ಯ ಅಧ್ಯಕ್ಷರೇ, ನಾನು ತಮ್ಮ ಮುಖಾಂತರ ಈಗಿನ ಹಾಲಿ ನೀರಾವರಿ ಸಚಿವರನ್ನು ಅಭಿನಂದಿಸುತ್ತೇನೆ. ಏಕೆಂದರೆ ಅನೇಕ ವರ್ಷಗಳಿಂದ ತುಮಕೂರು ಜಿಲ್ಲೆಗೆ ಅಗತ್ಯವಾದ ಅತಿ ಮುಖ್ಯವಾದಂತಹ ಡೀಪ್‌ಕಟ್ ಚಾನೆಲ್ ಕಾಲುವೆ ಕೆಲಸ ನೆನೆಗುದಿಗೆ ಬಿದ್ದಿತ್ತು. ಆ ಕೆಲಸವನ್ನು ನನ್ನ ಒತ್ತಾಯಕ್ಕೋ ಅಥವಾ ನಮ್ಮ ಮಂತ್ರಿಗಳ ಒತ್ತಾಯಕ್ಕೋ ಮೊದಲು ಮಾಡಿಸಿದ್ದಾರೆ. ಅವರು ಅಧಿಕಾರಿಗಳನ್ನು ಕರೆದುಕೊಂಡು ಹೋಗಿ ತೋರಿಸಿದ್ದಾರೆ. ಇದು ಕಾವೇರಿ ಕೃಷ್ಣಾ ಸಂಬಂಧ ತರಹ ಅಲ್ಲ. ತಾವು ನೀರಾವರಿ ಮಂತ್ರಿಗಳಾಗಿ ಬಂದ ಮೇಲೆ ತುಮಕೂರು ಜಿಲ್ಲೆಗೆ ಕಾಮಗಾರಿಗಳಿಗೆ ಚುರುಕು ಮುಟ್ಟಿದೆ. ಅದಕ್ಕೆ ನಾನು ತಮ್ಮನ್ನು ಅಭಿನಂದಿಸುತ್ತೇನೆ.

ಈ ವಿಷಯದಲ್ಲಿ ನನ್ನ ಪ್ರಾರ್ಥನೆ ಇಷ್ಟೇ. ಈ ಸದನ ಒಂದು ತೀರ್ಮಾನ ತೆಗೆದುಕೊಂಡಿದೆ. ಸನ್ಮಾನ್ಯ ವೀರಪ್ಪ ಮೊಯ್ಲಿಯವರು ಕಾನೂನು ಸಚಿವರೆಂದು ನಾನು ಭಾವಿಸಿಕೊಂಡಿದ್ದೇನೆ. ಕಾನೂನು ದೃಷ್ಟಿಯಿಂದ ದಾರಿ ತೋರಿಸಿದರೆ ಸಾಕು. ಸುಪ್ರೀಂ ಕೋರ್ಟ್‌ನಲ್ಲಿ ಪ್ಲೀಡಿಂಗ್ಸ್ ಟ್ರೈ ಮಾಡಿ ಅಲ್ಲೂ ನಾವು ಸೋತಿದ್ದೇವೆ. ರಾಜ್ಯಪಾಲರಿಗೆ ಮನವಿ ಕೊಟ್ಟಿದ್ದು ಪ್ರಯೋಜನವಾಗಲಿಲ್ಲ. ಡಿ.ಸಿ.ಆಫೀಸ್ ಮುಂದೆ ಹಾಗೂ ಸರ್ಕಾರದ ಮುಂದೆ ಬೊಬ್ಬೆ ಹೊಡೆದುಕೊಂಡರು. ಅಲ್ಲೂ ಪ್ರಯೋಜನವಾಗಲಿಲ್ಲ.

As a last resort we have taken shelter in this House. you have passed an unanimous resolutions to reject the interim order of the Tribunal. Now, I want to know whether the Government has rejeted it or not? If you say that you have rejected the Tribunal order, I will simply sit doiwn, because you ahve honoured the sentiments of these hon'ble members. If you have not respected, if you

have not rejected, I have no other alternative except to presume that this Government does not have regard for the decision of this House. I would like to ask the Hon'ble Law Minister here. If I violate the rules laid doiwn in this House or if Mr. Vatal Nagaraj violates orders of the Chief, does it not amount to violation of the rules and cointempt of the House? If the Government rejets the decision of this House what should be the remedy? I want a clear answer to this question. If you say that we have rejected the orders of the Tribunal on the basis of the decision of this House, I have no argument at all, I will keep quite. ನಮ್ಮದು ಮುಂದೆ ವಾದವೇ ಇಲ್ಲ. ಈ ವೇದಿಕೆಯ ಅವಶ್ಯಕತೆನೇ ಇಲ್ಲ. ಆದರೆ ಈ ತೀರ್ಮಾನದ ಬಗ್ಗೆ ಇನ್ನು ಏನೂ ತೀರ್ಮಾನ ತೆಗೆದುಕೊಳ್ಳದಿದ್ದರೆ, ಈ ಸದನದ ತೀರ್ಮಾನಕ್ಕೆ ನೀವೇನಾದರೂ ಸ್ಪಂದಿಸದಿದ್ದರೆ, ಈ ತೀರ್ಮಾನಕ್ಕೆ ಬೆಲೆ ಕೊಡದಿದ್ದರೆ ಮುಂದೆ ನನಗೆ ಬೇರೆ ದಾರಿಯೇ ಇಲ್ಲದೆ ಈ ಸದನಕ್ಕೆ ನೀವು ಅಗೌರವ ತಂದಿದ್ದೀರ ಎಂದು ಹೇಳಬೇಕಾಗುತ್ತದೆ. ಈ ಸದನದ ೨೨೪ ಜನ ಸದಸ್ಯರ ತೀರ್ಮಾನವೇ ಹೊರತು ಇದು ಒಂದು ಪಕ್ಷದಿಂದ ಮಾಡಿದ ತೀರ್ಮಾನ ಇಲ್ಲ. ಕಾಂಗ್ರೆಸ್‌ನವರು, ಜನತಾದವರು, ಕಮ್ಯುನಿಸ್ಟ್‌ನವರು ಮಾಡಿದ್ದಲ್ಲ. ಇದು ಇಡೀ ಸದನ ಮಾಡಿದಂಥ ತೀರ್ಮಾನ. ಈ ತೀರ್ಮಾನಕ್ಕೆ ನೀವು ಬೆಲೆ ಕೊಡಲಿಲ್ಲ ಅಂತ ಅಂದರೆ, ಇದು ಪ್ರಿವಿಲೇಜ್ ಆಗುತ್ತಿದ್ದೆಯೇ ಈ ರಾಜ್ಯದ ಕೋಟ್ಯಾಂತರ ಜನರ ಪ್ರತಿನಿಧಿಗಳಾದ ನಮಗೆ ಅವಮಾನ ಮಾಡಿದಂತಾಗುತ್ತದೆಯೇ ಎನ್ನುವ ಬಗ್ಗೆ ಸರ್ಕಾರದವರು ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ.

ಆದ್ದರಿಂದ, ಅಧ್ಯಕ್ಷರೆ, ಪೀಠಿಕೆ ಹಾಕುವಾಗಲೇ ನಾಲ್ಕೈದು ಜನ ಸ್ನೇಹಿತರು ನನ್ನ ಮೇಲೆ ದುಂಬಾಲು ಬಿದ್ದಿದ್ದರು. ಯಾವ ಕಾರಣಕ್ಕೋ ಗೊತ್ತಿಲ್ಲ. ನನ್ನವಾದ ಇಷ್ಟೇ, ಈ ಸದನವು ತೆಗೆದುಕೊಂಡು ತೀರ್ಮಾನಕ್ಕೆ ಸರ್ಕಾರ ಬೆಲೆ ಕೊಡಬೇಕೇ ಅಥವಾ ಬೇಡವೇ ಅದನ್ನು ಪುರಸ್ಕಾರ ಮಾಡಬೇಕೇ ಅಥವಾ ಬೇಡವೇ ಅದನ್ನು ಪರಿಗಣನೆಗೆ ತೆಗೆದುಕೊಳ್ಳಬೇಕೇ ಅಥವಾ ಬೇಡವೇ ಇದು ಒಂದನೆಯದು. ಇನ್ನು ಎರಡನೆಯದು ತೆಗೆದುಕೊಂಡಂಥ ತೀರ್ಮಾನವನ್ನು ಅವರು ರಿಜೆಕ್ಟ್ ಮಾಡಿದ್ದಾರೋ ಅಥವಾ ಇಲ್ಲವೋ. ರಿಜೆಕ್ಟ್ ಮಾಡಿದ್ದರೆ ಸಂತೋಷ. ಆ ತೀರ್ಮಾನವನ್ನು ರಿಜೆಕ್ಟ್ ಮಾಡದಿದ್ದರೆ That is the clear violation of men rules prevailed. ಇನ್ನಷ್ಟು ಹೇಳಿದ ಮೇಲೆ ನಾನು ಸರ್ಕಾರದವರಿಂದ ಭಾಷಣ ನಿರೀಕ್ಷೆ ಮಾಡುವುದಿಲ್ಲ. ಈ ಸದನವು ತೆಗೆದುಕೊಂಡಂಥ ಯುನಾನಿಮಸ್ ಡಿಸೀಷನ್ ಏನಿದೆ ಆ ಡಿಸೀಷನ್‌ಗೆ ಇವರು ಗೌರವ ಕೊಡುತ್ತಾರೋ ಕೊಡುವುದಿಲ್ಲವೋ ಗೌರವ ಕೊಡುವುದಾದರೆ ಆ ಟ್ರಿಬ್ಯುನಲ್ ಆರ್ಡರನ್ನು ರಿಜೆಕ್ಟ್ ಮಾಡುತ್ತಾರೋ ಇಲ್ಲವೋ, ಎನ್ನುವ ಬಗ್ಗೆ ಉತ್ತರವನ್ನು ಬಯಸಿ, ನಾನು ಮಾತನಾಡಲಿಕ್ಕೆ ಅವಕಾಶ ಮಾಡಿಕೊಟ್ಟ ನಿಮಗೆ ವಂದನೆಗಳನ್ನು ಅರ್ಪಿಸುತ್ತೇನೆ.

# ಬಜೆಟ್ ಮತ್ತು ನೀರಾವರಿ

೨೪ ಫೆಬ್ರವರಿ ೧೯೯೩

ಸ್ವಾಮಿ, ಅತ್ಯಂತ ಪ್ರಮುಖವಾದ ಪ್ರಸ್ತಾವನೆ ೨ನೇ ಪ್ಯಾರಾದಲ್ಲಿ ಇದೆ. ರಾಜ್ಯಪಾಲರ ಭಾಷಣದಲ್ಲಿ ನೀರಾವರಿಗೆ ೨ನೇ ಸ್ಥಾನ; ಗ್ರಾಮಾಭಿವೃದ್ಧಿಗೆ ೩ನೇ ಸ್ಥಾನ; ಅಧಿಕಾರವನ್ನು ಕೊಟ್ಟಂತವರಿಗೆ ವಾಪಸ್ಸು ಕೊಡುವಂತ ಸ್ಥಳೀಯ ಸಂಸ್ಥೆಗಳ ಬಗ್ಗೆ ಆದ್ಯತೆ ೩ನೇ ಸ್ಥಾನ. ಮಾನ್ಯ ಮುಖ್ಯಮಂತ್ರಿಗಳು ನೀರಾವರಿಯನ್ನು ಜ್ಞಾಪಿಸಿಕೊಂಡು ೨ನೇ ಸ್ಥಾನಕ್ಕಾದರೂ ತಂದಿದ್ದಾರೆ. ಅದಕ್ಕಾಗಿ ಅವರಿಗೆ ನಾನು ಅಭಿನಂದಿಸುತ್ತೇನೆ. ನಾನು ಇತ್ತೀಚಿನ ದಿನಗಳಲ್ಲಿ ನೋಡುತ್ತಿದ್ದೇನೆ; ಈ ನೀರಾವರಿಯ ಬಗ್ಗೆ, ನೀರಾವರಿಯ ಯೋಜನೆಗಳನ್ನು ಅನುಷ್ಠಾನಕ್ಕೆ ತರುವುದರ ಬಗ್ಗೆ, ಒಂದು ದಿವ್ಯ ನಿರ್ಲಕ್ಷ್ಯ ಕಂಡುಬರುತ್ತಿದೆ. ಕಾವೇರಿ ನೀರಿನ ಹಂಚಿಕೆಯ ಬಗ್ಗೆ ಕೇಂದ್ರ ಸರ್ಕಾರವು ನೇಮಿಸಿರುವ ನ್ಯಾಯಮಂಡಲಿಯ ಮಧ್ಯಂತರ ತೀರ್ಪಿನಿಂದ ಕರ್ನಾಟಕ ರಾಜ್ಯಕ್ಕೆ ಆಗಿರುವ ಅನ್ಯಾಯ ಹಾಗೂ ಆ ಅನ್ಯಾಯವನ್ನು ತಡೆಯುವಲ್ಲಿ ಸರ್ಕಾರದ ವಿಫಲತೆ ಮತ್ತು ಕೃಷ್ಣಾ ನದಿ ನೀರಿನ ಹಂಚಿಕೆಯ ಬಗ್ಗೆ ಬಚಾವತ್ ನ್ಯಾಯ ಮಂಡಲಿಯ ತೀರ್ಪಿನಿಂದ ನಿಗದಿಯಾದ ಕಾಲದಲ್ಲಿ ರಾಜ್ಯಕ್ಕೆ ಸಲ್ಲಬೇಕಾದ ನೀರಿನ ಪಾಲನ್ನು ಉಪಯೋಗಿಸಿಕೊಳ್ಳಲು ಕಾರ್ಯಕ್ರಮ ನಿರೂಪಿಸುವುದರಲ್ಲಿ ರಾಜ್ಯ ಸರ್ಕಾರದ ವಿಫಲತೆ ಇವೆರಡು ವಿಷಯಗಳನ್ನು ಚರ್ಚೆ ಮಾಡಬೇಕೆಂದು ನಿಲುವಳಿ ಸೂಚನೆಯಾಗಿ ೪.೧.೯೩ ಮತ್ತು ೪.೨.೯೩ರಲ್ಲಿ ಎರಡು ಸಾರಿ ಈ ಸದನಕ್ಕೆ ಪ್ರಸ್ತಾವನೆಯನ್ನು ಕಾನೂನಿನ ಚೌಕಟ್ಟಿನಲ್ಲಿ ಕಳುಹಿಸಿಕೊಟ್ಟಿದ್ದೇನೆ. ಆದರೂ ಕೂಡ ಇವತ್ತಿನವರೆಗೂ ಮಾತನಾಡಲಿಕ್ಕೆ ನನಗೆ ಅವಕಾಶ ಸಿಗಲಿಲ್ಲ. ಇದು ಎಷ್ಟೊಂದು ಗಂಭೀರವಾದಂತಹ ವಿಷಯ ಅಂದರೆ ಒಂದು ಕಡೆ ಅಂದಿನ ರಾಷ್ಟ್ರಾಧ್ಯಕ್ಷರಿಂದ ಕಾವೇರಿಕೊಳ್ಳದ ಜನರಿಗೆ ಆಗಬಾರದ ಅನ್ಯಾಯವಾಯಿತು. ಇವತ್ತು ಈ ರಾಷ್ಟ್ರದ ಪ್ರಧಾನಿಯವರಿಂದ ಕೃಷ್ಣಾ ಭಾಗದ ಜನರಿಗೆ ಅನ್ಯಾಯವಾಯಿತು. ಇದು ಮುಂದುವರಿಯುವಂತಹ ಕಾರ್ಯಕ್ರಮ ಅಲ್ಲ. ರಸ್ತೆಗೆ ಮಣ್ಣು ಹಾಕಿದರೆ ಮುಂದಿನ ವರ್ಷ ಕೊಚ್ಚಿಕೊಂಡು ಹೋಗುತ್ತದೆ. ಕಟ್ಟಡ ಕಟ್ಟಿದರೆ ೧೦ ವರ್ಷಕ್ಕೆ ಬಿದ್ದು ಹೋಗುತ್ತದೆ. ಈ ಎರಡು ನದಿಗಳ ನೀರನ್ನು ಉಪಯೋಗ ಮಾಡಿಕೊಳ್ಳುವುದರ ಬಗ್ಗೆ, ಹಂಚಿಕೆಯ ಬಗ್ಗೆ, ಈ ರಾಜ್ಯದಲ್ಲಿರುವಂತಹ ಲಕ್ಷಾಂತರ ಜನರ ಬದುಕಿನ ಬವಣೆಯ ವಿಷಯ ಇದಾಗಿದೆ. ಈ ನೀರನ್ನು ದಕ್ಕಿಸಿಕೊಳ್ಳುವುದರಲ್ಲಿ ಈ ನೀರಿನ ಉಪಯುಕ್ತತೆಯನ್ನು ಹೊಂದುವಂತಹ ಹಕ್ಕನ್ನು ಪ್ರತಿಪಾದನೆ ಮಾಡುವುದರಲ್ಲಿ ಈ ರಾಜ್ಯ ಏನಾದರೂ ಸೋತರೆ ಬಹುಶಃ ರಾಜ್ಯದ ರೈತರಿಗೆ ಮಾಡಿದಂತಹ ಅನ್ಯಾಯ ಇದಾಗುತ್ತದೆ. ಈ ಅನ್ಯಾಯ ಅಧ್ಯಾಯವನ್ನು ಚರಿತ್ರೆಕಾರರು ಬರೆಯುವಂಥ ಸಂದರ್ಭದಲ್ಲಿ ಯಾರು ಮುಖ್ಯಮಂತ್ರಿಯಾಗಿದ್ದರು ಎಂಬುದನ್ನೂ ಬರೆಯುತ್ತಾರೆ. ಯಾರು ನೀರಾವರಿ ಮಂತ್ರಿಯಾಗಿದ್ದರು ಎಂಬುದನ್ನೂ ಬರೆಯುತ್ತಾರೆ ಮತ್ತು ಯಾರು ಶಾಸಕರಾಗಿದ್ದರು ಎಂಬುದನ್ನೂ ಸಹ ಬರೆಯುತ್ತಾರೆ. ಈ ಪಾಪದ ಅಧ್ಯಾಯಕ್ಕೆ ನಮ್ಮನ್ನು ಗುರಿಪಡಿಸಬೇಡಿ. ಇದೊಂದು ಗಂಭೀರವಾದಂಥ ವಿಷಯ. ೧೯೯೩ನೇ ಇಸವಿಯಲ್ಲಿ ನಾವುಗಳೆಲ್ಲರೂ ಇದ್ದೇವೆ. ನನ್ನ ಸದಸ್ಯ ಸ್ನೇಹಿತರು ಹೇಳಿದಂತೆ ನಾನು ರಾಜಕೀಯ ಕಾರಣಕ್ಕಾಗಿ ಇಲ್ಲಿ ಭಾಷಣ ಮಾಡುತ್ತಿಲ್ಲ; ಅದರ ಅವಶ್ಯಕತೆಯೂ ನನಗಿಲ್ಲ. ಇನ್ನು ೭ ವರ್ಷಗಳಲ್ಲಿ ಬಚಾವತ್ ಆಯೋಗದ ತೀರ್ಪಿನ ಪ್ರಕಾರ

ಕರ್ನಾಟಕ ರಾಜ್ಯದ ರೈತರಿಗೆ ನೀರು ಕೊಡುವಂಥ ಕೆಲಸ ಮಾಡಬೇಕಾಗಿದೆ. ಮಾನ್ಯ ಮುಖ್ಯಮಂತ್ರಿಗಳು ಏಳು ವರ್ಷಗಳವರೆಗೆ ಇರುವುದಿಲ್ಲವೆಂದು ನನಗೆ ಗೊತ್ತಿದೆ; ಬರುವ ೮ ವರ್ಷಗಳಲ್ಲಿ ನಾನು ಶಾಸಕನಾಗದೆ ಇರಬಹುದೆಂಬುದೂ ನನಗೆ ಗೊತ್ತಿದೆ; ಅಲ್ಲದೆ, ಆಗ ನೀರಾವರಿ ಮಂತ್ರಿಗಳು ಇರುವುದಿಲ್ಲವೆಂಬುದು ಸಹ ನನಗೆ ಗೊತ್ತಿದೆ. ಆದರೆ, ಈ ಪಾಪದ ಅಧ್ಯಾಯ ಮಾತ್ರ ಇದ್ದೇ ಇರುತ್ತದೆ. ಇನ್ನು ೭ ವರ್ಷಗಳಲ್ಲಿ ಕೃಷ್ಣಾ ಜಲಾನಯನ ಪ್ರದೇಶದ ಎಲ್ಲಾ ನೀರಾವರಿ ಯೋಜನೆಗಳನ್ನು ಪೂರ್ತಿಗೊಳಿಸಿ, ನೀರು ಕೊಡುವಂಥ ಯೋಜನೆಯನ್ನು ಅನುಷ್ಠಾನಕ್ಕೆ ತರುವಂಥ ಕಾರ್ಯಕ್ಕೆ ಯಾವ ಒತ್ತನ್ನು ಈ ಸರ್ಕಾರ ಕೊಟ್ಟಿದೆ? ಯಾವ ವಿಶೇಷ ಯೋಜನೆಗಳನ್ನು ಈ ಸರ್ಕಾರ ಕೊಟ್ಟಿದೆ? ನಾನು ಮುಖ್ಯಮಂತ್ರಿಗಳಲ್ಲಿ ಪ್ರಶ್ನೆ ಕೇಳುವುದಕ್ಕೆ ಇಷ್ಟಪಡುತ್ತೇನೆ: ಇಂಥ ಒಂದು ಗಂಭೀರವಾದಂಥ ಪ್ರಶ್ನೆಯ ಕುರಿತು, ಅವರು ಮುಖ್ಯಮಂತ್ರಿಗಳಾಗಿ ಮೂರು ತಿಂಗಳಾದರೂ ಕೂಡ, ಒಂದೇ ಒಂದು ಸಭೆ ಕರೆದು ನಮ್ಮಗಳ ಜೊತೆ ಚರ್ಚೆ ಮಾಡಲಿಲ್ಲ. ಇನ್ನು ೭ ವರ್ಷಗಳಲ್ಲಿ ಕೃಷ್ಣಾ ಕಣಿವೆ ಯೋಜನೆಯನ್ನು ಪೂರ್ತಿಗೊಳಿಸಿ, ನೀರನ್ನು ಉಪಯೋಗಿಸಿಕೊಳ್ಳುವುದಕ್ಕೆ ಆಗದೇ ಇದ್ದರೆ, ಏನಾಗುತ್ತದೆಂಬುದಕ್ಕೆ ಸಾಕ್ಷಿಯಾಗಿವೆ. ಇತ್ತೀಚೆಗೆ ಕೊಪ್ಪಳದಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಸಾಹಿತಿಗಳು ನಮ್ಮ ರಾಜಕಾರಣಿಗಳ ಬಗ್ಗೆ ಆಡಿದ ಮಾತುಗಳೇ ಸಾಕ್ಷಿಯಾಗಿದೆ. ಅವರು ನಮ್ಮನ್ನು 'ಕರ್ನಾಟಕದ ಬೆನ್ನುಹುರಿ ಇಲ್ಲದಂಥ ರಾಜಕಾರಣಿಗಳು' ಎನ್ನುವ ಮಾತನಾಡಿದ್ದಾರೆ. ಈ ಮಾತನ್ನು ನಾನು ಆಡಿಲ್ಲ, ಸಾಹಿತಿಗಳು ಆಡಿದ್ದು. ಈ ಮಾತನ್ನು ನಾನು ಆಡಿದರೆ ಯಾರಾದರೂ ಗಲಾಟೆ ಮಾಡಬಹುದು. ಈ ರಾಜ್ಯದ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಮುಖ ವೇದಿಕೆಯಿಂದ ಬಂದಿರುವ ಮಾತು. ಏನೆಂದರೆ, 'ಕೃಷ್ಣಾ ನದಿ ನೀರನ್ನು ಕ್ರಿ.ಶ. ೨೦೦೦ ಇಸವಿಯೊಳಗೆ ಉಪಯೋಗಿಸಿಕೊಳ್ಳುವಂಥ ಕಾರ್ಯಕ್ರಮವನ್ನು ಹಾಕದಿರುವಂಥ ಬೆನ್ನುಹುರಿ ಇಲ್ಲದಂಥ ರಾಜಕಾರಣಿಗಳು' ಎಂಬುದು. ಸನ್ಮಾನ್ಯ ಅಧ್ಯಕ್ಷರೇ, ಕೃಷ್ಣಾ ನೀರಿನ ಪಾಲು ಇನ್ನೊಂದು ಕಣ್ಣೀರಿನ ಕಥೆ. 'ರಾಜ್ಯಕ್ಕೆ ಬಚಾವತ್ ತೀರ್ಪಿನ ಉರುಳು', 'ಕೃಷ್ಣೆಯ ಯಕ್ಷ ಪ್ರಶ್ನೆ' 'ಹಣ, ಸಿಬ್ಬಂದಿ ಕೊರತೆ, ಬೆನ್ನು ಹತ್ತಿದ ಬೇತಾಳ' ಹಾಗೂ 'ಕೃಷ್ಣಾ ನದಿಕೊಳ್ಳದ ಯೋಜನೆಗಳ ಅನುಷ್ಠಾನದಲ್ಲಿ' ಎಂಬ ಶೀರ್ಷಿಕೆಯಡಿ ಸಂಪಾದಕೀಯ, ವರದಿಗಳು ನಾಡಿನ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಹೀಗೆ ಕೃಷ್ಣಾ ಕಣಿವೆ ನೀರಿನ ಉಪಯುಕ್ತತೆಯನ್ನು ೨೦೦೦ ಇಸವಿಯೊಳಗಾಗಿ ಉಪಯೋಗಿಸಿಕೊಳ್ಳಬೇಕೆಂದು ನಡೆಯುತ್ತಿರುವ ಕಾಮಗಾರಿ ಕೆಲಸ ಏನೇನೂ ಸಾಲದಾಗಿದೆ. ಇದಕ್ಕೆ ಗಂಭೀರವಾದಂಥ ಯಾವುದೇ ಯೋಜನೆ ಹಾಕಿಕೊಂಡಿಲ್ಲ. ಇನ್ನು ಕಾವೇರಿ ಕಥೆ. ಕಾವೇರಿ ನೀರಿನ ಹಂಚಿಕೆ ವಿವಾದ ೧೮೯೧ನೇ ಇಸವಿಯಲ್ಲಿ ಅಂದು ಈ ರಾಜ್ಯದಲ್ಲಿದ್ದಂಥ ಪ್ರಜಾಪ್ರತಿನಿಧಿ ಸಭೆಯಲ್ಲಿ ಚರ್ಚೆಯಾಗಿ ಇವತ್ತಿನವರೆವಿಗೂ ಆ ಚರ್ಚೆ ಹಾಗೇ ನಡೆಯುತ್ತಿದೆ. ಅದನ್ನು ನಾನು ಓದಿದೆ. ಇದು ದುರಂತವೋ, ದುರಾದೃಷ್ಟವೋ, ೧೮೯೧ನೇ ಇಸವಿಯಲ್ಲಿ ಮೈಸೂರಿನಲ್ಲಿ ನಡೆದಂಥ ಪ್ರಜಾಪ್ರತಿನಿಧಿ ಸಭೆಯಲ್ಲಿ ಒಬ್ಬ ಬ್ರಿಟಿಷ್ ಸಂಜಾತ, ಅವನೇನು ನಮ್ಮ ದೇಶದವನಲ್ಲ, ಅವತ್ತು ಮೈಸೂರಿಗೆ ಬರಬೇಕಾಗಿದ್ದಂಥ, ಕಾವೇರಿ ನೀರಿನಿಂದ ರಾಜ್ಯಕ್ಕೆ ಬರಬೇಕಾಗಿದ್ದಂಥ ಪಾಲಿನ ಬಗ್ಗೆ ಅವನು ವಾದ ಮಾಡಿದ. ಆದರೆ ಇವತ್ತಿನ ಮಂತ್ರಿಮಂಡಲಕ್ಕೆ, ಮಂತ್ರಿಗಳಿಗೆ ಮತ್ತು ಮುಖ್ಯಮಂತ್ರಿಗಳಿಗೆ ಆತನಿಗೆ ಇದ್ದಂಥ ಆಸಕ್ತಿ ಇಲ್ಲ ಎನ್ನತಕ್ಕಂತಹ ಅಪಾದನೆಯನ್ನು ಮಾಡುತ್ತಿದ್ದೇನೆ. ಎಂಥ ಕೆಟ್ಟ ಪರಿಸ್ಥಿತಿ ಇದೆ. ತಮಿಳುನಾಡಿನವರ ಅರ್ಜಿಯನ್ನು ಆಧರಿಸಿ ಸುಪ್ರೀಂಕೋರ್ಟ್‌ನವರು ನೇಮಕ ಮಾಡಿದಂಥ ನ್ಯಾಯಮಂಡಳಿಯವರು ಕೊಟ್ಟಿರತಕ್ಕಂತಹ

ತೀರ್ಪು ಅತ್ಯಂತ ಗಂಭೀರವಾದುದು. ಆ ನ್ಯಾಯಮಂಡಳಿಯನ್ನು ಯಾರು, ಯಾವ ಪಕ್ಷದವರು ನೇಮಕ ಮಾಡಿದರು ಎನ್ನತಕ್ಕ ಪ್ರಶ್ನೆ ಬೇಡ. ಆ ನ್ಯಾಯ ಮಂಡಳಿಯವರು ಕೊಟ್ಟಿರತಕ್ಕ ತೀರ್ಪನ್ನು ತಮ್ಮ ಗಮನಕ್ಕೆ ತರುತ್ತೇನೆ. ಅವರು ಮೂರು ಪ್ರಮುಖವಾದಂಥ ವಿಷಯಗಳನ್ನು ಪ್ರಸ್ತಾಪ ಮಾಡಿದ್ದಾರೆ: ನೀರು ಇರಲಿ ಇಲ್ಲದಿರಲಿ ೨೦೫ ಟಿ.ಎ.ಸಿ.ಯಷ್ಟನ್ನು ಪ್ರತಿವರ್ಷ ಬಿಟ್ಟು ಕೊಡಬೇಕು; ಎರಡನೆಯದಾಗಿ, ಆ ಆಜ್ಞೆಯಲ್ಲಿ ಅಕಸ್ಮಾತ್ ಯಾವುದಾದರೊಂದು ವಾರದಲ್ಲಿ ನಿಮಗೆ ಕಡಿಮೆ ನೀರು ಬಂದರೆ ಅದನ್ನು ಮುಂದೆ make good ಮಾಡಬೇಕು. ಎಲ್ಲದಕ್ಕಿಂತ ಅತ್ಯಂತ ಸಂಕಟದ ಭಾಗವೆಂದರೆ ಮೂರನೆಯದು; ಅದೇನೆಂದರೆ Karnataka should limit its area of irrigation to the extent of 11.20 lakhs areas.

೧೧ ಲಕ್ಷದ ೨೦ ಸಾವಿರ ಎಕರೆ ನಿಮ್ಮ ಅಚ್ಚುಕಟ್ಟನ್ನು ಸೀಮಿತಗೊಳಿಸಬೇಕು ಎನ್ನುತ್ತದೆ. ಈ ಆಜ್ಞೆಯ ಪರಂಪರೆ, ಈ ಅನ್ಯಾಯದ ನಡವಳಿಕೆಯು ಇಲ್ಲಿಗೇ ನಿಲ್ಲಲಿಲ್ಲ. ಸರ್ಕಾರದವರು ಏನು ಕ್ಲಾರಿಫಿಕೇಷನ್‌ಗಾಗಿ ಅರ್ಜಿಯನ್ನು ನ್ಯಾಯಮಂಡಳಿಗೆ ಹಾಕಿದರು. ಆದರೆ ಸ್ವಾಮಿ, ನಮಗೆ ಏನು ತೀರ್ಮಾನ ಸಿಕ್ಕಿತು? ಕೆಟ್ಟ ನ್ಯಾಯ ವಿತರಣೆಯಾಯಿತು. ೧೧ ಲಕ್ಷ ೨೦ ಸಾವಿರ ಎಕರೆ ಭೂಮಿಗೆ ನೀರನ್ನು ಉಣಿಸುವುದಕ್ಕೆ ಸೀಮಿತವಾಗಿ, ೧೯೭೪ರ ಹಿಂದೆ ಇದ್ದಂಥ ಪರಿಸ್ಥಿತಿಗೂ ನೀವು ಅನುಗುಣವಾಗಿರಬೇಕೆಂದು ನ್ಯಾಯ ಮಂಡಳಿಯು ತೀರ್ಮಾನ ಕೊಟ್ಟಿತು. ಈ ಸದನದ ಮಾನ್ಯ ಸದಸ್ಯರುಗಳೆಲ್ಲಾ ಸೇರಿದಂತೆ, ನಾನಂತು ಅಂದು ಸದಸ್ಯನಾಗಿರಲಿಲ್ಲ.

ಸ್ವಾಮಿ, ರಾಜ್ಯದ ಒಬ್ಬ ಪ್ರಜೆ ಮುಖ್ಯಮಂತ್ರಿಗಳಿಗೆ ಕಾಗದ ಬರೆದರೆ ಅಥವಾ ಒಬ್ಬ ಶಾಸಕ ಬಂದರೆ He can afford to ignore. ಇದು ಮೊಯಿಲಿ ಮುಖ್ಯಮಂತ್ರಿಯಾಗಿರಬಹುದು, ಬಂಗಾರಪ್ಪನವರು ಮುಖ್ಯಮಂತ್ರಿಯಾಗಿರಬಹುದು, ಮಾನ್ಯ ಮಲ್ಲಿಕಾರ್ಜುನ ಖರ್ಗೆಯವರು ಮುಖ್ಯಮಂತ್ರಿಗಳಾಗಿಬಹುದೋ ಎನ್ನತಕ್ಕಂತಹ ಪ್ರಶ್ನೆಯಲ್ಲ. ರಾಜಕೀಯದಲ್ಲಿ ನೈತಿಕತೆಯ ವಿಷಯವನ್ನು ನನ್ನ ಹಿರಿಯ ಸ್ನೇಹಿತರು ಹೇಳುತ್ತಾರೆ. ಈ ಸದನ ಮಾಡಿದಂತಹ ಒಂದು unanimous Resolutionನ್ನು ಕಾರ್ಯರೂಪಕ್ಕೆ ತರಲಿಲ್ಲ. ಆದರೆ there is no remedy for us. ಏನು ಮಾಡಬೇಕು? ಈ ದೇಶದ, ರಾಜ್ಯದ ಜನರು ಏನು ಮಾಡಬೇಕು? ಇದು ನಾನು ಕಾಗದವನ್ನು ಬರೆದಿಲ್ಲ, ಜನರು ಬರೆದ ಕಾಗದವಲ್ಲ. ಅದನ್ನು ಕಸದ ಬುಟ್ಟಿಗೆ ಹಾಕಲು. ಇಡೀ ಸದನವೇ ಸರ್ವಾನುಮತದಿಂದ ಸರ್ವಪಕ್ಷದವರೂ, ಎಲ್ಲರೂ ಸೇರಿ ಕೊಟ್ಟಂಥ ತೀರ್ಮಾನ. Bioased ನ್ಯಾಯ ಮಂಡಳಿಯ ತೀರ್ಮಾನವನ್ನು boycot ಮಾಡಬೇಕೆಂದು ಆದ ತೀರ್ಮಾನ. ಈ ಸದನ ಸರ್ವಾನುಮತದಿಂದ ಮಾಡಿರತಕ್ಕ ತೀರ್ಮಾನವೂ ಕೂಡ ಕಸದ ಬುಟ್ಟಿಗೆ ಹೋಗುವುದಾದರೆ ಇದಕ್ಕೆ ಇಷ್ಟೊಂದು ನಿರ್ಲಕ್ಷವೇ? ಈ ರೀತಿಯಾದರೆ ನಾವು, ಈ ರಾಜ್ಯದ ಜನರು ನೀರು ಬೇಕಾದರೆ ಎಲ್ಲಿಗೆ ಹೋಗಬೇಕು? ಆದುದರಿಂದ ನೇರವಾಗಿ ಆಪಾದನೆ ಮಾಡುತ್ತಿದ್ದೇನೆ. ಕೃಷ್ಣಾ ಮತ್ತು ಕಾವೇರಿ ನೀರನ್ನು ಉಳಿಸಿಕೊಳ್ಳುವುದರಲ್ಲಿ, ಅದನ್ನು ಬಳಸಿಕೊಳ್ಳುವುದರಲ್ಲಿ ಸರ್ಕಾರ ಸಂಪೂರ್ಣವಾಗಿ ದಿವ್ಯ ನಿರ್ಲಕ್ಷ್ಯತೆಯ ನೀತಿಯನ್ನು ತಾಳಿದೆ. ಈ ಮಾತನ್ನು ನಾವು ವಿರೋಧ ಪಕ್ಷದಲ್ಲಿ ಕುಳಿತುಕೊಂಡು ಹೇಳುತ್ತಿಲ್ಲ. ೧೯೮೯ನೇ ಇಸವಿಯಲ್ಲೇ ಈ ಮಾತನ್ನು ಹೇಳಿದ್ದೇನೆ.

ಇಂಥ ಪರಿಸ್ಥಿತಿ ಬಂದರೆ ಕಾವೇರಿ ಕೊಳ್ಳದ ಜನರು ರೊಚ್ಚಿಗೇಳಬೇಕಾಗುತ್ತದೆಂದು ಹೇಳಿದ್ದೆ. ಅದರಂತೆ ಎದ್ದಿದ್ದೂ ಆಯಿತು. ಕಾವೇರಿ ನದಿಯ ನೀರಿನ ಹಂಚಿಕೆಯ ಬಗ್ಗೆ ನ್ಯಾಯಮಂಡಲಿ

ನೀಡಿದ ತೀರ್ಮಾನದ ಪ್ರತಿಫಲವಾಗಿ ಕಾವೇರಿ ಕೊಳ್ಳದ ಜನರು ರೊಚ್ಚಿಗೆದ್ದಿದ್ದನ್ನು ನೀವು ಈಗಾಗಲೇ ನೋಡಿದ್ದೀರಿ. ರೈತನ ಬವಣೆಗೆ, ರೈತನ ಸಂಯಮಕ್ಕೆ ಒಂದು ಮಿತಿ ಇದೆ. ಆ ಮಿತಿಯನ್ನು ರೈತ ಮೀರಿಬಿಟ್ಟನೆಂಬುದನ್ನು ಅವರು ಈಗಾಗಲೇ ತೋರಿಸಿಕೊಟ್ಟಿದ್ದಾರೆ. ಕೋಟ್ಯಾಂತರ ರೂಪಾಯಿಗಳ ಆಸ್ತಿಪಾಸ್ತಿ ನಷ್ಟವಾಯಿತು. ಅನೇಕ ಜನರ ಪ್ರಾಣ ಹಾನಿಯಾಯಿತು. ಇದರ ಅರ್ಥವೇನೆಂದರೆ, ಕಾವೇರಿ ಮತ್ತು ಕೃಷ್ಣಾ ಕೊಳ್ಳದ ನೀರನ್ನು ಬಳಸಿಕೊಳ್ಳುವುದರಲ್ಲಿ ಸರ್ಕಾರ ವಿಫಲವಾದರೆ, ಇದೇ ರೀತಿ ದಿವ್ಯ ನಿರ್ಲಕ್ಷ್ಯವನ್ನು ತಾಳಿದರೆ, ಸಂಯಮವನ್ನು ಮೀರಿ ಈ ರಾಜ್ಯದ ರೈತರು ರೊಚ್ಚಿಗೆದ್ದಾರು ಎನ್ನತಕ್ಕಂತಹ ಎಚ್ಚರಿಕೆಯನ್ನು ನಾನು ಮತ್ತೆ ಆಡಬಯಸುತ್ತೇನೆ.

ಕಾವೇರಿ ಕೊಳ್ಳದ ಅತಿ ಪ್ರಮುಖ ಯೋಜನೆಯಾದ ಹೇಮಾವತಿಯ ಬಗ್ಗೆ ಈ ಸದನದಲ್ಲಿ ಉತ್ತರವನ್ನು ಕೊಡತಕ್ಕ ಸಂದರ್ಭ ಬಂತು. ಮಾನ್ಯ ಮುಖ್ಯಮಂತ್ರಿಗಳು ಆಶ್ವಾಸನೆಯನ್ನು ಕೊಟ್ಟರು. "ಈ ಸದನದಲ್ಲಿ ಇದು ಚರ್ಚೆಯಾಗುವುದು ಬೇಡ. ನಾನು ನಿಮ್ಮನ್ನೆಲ್ಲಾ ಕರೆದು ಮಾತನಾಡುತ್ತೇನೆ" ಎಂದು. ಇವತ್ತಿನವರೆಗೂ ಅದು ಕಾರ್ಯರೂಪಕ್ಕೆ ಬರಲಿಲ್ಲ. ಕಾವೇರಿ ಕೊಳ್ಳದವರೇ ಆದಂಥ ಮಾನ್ಯ ಎಸ್.ಎಂ. ಕೃಷ್ಣರವರನ್ನು ನೀರಾವರಿ ಮಂತ್ರಿಗಳನ್ನಾಗಿ ಮಾಡಿದರು. ಈ ಸದನದಲ್ಲಿ ಚರ್ಚೆ ಮಾಡಲಿಕ್ಕೆ ನಾನು ಕಳುಹಿಸಿದ ಸೂಚನೆಗಳಿಗೆ ಬೆಲೆ ಇಲ್ಲ. ಅವು ಈ ಸದನದ ಮುಂದೆ ಬರಲಿಲ್ಲ. ೧೦೫೦ ಜನ ಅರಣ್ಯ ಪ್ರಚೋದಕರ ವಿಷಯವನ್ನು ಚರ್ಚೆ ಮಾಡುವುದಕ್ಕೆ ಈ ಸದನದಲ್ಲಿ ೨ ಗಂಟೆ ಆಯಿತು. ಆದರೆ ಲಕ್ಷಾಂತರ ಜನರ ಬದುಕಿನ ಆಧಾರವಾದಂಥ ಈ ರಾಜ್ಯದ ರೈತರ ಬಗ್ಗೆ ಸಮಸ್ಯೆಯ ಬಗ್ಗೆ ಚರ್ಚಿಸಲು ಅವಕಾಶವಿಲ್ಲ. ನಾನು ಕಳುಹಿಸಿದ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಕೊಡಲಿಲ್ಲ. ಆ ಉತ್ತರಕ್ಕೆ ಬದಲಾಗಿ ಮಾನ್ಯ ಮುಖ್ಯಮಂತ್ರಿಗಳು ನಿಮ್ಮನ್ನೆಲ್ಲಾ ಕರೆದು ಮಾತನಾಡುತ್ತೇನೆಂದು ಕೊಟ್ಟಂಥ ಭರವಸೆ ಕೂಡ ಈಡೇರಲಿಲ್ಲ. ಈ ಎರಡೂ ಸಮಸ್ಯೆಗಳು ಇಷ್ಟು ಗಂಭೀರವಾಗಿದ್ದರೂ ಈ ಮುಖ್ಯಮಂತ್ರಿಗಳು ಈ ವಿಷಯದಲ್ಲಿ ಆಸಕ್ತಿಯನ್ನು ತಳೆದಿಲ್ಲ. ಆಸಕ್ತಿಯನ್ನು ತೋರುತ್ತಿಲ್ಲ. ಈ ವಿಷಯದಲ್ಲಿ ಅವರು ಪ್ರಾಮಾಣಿಕ ಪ್ರಯತ್ನವನ್ನು ಮಾಡುತ್ತಿಲ್ಲ. ನಾನು ಈ ಮಾತನ್ನು ಹೇಳಿದರೆ ಬಹುಶಃ ಅವರ ಮನಸ್ಸಿಗೆ ನೋವಾಗಬಹುದು.

ಈಗ ಬಜೆಟ್ ಅಲಾಟ್‌ಮೆಂಟಿಗೆ ಬರುತ್ತೇನೆ. ನಾನು ವಿಧಿ ಇಲ್ಲದೆ ಹೇಳುತ್ತೇನೆ. ಅವರ ಮನಸ್ಸಿಗೆ ನೋವಾದರೂ ಚಿಂತೆ ಇಲ್ಲ. ಈ ರಾಜ್ಯದ ರೈತರ ಹಿತದೃಷ್ಟಿಯಿಂದ ಈ ಆಪಾದನೆಯನ್ನು ನಾನು ಮಾಡಬೇಕಾಗುತ್ತದೆ. ಈ ಎರಡು ಕೊಳ್ಳದ ರೈತರಿಗೆ ನೀರನ್ನು ಒದಗಿಸುವುದಕ್ಕಾಗಿ ಹಣವನ್ನು ತೆಗೆದಿಟ್ಟಿದ್ದಾರೆ. ಹೀಗೆ ನಮ್ಮ ಸರ್ಕಾರದಲ್ಲೂ ಹಣವನ್ನು ಕೊಟ್ಟಿದ್ದೇವೆ. ಅವರು ಹಿರಿಯರಾದ್ದರಿಂದ ಈ ವಿಚಾರವನ್ನು ಅವರೇ ಪ್ರಸ್ತಾಪ ಮಾಡಿದ್ದರಿಂದ ನಾನು ಈ ಮಾತನ್ನು ಹೇಳಬೇಕಾಗಿದೆ. ಆಯವ್ಯಯದಲ್ಲಿ ನಾವು ಎಷ್ಟು ಹಣವನ್ನೊದಗಿಸಿದ್ದೇವೆ ಎಂಬುದು ಮುಖ್ಯವಲ್ಲ. ಆ ಆಯವ್ಯಯದಲ್ಲಿ ನಾವು ನಿಗದಿಪಡಿಸಿದ್ದ ಹಣದಲ್ಲಿ ಎಷ್ಟು ಖರ್ಚಾಯಿತು? ನಿಗದಿಪಡಿಸಿದ ಗುರಿ ಎಷ್ಟು, ಸಾಧಿಸಿದ ಗುರಿ ಎಷ್ಟೆಂಬುದನ್ನು ನೀವು ಹೇಳಿದರೆ ಅನಂತರ ನಾನು ಹೇಳುತ್ತೇನೆ. ಬಜೆಟ್‌ನಲ್ಲಿ ೮೦೦ ಕೋಟಿ ರೂ.ಗಳನ್ನು ಕೊಡುವುದು ಮುಖ್ಯವಲ್ಲ. ಹೇಮಾವತಿ ಯೋಜನೆಗಳಿಗಾಗಿ ಕೊಡಬೇಕಾದ ೧೩ ಕೋಟಿ ರೂ.ಗಳ ಬಿಲ್ಲು ಪೆಂಡಿಗ್ ಇದೆ. ದಯವಿಟ್ಟು ಈ ೧೩ ಕೋಟಿ ರೂ.ಗಳ ಬಿಲ್ಲುಗಳನ್ನು ಪಾವತಿ ಮಾಡುವುದರ ಮೂಲಕ ಸಮರದೋಪಾದಿಯಲ್ಲಿ ನಡೆಯಬೇಕಾಗಿರುವ ಕೆಲಸದ ಕಡೆಗೆ ದಯವಿಟ್ಟು ಗಮನ ಕೊಡಿ. ೧೩ ಕೋಟಿ ರೂ.ಗಳ ಬಿಲ್ಲುಗಳಿಗೆ ಎಲ್.ಓ.ಸಿ.ಯನ್ನು

ನೀವು ಕೊಟ್ಟಿಲ್ಲ. ನಾವು ೮೦೦ ಕೋಟಿ ರೂ.ಗಳನ್ನು ಕೊಟ್ಟಿದ್ದೇವೆಂದು ನೀವು ಈ ರಾಜ್ಯದ ಜನತೆಯ ಕಣ್ಣಿಗೆ ಮಣ್ಣೆರಚುತ್ತಿದ್ದೀರಿ. ನಾವೂ ಕೂಡ ೫೦೦-೬೦೦ ಕೋಟಿ ರೂ. ಕೊಟ್ಟಿದ್ದೇವೆಂದು ಹೇಳಿದೆವು. ನೀವು ಎಷ್ಟು ಕೋಟಿ ರೂ.ಗಳನ್ನು ಕೊಟ್ಟಿದ್ದೀರೆಂಬುದು ನಮಗೆ ಮುಖ್ಯವಲ್ಲ. ಆದರೆ ಆಗುತ್ತಿರುವ ಕೆಲಸಗಳಿಗೆ ಅವಶ್ಯಕವಾಗಿ ಬೇಕಾದ ಹಣವನ್ನು ನೀವು ಒದಗಿಸಿಕೊಡುತ್ತಿಲ್ಲ.

ಇದರ ಜೊತೆಗೆ ಕಳೆದ ವರ್ಷ ಈ ಯೋಜನೆ ನಿಗದಿ ಮಾಡಿರುವಂಥ ಹಣ ಎಷ್ಟು? ನಿಗದಿ ಮಾಡಿರುತಕ್ಕಂಥ ನೀರಾವರಿ ಸೃಷ್ಟಿ ಮಾಡಬೇಕಾಗಿರತಕ್ಕಂಥ ಗುರಿ ಎಷ್ಟು? What was the potentiality that was earmarked and what is the achievement? ಎನ್ನುವಂಥ ವಿಷಯದಲ್ಲಿ ನಮಗೆ ಮಾಹಿತಿಯನ್ನು ಒದಗಿಸಿಕೊಡಬೇಕೆಂದು ಅವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಸನ್ಮಾನ್ಯ ಅಧ್ಯಕ್ಷರೇ, ಈ ಎರಡೂ ಯೋಜನೆಗಳನ್ನು ಅನುಷ್ಠಾನಕ್ಕೆ ತರುವ ಕಾರ್ಯ ಇದೊಂದು ವಿಶೇಷ ಸಂದರ್ಭ. ಸಾಮಾನ್ಯ ಸಂದರ್ಭವಾಗಿದ್ದಿದ್ದರೆ ಅದಕ್ಕೆ ನಾವು ಯಾರೂ ತಲೆಕೆಡಿಸಿಕೊಳ್ಳಬೇಕಾಗಿರಲಿಲ್ಲ. ಎರಡು ಸಾವಿರದ ಮಿತಿ ಇಲ್ಲದಿದ್ದಿದ್ದರೆ ಇಲ್ಲಿ ೧೧ ಲಕ್ಷದ ಮಿತಿಯನ್ನು ಹೇರದೆ ಇದ್ದಿದ್ದರೆ ಬಹುಶಃ ನಮಗೆ ಹಣಬಂದಾಗ ಸ್ವಲ್ಪ ಸ್ವಲ್ಪ ಮಾಡಿಕೊಳ್ಳಬಹುದಾಗಿತ್ತು. ಆದರೆ ಇವರೆಡು ಮಿತಿಗಳಿರುವುದರಿಂದ, ಇದು ಒಂದು ವಿಶೇಷ ಸಂದರ್ಭವಾಗಿರುವುದರಿಂದ, ದಯವಿಟ್ಟು ಇದಕ್ಕೆ ಹೆಚ್ಚಿನ ಆದ್ಯತೆಯನ್ನು ಕೊಟ್ಟು ಈ ಕೆಲಸವನ್ನು ಮಾಡಬೇಕೆಂದು ನಾನು ಅವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಮಾನ್ಯ ಅಧ್ಯಕ್ಷರೇ, ಸರ್ಕಾರ ಸಿದ್ಧಮಾಡಿರುವಂಥ, ರಾಜ್ಯಪಾಲರು ಮಾಡಿರತಕ್ಕಂಥ ಈ ಭಾಷಣದಲ್ಲಿ ನೀರಾವರಿ ಯೋಜನೆಗಳಿಗೆ ಹೆಚ್ಚಿನ ಹಣವನ್ನು ಒದಗಿಸಿಕೊಟ್ಟಿದ್ದೇವೆ ಎನ್ನುವ ಮಾತನ್ನು ಅವರು ಹೇಳಿದ್ದಾರೆ. ಆದರೆ ಅವರು ಮುಂದಿನ ಮಾರ್ಚ್‌ವರೆಗೆ ಮುಖ್ಯಮಂತ್ರಿಗಳಾಗಿದ್ದಿದ್ದರೆ ಅವಾಗ ಒದಗಿಸಿಕೊಟ್ಟಂಥ ಹಣದಲ್ಲಿ ಎಷ್ಟು ಹಣ ಖರ್ಚಾಯಿತು ಎಂದು ಹೇಳುವಂಥ ಪ್ರಿವಿಲೈಜ್ ಉಳಿದುಕೊಳ್ಳಲಿ. ಅವರ ಅಷ್ಟರವರೆಗೆ ಇರಲಿ ಎಂದು ಒಂದು ಪ್ರಾರ್ಥನೆ ಮಾಡಿಕೊಂಡು ಮತ್ತೊಂದು ವಿಷಯವನ್ನು ಪ್ರಸ್ತಾಪ ಮಾಡಲಿಕ್ಕೆ ಇಷ್ಟಪಡುತ್ತೇನೆ. ನೀರಾವರಿ ಯೋಜನೆಗಳನ್ನು ಅನುಷ್ಠಾನಕ್ಕೆ ತರುವುದರ ಮುಖಾಂತರ ಅದರ ಫಲಾನುಭವಿಗಳಿಗೆ ನಾವು ಅನುಕೂಲ ಮಾಡಿಕೊಡುತ್ತೇವೆ. ಈ ರಾಜ್ಯದಲ್ಲಿ ನೀರಾವರಿ ಸವಲತ್ತುಗಳ ಫಲಾನುಭವಿಗಳಿಲ್ಲದೆ, ಸತ್ತರೆ ಹೂಳಲಿಕ್ಕೂ ಕೂಡ ಆರು ಅಡಿ ಜಮೀನು ಇಲ್ಲದಂತಹ, ಶೇ. ೧೦೦ಕ್ಕೆ ೩೦ ಜನ ಕೃಷಿ ಕಾರ್ಮಿಕರು ಇದ್ದಾರೆ. ಹೇಮಾವತಿ, ಕೃಷ್ಣಾ ಮೇಲುದಂಡೆ ನೀರಾವರಿ ಯೋಜನೆಗಳನ್ನು ಅನುಷ್ಠಾನಕ್ಕೆ ತರುವುದರಿಂದ ಭೂಮಿ ಉಳ್ಳಂತಹ ರೈತರಿಗೆ ಅನುಕೂಲವಾಗುತ್ತದೆ. ಆದರೆ ಈ ಸವಲತ್ತು ಹೊರತಾಗಿ ಇರತಕ್ಕಂಥ ಫಲಾನುಭವಿಗಳು ಶೇ. ೧೦೦ಕ್ಕೆ ೩೦ ಜನ ಇದ್ದಾರೆ. ಆ ಕೃಷಿಕಾರ್ಮಿಕರಿಗೆ ಮತ್ತು ನಿರ್ಗತಿಕರಿಗೆ ಮಾನ್ಯ ರಾಜ್ಯಾಪಾಲರ ಭಾಷಣದಲ್ಲಿ ಒಂದೇ ಒಂದು ಪದವನ್ನೂ ಕೂಡ ಪ್ರಸ್ತಾಪ ಮಾಡಿಲ್ಲ. ಅದ್ದರಿಂದ ಇದು ಒಂದು ಕೊರತೆ ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

# ಬಜೆಟ್ ಮತ್ತು ಕೃಷ್ಣಾ, ಕಾವೇರಿ

೩ನೇ ಮಾರ್ಚ್ ೧೯೯೩

ಅಧ್ಯಕ್ಷರೇ, ಇನ್ನು ಕೆಲವು ಯೋಜನೆಗಳನ್ನು ಈ ಆಯವ್ಯಯದಲ್ಲಿ ತಂದಿದ್ದಾರೆ. ಅವುಗಳಲ್ಲಿ ಮುಖ್ಯವಾಗಿ ನೀರಾವರಿ. ಇದರ ಬಗ್ಗೆ ತಮ್ಮ ಮೂಲಕ ನಾನು ನೋವಿನಿಂದ ಈ ರಾಜ್ಯದ ಜನತೆಗೆ ಹೇಳಬೇಕಾಗುತ್ತದೆ. ಅದೇನು ಅಂದರೆ ಈ ರಾಜ್ಯದ ಎರಡು ಪ್ರಮುಖ ನೀರಾವರಿ ಯೋಜನೆಗಳ ಕೆಲಸದ ಬಗ್ಗೆ ಈ ಸದನದಲ್ಲಿ ಚರ್ಚೆ ಮಾಡಲು ನನಗೆ ಅವಕಾಶ ದೊರೆಯುತ್ತಿಲ್ಲ. ದಿನ ಪತ್ರಿಕೆ ಮೂಲಕ ರಾಜ್ಯದ ಜನತೆಗೆ ತಿಳಿಸಿಕೊಡುತ್ತಿದ್ದೇನೆ. ಈ ರಾಜ್ಯದ ಸಾಹಿತಿಗಳು ಬರೆಯುತ್ತಾರೆ : "ಕೃಷ್ಣಾ ನದಿಯ ನೀರಿನ ಚರ್ಚೆ ಬಗ್ಗೆ ಚರ್ಚೆ ಮಾಡಲು ಆಸಕ್ತಿ ಇಲ್ಲದಂತಹ ಬೆನ್ನುಹುರಿ ಇಲ್ಲದ ರಾಜಕಾರಣಿಗಳು ಈ ರಾಜ್ಯದ ರಾಜಕಾರಣಿಗಳು" ಅಂಥ. ನಾನು ರಾಜಕಾರಣಿಯಾಗಿ ಈ ಮಾತು ಹೇಳುತ್ತಿಲ್ಲ. ಸಾಹಿತಿಗಳು ಕೊಪ್ಪಳದಲ್ಲಿ ರೆಸಲ್ಯೂಶನ್ ಪಾಸ್ ಮಾಡಿದ್ದಾರೆ.

ಸ್ವಾಮಿ, ಬೀದಿಯಲ್ಲಿ ಜನ ಮಾತಾಡಿಕೊಳ್ಳುತ್ತಿದ್ದಾರೆ. 'ಎರಡು ಸಾವಿರ ವರ್ಷದಲ್ಲಿ ಬ್ರಹ್ಮ ಕೂಡ ತನ್ನ ಕೈಯಲ್ಲಿ ಕೃಷ್ಣಾ ನದಿ ನೀರಿನ ಉಪಯೋಗವನ್ನು ಮಾಡಿಕೊಳ್ಳುವಂಥ ಕಾರ್ಯವನ್ನು ಸಾಧಿಸಲಿಕ್ಕೆ ಸಾಧ್ಯತೆ ಇಲ್ಲ' ಎಂದು. ಇಡೀ ರಾಜ್ಯದಲ್ಲಿ ಅದರಲ್ಲೂ ಕಾವೇರಿಯ ಕೊಳ್ಳದಲ್ಲಿ ಗುಸುಗುಸು ಮಾತು ನಡೆಯುತ್ತಿದೆ. ಕಾವೇರಿ ಕೊಳ್ಳದ ಜನತೆಗೆ ಅಂದಿನ ರಾಷ್ಟ್ರಾಧ್ಯಕ್ಷರಿಂದ ಅನ್ಯಾಯವಾಯಿತು, ಮದ್ರಾಸ್ ಸರ್ಕಾರದಿಂದ ಅನ್ಯಾಯವಾಯಿತು. ಇವತ್ತು ಕೃಷ್ಣಾ ಕೊಳ್ಳ ಜನತೆಗೆ ಈ ರಾಷ್ಟ್ರದ ಪ್ರಧಾನಿಯಾದಂಥ ನರಸಿಂಹರಾಯರಿಂದ ಅನ್ಯಾಯವಾಗುತ್ತಿದೆ ಎನ್ನುವ ಮಾತನ್ನು ಜನರು ಮಾತಾಡಿಕೊಳ್ಳುತ್ತಿದ್ದಾರೆ. ಇಂಥ ಒಂದು ಗಂಭೀರವಾದ ಸಮಸ್ಯೆಯ ವಿಷಯದಲ್ಲಿ, ಯೋಜನೆಗಳ ಅನುಷ್ಠಾನದ ವಿಷಯದಲ್ಲಿ ಈ ಸರ್ಕಾರ ಏನು ಮಾಡುತ್ತಿದೆ? ಎನ್ನುವುದನ್ನು ಕೇಳಲಿಕ್ಕೆ ನಾನು ಮಾಡಿದ ಎಲ್ಲಾ ಪ್ರಯತ್ನಗಳು ವಿಫಲವಾಗಿವೆ. ಈ ಸದನದ ಮುಂದೆ ಚರ್ಚೆ ಮಾಡಲಿಕ್ಕೆ ಎಲ್ಲಾ ನಿಯಮಗಳ ಪ್ರಕಾರ ನಾನು ತೆಗೆದುಕೊಂಡು ಬಂದಿದ್ದೇನೆ. ಆದರೆ ಅದಕ್ಕೆ ಅವಕಾಶ ಸಿಕ್ಕಿಲ್ಲ.

ಸನ್ಮಾನ್ಯ ಮುಖ್ಯಮಂತ್ರಿಗಳಿಗೆ ಪ್ರಶ್ನೆ ಕೇಳಿದ್ದೇನೆ. ಹೇಮಾವತಿ ಬಗ್ಗೆ ಬಂದಂಥ ಪ್ರಶ್ನೆಗೆ ಉತ್ತರವನ್ನು ಕೊಡದೆ ತಡೆಹಿಡಿಯಲಾಯಿತು. ನಾನು ಈ ವಿಷಯದಲ್ಲಿ I must compliment toSri Bangarappa. ನಾನು ಅವರ ಬಗ್ಗೆ ಏನೂ ಸರುಕೊಳ್ಳುವಷ್ಟು ವ್ಯಾಮೋಹ ಏನೂ ಅಲ್ಲ. ಆದರೆ ನಾನು ಈ ಸದನಕ್ಕೆ ಸದಸ್ಯರಾಗಿ ಬರಕೂಡದು ಎನ್ನುವಂಥದಕ್ಕೆ ಬಹಳ ಶ್ರಮಪಟ್ಟವರು ಮಾನ್ಯ ಬಂಗಾರಪ್ಪನವರು. ನನ್ನನ್ನು ಸೋಲಿಸುವುದಕ್ಕೆ ಅವರು ಬಹಳ ಪ್ರಯತ್ನಪಟ್ಟರು. ಆದರೂ ಕೂಡ ಈ ಒಂದು ವಿಷಯದಲ್ಲಿ ಅವರನ್ನು ನಾನು ಮೆಚ್ಚಿಕೊಳ್ಳುತ್ತೇನೆ. He has used everything at his command to see that I should not enter this House. But still I compliment him particularly in view of the decisions he has taken in respect of Irrigation Projects.

ಸನ್ಮಾನ್ಯ ಅಧ್ಯಕ್ಷಣಿಯವರೇ, ತಮ್ಮದೇ ಆದಂತಹ ಪಕ್ಷದ ಸರ್ಕಾರದ ವಿರುದ್ಧವಾಗಿ ಸುಗ್ರೀವಾಜ್ಞೆಯನ್ನು ಹೊರಡಿಸುವಂಥ ಗಂಡಸುತನವನ್ನು ಅವರು ಪ್ರದರ್ಶನ ಮಾಡಿದರು. ಅದು

ಸಿಂಧುವ್ವೋ, ಅಸಿಂಧುವ್ವೋ, ಕಾನ್ಸ್ಟಿಟ್ಯೂಷನ್ನೋ, ಅನ್‌ಕಾನ್ಸ್ಟಿಟ್ಯೂಷನ್ನೋ, ಲೀಗಲ್ಲೋ, ಇಲ್ಲೀಗಲ್ಲೋ ಅದು ಬೇರೆ ಮಾತು. ಆದರೆ ಈ ರಾಜ್ಯದ ಜನರ ಹಿತವನ್ನು ರಕ್ಷಣೆ ಮಾಡುವಂತ ಸಂದರ್ಭದಲ್ಲಿ ತಮ್ಮದೇ ಆದಂಥ ಪಕ್ಷಕ್ಕೆ ಕೂಡ ಇರಿಸು ಮುರಿಸು ಬರುವಂಥ ತೀರ್ಮಾನವನ್ನು ತೆಗೆದುಕೊಳ್ಳುವಂಥ ಗಂಡುನಿರ್ಧಾರವನ್ನು ಅವರು ಮಾಡಿದರು. ಅಷ್ಟೇ ಅಲ್ಲ, ಈ ಸದನದ ಮುಂದೆ ತೀರ್ಮಾನವನ್ನು ತೆಗೆದುಕೊಂಡರು. ಸರ್ವಪಕ್ಷದ ಸಮ್ಮತವಾದಂಥ ತೀರ್ಮಾನ. ಏನೆಂದರೆ 'ನೀರಿನ ಹಂಚಿಕೆಯ ಬಗ್ಗೆ ದಾರಿದೀಪವೇ ಇಲ್ಲದಂಥ ಸಂದರ್ಭದಲ್ಲಿ, ನೀರಿನ ಹಂಚಿಕೆಯ ಬಗ್ಗೆ ತೀರ್ಮಾನ ಕೊಡಲಿಕ್ಕೆ ದೆಹಲಿಯಲ್ಲಿ ಕುಳಿತಿರತಕ್ಕಂಥ ನ್ಯಾಯ ಮಂಡಲಿಯನ್ನು ಬಹಿಷ್ಕರಿಸಬೇಕು' ಎನ್ನುವಂಥ ಸರ್ವಸಮ್ಮತವಾದ ತೀರ್ಮಾನವನ್ನು ಅವರು ಇಲ್ಲಿ ತೆಗೆದುಕೊಂಡರು. ಅಷ್ಟೇ ಅಲ್ಲ, ಆಗ ನಾನು ಶಾಸಕನಲ್ಲ. He constituted a High Power Committee, including me. ಶಾಸಕನಲ್ಲದೇ ಇರುವಂಥ ನನ್ನನ್ನು ಕೂಡ, ಇವನಿಗೆ ಏನೋ ಅಷ್ಟೋ ಇಷ್ಟೋ ಆ ವಿಷಯದಲ್ಲಿ ಆಸಕ್ತಿ ಇದೆ ಎಂದು ತಿಳಿದುಕೊಂಡು, ಈ ಕಾವೇರಿ ನೀರಿನ ಹಂಚಿಕೆಯ ಬಗ್ಗೆ ನಡೆಯುತ್ತಿರುವಂಥ ವಿದ್ಯಮಾನಗಳನ್ನು ಚರ್ಚೆ ಮಾಡಲಿಕ್ಕೆ, ಅದಕ್ಕೆ ಪರಿಹಾರಗಳನ್ನು ಸೂಚಿಸಲಿಕ್ಕೆ ಒಂದು ಉನ್ನತ ಮಟ್ಟದ ಸಮಿತಿಯನ್ನು ರಚಿಸಿ, ಅದರಲ್ಲಿ ನನ್ನನ್ನು ಸದಸ್ಯರನ್ನಾಗಿ ಮಾಡಿದರು. ಇಷ್ಟೆಲ್ಲಾ ಅವರು ಮಾಡಿದರೆ, ಈಗಿನ ಸನ್ಮಾನ್ಯ ಮುಖ್ಯಮಂತ್ರಿಗಳು ಈ ರಾಜ್ಯದ ಸೂತ್ರವನ್ನು ಹಿಡಿದಂಥ ಸಾರಥಿಯಾಗಿ ಮೂರು ತಿಂಗಳಾಯಿತು. ಪತ್ರ ಬರೆದೆ, ಅವುಗಳಿಗೆ ಉತ್ತರವಿಲ್ಲ. 'ಕಾವೇರಿ ಕೊಳ್ಳದ ಶಾಸಕರನ್ನು ಕರೆದು ಚರ್ಚೆ ಮಾಡುತ್ತೇನೆ' ಎಂದು ಹೇಳಿದ ವಾಗ್ದಾನಕ್ಕೆ ಅವರಲ್ಲಿ ಬದ್ಧತೆ ಇಲ್ಲ. ಏತಕ್ಕೆ? ಏನಾಗಿದೆ? ನಾನು ಇವತ್ತು ಆಪಾದನೆಯನ್ನು ಮಾಡಬೇಕಾಗುತ್ತದೆ. ಎರಡು ಕೊಳ್ಳಕ್ಕೂ ಸೇರಿದ ಈ ಮುಖ್ಯಮಂತ್ರಿಗಳಿಗೆ ಬಹುಶಃ ಈ ಎರಡು ಯೋಜನೆಗಳ ಅನುಷ್ಠಾನದಲ್ಲಿ ಆಸಕ್ತಿ ಇಲ್ಲ. I have on alternative. I am forced to make this complaint.

ಉಪ್ಪು ನೀರಿನಲ್ಲಿ ಮೀನು ಹಿಡಿಯುವವರ ಬಗ್ಗೆ ಇರುವಷ್ಟು ಆಸಕ್ತಿ ಕೃಷ್ಣಾ, ಕಾವೇರಿ ಕೊಳ್ಳದ ಯೋಜನೆಗಳ ಅನುಷ್ಠಾನದ ಬಗ್ಗೆ ಈ ಮುಖ್ಯಮಂತ್ರಿಗಳಿಗೆ ಆಸಕ್ತಿ ಇಲ್ಲ. ಏಕೆ?

ಯಾವುದೋ ಕಾಣದ ಕೈ ಒಂದು ವಾರದಿಂದ ಈ ಸದನದಲ್ಲಿ ಚರ್ಚೆ ಮಾಡುವುದನ್ನು ತಡೆ ಹಿಡಿಯುತ್ತಿದೆ. ಯಾವುದೋ ಕಾಣದ ಕೈನ ಕೈವಾಡ ಇದರ ಹಿಂದೆ ಇದೆ. ಈ ಎರಡೂ ಯೋಜನೆಗಳ ಅನುಷ್ಠಾನಕ್ಕೆ ತಡೆ ಹಿಡಿಯುವಂತಹ ಪಿತೂರಿ ನಡೆಯುತ್ತಿದೆ. ಈ ಪಿತೂರಿ ಇಲ್ಲ ಎನ್ನುವುದಾದರೆ ಸರ್ಕಾರ ಮುಂದೆ ಬರಲಿ. ಏನು ಎಂದು ಹೇಳಿ.

Why they are not prepared to discuss. Why you are not calling the meeting of the Legislators of the two Benches to discuss about the implementation of the two projects.

ನಿಮಗೆ ದೇವರು ಒಳ್ಳೆಯದು ಮಾಡುವುದಿಲ್ಲ. ಮಾನ್ಯ ಅಧ್ಯಕ್ಷರು 'ಈಗ ನೀವು ಪ್ರಸ್ತಾಪ ಮಾಡಬಹುದು' ಎಂದು ಹೇಳಿದರು. ಆ ಪ್ರಸ್ತಾಪ ಪ್ರಯೋಜನ ಆಗುವುದಿಲ್ಲ. ಉತ್ತರ ಕೊಟ್ಟರೆ ತಾನೆ? ನನ್ನ ಕಂಠ ಶೋಷಣೆಗೆ ಅರ್ಥ. ೭ರ ಕೆಳಗಡೆ ಆಗಿದ್ದರೆ ನಾವು ಪ್ರಸ್ತಾಪ ಮಾಡುತ್ತಿದ್ದೆವು, ಅವರು ಉತ್ತರ ಕೊಡುತ್ತಿದ್ದರು. ಈಗ ಮಾಡಿಕೊಂಡರೂ ಸಹ ಮಾನ್ಯ ಮುಖ್ಯಮಂತ್ರಿಗಳು ದೆಹಲಿಗೆ ಹೋಗಿದ್ದಾರೆ. ಬಂದ ಮೇಲೆ ಯಾವುದೋ ಒಂದೆರಡು ಪ್ಯಾರಾ ಓದಿಕೊಳ್ಳುತ್ತಾರೆ. ಮೋಸ್ಟಲಿ

ಎಕ್ಸೈಜ್ ಮೇಲೆ ಕೊಡುತ್ತಾರೆ. ಅದು ಆಗೇ ಆಗುತ್ತದೆ. ಅಬಕಾರಿಗೆ ಇರುವಷ್ಟು ಉತ್ಸಾಹ ನೀರಾವರಿಗೆ ಈ ಸರ್ಕಾರಕ್ಕಾಗಲಿ ಅಥವಾ ಸದನಕ್ಕಾಗಲಿ ಇಲ್ಲ. ೬೬ ಜನ ಕ್ಯಾಂಟೀನ್‌ನಲ್ಲಿ ಕೆಲಸ ಮಾಡುವಂತಹವರ ವಿಷಯವನ್ನು ಚರ್ಚೆ ಮಾಡುವುದಕ್ಕೆ ಈ ಸದನದಲ್ಲಿ ಅವಕಾಶ ಇದೆ. ನಿಯಮಗಳ ಪ್ರಕಾರ ಅದಕ್ಕೆ ಅವಕಾಶ ಕೊಡುತ್ತೀರಿ. ಆದರೆ ಲಕ್ಷಾಂತರ ರೈತಾಪೀ ಜನ ಈ ಎರಡೂ ಯೋಜನೆಗಳಿಂದ ಬರುವಂತಹ ನೀರಿಗಾಗಿ ಜಾತಕ ಪಕ್ಷಿಯಂತೆ ಕಾಯ್ದು ಕುಳಿತಿರುವಾಗ, ಈ ಯೋಜನೆಗಳು ನೆನೆಗುದಿಗೆ ಬಿದ್ದಿವೆ. ಈ ಯೋಜನೆಗಳು ನೆನೆಗುದಿಗೆ ಬಿದ್ದಿರುವಾಗ, ವಿಶ್ವ ಬ್ಯಾಂಕಿನ ನೆರವು ಕೃಷ್ಣಾ ಯೋಜನೆಯ ಅನುಷ್ಠಾನಕ್ಕೆ ನಿಂತು ಹೋಗಿರುವಾಗ, ಕಾವೇರಿ ಬಗ್ಗೆ ನ್ಯಾಯ ಮಂಡಲಿ ಏನು ತೀರ್ಪು ಕೊಡುತ್ತದೆ ಎನ್ನುವಂತಹ ಅಜ್ಞಾತದಲ್ಲಿ ನಮ್ಮನ್ನು ನೀವು ದೂಡಿರುವಾಗ ಈ ವಿಷಯದ ಬಗ್ಗೆ ಚರ್ಚೆಗೆ ಅವಕಾಶ ಇಲ್ಲ ಎಂದರೆ, ಅದಕ್ಕೆ ಸಂಬಂಧಪಟ್ಟವರು ಯಾರೇ ಆಗಿರಲಿ ಅವರನ್ನು ನಾನು ಪ್ರತಿಭಟಿಸುತ್ತೇನೆ.

ಈ ನೀರಾವರಿ ಬಗ್ಗೆ ಚರ್ಚೆ ಅವಶ್ಯಕತೆ ಇಲ್ಲ ಎಂದು ಸದನದಲ್ಲಿ ಅಧ್ಯಕ್ಷರು ಅಭಿಪ್ರಾಯಪಟ್ಟಿದ್ದಾರೆ. ಸರ್ಕಾರಕ್ಕೂ ಕೂಡ ಇದರ ಬಗ್ಗೆ ಆಸಕ್ತಿ ಇದ್ದ ಹಾಗೆ ಇಲ್ಲ. ಅದನ್ನು ರಾಜ್ಯದ ಜನತೆಗೆ ತಮ್ಮ ಮೂಲಕ ತಿಳಿಸುತ್ತಿದ್ದೇನೆ. ಇಷ್ಟಾದರೂ ನಮ್ಮ ನೀರಾವರಿ ಮಂತ್ರಿ, ಅವರನ್ನು ಹಾಗೆ ಕರೆಯಬೇಕೋ, ಬೇಡವೋ ಗೊತ್ತಿಲ್ಲ. Because I have said that Constitutionally he is not a Deputy Chief Minister.

ನನ್ನ ಮಟ್ಟಿಗೆ ಅವರು ನೀರಾವರಿ ಮತ್ತು ವಿದ್ಯುತ್ ಮಂತ್ರಿ; ಕ್ಯಾಬಿನೆಟ್ ದರ್ಜೆಯ ಮಂತ್ರಿಗಳಾಗಿದ್ದಾರೆ. ಇನ್ನೂ ಹೆಚ್ಚಿಗೆ ಒಂದು ವಿಷಯ ಇದೆ. ಅಷ್ಟು ಮಟ್ಟಿಗಾದರೂ ನಾನು ಇವರಿಗೆ ಒಂದು ಒರಟಾದ ಪತ್ರವನ್ನು ಬರೆದಿದ್ದೆ : "ನಿಮಗೆ ಕೃಷ್ಣಾ ಕಣ್ಣಿಗೆ ಬಿತ್ತು. ಕಾವೇರಿ ಕಣ್ಣಿಗೆ ಬೀಳಲಿಲ್ಲವಾ?" ಎಂದು ಬರೆದಿದ್ದೆ. ಏಕೆಂದರೆ ಇವರ ಮನೆ ಮುಂದೆ ನೀರು ಹೋಗುತ್ತದೆ. ಹೇಮಾವತಿ ನೀರು ಶಿಂಷಾ ವ್ಯಾಲಿಯಲ್ಲಿ ಬಿದ್ದರೆ ಸನ್ಮಾನ್ಯ ಸಚಿವರ ಮನೆ ಮುಂದೆ ಕೂಡ ಕಾಲುವೆ ಹೋಗುತ್ತದೆ. ಇವರಾದರೂ ಕೂಡ ಕೃಷ್ಣಾ ಕಾವೇರಿ ಬೇಸಿನ್‌ನ ಶಾಸಕರನ್ನು ಕರೆದಿದ್ದರೋ ಇಲ್ಲವೋ ಗೊತ್ತಿಲ್ಲ. ಏಕೆಂದರೆ ನಾನು ಈ ಬೇಸಿನ್‌ಗೆ ಬರುವುದಿಲ್ಲ. ಕಾವೇರಿ ಬೇಸಿನ್ ಶಾಸಕರನ್ನು ಅಂತೂ ಕರೆದಿಲ್ಲ. ಕರೆದು ಅನುಷ್ಠಾನದ ಬಗ್ಗೆ, ಯೋಜನೆ ಬಗ್ಗೆ ಚರ್ಚೆ ಮಾಡಿಲ್ಲ. ಆದ್ದರಿಂದ ಈ ಸದನದಲ್ಲಿ ನಾನು ಸರ್ಕಾರವನ್ನು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಕಾವೇರಿ ಮತ್ತು ಕೃಷ್ಣಾ ಯೋಜನೆ ಅನುಷ್ಠಾನದ ಬಗ್ಗೆ ವಿವಾದವನ್ನು ಸೃಷ್ಟಿಸುವುದಕ್ಕೆ ನಾನು ಸಿದ್ಧನಿಲ್ಲ. ನೀರಾವರಿ ಸಚಿವರು ಈ ವಿಷಯದ ಬಗ್ಗೆ ಬೆಳಕು ಚೆಲ್ಲಬೇಕು.

## ಕಾವೇರಿ ಮತ್ತು ಕೃಷ್ಣಾ ಯೋಜನೆ

೧೫ನೇ ಮಾರ್ಚ್ ೧೯೯೩

ಮಾನ್ಯ ಅಧ್ಯಕ್ಷರೇ, ರಾಜ್ಯದ ನೀರಾವರಿ, ವಿದ್ಯುಚ್ಛಕ್ತಿ ಮತ್ತು ಇತರೆ ಬೇಡಿಕೆಗಳನ್ನು ಅನುಮೋದಿಸುತ್ತಾ ಚರ್ಚೆಯನ್ನು ಮಾಡುವಂತಹ ಸಂದರ್ಭದಲ್ಲಿ ನನಗೆ ಅವಕಾಶವನ್ನು ಕೊಟ್ಟಿರುವುದಕ್ಕಾಗಿ ತಮಗೆ ವಂದನೆಗಳು. ನಾನು ನನ್ನ ಮಾತನ್ನು ಭಾರೀ ಮತ್ತು ಮಧ್ಯಮ ವರ್ಗದ

ನೀರಾವರಿ ಯೋಜನೆಗೆ ಮಾತ್ರ ಸೀಮಿತಗೊಳಿಸುತ್ತೇನೆ. ಕಾರಣ ಏನು ಅಂತ ಅಂದರೆ ಈ ನೀರಾವರಿ ಯೋಜನೆಗಳನ್ನು ಅನುಷ್ಠಾನಕ್ಕೆ ತರುವುದಕ್ಕೆ ಇರುವಂತಹ ಪ್ರಾಮುಖ್ಯತೆ ಎಂದೆಂದಿಗಿಂತ ಇಂದು ಹೆಚ್ಚಿನದಾಗಿದೆ. ಅದಕ್ಕೆ ಕಾರಣ ಇಷ್ಟೇ. ನಮ್ಮ ಅಂತರ್ಜಲ ವಿರಳವಾಗುತ್ತಿದೆ. ನಮ್ಮ ಜೀವನ ಶೈಲಿ, ಕಾರ್ಯವೈಖರಿ, ನಮ್ಮ ಬದುಕಿನಲ್ಲಿ ಕಂಡುಬಂದ ಘಟನೆಗಳು, ಬದುಕಿನ ಪರಿಸರಕ್ಕೆ ಕಾರಣವಾಗಬಹುದು ಅಂತ ಕಾಣುತ್ತದೆ. ಎಂದಿಗಿಂತಲೂ ಇಂದು ಭಾರೀ ಮತ್ತು ಮಧ್ಯಮ ವರ್ಗದ ನೀರಾವರಿಯ ಅನುಷ್ಠಾನದ ಪ್ರಗತಿಯನ್ನು ಜಾಸ್ತಿ ಮಾಡಬೇಕು ಅನ್ನುವಂತಹ ಪ್ರಶ್ನೆಗೆ ಪ್ರಾಮುಖ್ಯತೆ ಏತಕ್ಕೆ ಬಂದಿದೆ ಅಂದರೆ, ನನ್ನ ಕ್ಷೇತ್ರದಲ್ಲಿ ಒಂದು ಹಳ್ಳಿ ಇದೆ. ಇಡೀ ಹಳ್ಳಿಯನ್ನು ಆ ಜನ ಬಂಡೆಯ ಮೇಲೆ ಕಟ್ಟಿಕೊಂಡಿದ್ದಾರೆ. ಆದರೆ ಅದು ಸಂಪೂರ್ಣವಾಗಿಲ್ಲ. ಪ್ರತಿಸಾರಿ ನಾನು ಅಲ್ಲಿಗೆ ಹೋದಾಗಲೂ ಆ ಜನ ನನಗೆ ಒಂದು ಅರ್ಜಿಯನ್ನು ರಸ್ತೆಮಾಡಿ ಅಂತ ಕೊಡುತ್ತಿದ್ದರು. ಆಗ ನಾನು ೬೦-೭೦ ವರ್ಷದ ಮುದುಕನೊಬ್ಬನನ್ನು ಕೇಳಿದೆ, ನಿಮಗೆ ಏನು ಮಲ್ಲಗರ ಬಂದಿತ್ತು ಅಲ್ಲಿ ಪಕ್ಕದಲ್ಲಿ ಅಷ್ಟೊಂದು ವಿಶಾಲವಾಗಿರುವಂತಹ ಜಾಗ ಇದೆ. ಅಲ್ಲಿ ಊರು ಕಟ್ಟಿಕೊಂಡು ವಾಸ ಮಾಡುವುದರ ಬದಲು ಈ ಬಂಡೆಯ ಮೇಲೆ ಏತಕ್ಕೆ ನೀವು ಊರನ್ನು ಕಟ್ಟಿಕೊಂಡಿದ್ದೀರಿ. ಆತ ಅದಕ್ಕೆ ಹೇಳಿದಂತಹ ಉತ್ತರವನ್ನು ಕೇಳಿದಾಗ ನನಗೆ ನಾಚಿಕೆಯಾಯಿತು. ಆತ ಏನು ಹೇಳಿದ ಅಂದರೆ, ನಾವು ಚಿಕ್ಕ ಹುಡುಗರಾಗಿದ್ದಾಗ, ಅಲ್ಲಿ ಮನೆಯನ್ನು ಕಟ್ಟಿದರೆ, ಮಳೆ ಜಾಸ್ತಿಯಾಗಿ ಶೀತ ಹೆಚ್ಚಾಗಿ ಮನೆಗಳು ಕುಸಿದು ಹೋಗುತ್ತಿದ್ದವು. ಆದ್ದರಿಂದ ನಾವು ಬಂಡೆಯ ಮೇಲೆ ಮನೆಯನ್ನು ಕಟ್ಟಿಕೊಂಡೆವು ಎಂದು. ೬೦ ವರ್ಷದ ಹಿಂದೆ ಮಳೆಯು ಎಷ್ಟೊಂದು ಬರುತ್ತಿತ್ತು ಅಂದರೆ ಕಟ್ಟಿದ ಮನೆ ಶೀತ ಏರಿ ಕುಸಿದು ಬೀಳುತ್ತಿತ್ತು. ಇವತ್ತಿನ ಪರಿಸ್ಥಿತಿ ಏನಿದೆ ಅಂದರೆ ನಾವು ಶೀತವನ್ನು, ನೀರನ್ನು ಕಾಣಬೇಕಾದರೆ ೨೦೦-೩೦೦ ಅಡಿ ಭೂಮಿಯ ಒಳಗಡೆ ಹೋಗಬೇಕಾಗಿದೆ. ಈ ೬೦ ವರ್ಷದಲ್ಲಿ ಇಷ್ಟೊಂದು ಬದಲಾವಣೆ ಆಗಿದ್ದರೆ ಮುಂದಿನ ೬೦ ಅಥವಾ ೧೦೦ ವರ್ಷದಲ್ಲಿ ಏನು ಬದಲಾವಣೆಯನ್ನು ನಾವು ಕಾಣಬಹುದು. ಬಹುಶಃ ಇನ್ನು ೧೦೦ ವರ್ಷದಲ್ಲಿ ಈ ಜನಾಂಗಕ್ಕೆ, ಈ ಸಮಾಜಕ್ಕೆ ಈ ಸಮುದಾಯಕ್ಕೆ ಕುಡಿಯುವುದಕ್ಕೂ ನೀರನ್ನು ಒದಗಿಸದೇ ಇರುವಂತಹ ಪರಿಸ್ಥಿತಿಯನ್ನು ಸೃಷ್ಟಿಸಿದ ಪಾಪದ ಜನಾಂಗಕ್ಕೆ ಸೇರುತ್ತವೇಯೋ ಏನೋ ಅನ್ನುವಂತಹ ಭಾವನೆಯಾಗಿದೆ. ಇದು ಮಳೆಯು ಕಡಿಮೆಯಾಗಿರುವುದರಿಂದ ಇರುವಂತಹ ಅಂತರ್ಜಲವನ್ನಾದರೂ ಉಪಯೋಗಿಸಿಕೊಳ್ಳೋಣ ಅಂತ ಅಂದರೆ ವಿದ್ಯುಚ್ಛಕ್ತಿಯ ಅಭಾವ.

ಇನ್ನು ಮೂರನೆಯದು ಅನಾದಿಕಾಲದಿಂದಲೂ ನಾವು ಕಟ್ಟಿಕೊಂಡು ಬಂದಿರುವಂತಹ ಕೆರೆಗಳು. ಸ್ವಲ್ಪ ಮಟ್ಟಿಗೆ ಎಲ್ಲ ಕೆರೆಗಳು ಅಂತ ನಾನು ಹೇಳುತ್ತೇನೆ. ನೂರಕ್ಕೆ ತೊಂಬತ್ತೊಂಬತ್ತು ಭಾಗ ಕೆರೆಗಳು ಅಂತ ನಾನು ಹೇಳುತ್ತೇನೆ. ನೂರಕ್ಕೆ ತೊಂಬತ್ತೊಂಬತ್ತು ಭಾಗ ಕೆರೆಗಳು ಮುಚ್ಚಿಹೋಗಿವೆ. ಸಂಪೂರ್ಣವಾಗಿ ಎಲ್ಲ ಕೆರೆಗಳಿಗೂ ಕೆಸರು ಮಣ್ಣು ತುಂಬಿಕೊಂಡಿದೆ. ಸಣ್ಣ ಕೆರೆಗಳಿಗೂ ಇದೇ ಸ್ಥಿತಿ. ಅಂತರ್ಜಲ ಪಾತಾಳಕ್ಕೆ ಹೋಗುತ್ತಿದೆ. ಅಲ್ಲಿಂದಲಾದರೂ ಆ ಜಲವನ್ನು ಎತ್ತೋಣ ಅಂದರೆ ವಿದ್ಯುಚ್ಛಕ್ತಿ ಇಲ್ಲ. ಇನ್ನು ನಮಗೆ ಇರುವಂತಹ ಏಕೈಕ ಮಾರ್ಗ ಅಂದರೆ ಮಧ್ಯಮ ಮತ್ತು ಭಾರಿ ನೀರಾವರಿ ಮಾತ್ರ ಅಂತ ನನ್ನ ಭಾವನೆಯಾಗಿರುವುದರಿಂದ ನಾನು ಈ ವಿಷಯಕ್ಕೆ ಹೆಚ್ಚಿನ ಒತ್ತನ್ನು ಕೊಟ್ಟು, ಇದನ್ನು ಕಾರ್ಯರೂಪಕ್ಕೆ ತರಲಿಕ್ಕೆ ಸರ್ಕಾರವನ್ನು ಒತ್ತಾಯ ಮಾಡುತ್ತೇನೆ. ಮಧ್ಯಮ ಮತ್ತು ಭಾರೀ ನೀರಾವರಿ ಯೋಜನೆಗಳನ್ನು ಬೇಗನೇ ಅನುಷ್ಠಾನಕ್ಕೆ ತರಬೇಕೆಂದು ಸರ್ಕಾರಕ್ಕೆ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ರಾಜ್ಯದ, ಕರ್ನಾಟಕ ಮಾತೆಯ ಎರಡು ಕಣ್ಣು ಅನ್ನುವಂತಹ

ಕಾವೇರಿ, ಕೃಷ್ಣಾಗಳನ್ನು ಶತಶತಮಾನಗಳಿಂದ, ಯುಗಯುಗಗಳಿಂದ ರಕ್ಷಣೆ ಮಾಡುವುದರಲ್ಲಿ ಸರ್ಕಾರ ವಿಫಲವಾಗಿದೆ.

ಅಧ್ಯಕ್ಷರೇ, ಆನಂದಬಾಷ್ಪ ಸುರಿಯಬೇಕಾದ ಕಡೆ ಸಂಕಟದ ಕಣ್ಣೀರು ಬರುವುದನ್ನು ಈ ಎರಡು ಕಣ್ಣುಗಳಲ್ಲಿ ಕಾಣುತ್ತಿದ್ದೇವೆ. ಇದನ್ನು ನೋಡಿ ಈ ರಾಜ್ಯದ ಜನ ತಲ್ಲಣಿಸುತ್ತಿದ್ದಾರೆ. ಈ ಎರಡು ಯೋಜನೆಗಳು ಅಂದರೆ, ಕರ್ನಾಟಕ ಕೃಷ್ಣಾ, ಬಿಜಾಪುರ, ಗುಲ್ಬರ್ಗಾ, ರಾಯಚೂರು ಜಿಲ್ಲೆಗಳ ರೈತರ ಭಾಗದ ಭಾಗ್ಯದ ಬಾಗಿಲನ್ನು ತೆರೆಯಬೇಕಾಗಿತ್ತು. ಈ ಕಡೆ ಭಾಗಗಳಲ್ಲಿ ಕಾವೇರಿ ಯೋಜನೆಯಿಂದ ಬರುವ ನೀರಿನಿಂದ ರೈತನ ಬದುಕು ಹಸನಾಗಿ ಎರಡು ಹೊತ್ತಿಗೆ ಕೂಳು ತಿನ್ನುವಂತಹ ಪರಿಸ್ಥಿತಿ ಸೃಷ್ಟಿಯಾಗಬೇಕಾಗಿತ್ತು. ಆದರೆ ಹಾಗೆ ಆಗಲಿಲ್ಲ. ಕರ್ನಾಟಕದ ನೀರಾವರಿ ಯೋಜನೆಗಳ ಬಗ್ಗೆ, ಅದರಲ್ಲೂ ಬೃಹತ್ ನೀರಾವರಿ ಯೋಜನೆಗಳ ಬಗ್ಗೆ ಅನಾದರಣೆ, ಅನಾಸಕ್ತಿ, ಮೋಸ, ವಂಚನೆ, ದ್ರೋಹ ಈ ಪರಂಪರೆ ಮೈಸೂರು ಮಹಾರಾಜರ ಕಾಲದಿಂದ ಹಿಡಿದು ಇವತ್ತಿನವರೆಗೂ ನಡೆದುಬಂದಿದೆ. ಮೈಸೂರು ಮಹಾರಾಜರ ಕಾಲದಲ್ಲಿ ಕೆ.ಆರ್.ಎಸ್. ಕಟ್ಟಡ ಕಟ್ಟಬೇಕೆಂದಾಗ ಅವತ್ತಿನ ಮಹಾರಾಜರ ಆರ್ಥಿಕ ಕಾರ್ಯದರ್ಶಿಯವರು ಒಪ್ಪಿಗೆ ಕೊಡಲಿಲ್ಲ. ಅದು ದೊಡ್ಡ ಚರಿತ್ರೆ. ಈಗ ಅದನ್ನು ಹೇಳುವುದಕ್ಕೆ ಇಷ್ಟಪಡುವುದಿಲ್ಲ. ಆ ಸಮಯದಲ್ಲಿ ದಿವಾನರಾಗಿದ್ದವರು ಹೇಳುತ್ತಾರೆ.

ನಾನು ಏಕೆ ಹೇಳುತ್ತಿದ್ದೇನೆ ಎಂದರೆ ಈ ಮೋಸದ ಪರಂಪರೆ, ವಂಚನೆಯ ಪರಂಪರೆ ಇವತ್ತಿನಿಂದ ಶುರುವಾದುದ್ದಲ್ಲ. ಅದೃಷ್ಟವಶಾತ್ ಅವತ್ತು ಶ್ರೀ ಆನಂದರಾಯರು, ಸರ್ ಎಂ. ವಿಶ್ವೇಶ್ವರಯ್ಯನವರಂತಹ ದಿವಾನರು ಇದ್ದರು. ಆದುದರಿಂದ ಆ ಸೇತುವೆಯ ಕಟ್ಟಡ ಕಟ್ಟುವುದಕ್ಕೆ ಸಾಧ್ಯವಾಯಿತು. ಬ್ರಿಟಿಶರ ಕಾಲದಲ್ಲೂ ಸಹ, ೧೮೯೨ನೇ ಇಸವಿಯ ಒಪ್ಪಂದ ಮತ್ತು ೧೯೨೪ನೇ ಇಸವಿಯ ಒಪ್ಪಂದ ಇವರೆಡರ ನಿಬಂಧನೆಗಳ, ರೂಪರೇಖೆಗಳನ್ನು ನೋಡಿದಾಗ, ಆಗ ಇದ್ದಂತಹ ಬ್ರಿಟಿಷರ ಸರ್ಕಾರ ಮೈಸೂರು ರಾಜ್ಯದ ರಾಜರುಗಳ ಮೇಲೆ ಸಂಪೂರ್ಣವಾಗಿ ಒಂದು ನಿರ್ಬಂಧ ಏರುತ್ತಿರುವಂತಹ ಒಂದು ತಂತ್ರದ ಸ್ವರೂಪವಾಗಿತ್ತು. ಇದು ರಾಜಕೀಯವಾಗಿ ನಡೆದಿದ್ದರೆ ಕೆಲಸ ಮಾಡುವುದು ಹೇಗೆ ಈ ಕೆಲಸವನ್ನು ಪ್ರಗತಿಪಥದಲ್ಲಿ ತೆಗೆದುಕೊಂಡರೂ ಕೂಡ, ನಾವು ಈ ರಾಜ್ಯದಲ್ಲಿ ನೀರಾವರಿ ಯೋಜನೆಗಳ ಬಗ್ಗೆ ಅನಾದರಣೆ ವಂಚನೆಗಳನ್ನು ಕಾಣಬಹುದು. ನಾನು ಯಾವುದೇ ಒಂದು ಸರ್ಕಾರ, ಇದಕ್ಕೆ ಹೊಣೆ ಎಂದು ಹೇಳುವುದಕ್ಕೆ ಸಿದ್ಧನಿಲ್ಲ. ಈ ರಾಷ್ಟ್ರದಲ್ಲಿ ವ್ಯವಸಾಯಕ್ಕೆ ಲಭ್ಯವಿರುವಂಥ ಜಮೀನು ಶೇಕಡವಾರು ೩.೨ ಅಥವಾ ೩೩. ಈ ರಾಜ್ಯದ್ದು ಶೇ. ೧೩ ಇದೆ. ಮಾನ್ಯ ಮುಖ್ಯಮಂತ್ರಿಗಳು ಮೊನ್ನೆ ಎದ್ದು ಹೊರಟುಹೋದರು. ಆ ರಾಜ್ಯದಲ್ಲಿ ಅಷ್ಟು ತೆರಿಗೆ ಕೊಡುತ್ತಾರೆ, ಆ ರಾಜ್ಯದಲ್ಲಿ ಇಷ್ಟು ತೆರಿಗೆ ಕೊಡುತ್ತಾರೆ, ಈ ರಾಜ್ಯದಲ್ಲಿ ಏಕೆ ಇಷ್ಟು ತೆರಿಗೆ ಹಾಕಬಾರದು ಎಂದು ಹೇಳಿದ್ದಾರೆ. ಆ ರಾಜ್ಯದಲ್ಲಿ ಇರುವಂತೆ ನೀರಾವರಿ ಸೌಕರ್ಯವನ್ನು ನಮಗೂ ಕೊಡಿ, ತೆರಿಗೆ ಕೊಡುತ್ತೇವೆ. ನಾವು ಸಾಲ ಮನ್ನಾ ಮಾಡಿ ಎಂದು ಹೇಳುವುದಕ್ಕೆ ಬರುವುದಿಲ್ಲ. ಆ ರಾಜ್ಯದಲ್ಲಿ ಎಷ್ಟೆಷ್ಟು ಸಾಲ ಕೊಡುತ್ತಾರೆ ಮತ್ತು ಆ ರಾಜ್ಯಕ್ಕೆ ಎಷ್ಟು ನೀರಾವರಿ ಒದಗಿಸಿದ್ದಾರೆ ಎಂಬುದನ್ನು ಸರ್ಕಾರದವರು ಜನಕ್ಕೆ ಅಂಕಿಅಂಶಗಳ ಮೂಲಕ ಹೇಳಿದರೆ ನಾನು ಒಪ್ಪುತ್ತೇನೆ. ನಾನು ಅದನ್ನು ಮಂತ್ರಿಯವರಿಂದ ಬಯಸುತ್ತೇನೆ.

ಆದರೆ ನನ್ನ ಮಟ್ಟಿಗೆ ಕರ್ನಾಟಕ ರಾಜ್ಯದಲ್ಲಿ ನೀರಾವರಿಗೆ ಲಭ್ಯವಿರುವ ಜಮೀನುಗಳು ಶೇ. ೧೩. ಇದರಿಂದ ವಂಚನೆಯ ಅರಿವು ನಿಮಗೆ ಆಗುವುದಿಲ್ಲವೇ ಈ ರಾಜ್ಯದ ರೈತರ ಮೇಲೆ

ನಡೆಯುತ್ತಿರುವಂಥ ಮೋಸದ ಅರಿವು ಆಗುವುದಿಲ್ಲವೇ ದ್ರೋಹದ ಅರಿವು ಆಗುವುದಿಲ್ಲವೇ ನಾನು ಆಗೇ ಹೇಳಿದ್ದೇನೆ. ಜನತಾ ಪಕ್ಷ, ಕಾಂಗ್ರೆಸ್ ಪಕ್ಷ, ಕಮ್ಯೂನಿಸ್ಟ್ ಪಕ್ಷ ಎಂಬ ಸರ್ಕಾರಗಳ ಪ್ರಶ್ನೆಗೆ ಹೋಗುವುದಿಲ್ಲ. ೧೯೮೫-೮೬ರಲ್ಲಿ ಈ ರಾಜ್ಯದ ಇರಿಗೇಷನ್ ಪೊಟೆನ್‌ಷಿಯಲ್ ೧೨.೨೭ ಈ ದಶಕದಲ್ಲಿ ನಮ್ಮ ಮಹತ್‌ಸಾಧನೆ ಇದು. ಈ ನಮ್ಮ ಮಹತ್ ಸಾಧನೆ ೧೨.೨೭ ರಿಂದ ೧೪.೩೬ ಎಂದಿದ್ದಾರೆ ಮಾನ್ಯ ಮುಖ್ಯಮಂತ್ರಿಗಳು.

ಅಧ್ಯಕ್ಷರೇ, ನಮ್ಮ ಸನ್ಮಾನ್ಯ ಮುಖ್ಯಮಂತ್ರಿಗಳು ಹೇಳುತ್ತಾರೆ ಸೃಜಿಸಿದ ಸಾಮರ್ಥ್ಯಕ್ಕೂ, ಉಪಯುಕ್ತತೆಗೂ ಇರುವ ಅಂತರವನ್ನು ಒಂದು ವರ್ಷಕ್ಕೆ ಇಳಿಸುತ್ತೇನೆ ಎಂದು. ಅದು ಇಂಪಾಸಿಬಲ್. ಏಕೆಂದರೆ ಅವರು ಕೊಟ್ಟಿರುವಂತಹ ವರದಿಯ ಪ್ರಕಾರ ಇದು ಸಾಧ್ಯವೇ. ಅದರ ಆಯವ್ಯಯದ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಅಪ್ಪಣೆ ಕೊಡಿಸುತ್ತಾರೆ. ೧೯೯೪-೯೫ರಲ್ಲಿ ಹೊಸದಾಗಿ ಸೃಜಿಸಿರುವ ನೀರಾವರಿ ಸಂಗ್ರಹಣಾ ಸಾಮರ್ಥ್ಯವನ್ನು ಬಳಸಿಕೊಳ್ಳಲಾಗುವುದು. ನೀರಾವರಿ ಸಾಮರ್ಥ್ಯವನ್ನು ಸೃಜಿಸಿ ಅದನ್ನು ಬಳಸಿಕೊಳ್ಳುವ ನಡುವಿನ ಅವಧಿಯ ಅಂತರವನ್ನು ಇನ್ನು ಮುಂದೆ ಗರಿಷ್ಠ ಒಂದು ವರ್ಷಕ್ಕೆ ಸೀಮಿತಗೊಳಿಸಲಾಗುವುದು.

ಬಹುಶಃ ಮುಂದಿನ ವರ್ಷದವರೆಗೆ ನಾವೂ ಇರುತ್ತೇವೆ. ಈ ಸದನದಲ್ಲಿ ಸಿಗುವುದಕ್ಕೆ ಅವಕಾಶ ಸಿಗುತ್ತದೆಯೋ ಇಲ್ಲವೋ ನನಗೆ ಗೊತ್ತಿಲ್ಲ. ಆದರೆ ಹೊರಗಡೆಯಾದರೂ ಇರುತ್ತೇನೆ. ನಾನು ಇವತ್ತು ಅವರಿಗೆ ಐದು ವರ್ಷ ಕಾಲ ಕೊಡುತ್ತೇನೆ. ಹೊಸದಾಗಿ ಸೃಜಿಸುವ ಪೊಟೆನ್‌ಷಿಯಾಲಿಟಿ ಬೇಡ. ಸನ್ಮಾನ್ಯ ಮಂತ್ರಿಗಳೇ, ಈಗ ನಮ್ಮದು ಇರುವಂತಹ ಪೊಟೆನ್‌ಷಿಯಾಲಿಟಿ, ಕ್ರಿಯೇಟ್ ಆಗಿರುವಂತಾದ್ದು ಏನು ಇದೆ, ನಾನು ಏನು ಸಾಮರ್ಥ್ಯ ಸೃಜಿಸಿದ್ದೇವೆ, ಆ ಸಾಮ್ರ್ಯವನ್ನು ಇನ್ನು ಐದು ವರ್ಷದಲ್ಲಿ ನೀವು ಸಂಪೂರ್ಣವಾಗಿ ಬಳಸಿಕೊಳ್ಳಿ ಎಂದು ನಾನು ಇವತ್ತು ನಿಮ್ಮ ಮೇಲೆ ಹಠ ಕಟ್ಟಿ ಹೇಳುತ್ತೇನೆ. ಇದು ನಿಮ್ಮಿಂದ ಸಾಧ್ಯವಾಗುವುದಿಲ್ಲ ಇದು ಸಾಧ್ಯವಾದರೆ ನಾನು ರಾಜಕೀಯದಿಂದ ನಿವೃತ್ತಿಯಾಗುತ್ತೇನೆ.

ಐದು ವರ್ಷ ಅಲ್ಲ, ಇನ್ನು ಹತ್ತು ವರ್ಷದಲ್ಲಿ ಕೂಡ ನೀವು ಈ ಗ್ಯಾಪನ್ನು ಫಿಲಪ್ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಕಾರಣ ಇಷ್ಟೇ, ಅವರೇ ಕೊಟ್ಟಿರುವಂತಹ ಲೆಕ್ಕದ ಪ್ರಕಾರ, ಅವರ ವರದಿ ಪೇಜ್ ನ. ೬೬-೬೭ರಲ್ಲಿ ೨೧ ಲಕ್ಷದ ೮೨ ಸಾವಿರದ ೩೨೬ ಹೆಕ್ಟೇರ್‌ಗೆ ಈ ರಾಜ್ಯದ ಅಂತಿಮ ನೀರಿನ ಸಾಮರ್ಥ್ಯ ಈ ಸಾಮರ್ಥ್ಯದಲ್ಲಿ ನಾವು ಸಾಧನೆ ಮಾಡಿರುವುದು ೯ ಲಕ್ಷದ ೩೭ ಸಾವಿರದ ೩೯೦ ಹೆಕ್ಟೇರ್ಸ್. ಅಂದರೆ ಒಟ್ಟಾರೆ ೧೨ ಲಕ್ಷದ ೪೪ ಸಾವಿರದ ೯೩೬ ಎಕರೆ. ಇವತ್ತು ಮಾನ್ಯ ಮುಖ್ಯಮಂತ್ರಿಗಳ ಮಾತಿನಲ್ಲಿ ಹೇಳಬೇಕು ಎನ್ನುವುದಾದರೆ ಇದು ಸೃಜಿಸಿರುವ ಸಾಮರ್ಥ್ಯ. ಸೃಜಿಸಿರುವ ಸಾಮರ್ಥ್ಯದಲ್ಲಿ ಉಪಯೋಗ ಮಾಡಿಕೊಳ್ಳದೆ ಇರುವಂತಹ ನೀರು ಎಷ್ಟು ನಮ್ಮಲ್ಲಿ ಇದೆ ಎಂದರೆ ೧೨ ಲಕ್ಷದ ೪೪ ಸಾವಿರದ ೯೩೬ ಹೆಕ್ಟೇರ್ಸ್. ಇದರ ಅರ್ಥ ಏನು ಗೊತ್ತಾ? ಕೆರೆಯಲ್ಲಿ ನೀರು ಇದೆ, ತೂಬು ಕಟ್ಟೆ ಆಗಿದೆ, ಕಂಟ್ರಾಕ್ಟರ್‌ಗೆ ಬಿಲ್ ಕೊಟ್ಟಾಗಿದೆ. ಇದು ಎಂತಹ ನೋವಿನ ಪರಿಸ್ಥಿತಿ ಅಧ್ಯಕ್ಷರೇ. ಹೇಮಾವತಿಯಲ್ಲಿ ನೀರು ತುಂಬಿದೆ ನಾರಾಯಣಪುರದಲ್ಲಿ ನೀರು ತುಂಬಿದೆ. ಆ ನೀರನ್ನು ಕಾಲುವೆ ಮುಖಾಂತರ ರೈತನ ಜಮೀನಿಗೆ ಒದಗಿಸುವುದಕ್ಕೆ ಆಗದೇ ಇರುವಂತಹ ಒಂದು ಅನ್ಯಾಯದ ಪರಂಪರೆಯನ್ನು ನಾವು ಮುಂದುವರೆಸಿಕೊಂಡು ಹೋಗುತ್ತಿದ್ದೇವೆ. ಹೆಂಗಸರು ಅಡಿಗೆ ಮಾಡಿದ್ದಾರೆ, ಘಮಘಮ ವಾಸನೆ ಬರುತ್ತಿದೆ, ಆದರೆ ತಿನ್ನುವ ಆಗಿಲ್ಲ. ಇಲ್ಲಿಂದ ಹೇಮಾವತಿಯವರೆಗೆ ಪ್ರವಾಸ ಮಾಡಿದರೆ ತುಮಕೂರು ಜಿಲ್ಲೆಯಲ್ಲಿ ಒಣಗಿದ ಪೈರನ್ನು

ಕಾಣುತ್ತೇವೆ. ಮತ್ತು ಹೇಮಾವತಿಯಲ್ಲಿ ತುಂಬಿ ತುಳುಕುವ ನೀರನ್ನು ಕಾಣುತ್ತೇವೆ. ಆ ನೀರನ್ನು ಒಣಗಿದ ಭೂಮಿಗೆ ಬಿಡುವುದಕ್ಕೆ ಸಾಮರ್ಥ್ಯ ಇಲ್ಲದೆ ಇರುವಂತಹ ಆಡಳಿತ ವ್ಯವಸ್ಥೆಯನ್ನೇ ನಾನು ಕರೆದಿದ್ದು ಅನ್ಯಾಯದ, ವಂಚನೆಯ, ಮೋಸದ, ನಿರಾಸಕ್ತಿಯ ಒಂದು ಪರಂಪರೆ ಎಂದು. ಸನ್ಮಾನ್ಯ ಅಧ್ಯಕ್ಷರೇ, ಇಷ್ಟು ಎಕರೆ ಜಮೀನು ಸಾಮರ್ಥ್ಯ ಇದ್ದರೂ ಕೂಡ ಉಪಯೋಗಿಸಿಕೊಳ್ಳುವುದಕ್ಕೆ ನಮ್ಮ ಕೈಯಲ್ಲಿ ಆಗಲಿಲ್ಲ ಎಂದು ನಾವು ಹೇಳುವಾಗ ಸನ್ಮಾನ್ಯ ಮುಖ್ಯಮಂತ್ರಿಗಳ ಕಳಕಳಿಯನ್ನು ನಾನು ಒಪ್ಪಿಕೊಳ್ಳುತ್ತೇನೆ. ಅವರು ಒಂದು ಲಕ್ಷದ ೪ ಹೆಕ್ಟೇರ್ ಪ್ರದೇಶವನ್ನು ೧೯೯೩-೯೪ರಲ್ಲಿ ನೀರಾವರಿ ಬಳಕೆ ವ್ಯಾಪ್ತಿಗೆ ತರಲಾಗುವುದು ಎಂದು, ಅದಕ್ಕೆ ನಾನು ಹೇಳಿದ್ದು ಅಟ್ ದಿಸ್ ರೇಟ್ ಹೇಳುತ್ತಾರೆ.

## ಕೃಷ್ಣ-ಕಾವೇರಿ ಸಮಸ್ಯೆ

೨೯ನೇ ಮಾರ್ಚ್ ೧೯೯೯

ಮಾನ್ಯ ಅಧ್ಯಕ್ಷರೇ, ಈ ದಿನ ಕಾವೇರಿ ನೀರನ್ನು ರಾಜ್ಯದ ಜನತೆಗೆ ಉಳಿಸಿಕೊಳ್ಳುವುದರಲ್ಲಿ, ಅದಕ್ಕಿಂತ ಹೆಚ್ಚಾಗಿ ನಾವು ಇವತ್ತು ಒತ್ತಾಯ ಮಾಡುವುದು ಆ ನೀರನ್ನು ಬಳಸಿಕೊಳ್ಳುವುದರಲ್ಲಿ ಈ ಪದವನ್ನು ಅತ್ಯಂತ ಒತ್ತಾಯಪೂರ್ವಕವಾಗಿ ಹೇಳುತ್ತಿದ್ದೇನೆ. ಉಳಿಸಿಕೊಳ್ಳುವುದಕ್ಕೆ ನಡೆಯುತ್ತಿರುವಂಥ ಹೋರಾಟ ಅದು ಶತಮಾನದ ಹೋರಾಟದ ಚರಿತ್ರೆ. ಆದರೆ, ಆ ನೀರನ್ನು ಬಳಸಿಕೊಳ್ಳುವುದಕ್ಕೆ ಮಾಡಿರುವಂಥ ಪ್ರಯತ್ನ ಅದೊಂದು ಅನ್ಯಾಯದ ಪರಂಪರೆ. ಮುಖ್ಯಮಂತ್ರಿಗಳು ಈಗ ಸದನದಲ್ಲಿದ್ದರೆ ಪರಂಪರೆ ಎನ್ನುವ ಪದ ಅವರಿಗೆ ಅಪ್ಯಾಯಮಾನವಾಗಿರುತ್ತಿತು. ನೀರನ್ನು ಉಳಿಸಿಕೊಳ್ಳುವುದರಲ್ಲಿ ನಮ್ಮ ಹೋರಾಟ, ನೀರಿಗಾಗಿ ಶತಮಾನದ ತೀರದ ಬವಣೆ ಇವುಗಳನ್ನು ಅವರೇ ಹೇಳಿರುವುದು. ಸನ್ಮಾನ್ಯ ಅಧ್ಯಕ್ಷರೇ, ವೈಯಕ್ತಿಕವಾಗಿ ನಾನು ಏನು ಮಾಡಿದರೆ ನೀರಾವರಿ ಬಗ್ಗೆ ಈ ಸರ್ಕಾರದ ಗಮನವನ್ನು ಸೆಳೆಯುವುದಕ್ಕೆ ಸಾಧ್ಯ ಎನ್ನುವುದು ನನಗೆ ಗೊತ್ತಿಲ್ಲ. ನಾನು ರೋಸಿ ಈ ಮಾತನ್ನು ಹೇಳುತ್ತಿದ್ದೇನೆ. ನಾನು ಚಿಕ್ಕ ಹುಡುಗನಾಗಿದ್ದಾಗ ನಮ್ಮ ಪ್ರದೇಶದಲ್ಲಿ ಮುತ್ತುರಾಯನಕೆರೆ ಎಂದು ಒಂದು ಕೆರೆ ಕಟ್ಟಿದರು. ಆಗಿನ ಬೇಸಿಗೆ ಕಾಲದಲ್ಲಿ ಹುಡುಗರನ್ನೆಲ್ಲಾ ಹೊರಗೆ ಮಲಗಿಕೊಳ್ಳಲು ಬಿಡುತ್ತಿರಲಿಲ್ಲ. ಏಕೆಂದರೆ, ಈ ಹೊಸಕೆರೆ ಕಟ್ಟುವಾಗ ಕೆರೆಯ ಕೋಡಿ ನಿಲ್ಲಬೇಕಾದರೆ ಯಾರನ್ನಾದರೂ ಬಲಿ ಕೊಡಬೇಕೆಂಬ ಪ್ರತೀತಿ ನಮ್ಮಲ್ಲಿತ್ತು. ನಮ್ಮ ಕಡೆ ಹಿಂದೆ ಕಟ್ಟಿರುವ ಚೋಳನಕೆರೆಯನ್ನು ಕಟ್ಟಿ ಅದರ ಕೋಡಿ ನಿಲ್ಲದೆ ಹೋದಾಗ ಆಗಿನ ಗೌಡ ತನ್ನ ತುಂಬು ಗರ್ಭಿಣಿ ಸೊಸೆಯನ್ನೇ ಆ ಕೆರೆಯ ತೂಬಿಗೆ ಬಲಿ ಕೊಟ್ಟನಂತೆ.

ಮಾನ್ಯ ಅಧ್ಯಕ್ಷರೇ, ಅತ್ಯಂತ ನೋವಿನಿಂದ ಈ ಮಾತನ್ನು ಹೇಳುತಿದ್ದೇನೆ. ಈ ಸರ್ಕಾರವನ್ನು ಎಚ್ಚರಗೊಳಿಸಬೇಕಾದರೆ, ಈ ಸರ್ಕಾರಕ್ಕೆ ರಾಜ್ಯದ ರೈತರು ನೀರಿಗಾಗಿ ಬವಣೆ ಪಡುತ್ತಿರುವುದನ್ನು ಗಮನಕ್ಕೆ ತರಬೇಕಾದರೆ, ಇವರು ತಮ್ಮ ಕಿತ್ತಾಟ ಬಿಟ್ಟು, ಜನರ ಸಮಸ್ಯೆಗೆ ಸ್ಪಂದಿಸುವ ರೀತಿ ಮಾಡಬೇಕಾದರೆ, ನಾವು ಯಾರನ್ನು ಬಲಿ ಕೊಡಬೇಕೆಂದು ಕೇಳುತ್ತಿದ್ದೇನೆ. ಸನ್ಮಾನ್ಯ ನೀರಾವರಿ ಮಂತ್ರಿಗಳೇ, ನನಗಂತೂ ತುಂಬು ಗರ್ಭಿಣಿ ಸೊಸೆ ಇಲ್ಲ. ತುಮಕೂರು ಜಿಲ್ಲೆಯ ಹೇಮಾವತಿ ನೀರನ್ನು ಕೊಡಬೇಕಾದರೆ ಈ ಶರೀರದ ಬಲಿ ಅವಶ್ಯಕತೆ ಇದ್ದರೆ ಕೊಡುತ್ತೇನೆ. ತೆಗೆದುಕೊಳ್ಳಿ, ಎಷ್ಟು ಸಾರಿ ನಿಮಗೆ ನಾವು ಹೇಳಬೇಕು? ಒಬ್ಬ ಶಾಸಕನ, ಮಂತ್ರಿಯ ಮದುವೆಗೆ ಹೋಗುವುದಕ್ಕೆ

ನಿಮಗೆ ಹೆಲಿಕಾಪ್ಟರ್ ಇದೆ. ಒಬ್ಬ ಶಾಸಕ ನಿಮ್ಮ ಪರವಾಗಿ ಬರುತ್ತಾರೆಂದರೆ ನೀವು ನಾಲ್ಕು ರಾತ್ರಿ ಕಾಲ ಕಳೆಯುತ್ತಿರಿ. ಆದರೆ ಹೇಮಾವತಿ ನದಿಯ ಕಾಮಗಾರಿಯನ್ನು ನಲವತ್ತು ನಿಮಿಷ ಬಂದು ನೋಡುವುದಕ್ಕೆ ನಿಮ್ಮ ಮುಖ್ಯಮಂತ್ರಿಗಳಿಗೆ ವ್ಯವಧಾನವಿಲ್ಲವೇ? ಅವರಿಗೆ ಪ್ರಾರ್ಥನೆ ಮಾಡಿಕೊಳ್ಳುತ್ತಿದ್ದೇನೆ. ನಾವು ಏನು ಮಾಡಬೇಕು? ಏನು ಮಾಡಿದರೆ ನೀವು ತೃಪ್ತಿಯಾಗುತ್ತೀರಿ? ಯಾವ ಬಲಿ ಕೊಟ್ಟರೆ ತೃಪ್ತಿಯಾಗುತ್ತೀರಿ? ಯಾವ ತ್ಯಾಗ ಮಾಡಿದರೆ ನಿಮ್ಮ ಗಮನ ಸೆಳೆಯುತ್ತದೆ? ದಯವಿಟ್ಟು ಹೇಳಿ. ನನ್ನ ಬಲಿ ಬೇಕೆ? ಅವಶ್ಯಕತೆಯಿದ್ದರೆ ಬಾಗೂರು ನವಿಲೆ ಟನಲ್ ಹತ್ತಿರ ನನ್ನನ್ನು ಕಡಿಯಿರಿ, ನೀರನ್ನು ಕೊಡಿ. ನಾನು ಏಕೆ ಈ ಮಾತನ್ನು ಹೇಳುತ್ತಿದ್ದೇನೆಂದರೆ, ನೀರನ್ನು ಉಳಿಸಿಕೊಳ್ಳುವುದಕ್ಕೆ ನಾವು ಮಾಡುತ್ತಿರುವಂಥ ಹೋರಾಟ ಏನಿದೆ, ಅದು ಇವತ್ತು, ನಿನ್ನೆಯದಲ್ಲ. ಇದು ಶತಮಾನದ ಹೋರಾಟವಾಗಿದೆ. ಈ ಹೋರಾಟ ಇವತ್ತಿಗೆ ಮುಗಿಯುವುದಿಲ್ಲ. ಸನ್ಮಾನ್ಯ ವೀರಪ್ಪ ಮೊಯಿಲಿಯವರಂಥ ಇನ್ನು ಹತ್ತು ಜನ ಮುಖ್ಯಮಂತ್ರಿಗಳು ಬಂದರೂ ಹಾಗೂ ನೀರಾವರಿ ಸಚಿವರಾದಂಥ ಸನ್ಮಾನ್ಯ ಎಸ್.ಎಂ. ಕೃಷ್ಣರವರಂಥ ಹತ್ತು ಜನ ಉಪಮಂತ್ರಿಗಳು ಬಂದರೂ ಈ ಹೋರಾಟ ಮುಂದುವರಿಯುತ್ತಲೇ ಇರುತ್ತದೆ. ಈ ಸಮಸ್ಯೆ ಇಲ್ಲಿಗೇ ಬಗೆಹರಿಯುವುದಿಲ್ಲ.

"ಮಾನ್ಯ ರಾಮಯ್ಯನವರೇ, ಈಗಾಗಲೇ ಹದಿನಾಲ್ಕು ಸಾವಿರ ತೆಂಗಿನ ಗಿಡಗಳನ್ನು, ಒಂದೂವರೆ ಸಾವಿರ ಕುಟುಂಬಗಳನ್ನು ನೀರು ಕೊಡುವುದಕ್ಕೋಸ್ಕರ ಬಲಿ ಕೊಟ್ಟಾಗಿದೆ" ಎಂದು ಮಾನ್ಯ ಡಾ. ಎನ್.ಬಿ. ನಂಜಪ್ಪನವರು ಹೇಳಿದರು.

ನೀರಾವರಿ ವಿಷಯ ಬಂದಾಗ ನನ್ನ ಸ್ನೇಹಿತರು ಉದ್ವಿಗ್ನರಾಗುತ್ತಾರೆ. ಇನ್ನೇನು ಆಗಬೇಕು ಹೇಳಿ? What else I shoud do? ಅಳಬೇಕೆ? ಬಾಯಿ ಬಡಿದುಕೊಳ್ಳಬೇಕೆ? ಪ್ರಾಣಬಿಡಬೇಕೆ ನಾಲ್ಕು ಲಕ್ಷ ಎಕರೆಗಳಿಗಾಗುವಷ್ಟು ನೀರು ಹೇಮಾವತಿ ಜಲಾಶಯದಲ್ಲಿ ತುಂಬಿ ನಿಂತಿದೆ. ಆದರೆ ತುಮಕೂರಿನಲ್ಲಿರುವ ಬೆಳೆ ಒಣಗಿ ನಿಂತಿದೆ. ಯಾವ ಪಾಪಕ್ಕೆ? ಕೆರೆಯಲ್ಲಿರುವ ನೀರನ್ನು ಕಾಲುವೆ ಮಾಡಿ ಹೊಲಕ್ಕೆ ಕೊಡುವುದಕ್ಕೆ ಯೋಗ್ಯತೆ ಇಲ್ಲದಂಥ ಸರ್ಕಾರಗಳನ್ನು ನಾವು ರಚಿಸಿದ್ದೇವೆ. ಇವತ್ತು ನೀವೂ ನಡೆಸುತ್ತಿದೀರಿ. ನಾನು ಏಕೆ ಈ ಮಾತನ್ನು ಹೇಳುತ್ತಿದ್ದೇನೆಂದರೆ, ಕಾವೇರಿ ನೀರನ್ನು ಉಳಿಸಿಕೊಳ್ಳುವುದಕ್ಕೆ ನಡೆದಿರುವ ಚರ್ಚೆ... ಅಂದರೆ ಈಗಿನ ಮದ್ರಾಸ್‌ನ್ನು ಅಂದು ತಮಿಳುನಾಡು ಎಂದು ಕರೆಯಲಾಗುತ್ತಿತ್ತು. ಅದು ಬ್ರಿಟೀಷರ ಅಧೀನದಲ್ಲಿ ಇತ್ತು. Interference ಅಥವಾ ಅನ್ಯಾಯದ ಪರಂಪರೆಯು ಇವತ್ತು ಪ್ರಾರಂಭವಾಗಿಲ್ಲ, ಒಂದು ದಶಕದ ಹಿಂದೆ ಪ್ರಾರಂಭವಾಗಿಲ್ಲ, ಈ ಅನ್ಯಾಯದ ಪರಂಪರೆಯು ಪ್ರಾರಂಭವಾಗಿ ಒಂದು ಶತಮಾನವೇ ಮುಗಿದುಹೋಗಿದೆ. ಅವತ್ತಿನ Peoples Representative Assembly ಯಿಂದ ಹಿಡಿದು ಇವತ್ತಿನ ಈ ಸದನದಲ್ಲಿ ನಡೆಯುತ್ತಿರತಕ್ಕ ಚರ್ಚೆಯವರೆಗೂ ಸಹ ಎಲ್ಲಾ ವಿಧವಾದಂಥ ಚರ್ಚೆಯು ನಡೆದುಹೋಗಿದೆ. ಅದು ವಿಧಾನಸಭೆಯಲ್ಲಿ, ಹೊರಗಡೆ, ನ್ಯಾಯಾಲಯದಲ್ಲಿ ಮತ್ತು ಸಿಂಪೋಸಿಯಂಗಳಲ್ಲಿ ನಡೆದುಹೋಗಿದೆ. ಆದರೂ ಕೂಡ ಈ ಸಮಸ್ಯೆ ಬಗೆಹರಿದಿಲ್ಲ. ನನಗೆ ಗೊತ್ತಿರುವ ಮಾಹಿತಿಯ ಪ್ರಕಾರ ಇದಕ್ಕೆ ಕಾರಣವೇನೆಂದರೆ ನಮಗೆ ರಾಜಕೀಯ ಇಚ್ಛಾಶಕ್ತಿ ಇಲ್ಲ, ನಮಗೆ ರಾಜಕೀಯ ಇಚ್ಛಾಶಕ್ತಿಯ ಕೊರತೆ ಇದೆ. ಕೃಷ್ಣಾ ಮತ್ತು ಕಾವೇರಿಗಳೆರಡೂ ಸಹ ಈ ರಾಜ್ಯದ ಎರಡು ಕಣ್ಣುಗಳಿದ್ದಂತೆ. ಅವುಗಳಿಂದ ನಾವು ನಿರೀಕ್ಷೆ ಮಾಡಿದ್ದು ಆನಂದಬಾಷ್ಪ ಅವರೆಡರಿಂದ ನಮ್ಮ ಭೂತಾಯಿಯು ಒದ್ದೆಯಾಗಿ ಅದರಿಂದ ಈ ರಾಜ್ಯದ ಎಲ್ಲಾ ಜನರ ಅಭ್ಯುದಯವಾಗಬೇಕಾಗಿತ್ತು.

ಆದರೆ ದುರಾದೃಷ್ಟವಶಾತ್ ಆ ಎರಡು ಕಣ್ಣುಗಳಿಂದ ಆನಂದ ಬಾಷ್ಪದ ಬದಲಾಗಿ ದುಃಖದ ಕಣ್ಣೀರು ಸುರಿಯುತ್ತಿದೆ. ಅದಕ್ಕೆ ಕಾರಣ ಇಲ್ಲಿ ಪ್ರಸ್ತುತವಲ್ಲದಿದ್ದರೂ ಕೂಡ ನಾನು ಪ್ರಸ್ತಾವ ಮಾಡಬೇಕಾಗಿದೆ. ಅದರಲ್ಲಿ ಒಂದು, ಕೃಷ್ಣಾಮೇಲ್ದಂಡೆ ಕೆಲಸವನ್ನು ಮಾಡುವುದು. ಆ ದಂಡೆಯಲ್ಲಿ ರಕ್ತ ಸುರಿಯುತ್ತಿದೆ. ಕಾರಣವೇನೆಂದರೆ, ಎರಡು ಸಾವಿರ ಇಸವಿಯೊಳಗೆ ಆ ಮೂರು ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಗೆ ಅವಶ್ಯಕವಾಗಿ ಬೇಕಾಗಿರುವ ನೀರನ್ನು ಕೊಡತಕ್ಕ ಕೆಲಸವನ್ನು ಸರ್ಕಾರ ಮಾಡಬೇಕಾಗಿದೆ. ಮಾನ್ಯ ಮುಖ್ಯಮಂತ್ರಿಯವರು ಮೊನ್ನೆ ಆ ಭಾಗಕ್ಕೆ ಹೋದಾಗ ಎರಡು ಸಾವಿರ ಇಸವಿಯೊಳಗೆ ನೀರು ಬರುತ್ತದೆ ಎಂದು ಹೇಳಿ ಬರುತ್ತಾರೆ. ಯಾವ ಬಾಯಿಯಲ್ಲಿ ಆ ರೀತಿ ಹೇಳುತ್ತಾರೋ ನನಗಂತೂ ಗೊತ್ತಾಗುವುದಿಲ್ಲ. ಈ ಮುಖ್ಯಮಂತ್ರಿಯಲ್ಲ ಆ ದೇವರೇ ಬಂದರೂ ಸಹ ಎರಡು ಸಾವಿರ ಇಸವಿಯೊಳಗಾಗಿ ಆ ಭಾಗಕ್ಕೆ ನೀರನ್ನು ಕೊಡಲು ಸಾಧ್ಯವಾಗುವುದಿಲ್ಲ. ನಾನೇ ಮುಖ್ಯಮಂತ್ರಿಯಾದರೂ ಕೂಡ ಅಥವಾ ಬೇರೆ ಯಾರೇ ಮುಖ್ಯಮಂತ್ರಿಯಾದರೂ ಕೂಡ ಆ ಕೆಲಸವನ್ನು ಮಾಡಲು ಸಾಧ್ಯವಾಗುವುದಿಲ್ಲ. ಈ ಸತ್ಯ ಸೂರ್ಯ ಚಂದ್ರರ ಬೆಳಕಿನಷ್ಟೇ ಸತ್ಯವಾಗಿದ್ದರೂ ಸಹ, ಸ್ಪಷ್ಟವಾಗಿದ್ದರೂ ಸಹ ಆ ರೀತಿ ಹುಸಿ ಸುಳ್ಳನ್ನು ಏಕೆ ಹೇಳಿ ಜನರನ್ನು ಮೋಸ ಮಾಡುತ್ತಾರೋ ನನಗೆ ಅರ್ಥವಾಗುತ್ತಿಲ್ಲ. ಎರಡು ಸಾವಿರ ಇಸವಿಯೊಳಗೆ ನೀರನ್ನು ಉಪಯೋಗ ಮಾಡಿಕೊಳ್ಳಲು ಸಾಧ್ಯವಿಲ್ಲ ಎನ್ನತಕ್ಕ ನಿತ್ಯ ಸತ್ಯವನ್ನು ಕಂಡಿದ್ದರೂ ಸಹ ಅದಕ್ಕೆ ಬದಲಾಗಿ, ಅದಕ್ಕೆ ಪರ್ಯಾಯವಾಗಿ ಒಂದು ದಾರಿಯನ್ನು ನಾವುಗಳು ಕಂಡುಕೊಳ್ಳಬೇಕಾಗಿದೆ. ನಮ್ಮ ವಿರೋಧ ಪಕ್ಷದ ನಾಯಕರ ಸಭೆಯನ್ನು ಕರೆದಾಗ ಮುಖ್ಯಮಂತ್ರಿಯವರು ಎರಡು ಸಾವಿರ ಇಸವಿಯೊಳಗೆ ನೀರನ್ನು ಸಂಪೂರ್ಣವಾಗಿ ಉಪಯೊಗ ಮಾಡಿಕೊಳ್ಳಲು ಸಾಧ್ಯವಾಗದಿದ್ದರೂ ಕೂಡ, 'ಬಚಾವತ್ ತೀರ್ಮಾನ' ಪ್ರಕಾರ ನಮ್ಮ ನೀರಿನ ಹಕ್ಕನ್ನು ನಾವು ಉಳಿಸಿಕೊಳ್ಳಬಹುದು ಎಂದು ಹೇಳಿದರು. I am exteremely sorry. ಇದನ್ನು ಮುಖ್ಯಮಂತ್ರಿಯವರ ದಡ್ಡತನವೆಂದು ಭಾವಿಸುವುದಿಲ್ಲ. Because he himself is an advocate I know. ಮಾನ್ಯ ಯಡಿಯೂರಪ್ಪನವರು ಹೇಳಿದಂತೆ ಇದು ಒಂದು ದೊಂಬರಾಟವಾಡಿದಂತೆ ಆಗಿದೆ. ಎರಡು ಸಾವಿರ ಇಸವಿಯೊಳಗೆ ನೀರನ್ನು ಉಪಯೋಗ ಮಾಡಿಕೊಳ್ಳಲು ಆಗುವುದಿಲ್ಲವೆಂದು ಇವರಿಗೆ ಗೊತ್ತಿದೆ. ಆ ಸಂದರ್ಭದಲ್ಲಿ ಇದಕ್ಕೆ ಪರ್ಯಾಯವಾದ ವ್ಯವಸ್ಥೆ ಏನು ಮಾಡಬೇಕು? ಇದಕ್ಕೆ ಸಂಪೂರ್ಣವಾಗಿ ಏನು ಚಿಂತನೆ ಮಾಡಬೇಕು? ಎಂದು ಕೇಳಿದಾಗ ಅವರು, ಇಲ್ಲಾ ಇಲ್ಲ ಎರಡು ಸಾವಿರ ಇಸವಿಯೊಳಗೆ ನೀರನ್ನು ಉಪಯೋಗಿಸಿಕೊಳ್ಳಲು ಆಗದಿದ್ದರೂ ಸಹ, ನಮ್ಮ ನೀರಿನ ಹಕ್ಕು ಹೋಗುವುದಿಲ್ಲ ಎಂದು ಹೇಳಿದರು. If ths Government do not make use of the water before 2000 AD wheter the right will be extingushed or not, may I request the Hon'ble Chief Minister to get the opinion from the Law Department? I know, B.V. Acharya is one of my good friends. Let me say about it. I argue and I tell firmly that our right will be extinguished if we do not use the water before 2000. If my opinion is contradicated by your Law Department, Iam going to resign from this House.

ನಾನು ಮಾನ್ಯ ಮುಖ್ಯಮಂತ್ರಿಗಳಲ್ಲಿ ಮತ್ತು ಮಾನ್ಯ ಉಪಮುಖ್ಯಮಂತ್ರಿಗಳಾದ ಎಸ್.ಎಂ. ಕೃಷ್ಣರವರಲ್ಲಿ ಕೇಳಿಕೊಳ್ಳುವುದೇನೆಂದರೆ, ಎರಡು ಸಾವಿರ ಇಸವಿಯೊಳಗೆ ನಮ್ಮ ಕರ್ನಾಟಕ ರಾಜ್ಯ ತನ್ನ ಪಾಲಿನ ನೀರನ್ನು ಉಪಯೋಗ ಮಾಡಿಕೊಳ್ಳದಿದ್ದರೆ ನಮಗೆ ಇರತಕ್ಕ ನೀರಿನ ಹಕ್ಕು

ನಾಶವಾಗುತ್ತದೆ, ನಶಿಸಿಹೋಗುತ್ತದೆ ಎಂದು. ಇದು ನನ್ನ ಅಭಿಪ್ರಾಯ. ಇದಕ್ಕೆ ವಿಭಿನ್ನವಾದ ಅಭಿಪ್ರಾಯವನ್ನು ನಿಮ್ಮ ಅಡ್ವೋಕೇಟ್ ಜನರಲ್ ಕೊಡುವುದಾದರೆ, ನಿಮ್ಮ ಕಾನೂನಿನ ತಜ್ಞರು ಕೊಡುವುದಾದರೆ, ನಾನು ಈ ಸದನದ ಸದಸ್ಯತ್ವಕ್ಕೆ ರಾಜೀನಾಮೆಯನ್ನು ಕೊಡುತ್ತೇನೆ. ತಾವು ಆ ರಿಪೋರ್ಟ್‌ನ್ನು ಪರಿಶೀಲನೆ ಮಾಡಿ ನಂತರ ಹೇಳಿ. ಮಾನ್ಯ ಯಡಿಯೂರಪ್ಪನವರು ಹೇಳಿದಂತೆ ಈ ರೀತಿಯಾದ ನಿತ್ಯ ಸತ್ಯವಾದ ಮಾತು ನಮ್ಮ ಕಣ್ಣು ಮುಂದೆ ಇದ್ದರೂ ಕೂಡ ಕೃಷ್ಣಾ, ಕಾವೇರಿಯ ನೀರಿನ ಬಗ್ಗೆ ಡೊಂಬರಾಟ ಆಡುತ್ತಿದ್ದಾರೆ. ಎರಡು ಸಾವಿರ ಇಸವಿಯೊಳಗೆ ನೀರನ್ನು ಉಪಯೋಗ ಮಾಡಲು ಸಾಧ್ಯವಿಲ್ಲ. ೨೦೦೦ದ ಇಸವಿಯಲ್ಲಿ ನೀರು ಕೊಡಲಿಕ್ಕೆ ಸಾಧ್ಯವಿಲ್ಲದೇ ಇರುವಂತಹ ಪರಿಸ್ಥಿತಿಯನ್ನು ಒಪ್ಪಿಕೊಂಡು, ಅದಕ್ಕೆ ಪರ್ಯಾಯವಾದ ವ್ಯವಸ್ಥೆಯನ್ನು ಮಾಡುವ ಚಿಂತನೆಯನ್ನು ಸರ್ಕಾರ ಮಾಡಬೇಕು. ಈ ಮೂರು ಜಿಲ್ಲೆಯ ಅಭ್ಯುದಯದ ದೃಷ್ಟಿಯಿಂದ ನಾನು ತಮ್ಮಲ್ಲಿ ಪ್ರಾರ್ಥನೆ ಮಾಡುತ್ತಿದ್ದೇನೆ. ಕೃಷ್ಣಾ ನದಿ ನೀರಿನ ಬವಣೆ ಇದಾದರೆ, ಕಾವೇರಿ ನೀರಿನ ಬವಣೆ ಇದಕ್ಕಿಂತ ವಿಭಿನ್ನವಾದುದೇನೂ ಅಲ್ಲ. ಕಾವೇರಿ ನೀರಿನ ಹಕ್ಕನ್ನು ಉಳಿಸಿಕೊಳ್ಳುವುದಕ್ಕೆ ನಾವು ಮಾಡುವಂತಹ ಎಲ್ಲಾ ಪ್ರಯತ್ನದಲ್ಲೂ ಕೂಡ ತಮಿಳುನಾಡಿನವರು ನಮಗೆ ಕೊಟ್ಟಿರುವಂತಹ ತೊಂದರೆಯ, ಕಿರುಕುಳದ ಕಥೆಯನ್ನು ನೆನೆಸಿಕೊಳ್ಳಬೇಕಾಗುತ್ತದೆ. ೧೯೧೧ನೇ ಇಸವಿಯಲ್ಲಿ ಕೃಷ್ಣರಾಜ ಸಾಗರದ ಕೆಲಸ ಪ್ರಾರಂಭವಾದಾಗಲೇ ಇದು ಶುರುವಾಯಿತು. ೧೯೧೧ರಲ್ಲಿ ಮೊದಲು ಏನು ಕೆಲಸ ನಡೆಯಿತು ಅದಕ್ಕೂ ಕೂಡ ಅಡ್ಡಿ ಬಂದರು. ಅದನ್ನು ಬಗೆಹರಿಸಿ ೧೯೩೨ಕ್ಕೆ ಅದರ ಕೆಲಸ ಮುಗಿಸಲಾಯಿತು. ಆಗಲೂ ಕೂಡ ತಮಿಳುನಾಡಿನವರು ತೊಂದರೆ ಕೊಟ್ಟರು. ಹೇಮಾವತಿ ಕೆಲಸ ತೆಗೆದುಕೊಂಡಾಗ ಕೂಡ ತೊಂದರೆಯಾಯಿತು. ಮೊನ್ನೆ ಪ್ರಜಾವಾಣಿಯಲ್ಲಿ ೨೫ ವರ್ಷಗಳ ಹಿಂದೆ ಎಂದು ಒಂದು ಬಾಕ್ಸ್ ಐಟಂನಲ್ಲಿ ಬಂದಿತ್ತು. ಆಗಲೂ ತಮಿಳುನಾಡು ಸರ್ಕಾರದವರು ದೂರು ಕೊಡುತ್ತಾರೆ. ಕೇಂದ್ರ ಸರ್ಕಾರದವರು ಹೇಮಾವತಿ ಬಗ್ಗೆ ಬಗೆಹರಿಸಬೇಕು ಎಂದು. ಆಗಲೂ ತಮಿಳುನಾಡಿನವರು ತೊಂದರೆ ಕೊಟ್ಟರು. ಆದರೆ ಅದನ್ನು ಬಗೆಹರಿಸಿದರು. ಅವತ್ತು ಅಧಿಕಾರದಲ್ಲಿದ್ದ ಮಂತ್ರಿ ಮಂಡಲವನ್ನು ಮುಖ್ಯಮಂತ್ರಿಗಳನ್ನು ಅಭಿನಂದಿಸುತ್ತೇನೆ. ಕೇಂದ್ರ ಸರ್ಕಾರ ಹಣವಿಲ್ಲವೆಂದು ಹೇಳಿದಾಗ, ಆ ಕೆಲಸವನ್ನು ಮೊದಲು ಆರಂಭ ಮಾಡಿ ಈ ರಾಜ್ಯದ ಜನರಿಗೆ ನೀರು ಕೊಡುವ ಪ್ರಯತ್ನ ಮಾಡಿದ್ದು ಒಂದು ದೊಡ್ಡ ಕೆಲಸವಾಗಿದೆ. ನನ್ನ ಮಾತನ್ನು ಶುರು ಮಾಡುವಾಗ ನೀರಿನ ಹಕ್ಕನ್ನು ಉಳಿಸಿಕೊಳ್ಳುವುದರಲ್ಲಿ ನಮ್ಮದು ಒಂದು ಅನ್ಯಾಯದ ಪರಂಪರೆ ಎಂದು ಹೇಳಿದ್ದೆ. ಆ ಅನ್ಯಾಯದ ಪರಂಪರೆಯನ್ನು ಈಗಿನ ಸರ್ಕಾರವೂ ಕೂಡ ಅನೂಚಾನವಾಗಿ ಮುಂದುವರಿಸಿಕೊಂಡು ಹೋಗುತ್ತಿದೆ ಎಂಬ ಮಾತನ್ನು ಹೇಳುತ್ತೇನೆ. ಈ ನೀರಿನ ಹಂಚಿಕೆ ಬಗ್ಗೆ ಇರುವಂತಹ ವಿವಾದವೇನಿದೆ. ಈ ವಿವಾದವನ್ನು ಬಗೆಹರಿಸಬೇಕು ಎನ್ನುವ ವಿಷಯದಲ್ಲಿ ತಮಿಳುನಾಡಿನ ಸರ್ಕಾರ ಒಂದೇ ಅಲ್ಲ. ಆ ರೈತರು ಈ ರಾಷ್ಟ್ರದ ಉಚ್ಚ ನ್ಯಾಯಾಲಯದಲ್ಲಿ ಏನು ವಾದವನ್ನು ಹೂಡುತ್ತಾರೆ ಎಂದರೆ, ಕರ್ನಾಟಕ ರಾಜ್ಯಕ್ಕೆ ನೀವು ನಿರ್ದೇಶನ ಕೊಡಿ ಇಂತಿಷ್ಟು ನೀರನ್ನು ಬಿಟ್ಟುಕೊಡಬೇಕು ಎಂದು. ತೀರ್ಮಾನ ಮಾಡಲಿಕ್ಕೆ ನಿರ್ದೇಶನ ಕೊಡಿ ಎಂದು ವಾದವನ್ನು ಹೂಡುತ್ತಾರೆ. ಇದನ್ನಾಧರಿಸಿ ಉಚ್ಚ ನ್ಯಾಯಾಲಯ ಕೇಂದ್ರ ಸರ್ಕಾರಕ್ಕೆ ನಿರ್ದೇಶನ ಕೊಡುತ್ತದೆ. ಈ ವಿಷಯವನ್ನು, ಈ ವಾದವನ್ನು ತೀರ್ಮಾನ ಮಾಡಲಿಕ್ಕೆ ನೀವು ಒಂದು ಟ್ರಿಬ್ಯುನಲ್ ಅನ್ನು ಕಾನ್‌ಸ್ಟಿಟ್ಯೂಟ್ ಮಾಡಿ, ಒಂದು ಆಯೋಗ ರಚಿಸಿ ಎಂದು. ಅದರ ಆಧಾರದ ಮೇಲೆ ಆಯೋಗ ರಚನೆಯಾಗುತ್ತದೆ. ಮೊನ್ನೆ ಸುಪ್ರೀಂ ಕೋರ್ಟ್‌ನಲ್ಲಿ ಒಂದು ತೀರ್ಮಾನ ಕೊಟ್ಟಿದ್ದಾರೆ.

ಕರ್ನಾಟಕ ರಾಜ್ಯದ ರೈತರು ಈ ವಿವಾದದಲ್ಲಿ ನಮ್ಮನ್ನೂ ಕೂಡ ಭಾಗಿಯಾಗಿ ಮಾಡಿಕೊಳ್ಳಬೇಕು ಎಂದು ಹೇಳಿದ್ದಾರೆ.

We should be implied as a party.

ಆಗ ಪಿಟಿಷನ್ ಹಾಕಿದ್ದರು. ಅದನ್ನು ಸುಪ್ರೀಂ ಕೋರ್ಟ್ ವಜಾ ಮಾಡಿದೆ. ನನಗೆ ಇದು ಅರ್ಥವಾಗುವುದಿಲ್ಲ. I do not mind even if there is a contempt of Court.

ಸುಪ್ರೀಂ ಕೋರ್ಟಿನವರು ನ್ಯಾಯ ಕೊಡುವುದಕ್ಕೆ ಕೂತಿದ್ದಾರೋ ಅಥವಾ ಅನ್ಯಾಯ ಮಾಡುವುದಕ್ಕೆ ಕೂತಿದ್ದಾರೋ ನನಗೆ ಅರ್ಥವಾಗುವುದಿಲ್ಲ. ಕರ್ನಾಟಕ ರಾಜ್ಯದ ರೈತರು ಹಾಕಿದಂತಹ ಪಿಟಿಷನ್ ಏನು ಇದೆ, ಅದು ಮೈನ್‌ಟೆನಬಲ್ ಅಲ್ಲ. ಅದು ಊರ್ಜಿತವಾಗುವುದಿಲ್ಲವೆನ್ನುವ ತೀರ್ಮಾನವನ್ನು ಕೊಟ್ಟಿದ್ದಾರೆ. Then, how can they maintain the petitions filed by the farmers of Tamil Nadu?

ತಮಿಳು ನಾಡಿನ ರೈತರು ಹಾಕಿದಂತಹ ಅರ್ಜಿ ಊರ್ಜಿತವಾಗುವುದಾದರೆ, ತಮಿಳುನಾಡಿನವರು ಹಾಕಿದಂತಹ ಅರ್ಜಿ ಏನು ಇದೆ ಅದಕ್ಕೆ ಜ್ಯೂರಿಸ್‌ಡಿಕ್ಷನ್ ಇದೆ ಎಂದು ಸುಪ್ರೀಂ ಕೋರ್ಟ್ ಭಾವಿಸುವುದಾದರೆ ಕರ್ನಾಟಕ ರಾಜ್ಯದ ರೈತರು ಕೊಟ್ಟಂತಹ ಅರ್ಜಿಯನ್ನು ಪುರಸ್ಕರಿಸಲಿಕ್ಕೆ ಇವತ್ತು ಅಡ್ಡಿ ಯಾವುದು ಇದೆ? I do not know Where we are sailing? ತಮಿಳುನಾಡಿನ ರೈತರು ಅರ್ಜಿ ಹಾಕಿದಂತಹ ಆಧಾರದ ಮೇಲೆ ಇದೆಲ್ಲವೂ ನಡೆಯುತ್ತಿದೆ. ಆದರೆ ಅದೇ ಕರ್ನಾಟಕ ರಾಜ್ಯದ ರೈತರು ಹಾಕಿದಂತಹ ಅರ್ಜಿಯನ್ನು ತಿರಸ್ಕಾರ ಮಾಡುತ್ತಾರೆ. It is not maintainable.

ಆರ್ಡರ್ ಕಾಪಿ ನನ್ನ ಹತ್ತಿರ ಇಲ್ಲ. ಅದು ನನಗೆ ಗೊತ್ತಿಲ್ಲ. I do not know what is the basis for their view or for their decision? ಈ ರಾಜ್ಯದ ಕಾವೇರಿ ನದಿಯ ಆ ಪಕ್ಕದಲ್ಲಿರುವವರಿಗೆ ಆ ಪಾತ್ರದಲ್ಲಿರುವ ಜನರಿಗಾಗಿರುವಂತಹ ಅನ್ಯಾಯದ ಪರಂಪರೆಯಲ್ಲಿ, ದ್ರೋಹದ ಹಿನ್ನೆಲೆಯಲ್ಲಿ, ಕೇವಲ ರಾಜ್ಯ ಸರ್ಕಾರಗಳ ಪಾತ್ರ ಅಷ್ಟೇ ಅಲ್ಲ, ಕೇವಲ ರಾಜಕಾರಣಿಗಳ ಪಾತ್ರವಷ್ಟೇ ಅಲ್ಲ, ಇದರಲ್ಲಿ ಕಾನೂನು ಪಂಡಿತರ ಪಾತ್ರವೂ ಇದೆ. ನ್ಯಾಯವನ್ನು ನೀಡಬೇಕಾದ ನ್ಯಾಯ ದೇಗುಲಗಳಾದ ನ್ಯಾಯಾಲಯಗಳ ಪಾತ್ರವೂ ಇದೆ. ಮತ್ತೊಂದು ವಿಷಯವನ್ನು ನಾನು ಹೇಳಬೇಕಾಗುತ್ತದೆ. ಆದರೆ ಮಾನ್ಯ ಕಾನೂನು ಮಂತ್ರಿಗಳು ಎಲ್ಲೋ ಹೊರಟುಹೋಗಿದ್ದಾರೆ. ಅವರು ಒಳಗಡೆ ಬರುವಾಗ ಮಹಾತ್ಮಾ ಗಾಂಧೀಜಿಯವರ ರೀತಿ ಬರುತ್ತಾರೆ. ಈ ರೂಪದಲ್ಲಾದರೂ ಮಹಾತ್ಮಾ ಗಾಂಧಿಯವರನ್ನು ನಾವು ನೋಡುತ್ತಿದ್ದೇವೆಂದು ನಮಗೆ ಒಂದು ರೀತಿಯ ಖುಷಿ ಆಯಿತು. ಮೊನ್ನೆ ಅವರು ಏನೆಂದು ಅಪ್ಪಣೆಯನ್ನು ಕೊಡಿಸಿದ್ದಾರೆ ಎಂಬುದನ್ನು ತಾವು ಕೇಳಬೇಕು. ಸುಪ್ರೀಂ ಕೋರ್ಟ್‌ನವರು ಈ ಅರ್ಜಿಯನ್ನು ತೀರ್ಮಾನ ಮಾಡುವ ಸಂದರ್ಭದಲ್ಲಿ ರಾಜ್ಯ ಸರ್ಕಾರದ ಪ್ರತಿನಿಧಿಗಳು ಯಾರೂ ಕೂಡ ಕೋರ್ಟ್‌ನಲ್ಲಿ ಇರಲಿಲ್ಲ. ಅದಕ್ಕೆ ಅವರು ಹೇಳುತ್ತಾರೆ ನಾವು ಹೇಗೆ ಇರುವುದಕ್ಕಾಗುತ್ತದೆ ನಮಗೆ ನೋಟಿಸ್ ಬಂದಿರಲಿಲ್ಲ. ಆದ್ದರಿಂದ ನಾವು ಅಲ್ಲಿ ಹೇಗೆ ಇರುವುದಕ್ಕೆ ಸಾಧ್ಯವಾಗುತ್ತದೆ ಎಂದು ಕಾನೂನು ಮಂತ್ರಿಗಳಾದ ಮಾನ್ಯ ರಾಮಸ್ವಾಮಿಯವರು ಪತ್ರಿಕಾ ಹೇಳಿಕೆಯನ್ನು ಕೊಟ್ಟಿದ್ದಾರೆ. ನಾನಾದರೂ ಹೇಳುತ್ತೇನೆ ಇದು ಬಹಳ ಸಿಲ್ಲಿ ಎಂದು. ಈ ರಾಜ್ಯದ ಲಕ್ಷಾಂತರ ಜನರ ಬದುಕಿನ ಬವಣೆಯ ವಿಷಯ ಕೋರ್ಟಿನ ಮುಂದಿದೆ. ಆ ದಿನ ಕೋರ್ಟ್‌ನಲ್ಲಿ ಕೇಸು ಇದೆ ಎಂಬುದು ಈ ಸರ್ಕಾರಕ್ಕೆ

ಗೊತ್ತಿದೆ. ಈ ಸರ್ಕಾರದ ಪ್ರತಿನಿಧಿಗಳಿಗೆ ಗೊತ್ತಿದೆ. ಅಷ್ಟೇ ಅಲ್ಲ ಈ ಸರ್ಕಾರದ ವಕೀಲರಿಗೂ ಕೂಡ ಗೊತ್ತಿದೆ. What was the necessity to issue notice? It is not a small matter?

ಇದು ಅತ್ಯಂತ ಗಂಭೀರವಾದ ವಿಷಯ. ಈ ರಾಜ್ಯದ ಹಿತಾಸಕ್ತಿಯನ್ನು ಕಾಪಾಡುವಂಥ ವಿಷಯ ಕೋರ್ಟಿನ ಮುಂದೆ ಬರುತ್ತಿರುವಾಗ ಇದಕ್ಕೆ ನೋಟೀಸ್ ಕೊಡುವ ಅವಶ್ಯಕತೆಯಾದರೂ ಏನಿದೆ? ಅಂಥ ಅವಶ್ಯಕತೆ ಇರಲಿಲ್ಲ. ಸರ್ಕಾರದ ಬೊಕ್ಕಸದಿಂದ ಹಣ ತೆಗೆದುಕೊಳ್ಳುವ ಸರ್ಕಾರೀ ವಕೀಲರು ಇದನ್ನು ಕಾಯ್ದುಕೊಂಡು ಅಲ್ಲಿ ಬಿದ್ದಿರಬೇಕಾಗಿತ್ತು. ನೀವು ಕೋರ್ಟ್ ಪ್ರೊಸೀಡಿಂಗ್ಸನ್ನು ವಾಚ್ ಮಾಡಬೇಕಾಗಿತ್ತು. ನಾನು ತಮ್ಮಲ್ಲಿ ಅತ್ಯಂತ ವಿನಯದಿಂದ ಪ್ರಾರ್ಥಿಸಿಕೊಳ್ಳುತ್ತೇನೆ.

ಮಾನ್ಯ ಅಧ್ಯಕ್ಷರೇ, ನಮ್ಮ ವಿಫಲತೆ ಕೇವಲ ಒಂದು ಕ್ಷೇತ್ರದಲ್ಲಿ ಅಲ್ಲ, ಕೇಸನ್ನು ನಡೆಸುವುದರಲ್ಲೂ ಇದೆ. ಇಚ್ಛಾಶಕ್ತಿಯನ್ನು ಪ್ರದರ್ಶನ ಮಾಡುವುದರಲ್ಲೂ ಇದೆ. ಇದು ಒಂದು ಉದಾಹರಣೆ. ಇನ್ನು ನಮ್ಮ ಸರ್ವೋಚ್ಚ ನ್ಯಾಯಾಲಯದಲ್ಲಿ ಕೂತಿರುವವರು ಮತ್ತೊಂದು ವಿಷಯವನ್ನು ಪ್ರಸ್ತಾಪ ಮಾಡಿದ್ದಾರೆ. ಅದೇನೆಂದರೆ, ಸೆಕ್ಷನ್ ೪ of the Interstate Dispute Act, 3 and 4 ಯಾವಾಗ ಅಡ್ಜುಡಿಕೇಷನ್‌ಗೆ ಕಳುಹಿಸಬಹುದು ಎಂಬುದನ್ನು ಪ್ರಸ್ತಾಪ ಮಾಡುವಾಗ Under Section 4, When there is a dispute between the two States, the aggrieved State can approach the Supreme Court for a direction. That is under.... ತಾವು ವಕೀಲರಾಗಿರುವುದರಿಂದ ಇದರ ಬಗ್ಗೆ ನಾನು ಹೆಚ್ಚು ಪ್ರಸ್ತಾಪ ಮಾಡುವುದಕ್ಕೆ ಹೋಗುವುದಿಲ್ಲ. If you read Section 3 and 4, it is clear, if the dispute arises between the two States, ಆದರೆ, ಪರಿಸ್ಥಿತಿ ಇಲ್ಲಿ ಆ ರೀತಿ ಇಲ್ಲ. ಇಲ್ಲಿ ಈ ವಿವಾದವನ್ನು ಕೋರ್ಟಿನ ಮುಂದೆ ತಂದಿರುವವರು ತಮಿಳುನಾಡಿನ ರೈತರು. ತಮಿಳ್ನಾಡು ಸರ್ಕಾರ ಇದನ್ನು ತಂದಿಲ್ಲ. Then, how the supreme court have assumed the jurisdiction to decide a dispute between the farmers of Tamil Nadu and the Karntaka Government.

ನಾವು ನೀವೆಲ್ಲ ಇಲ್ಲಿ ಸಣ್ಣಪುಟ್ಟ ಕೋರ್ಟ್‌ಗಳಲ್ಲಿ ವಕೀಲಿ ವೃತ್ತಿ ಮಾಡುತ್ತಿರುವವರು. ಆದರೆ ಅಲ್ಲಿ ದೊಡ್ಡ ದೊಡ್ಡವರು ಎಂದರೆ ನಾರಿಮನ್ ಮುಂತಾದವರನ್ನು ಅವರು ಇಟ್ಟುಕೊಂಡಿದ್ದಾರೆ. ಅವರು ಈ ವಾದವನ್ನು ಮಾಡಿದ್ದಾರೋ ಇಲ್ಲವೋ ಗೊತ್ತಿಲ್ಲ. ಈ ವಾದವನ್ನು ಕೋರ್ಟ್‌ನವರು ಎಷ್ಟರಮಟ್ಟಿಗೆ ಅರ್ಥ ಮಾಡಿಕೊಂಡಿದ್ದಾರೋ ಅಥವಾ impled ಮಾಡಿದ್ದಾರೋ ನನಗೆ ಗೊತ್ತಿಲ್ಲ. If Section 3 and 4 laid down that it is only a dispute between the two states, in that dspute if the aggrived State can approach the Supreme court, it is only then, they can decide. It is only then they will get the jurisdiction. But, in this case, the one party is the farmers of Tamil Nadu, the aggrieved party is Tamil Nadu farmers and against whom they are coming is the Karnataka government. How can they decide this matter under Section 3 and 4?

ಇದರ ಬಗ್ಗೆ ಕೂಡ ಮಾನ್ಯ ಕಾನೂನುಮಂತ್ರಿಗಳು ಸ್ವಲ್ಪಮಟ್ಟಿಗೆ ಬೆಳಕನ್ನು ಚೆಲ್ಲುವುದಾದರೆ ಬಹಳ ಒಳ್ಳೆಯದಾಗುತ್ತದೆ. ಆದರೆ ಮಾನ್ಯ ಕಾನೂನು ಮಂತ್ರಿಗಳು ಹೊರಟು ಹೋಗುತ್ತಿದ್ದಾರೆ. ಸ್ವಲ್ಪ ಹೊತ್ತು ಮಾನ್ಯ ಕಾನೂನು ಮಂತ್ರಿಗಳು ಸದನದಲ್ಲಿದ್ದರೆ ಒಳ್ಳೆಯದೆಂದು ನನ್ನ ಅಭಿಪ್ರಾಯ. ನೀವು ಇದ್ದರೆ ನನಗೆ ಸ್ವಲ್ಪ ಇನ್‌ಸ್ಪಿರೇಷನ್ ಬರುತ್ತದೆ.

ನಾನು ಇನ್ನೂ ನೀರಾವರಿಗೆ ಬಂದೇ ಇಲ್ಲ. ಇನ್ನೂ ನಾನು ಕೋರ್ಟ್ ವಿಚಾರದಲ್ಲೇ ಇದ್ದೇನೆ.

ಮಾನ್ಯ ಅಧ್ಯಕ್ಷರೇ, ಶ್ರೀಮಾನ್ ಚಂದ್ರೇಗೌಡರು ಇದಕ್ಕೆ ಪರಿಹಾರ ಏನು, ಅದು ಕನ್‌ಟೆಮ್ಟ್ ಆಫ್ ಕೋರ್ಟ್ ಆಗುತ್ತೋ, ಜೈಲಿಗೆ ಕಳುಹಿಸುತ್ತಾರೋ ಎಂದೆಲ್ಲಾ ಅನುಮಾನ ವ್ಯಕ್ತಪಡಿಸಿದರು. ಪರವಾಗಿಲ್ಲ. I will also join my friends to condemn this judgement to say that it is wrong.

ಅವರು ಇದಕ್ಕೆ ರೆಮಿಡಿ ಏನು ಎಂದು ಕೇಳುತ್ತಿದ್ದಾರೆ. ನನಗೆ ಅದಕ್ಕೆ ಕಾಣುವುದು ಒಂದೇ ದಾರಿ. ಕರ್ನಾಟಕ ಸರ್ಕಾರಕ್ಕೆ, ಕರ್ನಾಟಕ ಜನತೆಗೆ ಗಂಡಸುತನ ಬೇಕು, ಅದೊಂದೆ ದಾರಿ. We should reject the judgement. We should reject the decision and we should say that we are entitled to make use of water.

ಅದನ್ನು ಮಾಡುವುದುಕ್ಕೆ ರಾಜಕೀಯ ಇಚ್ಛಾಶಕ್ತಿ ಬೇಕು.

ಸನ್ಮಾನ್ಯ ಅಧ್ಯಕ್ಷರೇ, ನಾನು ಅದೇ ಮಾತು ಹೇಳೋದು. ಅವರು ನಯವಾಗಿ ಹೇಳಿದರು, ನಾನು ಅದನ್ನು ಒರಟಾಗಿ ಹೇಳಿದೆ. ಈ ರಾಷ್ಟ್ರದ ಅತ್ಯಂತ ಎತ್ತರದಲ್ಲಿ ಕುಳಿತಿರುವಂತಹ ಜನಗಳು ತಪ್ಪು ಮಾಡಿದಾಗ, ನ್ಯಾಯವನ್ನು ಕೊಡಬೇಕಾದವರು, ಅನ್ಯಾಯ ಮಾಡಿದಾಗ, ವಿವೇಕದ ದಾರಿಯಲ್ಲಿ ನಡೆಯಬೇಕಾದವರು ಅವಿವೇಕದ ದಾರಿಯಲ್ಲಿ ಹೋದಾಗ, ಜನತೆಗೆ ಇರುವುದು ಒಂದೇ ಒಂದು ದಾರಿ, ಅದು ಆ ಕಾನೂನನ್ನು ತುಚ್ಛವಾಗಿ ಕಾಣುವಂತಾದ್ದು. There is no alternative for us.

ಮಾಜಿ ನೀರಾವರಿ ಸಚಿವರು ಅಪ್ಪಣೆ ಕೊಡಿಸಿದರೂ ಕೂಡ ಸೆಕ್ಷನ್ ೪ ಇದಕ್ಕೆ ಅಪ್ಲೈ ಆಗುವುದಿಲ್ಲ. ಏಕೆಂದರೆ ತಾವು ವಕೀಲರಾಗಿರುವುದರಿಂದ ನಾನು ಅದನ್ನು ಓದಿಯೇ ಬಿಡುತ್ತೇನೆ. ಇದಕ್ಕೆ ತಾವು ಸಮಯ ಕೊಡಬೇಕಾಗುತ್ತದೆ. ಇದು ಇವತ್ತು ಮುಗಿಯುವುದಿಲ್ಲ, ಇವತ್ತೆಲ್ಲ ಇದರ ಬಗ್ಗೆ ನಾನೇ ಮಾತನಾಡುತ್ತೇನೆ. ನಾನು ಇದನ್ನು ಓದಿದ ಮೇಲೆ ಬೇಕಾದರೆ ನೀವು ನೋಡಿ.

Sectin - 3 of the inter-state water disputes Act, 1956 reads thus:

"It appears to the Government of any State that water dispute with the Government of ther state has arisen or is likely to arise by a reason of the fact that the interest of the state or any of the inhabitants thereof in the waters of the inter-state River Dispute Valley have been affected or likely to be affected prejudicially."

Therefore, it is only in respect of the state.

ಒಂದು ಇಲ್ಲಿರುವಂತಹ ವ್ಯಾಜ್ಯ ತಮಿಳುನಾಡಿನ ರೈತರಿಗೆ ಮತ್ತು ಕರ್ನಾಟಕದ ಸರ್ಕಾರಕ್ಕೆ ಸೇರಿದ್ದು. ಎರಡನೆಯದು ತಮಿಳುನಾಡಿನ ರೈತರ ಹಿತಾಸಕ್ತಿಯನ್ನು ಕಾಪಾಡುವಂತಹ ಜೂರಿಸ್‌ಡಿಕ್ಷನ್ ಸುಪ್ರೀಂ ಕೋರ್ಟಿಗೆ ಬರುವುದಾದರೆ, ಕರ್ನಾಟಕದ ರಾಜ್ಯದ ರೈತರ ಹಿತಾಸಕ್ತಿಯನ್ನು ಕಾಪಾಡುವಂತಹ ಜೂರಿಸ್‌ಡಿಕ್ಷನ್ ಇಲ್ಲಿ ಏಕೆ ಬರುವುದಿಲ್ಲ? ಮೂರನೆಯದು: I am not reviewing the judgement, But as an Advocate of very ordinary standar. I read the judgement carefully. Even factually also.

ಈ ಜಡ್ಜ್‌ಮೆಂಟ್‌ನಲ್ಲಿ ನಾನು ನ್ಯೂನ್ಯತೆಯನ್ನು ಕಂಡೆ, ಅದು ಏನೆಂದರೆ ಅವರು ಜಡ್ಜ್‌ಮೆಂಟ್ ಬರೆಯುತ್ತಾ ಒಂದು ಮಾತನ್ನು ಹೇಳುತ್ತಾರೆ.

"There was a time after te dispute arose when the Government in the state of karnataka and Tamilnadu as also at the Centre were run by one common political party."

What a piety?

ಸುಪ್ರೀಂ ಕೋರ್ಟ್‌ನಲ್ಲಿ ಕುಳಿತುಕೊಂಡು ಇಂತಹ ಮಹತ್ತರವಾದಂತಹ ವಾದ ವಿವಾದಗಳನ್ನು ಕೇಳಿ ತೀರ್ಮಾನ ಕೊಡುವಂತಹ ನ್ಯಾಯಾಧೀಶರುಗಳಿಗೆ ಇಂತಹ ಒಂದು ಸಣ್ಣ ವಿಷಯವೂ ಕೂಡ ಗೊತ್ತಾಗುವುದಿಲ್ಲವೇ? ೨೦ ವರುಷದ ಕರ್ನಾಟಕದಲ್ಲಿ, ತಮಿಳುನಾಡಿನಲ್ಲಿ, ಕೇಂದ್ರದಲ್ಲಿ ಒಂದೇ ಪಕ್ಷದ ಸರ್ಕಾರ ಇತ್ತು ಎನ್ನುವಂತಹ ಅಭಿಪ್ರಾಯವನ್ನು ರೆಕಾರ್ಡ್ ಮಾಡುವಂತಹ ತಪ್ಪನ್ನು ಇವರು ಮಾಡಬಾರದಾಗಿತ್ತು. We have not seen the congress government in Tamil Nadu. More than a decade or two. If I am correct.

ಸುಮಾರು ೨೦ ವರ್ಷಗಳ ಮಧ್ಯೆ ಯಾವಾಗಲಾದರೂ ಬಂದಿತ್ತೋ ಏನೋ ನನಗೆ ಗೊತ್ತಿಲ್ಲ. ನನಗೆ ತಿಳಿದಮಟ್ಟಿಗೆ ಬಹುಶಃ ಕೊನೇ ಯತ್ನ ಮಾಡಿದರು. ಆದುದರಿಂದ ಕಾಂಗ್ರೆಸ್ಸನ್ನು ಸ್ವಾಗತಿಸುವಷ್ಟು ವಿಶಾಲವಾದಂತಹ ಬುದ್ಧಿಯನ್ನು ತಮಿಳುನಾಡಿನವರು ತೋರಲಿಲ್ಲ. ನಾನು ಏಕೆ ಈ ಮಾತನ್ನು ಹೇಳುತ್ತಿದ್ದೇನೆಂದರೆ The judgement is even factually incorrect. ಇದನ್ನು ನೋಡಿದಾಗ ನನಗೆ ಒಂದು ಅನುಮಾನ ಬಂದಿತು. To confirm my worst suspicin.

ಅದಕ್ಕೆ ಆಧಾರ ಕೂಡ ಇದೆ. ಆ ಅನುಮಾನ ಏನೆಂದರೆ, ಶ್ರೀಯುತ ಬಂಗಾರಪ್ಪನವರು ಈ ಸದನದಲ್ಲಿ ಒಂದು ಯುನಾನಿಮಸ್ ರೆಸಲ್ಯೂಷನ್ ಮಾಡಿ, ಅದು ತಪ್ಪೋ ಸರಿಯೋ, ಒಂದು ಆರ್ಡಿನನ್ಸ್ ಮಾಡಿ, ರಾಜ್ಯದ ಜನರ ಹಿತಾಸಕ್ತಿಯನ್ನು ಕಾಪಾಡುವುದಕ್ಕೆ ಪ್ರಯತ್ನ ಪಟ್ಟಂತಹ ಕಾಲದಲ್ಲಿ, ಆ ನಮ್ಮ ಆರ್ಡಿನನ್ಸ್ ಸಿಂಧುತ್ವವನ್ನು, ಆ ವ್ಯಾಲಿಡಿಟಿಯನ್ನು ಪರೀಕ್ಷೆ ಮಾಡಲಿಕ್ಕೆ ಅವತ್ತಿನ ರಾಷ್ಟ್ರಾಧ್ಯಕ್ಷರು ಸುಪ್ರೀಂ ಕೋರ್ಟ್‌ಗೆ ಕಳುಹಿಸಿದಂತಹ ಒಂದು ನಿದರ್ಶನವಿದೆ. ಇದರಲ್ಲಿ ನನಗೆ ಯಾವುದೋ ಒಂದು ಕಾಣದ ಕೈ ಈ ಸುಪ್ರೀಂ ಕೋರ್ಟಿನ ತೀರ್ಮಾನಗಳಲ್ಲಿ ಕೆಲಸ ಮಾಡುತ್ತಾ ಇದೆ ಎನ್ನುವಂತಹ ಅನುಮಾನಗಳನ್ನು ಹುಟ್ಟಿಸಿದೆ. ಈ ರಾಷ್ಟ್ರದ ಇತಿಹಾಸದಲ್ಲಿ ಕರ್ನಾಟಕ ರಾಜ್ಯದಂಥ ಒಂದು ರಾಜ್ಯ. ಆ ರಾಜ್ಯದ ಜನಪ್ರತಿನಿಧಿಗಳ ಆದೇಶದ ಮೇರೆಗೆ ಮಾಡಿದಂತಹ ಒಂದು ಆರ್ಡಿನನ್ಸ್ ಇದು. ಆ ಆರ್ಡಿನನ್ಸ್ ನಂತರ ಅದು ಕಾನೂನು ಕಡೆ ಆಯಿತು. ಅದರ ಸಿಂಧುತ್ವವನ್ನು ಪರೀಕ್ಷೆ ಮಾಡಲಿಕ್ಕೆ ಅಂದಿನ ರಾಷ್ಟ್ರಾಧ್ಯಕ್ಷರಾದಂತಹ ಶ್ರೀಮಾನ್ ವೆಂಕಟರಾಮನ್‌ರವರು ಸುಪ್ರೀಂ ಕೋರ್ಟ್‌ಗೆ ರೆಫರ್ ಮಾಡುವಂತಹ ಅವಶ್ಯಕತೆ ಏನು ಇತ್ತು? ಯಾವುದನ್ನೂ ಮಾಡದೇ ಇದ್ದಂತಹವರು ಈಗ ಏಕೆ ಇದ್ದಕ್ಕಿದ್ದ ಹಾಗೆ ಎದ್ದುಬಿಟ್ಟರು? ಅದಕ್ಕಾಗಿ ನಾನು ಹೇಳುತ್ತಿರುವುದು ಈ ಕರ್ನಾಟಕ ರಾಜ್ಯದ ಕಾವೇರಿ ನೀರಿನ ಬವಣೆಯಲ್ಲಿ ಆಗಿರುವಂತಹ ಅನ್ಯಾಯದ ಪರಂಪರೆಯ ಹಿನ್ನೆಲೆಯಲ್ಲಿ ಕೋರ್ಟ್‌ಗಳ ಪಾತ್ರವೂ ಇದೆ. ರಾಜಕಾರಣಿಗಳ ಪಾತ್ರವೂ ಇದೆ. ಭಾಷೆಯ ಪಾತ್ರವೂ ಇದರ ಒಳಗಡೆ ಇದೆ. ಅದು ಯಾರ ಕೈವಾಡ ಏನಿದೆಯೋ, ವಿಧಿಯಿಲ್ಲದೆ, ಒಬ್ಬ ವಕೀಲನಾಗಿ, ನ್ಯಾಯ ಪೀಠದಲ್ಲಿ ಅತ್ಯಂತ ಗೌರವವನ್ನು ಹೊಂದಿರತಕ್ಕಂಥ

ನಾನು ಇವತ್ತು ನನ್ನ ಸ್ನೇಹಿತರಾದಂಥ ಮಾನ್ಯ ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರ ಜೊತೆಯಲ್ಲಿ ಸೇರಿಕೊಳ್ಳಬೇಕಾಗುತ್ತದೆ ಅನ್ನಿಸುತ್ತದೆ. ಈ ಉಚ್ಚ ನ್ಯಾಯಾಲಯ ಕೊಟ್ಟಿರತಕ್ಕಂಥ ತೀರ್ಪು ಅನ್ಯಾಯದ ತೀರ್ಪು ಎಂದು ಹೇಳಬೇಕಾಗುತ್ತದೆ. ಈ ಒಂದು ಅನ್ಯಾಯದ ತೀರ್ಪಿಗೆ ಅಪೀಲ್ ಇಲ್ಲ. ಅದನ್ನೇ ಸನ್ಮಾನ್ಯ ಚಂದ್ರೇಗೌಡರು ಹೇಳಿದರು. ಅದಕ್ಕೆ ಇರುವಂಥ ಒಂದೇ ಒಂದು ಮಾರ್ಗವೆಂದರೆ ನನ್ನ ಪ್ರಕಾರ ಈ ಜನರ ಶಕ್ತಿಯನ್ನು ಒಗ್ಗೂಡಿಸಿ ಈ ಸುಪ್ರೀಂ ಕೋರ್ಟಿನ ತೀರ್ಮಾನವನ್ನು ಕಸದ ಬುಟ್ಟಿಗೆ ಹಾಕಬೇಕಾಗುತ್ತದೆ. We should reject with all force. ಸನ್ಮಾನ್ಯ ಅಧ್ಯಕ್ಷರೇ, ನಾನು ಈಗಾಗಲೇ ಹೇಳಿದ ಹಾಗೆ ೧೯೫೧ರಿಂದ ಸತತವಾಗಿ ಇಂಥ ಒಂದು ಪರಿಸ್ಥಿತಿ ಇದ್ದಾಗಲೂ ಕೂಡ, ಈ ಪರಿಸ್ಥಿತಿಯನ್ನು ನಿವಾರಣೆ ಮಾಡಲಿಕ್ಕೆ, ಈ ಪರಿಸ್ಥಿತಿಯನ್ನು ಹೋಗಲಾಡಿಸುವುದಕ್ಕೆ ನಮ್ಮ ಸರ್ಕಾರಗಳು, ನಾನೂ ಒಂದು ಸರ್ಕಾರದಲ್ಲಿ ಮಂತ್ರಿಯಾಗಿದ್ದವನು, ನಾವು ಪ್ರಾಮಾಣಿಕವಾದಂಥ ಒಂದು ಪ್ರಯತ್ನವನ್ನು ಮಾಡಿದ್ದೇವೆಯೇ ಇಲ್ಲ. ಸಾಕಷ್ಟು ಹಣವನ್ನು ಒದಗಿಸಿ, ಬೇಕಾದಷ್ಟು ರಾಜಕೀಯ ಇಚ್ಛಾಶಕ್ತಿಯನ್ನು ಪ್ರದರ್ಶನ ಮಾಡಿ ಕೆಲಸ ಮಾಡದಿದ್ದರೆ ನಮಗೆ ಈ ರೀತಿಯಾದ ಒಂದು ದುಸ್ಥಿತಿ ಬರುತ್ತಿರಲಿಲ್ಲ. ಅದನ್ನು ನಾವು ಮಾಡಲಿಲ್ಲ. ಇಂಥ ಒಂದು ಗಂಭೀರವಾದಂಥ ಪರಿಸ್ಥಿತಿ ನಮ್ಮ ಮುಂದೆ ಇದೆ. ನೀವು ಪ್ರಮಾಣಿಕವಾದಂಥ ಪ್ರಯತ್ನವನ್ನು ಮಾಡುತ್ತಿಲ್ಲವೆಂದು ನಾನು ಹೇಳುತ್ತಿಲ್ಲ. ನಿಮ್ಮ ಸರ್ಕಾರದ ಎಕನಾಮಿಕ್ ಸರ್ವೆಯವರು ಕೊಟ್ಟಿರತಕ್ಕಂಥ ೧೯೯೨-೯೩ ವರದಿಯನ್ನು ಅದನ್ನು ಓದಲೇ? ಅದು, Economic Survey for 1992-93.

"The achievement in terms of the creation of irrigation potentialities under major and medium irrigation appears to be not commensurate with the investment...."

That is what your Government has stated in the Economic Survey?

ಈಗ ಹೇಳಿ ಪ್ರಾಮಾಣಿಕವಾದಂಥ ಪ್ರಯತ್ನವನ್ನು ನಾವು ಮಾಡಿದ್ದೇವೆಯೋ ಇಲ್ಲವೋ ಎನ್ನುವುದನ್ನು ಪ್ರಾಮಾಣಿಕವಾದ ಪ್ರಯತ್ನ ನಡೆದಿಲ್ಲವೆಂದು ಹೇಳಿ, ಸರ್ಕಾರದವರು ಒದಗಿಸಿಕೊಟ್ಟಿರತಕ್ಕಂಥ ಆರ್ಥಿಕ ಸಮೀಕ್ಷೆಯ ಪುಸ್ತಕದಲ್ಲಿ ಇದು ವರದಿಯಾಗಿದೆ. ಸನ್ಮಾನ್ಯ ಅಧ್ಯಕ್ಷರೇ, ಇದು ಅನ್ಯಾಯದ ಪರಂಪರೆ ಅಷ್ಟೇ ಅಲ್ಲ, ಕರ್ನಾಟಕ ರಾಜ್ಯದ ರೈತರ ಬದುಕಿಗಾಗಿ ಮೋಸದ ಪರಂಪರೆ. ಪ್ರತಿವರ್ಷನೂ ಕೋಟಿಗಳ ಲೆಕ್ಕವನ್ನು ಆಯವ್ಯಯದಲ್ಲಿ ತೋರಿಸಿ, ಆ ಅಂಕಿಅಂಶಗಳ ಮಾಯಾಜಾಲದಲ್ಲಿ ಈ ರೈತರನ್ನು ಎತ್ತಿಕೊಂಡು ಹೋಗತಕ್ಕಂಥ ಪ್ರಯತ್ನ ಎಲ್ಲ ಕಾಲದಲ್ಲೂ ನಡೆದಿದೆ. ೬೦೦ ಕೋಟಿ ರೂಪಾಯಿಗಳನ್ನು ಕೊಡುತ್ತೇವೆಂದು ಹೇಳುವುದು, ೬೦ ಕೋಟಿ ರೂಪಾಯಿಗಳನ್ನೂ ಖರ್ಚು ಮಾಡದಿರುವುದು. ಅದಕ್ಕೆ ಇಲ್ಲಿ ನೋಡಿ ಅದು ಅದಾಗಿದೆ ಎನ್ನುವುದನ್ನು ಹೇಳುತ್ತೇನೆ. ಎಷ್ಟು ಖರ್ಚು ಮಾಡಿದ್ದಾರೆ, ಏನೇನು ಮಾಡಿದ್ದಾರೆಂಬುದಕ್ಕೆ ಮಾನ್ಯ ನೀರಾವರಿ ಮಂತ್ರಿಗಳು ವಿವರ ನೀಡಿದ್ದಾರೆ.

"During the current year 66,000 hectares of additional irrigation potential was created".

ನೇರವಾಗಿ ಮುಷ್ಠಿಗೆ ಬಂದುಬಿಡುತ್ತೇನೆ. This is relevent for me. ಎಷ್ಟು ಖರ್ಚು ಮಾಡಿದ್ದಾರೆಂದರೆ:

"The expenditure under major and medium irrigation plan project from 1992-93 up to the end of November, 1992 is 170 crores as against a budget provison of 275 crores".

ಇದನ್ನು ಅನ್ಯಾಯದ ಪರಂಪರೆ ಎಂದು ಒಪ್ಪಿಕೊಳ್ಳುತ್ತೀರೋ, ಮೋಸದ ಜಾಲವನ್ನು ನಮ್ಮ ರೈತರ ಮೇಲೆ ಬೀಸುತ್ತಿದ್ದೇವೆ ಎಂದು ಒಪ್ಪಿಕೊಳ್ಳುತ್ತಿರೋ? ಹೇಳಿ.

ಅದಕ್ಕಾಗಿ ನಾನು ಹೇಳಿದ್ದು, ಇಚ್ಛಾಶಕ್ತಿಯನ್ನು ಪ್ರದರ್ಶನ ಮಾಡುವುದರಲ್ಲಿ ಅಷ್ಟೇ ಅಲ್ಲ, ಹಣ ಖರ್ಚು ಮಾಡುವುದರಲ್ಲಿಯೂ ನಾವು ಪ್ರಾಮಾಣಿಕ ಪ್ರಯತ್ನ ಮಾಡಿಲ್ಲ. ಈಗಿನ ನೀರಾವರಿ ಸಚಿವರು ಈ ಸಾರಿಯ ಆಯವ್ಯಯದ ಸಂದರ್ಭದಲ್ಲಿ ಮಾತನಾಡುವಾಗ ಒಂದು ಪ್ರಾಮಾಣಿಕ ಮಾತನ್ನು ಆಡಿದ್ದಾರೆ. ಆ ಮಾತು ಏನೆಂದರೆ, ಎಲ್.ಒ.ಸಿ. ಎಂಬುದು ಅಭಿವೃದ್ಧಿ ಕಾರ್ಯಗಳಿಗೆ ಅಡ್ಡಿ ತರುವಂಹ, ಆಯವ್ಯಯಕ್ಕೆ ಅಪಚಾರ ಮಾಡುವಂತಹ ಒಂದು ಅನಿಷ್ಟ ಪದ್ಧತಿ ಎಂದು. ಇದನ್ನು ಏಕೆ ತಂದಿದ್ದಾರೆ? ಏಕೆ ಇಟ್ಟಿದ್ದಾರೆ? ಆಯವ್ಯಯಕ್ಕೆ ಅಪಚಾರ ಮಾಡುವಂತಹ, ಅಭಿವೃದ್ಧಿ ಕಾರ್ಯಗಳಿಗೆ ಆತಂಕ ತರುವಂತಹ, ಅಡ್ಡಿ ಮಾಡುವಂತಹ ಎಲ್.ಒ.ಸಿ. ಪದ್ಧತಿಯನ್ನು ಏತಕ್ಕೆ ತಂದಿದ್ದಾರೆಂಬುದು ನೀರಾವರಿ ಮಂತ್ರಿಗಳಿಗೆ ಅವತ್ತಿನಿಂದ ಇವತ್ತಿನವರೆಗೆ ಅರ್ಥವಾಗಿಲ್ಲ ಎಂದು ಭಾವಿಸುತ್ತೇನೆ. ಎಲ್ಲಾ ಸರ್ಕಾರದಲ್ಲಿ, ಎಲ್ಲಾ ಕಾಲದಲ್ಲಿ ನೀರಾವರಿ ಮಂತ್ರಿಗಳೇ ಡಿಸಿಡೆಂಟ್ ಲೀಡರ್ ಆಗಬೇಕೇ? ಇದು ನಮ್ಮ ದುರಾದೃಷ್ಟ ಅಲ್ಲವೆ ಅಧ್ಯಕ್ಷರೇ?

ಎಲ್.ಒ.ಸಿ. ಪದ್ಧತಿಗೆ ಹೆಚ್ಚಿನ ಪ್ರಾಮುಖ್ಯತೆ ಬಂದಿದೆ. ಎಲ್.ಒ.ಸಿ.ಯನ್ನು ಏತಕ್ಕೆ ಮುಖ್ಯಮಂತ್ರಿಗಳು ಇಟ್ಟುಕೊಳ್ಳುತ್ತಾರೆಂದು ಅವರಿಗೂ ಗೊತ್ತಿದೆ. ಅವರು ಕೂಡ ನೀರಾವರಿ ಸಚಿವರಾಗಿದ್ದರು. It is a bridle to ride the irrigation Minister. I can't say more than that. LOC are retained to ride, control and to bring to book the Irrigation Ministry.

ಈ ಅನಿಷ್ಟ ಪದ್ಧತಿಯ ಪ್ರತಿಫಲ ಏನಾಗಿದೆ ಎಂದರೆ, ಅದಕ್ಕೆ ಕಳೆದ ವರ್ಷದ ಕತೆಯನ್ನು ಆರ್ಥಿಕ ಸಮೀಕ್ಷೆಯಲ್ಲಿ ಕೊಟ್ಟಿರುವುದನ್ನು ಓದಿ ಹೇಳಿದ್ದೇನೆ. ಮತ್ತೊಂದು ಮಾತನ್ನು ತುಮಕೂರು ಜಿಲ್ಲೆಯ ಸ್ನೇಹಿತರಿಗೆ ಅನುಕೂಲವಾಗಲಿ ಎಂದು ನೀರಾವರಿ ಮಂತ್ರಿಗಳ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ಇಂಥ ಒಂದು ವಿಶೇಷ ಪರಿಸ್ಥಿತಿ ಇದ್ದಾಗಲೂ ಕೂಡ, ಕಷ್ಟದ ಪರಿಸ್ಥಿತಿ ಇದ್ದಾಗಲೂ ಕೂಡ ಈ ಸರ್ಕಾರಗಳು ಪ್ರಾಮಾಣಿಕವಾಗಿ ಪ್ರಯತ್ನ ಮಾಡಿಲ್ಲ ಎಂಬುದಕ್ಕೆ ಹೇಮಾವತಿ ಕೆಲಸಕ್ಕೆ ತುಮಕೂರು ಜಿಲ್ಲೆಯಲ್ಲಿ ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳಲ್ಲಿ ನೀವು ಕೊಟ್ಟಿರುವ ಹಣ ಮತ್ತು ಕೊಡಬೇಕಾದ ಹಣವನ್ನು ದಯವಿಟ್ಟು ನೋಡಿ ತಿಳಿದುಕೊಳ್ಳಿ, ಓದಿ ಹೇಳುತ್ತೇನೆ. ಅಕ್ಟೋಬರ್ ತಿಂಗಳಲ್ಲಿ Grant in lakhs. LOC was issued for 544 lakhs.

೫೪೪ ಲಕ್ಷ ರೂಪಾಯಿ ಕೊಡಬೇಕಾದ ಕೆಲಸಕ್ಕೆ ಈ ವರ್ಷ ಕೊಟ್ಟಿರುವ ಹಣ ೨ ಲಕ್ಷದ ೪೮ ಸಾವಿರ ರೂಪಾಯಿಗಳು. ಇದು ನಾಚಿಕೆಗೇಡಿನ ಪರಿಸ್ಥಿತಿ ಅಲ್ಲವೆ? ಅಲ್ಲಿ ಕುಳಿತುಕೊಂಡು ೧೧ ಲಕ್ಷ ಎಕರೆಗೆ ಇಟ್ಟ ನೀರನ್ನು ಜಾಸ್ತಿ ಮಾಡಬೇಡಿ ಎಂದು ಸುಪ್ರೀಂಕೋರ್ಟಿನ ಮಹಾಪ್ರಭುಗಳು ಅಪ್ಪಣೆ ಕೊಡುತ್ತಾರೆ. ೫೪೪ ಲಕ್ಷ ರೂಪಾಯಿಗಳನ್ನು ಕೊಡುತ್ತಿದ್ದೀರಲ್ಲ ನಿಮಗೆ ನಾಚಿಕೆಯಾಗುವುದಿಲ್ಲವೆ? ನಿಮ್ಮ ನಿಮ್ಮಲ್ಲಿ ವ್ಯತ್ಯಾಸವಿದ್ದರೆ, ನಿಮ್ಮ ನೀರಾವರಿ ಮಂತ್ರಿಗಳು ಸರಿಯಾಗಿ ಕೆಲಸ ಮಾಡದಿದ್ದರೆ

ಡಿಸ್‌ಮಿಸ್ ಮಾಡಿ ಎಂದು ಮುಖ್ಯಮಂತ್ರಿಗಳಿಗೆ ಹೇಳುತ್ತೇನೆ. ಕಾವೇರಿ ನದಿ ವ್ಯಾಪ್ತಿಯಲ್ಲಿ ಬರತಕ್ಕ ಜನರ ರಕ್ಷಣೆ ಮಾಡುವಂತಹ ಜವಾಬ್ದಾರಿ ನಿಮ್ಮ ಸರ್ಕಾರದ್ದು, ಮಂತ್ರಿಗಳದ್ದು. ಅಷ್ಟೇ ಅಲ್ಲ, ಮಣ್ಣಿನ ಮಗನಾದ ನಿಮ್ಮ ಋಣವೂ ಇದೆ. ನಿಮ್ಮ ಮುಖ್ಯಮಂತ್ರಿಗಳಿಂದ ಈ ಕೆಲಸ ಮಾಡುವುದಕ್ಕೆ ಸಾಧ್ಯವಿಲ್ಲ ಎಂಬುದಾದರೆ, ನಿಮ್ಮ ಮುಖ್ಯಮಂತ್ರಿಗಳಿಂದ ಸಹಕಾರ ಸಿಕ್ಕುತ್ತಿಲ್ಲ ಎಂಬುದಾದರೆ, ಎಲ್.ಒ.ಸಿ. ಬ್ರಾಂಡಲ್ ಹಾಕಿ ಕಂಟ್ರೋಲ್ ಮಾಡುತ್ತಾರೆ ಎಂಬುದಾದರೆ, ನಿಮ್ಮ ಸ್ಥಾನವು ಸೇರಿದಂತೆ ಯಾವ ಜಾಗವೂ ದೊಡ್ಡದಲ್ಲ. ಬಿಟ್ಟು ಬನ್ನಿ. ಹೇಮಾವತಿ ಕೆಲಸಕ್ಕೆ ೫೪ ಲಕ್ಷ ರೂಪಾಯಿಗಳನ್ನು ಕೊಡುವ ಕಡೆ ೨ ಲಕ್ಷದ ೪೮ ಸಾವಿರ ರೂಪಾಯಿಗಳನ್ನು ಕೊಡುತ್ತಿದ್ದೀರಲ್ಲ. ಅದಕ್ಕೆ ನಾನು ಏನು ಮಾಡಬೇಕೆಂದು ಕೇಳಿದೆ. ನಿಮ್ಮನ್ನು ಎಚ್ಚರಿಸಬೇಕಾದರೆ, ನಿಮ್ಮನ್ನು ಆಕರ್ಷಿಸಬೇಕಾದರೆ ಏನು ಮಾಡಬೇಕು ಹೇಳಿ. ತಾವು ಬರುವುದಕ್ಕೆ ಮೊದಲು ನಾನು ಬೆಳಿಗ್ಗೆ ಹೇಳುತ್ತಿದ್ದೆ. ಆ ಸದನದಲ್ಲಿ ಕೆಟ್ಟವರಿಗೆ, ಸತ್ತವರಿಗೆ ಸಂತಾಪ ಸೂಚನೆ ಮಾಡುವುದು, ಅಧಿಕಾರಕ್ಕೆ ಬಂದವರಿಗೆ ಅಭಿನಂದನೆ ಸೂಚಿಸುವುದು ಇದಕ್ಕೆ ಇರುವಷ್ಟು ಆದ್ಯತೆ ಕೋಟ್ಯಾಂತರ ಜನರ ಬದುಕಿಗೆ ನಾಂದಿ ಆಗುವ ಕೆಲಸಕ್ಕೆ ಇಲ್ಲ, ನಿಲುವಳಿ ಸೂಚನೆಯನ್ನು ಕಳುಹಿಸಿದರೆ ತಮ್ಮ ಕಛೇರಿಯಲ್ಲಿ ಅದನ್ನು ರೂಲ್ ೬೯ರ ಕೆಳಗೆ ಮಾಡಿ ಕಳುಹಿಸುತ್ತಾರೆ. ಸರ್ಕಾರಕ್ಕೆ ಆಸಕ್ತಿ ಇಲ್ಲ. ಕೋರ್ಟ್‌ಗಳಿಗೆ ಆಸಕ್ತಿ ಇಲ್ಲ. ಈ ಅಧ್ಯಕ್ಷರಿಗೆ ಆಸಕ್ತಿ ಇಲ್ಲ.

ಸನ್ಮಾನ್ಯ ಅಧ್ಯಕ್ಷರೇ I do not want to make politics out of everything.

ಬರದ ಸೋಂಕಿನಿಂದ, ಜನರು ಬೆಂಕಿಗೆ ಬಿದ್ದು ಉರಿಯುತ್ತಿರುವ ಸಂದರ್ಭದಲ್ಲಿ, ಪ್ರಾಣಿಗಳಿಂದ, ಎಲ್ಲರಿಂದಲೂ ರಾಜಕೀಯ ಮಾಡುವುದಕ್ಕೆ ನನಗೆ ಇಚ್ಛೆ ಇಲ್ಲ. ನನಗೆ ಇವತ್ತು ಬೇಕಾಗಿರತಕ್ಕದ್ದು, ಇವತ್ತಿನ ನೈಜ ಸ್ಥಿತಿ ಈ ರಾಜ್ಯದ ಜನರಿಗೆ ಇದು ಗೊತ್ತಾಗಬೇಕು. ನಮ್ಮ ಜಿಲ್ಲೆಯ ಮಂತ್ರಿಗಳು ಅಪ್ಪಣೆ ಕೊಡುತ್ತಿದ್ದಾರೆ. ಆ ಕೆಲಸ ನಡೆಯುತ್ತಿದೆ, ಈ ಕೆಲಸ ನಡೆಯುತ್ತಿದೆ. ಹಣ ಕೊಡಲಾಗಿದೆ ಎಂದಿದ್ದಾರೆ. ಈ ಹಂತದಲ್ಲಿ ನೀರಾವರಿ ಸಚಿವರು ನನಗೆ ಒಂದು ಮಾಹಿತಿ ಕೊಟ್ಟರೆ ಉಪಕಾರವಾಗುತ್ತದೆ. May I know what is the amount due for the payment of the bills?

ಆ ಮಾಹಿತಿ ಕೊಟ್ಟರೆ ನನ್ನ ಬರ್ಡನ್ ಕಡಿಮೆಯಾಗುತ್ತದೆ. ಇವತ್ತು ಎಲ್ಲಾ ಬೇಡ. ಕೃಷ್ಣ, ಕಾವೇರಿ, ಹೇಮಾವತಿ, ಮಲಪ್ರಭಾ, ಘಟಪ್ರಭಾ ಎಲ್ಲಾ ಒಳಗೊಂಡಂತೆ ಭಾರೀ ನೀರಾವರಿ ಯೋಜನೆ ಅಡಿಯಲ್ಲಿ ತಾವು ಕೊಡಬೇಕಾದ ಹಣದಲ್ಲಿ ಎಷ್ಟು ಬಿಲ್ ಪೆಂಡಿಂಗ್ ಇವೆ? ನೀವು ಕೊಡದೇ ಇದ್ದರೂ ನನ್ನ ಹತ್ತಿರ ಇದರ ವಿವರ ಇದೆ. ನಿಜಸ್ಥಿತಿಯನ್ನು ತಾವು ಮೊದಲೇ ಹೇಳಿದರೆ ನನ್ನ ಕಂಠ ಶೋಷಣೆ ಸ್ವಲ್ಪ ಕಡಿಮೆಯಾಗುತ್ತದೆ.

ನಾನು ಪ್ರಾರಂಭದಲ್ಲೇ ಹೇಳಿದೆ. ನೀರು ಉಳಿಸಿಕೊಳ್ಳುವುದಕ್ಕೆ ಕರ್ನಾಟಕದ ರಾಜಕಾರಣಿಗಳು, ಸರ್ಕಾರ ಮಾಡತಕ್ಕ ಹೋರಾಟ ಒತ್ತಟ್ಟಿಗಾದರೆ, ನೀರನ್ನು ಬಳಸಿಕೊಳ್ಳಲು ನಾವು ಮಾಡಿರತಕ್ಕ ಪ್ರಯತ್ನ ಇದಕ್ಕೆ ಸಮ ಇದೆಯೇ? ಇಲ್ಲಿ ಎಲ್‌ಒಸಿ ಪ್ರಮುಖವಾದುದು. ಅದನ್ನು ಬಿಟ್ಟು ಇನ್ನೇನು ಹೇಳಬೇಕು? ಇದರಲ್ಲೂ ಈ ರಾಜ್ಯದ ಜನತೆಯ ವಂಚನೆ ಮಾಡುವುದಾದರೆ ಮಾಡಲಿ. I say, with all informatin at my commad, it is Rs. 80 crores.

೮೦ ಕೋಟಿ ರೂಪಾಯಿ ಬಿಲ್ಲನ್ನು ಸರ್ಕಾರದಿಂದ ಕೊಡಬೇಕಾಗಿದೆ. ಸುಂದರ ರೆಡ್ಡಿ ಅಥವಾ ಸುಂದರ ರಾಮರೆಡ್ಡಿ ಎನ್ನುವವನು ನನ್ನ ಹತ್ತಿರ ಬಂದು ಕಣ್ಣಲ್ಲಿ ನೀರು ಹಾಕಿದರು. ಅವರು ನನಗೆ

ಚುನಾವಣೆಗೆ ಒಂದು ಪೈಸೆ ದುಡ್ಡು ಕೊಟ್ಟವರಲ್ಲ. ಅಧ್ಯಕ್ಷರೇ, ಡಿಸೆಂಬರ್ ತಿಂಗಳಲ್ಲಿ ತುಮಕೂರು ಜಿಲ್ಲೆಗೆ ನೀರು ಕೊಡುವ ಕಾರ್ಯಕ್ರಮವನ್ನು ಈ ಸರ್ಕಾರ ಇಟ್ಟುಕೊಂಡಿದೆ. ಒಬ್ಬನೇ ಒಬ್ಬ ಕಂಟ್ರಾಕ್ಟರ್‌ಗೆ ೨೦ ಲಕ್ಷ ರೂ.ಗಳ ಬಿಲ್ ಹಣ ಕೊಡಬೇಕು. ಡಿಸ್‌ಪ್ಯೂಟ್ ಮಾಡುವುದಾದರೆ ಮಾಡಲಿ. ನನ್ನದೇನೂ ಇಲ್ಲ. ಆ ಸುಂದರ ರೆಡ್ಡಿ ಎನ್ನುವವರಿಗೆ ೨೦ ಲಕ್ಷ ರೂಪಾಯಿಗಳವರೆಗೆ ಬಿಲ್ ಕೊಟ್ಟಿಲ್ಲ.

ಕೃಷ್ಣಾ ಮತ್ತು ಕಾವೇರಿ ಕೊಳ್ಳದಲ್ಲಿ ಆಗುತ್ತಿರುವ ಕೆಲಸ ಅಷ್ಟಕ್ಕೆ ಸುಮಾರು ೮೦ ಕೋಟಿ ರೂಪಾಯಿಗಳನ್ನು ಸರ್ಕಾರ ಕೊಡಬೇಕಾಗಿದೆ. ಯಾವ ಮುಖ ಇಟ್ಟುಕೊಂಡು ಹೇಳುತ್ತೀರಿ ನೀವು ಕಾವೇರಿಯ ಬಗ್ಗೆ ಜಯಲಲಿತ ಅನ್ಯಾಯ ಮಾಡಿದ್ದಾರೆಂದು ನಮ್ಮ ವಾಟಾಳ್ ನಾಗರಾಜ್‌ರವರು ದೂಷಣೆ ಮಾಡುತ್ತಾರೆ. ಕಾವೇರಿಯಲ್ಲಿ ಕಾಣದ ಕೈ ಕೆಲಸ ಮಾಡಿದೆಯೆಂದು ದೂರಿದ್ದಾರೆ. ಆದರೆ ನೀವು ಕಾವೇರಿ ನೀರನ್ನು ಬಳಸಿಕೊಳ್ಳುವ ಬಗ್ಗೆ ರಾಜ್ಯದ ಜನತೆಗೆ ಈ ಸರ್ಕಾರ ಮಾಡುತ್ತಿರುವ ದ್ರೋಹದ ಬಗ್ಗೆ ನಾನು ಮೊದಲು ಹೇಳಬೇಕು. ಇದಕ್ಕೆ ಉತ್ತರ ಇಲ್ಲವೇನು. ೮೦ ಕೋಟಿ ರೂಪಾಯಿಗಳನ್ನು ನೀರಾವರಿ ಕೆಲಸಕ್ಕೆ ಕೊಡದಿರುವುದರಿಂದ ಈ ಸಂದರ್ಭದಲ್ಲಿ ನಾವು ೨೦೦೦ದ ಇಸವಿಯೊಳಗೆ ನೀರು ಕೊಡುತ್ತೇವೆಂದು ಕೃಷ್ಣಾದಲ್ಲಿ ಹೇಳುತ್ತೀರಿ. ಡಿಸೆಂಬರ್ ತಿಂಗಳಿನೊಳಗೆ ಹೇಮಾವತಿ ನೀರನ್ನು ಕೊಡುತ್ತೇವೆಂದು ಕಾವೇರಿಯಲ್ಲಿ ಹೇಳುತ್ತೀರಿ. ನಾನು ವಿಧಿಯಿಲ್ಲದೆ ಹೇಳಬೇಕಾಗುತ್ತದೆ. ನಮ್ಮ ವಾಟಾಳ್ ನಾಗರಾಜ್‌ರವರು ಹೇಳಿದ ಹಾಗೆ ಇದು ರಾಜಕೀಯ ಬಡುಬುಡಿಕೆ. ಈ ಕೆಲಸವನ್ನು ತ್ವರಿತಗತಿಯಲ್ಲಿ ಕೈಗೊಳ್ಳಬೇಕೆಂದು ನಾನು ಚುನಾವಣೆಯಲ್ಲಿ ಈ ಸಾರಿ ವಿಧಾನಸಭೆಗೆ ಆರಿಸಿ ಬಂದ ತಕ್ಷಣ ಒಂದು ಪ್ರಶ್ನೆಯನ್ನು ಕಳುಹಿಸಿದ್ದೇನೆ. ತುಮಕೂರು ಜಿಲ್ಲೆಗೆ ಹೇಮಾವತಿ ನೀರನ್ನು ಹರಿಸಲು ಕೆಲಸಗಳು ತೀವ್ರಗತಿಯಲ್ಲಿ ಆಗದೇ ಇರಲಿಕ್ಕೆ ಕಾರಣವೇನು? What is the reason for this tardy progress in the project? ಈಗ ಮುಖ್ಯಮಂತ್ರಿಗಳು ಇದ್ದಿದ್ದರೆ ಚೆನ್ನಾಗಿತ್ತು. ಆ ಪ್ರಶ್ನೆ ಬಂದ ದಿವಸ ನನ್ನನ್ನು ಕರೆದು ಹೇಳಿದರು. ಆ ಪ್ರಶ್ನೆಗೆ ಉತ್ತರ ಕೊಡುವುದು ಬೇಡ. ನಾನು ತಮ್ಮನ್ನು ಕರೆದು ಚರ್ಚೆ ಮಾಡುತ್ತೇನೆಂದು ಹೇಳಿದರು. ಇವತ್ತಿನವರೆಗೂ ಸಭೆ ಕರೆದಿಲ್ಲ. ಅವರು ಮುಖ್ಯಮಂತ್ರಿಯಾಗಿ ೯-೧೦ ತಿಂಗಳಾಯಿತು ಎಂದು ಕಾಣುತ್ತದೆ. ಕಾವೇರಿ ನೀರಿನ ಕಾರ್ಯಕ್ರಮಗಳು ಏನಾಗುತ್ತಿವೆ. ಯೋಜನೆಗಳ ಅನುಷ್ಠಾನ ಏನಾಗುತ್ತಿದೆ. ಹಣದ ಕೊರತೆ ಏನಿದೆ. ಇವತ್ತಿನವರೆಗೆ ಕಾವೇರಿ ಕೊಳ್ಳದ ಶಾಸಕರನ್ನು ಕರೆದು ಚರ್ಚಿಸುವಂತೆ ನಾನು ಬರೆದಿರುವ ಎಲ್ಲಾ ಪತ್ರಗಳ ನಕಲುಗಳು ನನ್ನ ಹತ್ತಿರ ಇವೆ. ಒಂದಲ್ಲ, ಎರಡಲ್ಲ ಹತ್ತಾರು ಪತ್ರಗಳನ್ನು ಬರೆದಿದ್ದೇನೆ. ನಾನು ಮರ್ಯಾದೆ ಬಿಟ್ಟು ಹೇಳಬೇಕೆಂದರೆ ಅವರ ಕಾಲಿಗೆ ನಮಸ್ಕಾರ ಮಾಡುವುದನ್ನು ಬಿಟ್ಟು, ಎಲ್ಲವನ್ನೂ ಮಾಡಿದ್ದೇನೆ. ಸಭೆ ಕರೆಯಿಸಿ, ಅಧಿಕಾರಿಗಳ ಜೊತೆ ಚರ್ಚೆ ಮಾಡಿ, ಏನು ಸಮಸ್ಯೆಯಿದೆ ಎನ್ನುವುದನ್ನು ನಮ್ಮ ಗಮನಕ್ಕೆ ತನ್ನಿಯೆಂದು ಹೇಳಿದ್ದೇನೆ. ಮನ್ಯ ಮುಖ್ಯಮಂತ್ರಿಗಳು ಕವನವನ್ನು ಬರೆದು ಪ್ರಕಟ ಮಾಡಿದರು. ಕಾದಂಬರಿಯನ್ನು ಬರೆದು ಮೊನ್ನೆ ಪ್ರಕಟ ಮಾಡಿದರು. ಧ್ವನಿಮುದ್ರಣ ಆಗಿರುವಂತಹವರಿಗೆ ಇಷ್ಟೊಂದು ಅಕಾಡೆಮಿಕ್ ಬ್ಯಾಕ್‌ಗ್ರೌಂಡ್ ಇರುವಂತಹದ್ದನ್ನು ನಾನು ಮೆಚ್ಚುತ್ತೇನೆ. ಆದರೆ ನಾನು ಅವರಿಗೆ ಏನು ಸಲಹೆ ಮಾಡುತ್ತೇನೆಂದರೆ, ಮುಖ್ಯಮಂತ್ರಿ ಸ್ಥಾನಕ್ಕೆ ರಾಜಿನಾಮೆಯನ್ನು ಕೊಟ್ಟು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಮತ್ತು ಇನ್ನೂ ಅಕಾಡೆಮಿಗಳಿವೆ. ಮಾನ್ಯ ಬಂಗಾರಪ್ಪನವರನ್ನು ಬೇಕಾದರೆ ನಾಟಕ ಅಕಾಡೆಮಿಗೆ ಅಧ್ಯಕ್ಷರನ್ನಾಗಿ ಮಾಡೋಣ. ನಾನು ಮಾನ್ಯ

ಮುಖ್ಯಮಂತ್ರಿಗಳಲ್ಲಿ ಪ್ರಾರ್ಥನೆ ಮಾಡುತ್ತೇನೆ. ನಿಮ್ಮ ಸಾಹಿತ್ಯ ರಚನೆ, ನಿಮ್ಮ ಕಾವ್ಯಗಳ ಧ್ವನಿಮುದ್ರಣ ಸುರುಳಿಯನ್ನು ಬಿಡುಗಡೆ ಮಾಡುತ್ತಾ, ಇಂತಹ ಜಲವಿವಾದದ ವಿಷಯಗಳಲ್ಲಿ ಕಾಲ ಕಳೆದು ರಾಜ್ಯದ ಜ್ವಲಂತ ಸಮಸ್ಯೆಗಳನ್ನು ನೀವು ಮೂಲೆ ಗುಂಪು ಮಾಡುತ್ತಿದ್ದೀರಿ. ನಿಮಗೆ ನಾನು ಕಾವ್ಯ ಬರೆಯುವುದು ಕೆಟ್ಟದೆಂದು ಹೇಳುವುದಿಲ್ಲ. ನಾನು ಚುನಾವಣೆಯಲ್ಲಿ ಸೋತು ಮನೆಯಲ್ಲಿ ಕುಳಿತಿದ್ದಾಗ ಇಂತಹದ್ದೇ ಒಂದು ಪುಸ್ತಕ ಬರೆದಿದ್ದೇನೆ. ನೀವು ಪುಸ್ತಕ ಬರೆಯುವುದನ್ನು ನಾನು ಬೇಡವೆಂದು ಹೇಳುವುದಿಲ್ಲ. ಆದರೆ ಕಾವೇರಿ ನೀರಿನ ಬಗ್ಗೆ ನೀವು ಎಷ್ಟು ಆಸಕ್ತಿ ವಹಿಸಬೇಕಾಗಿದೆ. ಎಷ್ಟು ಚರ್ಚೆ ಮಾಡಬೇಕಾಗಿದೆ. ನೀವು ಅಧಿಕಾರಕ್ಕೆ ಬಂದು ೮ ತಿಂಗಳು ಆಯಿತು. ಒಂದು ಗಂಟೆ ಕಾವೇರಿ ಕೊಳ್ಳದ ಶಾಸಕರ ಸಭೆಯನ್ನು ಕರೆದು ಚರ್ಚೆ ಮಾಡುವುದಕ್ಕೆ ವ್ಯವದಾನ ಇಲ್ಲವೆಂದರೆ, ಕಾಲಾವಕಾಶ ಇಲ್ಲವೆಂದರೆ ನಿಮ್ಮ ಕಾದಂಬರಿ ರಚನೆಗೆ ಕಾಲ ಎಲ್ಲಿಂದ ಬಂದು ಸ್ವಾಮಿ? ಕವಿತೆಗಳ ರಚನೆಗೆ ಕಾಲ ಎಲ್ಲಿಂದ ಬಂತು ಸ್ವಾಮಿ? ಒಬ್ಬ ಶಾಸಕನಾಗಿ ಜವಾಬ್ದಾರಿ ಸ್ಥಾನದಲ್ಲಿದ್ದುಕೊಂಡು ಕಾಲಿಗೆ ನಮಸ್ಕಾರ ಮಾಡುವುದನ್ನು ಬಿಟ್ಟು, ಇದಕ್ಕಾಗಿ ಉಳಿದೆಲ್ಲವನ್ನು ಮಾಡಿದೆ. ನಾನೂ ಕಣ್ಣೀರು ಹಾಕಿದ್ದೇನೆ, ನಿಮ್ಮ ಹತ್ತಿರ ಬಂದು ಸಭೆ ಕರೆಯಿರಿಯೆಂದು ಹೇಳಿದ್ದೇನೆ. ಈ ಗಳಿಗೆಯವರೆಗೆ ನೀವು ಸಭೆ ಕರೆದಿಲ್ಲ.

* * *

**ಶ್ರೀ ಎಸ್.ಎಂ. ಕೃಷ್ಣ:** ಅತ್ಯಂತ ಗಂಭೀರವಾಗಿರತಕ್ಕಂಥ ವಿಚಾರದ ಬಗ್ಗೆ ಮಾನ್ಯ ರಾಮಯ್ಯನವರು ಮತ್ತು ಇನ್ನಿತರ ವಿರೋಧ ಪಕ್ಷದ ನಾಯಕರು, ಬಿ.ಜೆ.ಪಿ. ಪಕ್ಷದ ನಾಯಕರು ಮಾತನಾಡಿದ್ದಾರೆ. ಪರಿಸ್ಥಿತಿಯ ಗಂಭೀರತೆ ಮತ್ತು ವಿಷಯದ ಗಂಭೀರತೆ ಏನಿದೆ, ಅದಕ್ಕೆ ಲವಲೇಶವೂ ಲಪಚಾರವಾಗದ ರೀತಿಯಲ್ಲಿ, ನಾವು ಕಾವೇರಿ ಬಗ್ಗೇನೇ ನಮ್ಮ ಗಮನ ಎಲ್ಲ ಸೀಮಿತ ಮಾಡಿದರೆ ಒಳಿತು ಎಂದು ಅತ್ಯಂತ ವಿನಯದಿಂದ ಪ್ರಾರ್ಥನೆ ಮಾಡುತ್ತೇನೆ. ರಾಮಯ್ಯನವರು ಮಾತನಾಡಲಿ.

ಉಪಾಧ್ಯಕ್ಷರು: ಇನ್ನು ಇಷ್ಟು ಹೊತ್ತು ಆಗುತ್ತದೆ?

ನನಗೆ ಗೊತ್ತಿಲ್ಲ. ಕೊನೆಯ ಪಕ್ಷ ಇನ್ನೂ ಒಂದು ಗಂಟೆ ಬೇಕಾಗುತ್ತದೆ. ಸದನದಲ್ಲಿ ಇನ್ನೊಂದು ಪರಿಸ್ಥಿತಿಯಿರುವಾಗ, ಈ ವಾತಾವರಣದಲ್ಲಿ ಈ ರಾಜ್ಯದ ಅಭಿವೃದ್ಧಿ, ಅತ್ಯಂತ ಪ್ರಮುಖ ವಿಷಯದ ಬಗ್ಗೆ ಮಾತನಾಡುವಾಗ, ಅದನ್ನು ಯಾರಾದರೂ ಕೇಳುವವರಿದ್ದಾರೆಯೇ? ಕೇಳಿ ಅನುಷ್ಠಾನಕ್ಕೆ ತರುವಂತಹ ಪರಿಸ್ಥಿತಿ ಇದೆಯೇ? ಎಂದು ನನಗೆ ಅನುಮಾನ ಬಂದಿದೆ. ಅದು ಏನಾದರೂ ಆಗಿಕೊಂಡು ಹೋಗಲಿ, ನನ್ನ ಸ್ನೇಹಿತರು ಹೇಳುತ್ತಾರೆ. ರಾಮಯ್ಯನವರೇ ಮಂತ್ರಿಮಂಡಲ ಇದೆಯೆಂದು ಭಾವಿಸಿಕೊಳ್ಳಿ ಎಂದು. ಅದರಂತೆ ಮಂತ್ರಿ ಮಂಡಲವಿದೆ ಎಂದು ಭಾವಿಸಿಕೊಂಡು ಕಾವೇರಿ ನೀರಿನ ಹಂಚಿಕೆ ವಿಷಯದಲ್ಲಿ ರಾಜ್ಯಕ್ಕೆ ಅನ್ಯಾಯವಾಗಿದೆ. ತಮಿಳುನಾಡಿಗೂ ಕರ್ನಾಟಕಕ್ಕೂ ಇರುವಂತಹ ಈ ವಿವಾದದಲ್ಲಿ ಕರ್ನಾಟಕದವರದ್ದು ತಪ್ಪೇನೋ ಕರ್ನಾಟಕದವರು ತಮಿಳುನಾಡಿನ ಬೆಳೆಗಾರರಿಗೆ ನೀರು ಬಿಟ್ಟುಕೊಡುತ್ತಿಲ್ಲ. ಅವರಿಗೆ ಅನ್ಯಾಯ ಮಾಡುತ್ತಿದ್ದಾರೆ ಎಂದು ರಾಷ್ಟ್ರಮಟ್ಟದಲ್ಲಿ ಪ್ರಚಾರ ನಡೆಯುತ್ತಿದೆ. ನಾನು ವಿಧಿಯಿಲ್ಲದೆ ಹೇಳಬೇಕಾಗುತ್ತದೆ. ಇದು ಪ್ರಚಾರ ಅಲ್ಲ, ಅದು ಅಪಪ್ರಚಾರ ಎಂದು. ಹೇಗೆ ಅಪಪ್ರಚಾರ ಎಂದರೆ ಅದಕ್ಕೆ ಒಂದು ಸಣ್ಣ ಉದಾಹರಣೆಯನ್ನು ಕೊಡುತ್ತೇನೆ. ಈ ವರ್ಷ ನಮಗೆ ನೀರನ್ನು ಬಿಟ್ಟುಕೊಡಬೇಕೆಂದು ತಮಿಳುನಾಡಿನವರು ಒಂದು ಪ್ರಸ್ತಾವನೆಯನ್ನು ನಮ್ಮ ಕರ್ನಾಟಕ

ಸರ್ಕಾರದ ಮುಂದೆ ತಂದರು. ಅವರ ಬೇಡಿಕೆ ಏನೆಂದರೆ, ನಮ್ಮ ಕುರ್ವ ಬೆಳೆಯೆಲ್ಲಾ ಒಣಗಿ ಹೋಗುತ್ತಿದೆ. ಆ ಬೆಳೆಗೆ ನೀರನ್ನು ಬಿಟ್ಟುಕೊಡಬೇಕೆಂಬ ವಾದವನ್ನು ಮುಂದಿಟ್ಟು ಅವರು ನಮ್ಮ ಕರ್ನಾಟಕ ರಾಜ್ಯಕ್ಕೆ ಒಂದು ಬೇಡಿಕೆಯನ್ನು ಸಲ್ಲಿಸಿದರು. ಪ್ರತಿವರ್ಷ ಈ ಪ್ರದೇಶದಲ್ಲಿ ಇಡುತ್ತಿದ್ದ ಬೆಳೆ ಎಂದರೆ ೧.೬೭ ಲಕ್ಷ ಎಕರೆ. ಆದರೆ ತಮಿಳ್ನಾಡಿನ ಸರ್ಕಾರ ಅವರ ರೈತರ ಮುಖಾಂತರ ಈ ವರ್ಷ ಬೆಳೆ ಇಟ್ಟಿರತಕ್ಕ ಪ್ರದೇಶ ಎಂದರೆ ೨.೬೭ ಲಕ್ಷ ಎಕರೆ. ಅಂದರೆ ಪ್ರತಿವರ್ಷ ಅವರು ಎಷ್ಟು ಎಕರೆ ಪ್ರದೇಶದಲ್ಲಿ ವ್ಯವಸಾಯ ಮಾಡುತ್ತಿದ್ದರೋ ಅದಕ್ಕಿಂತ ಹೆಚ್ಚಿಗೆ ೧ ಲಕ್ಷ ಎಕರೆ ಪ್ರದೇಶದಲ್ಲಿ ಬೆಳೆ ಇಟ್ಟಿದ್ದಾರೆ. ಆದ್ದರಿಂದ ಮಾಮೂಲಿ ಹೋಗುತ್ತಿದ್ದ ನೀರಿಗಿಂತ ಹೆಚ್ಚಿನ ಅವಶ್ಯಕತೆ ಇರತಕ್ಕದ್ದು ನಿಜ ಎಂಬುದನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ಈ ಅಂಕಿಅಂಶ ಮತ್ತು ಮಾಹಿತಿಗಳೆರಡನ್ನೂ ನಾನು ಸೃಷ್ಟಿ ಮಾಡಿಕೊಡುತ್ತಿಲ್ಲ. ತಮಿಳ್ನಾಡಿನ ವ್ಯವಸಾಯ ಇಲಾಖೆಯ ಅಧಿಕೃತ ಪ್ರಕಟಣೆಯಲ್ಲಿ ಇದು ಬಂದಿದೆ. ೧.೬೭ ಲಕ್ಷ ಎಕರೆ ಪ್ರದೇಶದ ಜೊತೆಗೆ ೧ ಲಕ್ಷ ಎಕರೆ ಪ್ರದೇಶದಲ್ಲಿ ಬೆಳೆಯನ್ನು ಇಟ್ಟಿದ್ದಾರೆ. ಆದುದರಿಂದ ತಮಿಳುನಾಡಿನವರಿಗೆ ಹೆಚ್ಚಿಗೆ ನೀರನ್ನು ಬಿಟ್ಟುಕೊಡುವ ಅವಶ್ಯಕತೆ ನಮ್ಮ ಸರ್ಕಾರಕ್ಕೆ ಬರುವುದಿಲ್ಲ. ಆದರೆ ದುರದೃಷ್ಟವಶಾತ್ ಹೇಳುವುದಾದರೆ ನಮಗೆ ಎಲ್ಲವೂ ಕೂಡ ವಿರೋಧವಾಗಿದೆ. ಆಡಳಿತವನ್ನು ನಡೆಸುತ್ತಿರುವ ಈ ಸರ್ಕಾರಕ್ಕೆ ಇವರದ್ದೇ ಪಕ್ಷದ ಸರ್ಕಾರ ದೆಹಲಿಯಲ್ಲಿರುವುದರಿಂದ ಅವರನ್ನು ಸಂಪ್ರೀತರನ್ನಾಗಿ ಮಾಡುವಂಥ ಜವಾಬ್ದಾರಿ ಕೂಡ ಇವರಿಗಿದೆ. ಬಹುಶಃ ಇದರಲ್ಲಿ ಒಂದು ಆಬ್ಲಿಗೇಷನ್ ಕೂಡ ಇದೆ. ಈ ಕಾರಣಕ್ಕೋ ಅಥವಾ ಬೇರೆ ಕಾರಣಕ್ಕೋ ನಮ್ಮ ಕೆ.ಆರ್.ಎಸ್.ನಿಂದ ತಮಿಳ್ನಾಡಿಗೆ ಈ ಸರ್ಕಾರದವರು ನೀರನ್ನು ಬಿಟ್ಟುಕೊಟ್ಟಿದ್ದಾರೆ. ಅನ್ಯಾಯದ ಪರಂಪರೆಗೆ ಕೇವಲ ಹೊರಗಿನವರು ಮಾತ್ರ ಕಾರಣವಲ್ಲ. ಮೋಸದ ಕೃತ್ಯಕ್ಕೆ ಕೇವಲ ತಮಿಳ್ನಾಡಿನವರು ಮಾತ್ರ ಕಾರಣವಲ್ಲ. ನಮ್ಮವರೂ ಕೂಡ ಅಷ್ಟೇ ಕಾರಣವಾಗಿದ್ದಾರೆ. ನ್ಯಾಯ ನಮ್ಮದಾಗಿದೆ ಎಂಬುದಕ್ಕೆ ನೀರಿನ ಹಂಚಿಕೆ ವಿಷಯದಲ್ಲಿ ನಾವು ಪರಿಗಣಿಸಬೇಕಾದ ವಿಷಯ ಏನೆಂದರೆ, ಕಾವೇರಿ ಪ್ರದೇಶದ ನೀರಾವರಿ ಲಭ್ಯತೆ ಎಷ್ಟಿದೆ? ಈ ಪರಿಸ್ಥಿತಿಯಲ್ಲಿ ಈ ರಾಜ್ಯದ ರೈತರ ಹಿತವನ್ನು ಕಾಪಾಡುವಂಥ ಒಂದು ಪ್ರಜಾತಂತ್ರ ವ್ಯವಸ್ಥೆಯ ಸರ್ಕಾರ ಇದ್ದೀತೇ ಇದನ್ನು ನಾನು ನಂಬಿಕೊಳ್ಳಬೇಕೆ? ನಂಬಿಕೊಂಡು ಕಂಠ ಶೋಷಣೆ ಮಾಡಿಕೊಳ್ಳಬೇಕೆ ದಯವಿಟ್ಟು ನನಗೆ ತಾವು ಅಪ್ಪಣೆ ಕೊಡಿ.

In the changed circumstances is there anybody who cares for safeguarding the interest of the state.

ಇದರಲ್ಲಿ ಮಾನ್ಯ ಮುಖ್ಯಮಂತ್ರಿಗಳಿಗೆ ಆಸಕ್ತಿ ಇಲ್ಲ. ನಾನು ನೇರವಾಗಿ ಅವರ ಮೇಲೆ ಆಪಾದನೆ ಮಾಡುತ್ತೇನೆ. ಅವರು ಇಲ್ಲಿ ಕುಳಿತುಕೊಳ್ಳಬೇಕಾಗಿತ್ತು. ನಾನು ದೊಡ್ಡ ಆಪಾದನೆ ಮಾಡುತ್ತಿದ್ದೇನೆ. ಈ ರಾಜ್ಯದ ಮುಖ್ಯಮಂತ್ರಿಗಳಿಗೆ ಸಮುದ್ರದ ಉಪ್ಪು ನೀರಿನ ಬಗ್ಗೆ ಇರುವಷ್ಟು ಆಸಕ್ತಿ ಈ ಎರಡು ನದಿ ಕಣಿವೆಗಳ ಜನರ ಹಿತವನ್ನು ರಕ್ಷಣೆ ಮಾಡುವ ಬಗ್ಗೆ ಇಲ್ಲ. ನಾನು ಇವತ್ತು ಪ್ರಾಮಾಣಿಕವಾಗಿ ಹೇಳುತ್ತಿದ್ದೇನೆ. ಕೇವಲ ಆಸಕ್ತಿ ಮಾತ್ರ ಅಲ್ಲ, ಇವರ ಪ್ರಾಮಾಣಿಕತೆಯನ್ನು ನಾನು ಪ್ರಶ್ನೆ ಮಾಡಬೇಕಾಗಿದೆ. ನಾನು ಅವರಿಗೆ ಹೇಳುವುದಕ್ಕೆ ಇಷ್ಟಪಡುತ್ತೇನೆ. ಎಲ್ಲ ವಿಷಯದಲ್ಲೂ ಎಲ್ಲ ಕಾಲದಲ್ಲೂ ಎಲ್ಲರನ್ನೂ ತಾವು ಮೋಸ ಮಾಡುವುದಕ್ಕೆ ಸಾಧ್ಯವಿಲ್ಲ. ಕಾವೇರಿ, ಕೃಷ್ಣಾ ನದಿ ನೀರಿನ ಬಳಕೆಯ ಬಗ್ಗೆ, ಅದನ್ನು ಉಳಿಸಿಕೊಳ್ಳುವ ಬಗ್ಗೆ ಈ ಮುಖ್ಯಮಂತ್ರಿಗಳ ಪ್ರಾಮುಖ್ಯತೆಯನ್ನು ನಾನು ಪ್ರಶ್ನೆ ಮಾಡುತಿದ್ದೇನೆ.

ಜನರು ಹೊರಗಡೆ ಏನು ಮಾತನಾಡುತ್ತಿದ್ದಾರೆ ಅದನ್ನು ನಾನು ಹೇಳುವುದಿಲ್ಲ. ಕಾವೇರಿ, ಕೃಷ್ಣಾಕ್ಕೆ ದುಡ್ಡು ಕೊಟ್ಟರೆ, ಅಲ್ಲಿ ನೀರಾವರಿಯಾದರೆ, ಯಾವುದೋ ಒಂದು ವರ್ಗದ ಜನರಿಗೆ ಅನುಕೂಲವಾಗುತ್ತದೆಂಬ ರಾಜಕೀಯ ಹಿನ್ನೆಲೆ ಕೂಡ ಇದೆ ಎಂದು ಜನರು ಹೇಳುತ್ತಿದ್ದಾರೆ. ಈ ಕರ್ನಾಟಕದ ರಾಜಕೀಯಕ್ಕೆ ನಾನೇನೂ ಹಸುಕೂಸಲ್ಲ. ನಾನು ಈ ಮನೆಗೆ ಬಂದು ೧೦ ವರ್ಷ ಆಯಿತು. ನಾನು ಎಲ್ಲವನ್ನೂ ನೋಡುತ್ತಿದ್ದೇನೆ. ಕೃಷ್ಣಾ, ಕಾವೇರಿ ಯೋಜನೆಗಳನ್ನು ಅನುಷ್ಠಾನ ಮಾಡುವುದರಿಂದ ಕೇವಲ ಒಂದು ವರ್ಗದ ಜನರಿಗೆ ಅನುಕೂಲ ಆಗುತ್ತದೆಂಬ ಅಭಿಪ್ರಾಯವನ್ನು ಇಟ್ಟುಕೊಂಡು ರಾಜಕೀಯವನ್ನು ಮಾಡುವಂಥ ರಾಜಕಾರಣವೂ ಇದರಲ್ಲಿದೆ. ಬಹುಶಃ ಇದು ಮಾನ್ಯ ಮುಖ್ಯಮಂತ್ರಿಗಳಿಗೆ ಹೊರತಾಗಿಲ್ಲವೆಂದು ನಾನು ಭಾವಿಸುತ್ತೇನೆ. ಏಕೆಂದರೆ ತಾ. ೩೦.೧೨.೧೯೯೨ರ ಒಂದು ಪತ್ರ ನನ್ನ ಹತ್ತಿರ ಇದೆ. ನಾನು ಅವರಿಗೆ ಕೊಟ್ಟಿರತಕ್ಕ ಪ್ರತಿಯೊಂದು ಕಾಗದಕ್ಕೂ ಅವರಿಂದ ಸ್ವೀಕರಣಾ ಪತ್ರವನ್ನು ಇಟ್ಟುಕೊಂಡಿದ್ದೇನೆ. ಇಂಥ ಒಂದು ಸಂದರ್ಭ ಇವತ್ತಲ್ಲಾ ನಾಳೆ ಬಂದೇ ಬರುತ್ತದೆಂದು ನಾನು ತಿಳಿದುಕೊಂಡಿದ್ದೆ. ನನ್ನ ಯಾವುದೇ ಒಂದು ಕಾಗದಕ್ಕೂ ಇವರು ಉತ್ತರವನ್ನು ಕೊಟ್ಟಿಲ್ಲ. ಏತಕ್ಕೆ ಸ್ವಾಮಿ ಒಬ್ಬ ಶಾಸಕನನ್ನು ಭಿನ್ನಮತೀಯ ಗುಂಪಿನಿಂದ ಇವರ ಗುಂಪಿಗೆ ಎಳೆದುಕೊಳ್ಳುವುದಕ್ಕೆ ರಾಜ್ಯದ ಹೆಲಿಕ್ಯಾಪ್ಟರ್ ಇಟ್ಟುಕೊಂಡು ಅವರ ಮನೆಯ ಮದುವೆಗೆ ಹೋಗುತ್ತಾರೆ. ಆದರೆ ಕಾವೇರಿ, ಕೃಷ್ಣಾ ನೀರಿನ ಬಗ್ಗೆ ಪತ್ರ ಬರೆದರೆ ಉತ್ತರ ಬರೆಯುವಷ್ಟು ವ್ಯವಧಾನವಾಗಲಿ, ಆಸಕ್ತಿ, ಪ್ರಾಮಾಣಿಕತೆಯಾಗಲಿ ಮುಖ್ಯಮಂತ್ರಿಗಳಿಗೆ ಇಲ್ಲ. ಮಾನ್ಯ ಮುಖ್ಯಮಂತ್ರಿಯವರು ನದಿ ನೀರಿನ ಬಳಕೆಯ ಬಗ್ಗೆ ಪ್ರಾಮಾಣಿಕವಾದ ಪ್ರಯತ್ನವನ್ನು ಮಾಡಿಲ್ಲ. ಯಾವುದೇ ದೃಷ್ಟಿಯಿಂದ ನೋಡಿದಾಗಲೂ ಕಾವೇರಿ ನೀರಿನ ಹಕ್ಕಿನ ಬಗ್ಗೆ, ಅದರಲ್ಲಿ ನಮಗೆ ದಕ್ಕಬೇಕಾದಂತಹ ಪ್ರಮಾಣದ ಬಗ್ಗೆ ಕರ್ನಾಟಕದ ವಾದ ಏನು ನಿಲುವು ಏನು ಅದು ನ್ಯಾಯ ಸಮ್ಮತವಾದ ನಿಲುವು ಆಗಬೇಕಾಗಿದೆ. ನ್ಯಾಯ ಸಮ್ಮತವಾದ ನಿಲುವು ಮತ್ತು ವಾದವನ್ನು ಪುಷ್ಟೀಕರಿಸಿ ರಾಜ್ಯದ ಜನರ ಹಿತವನ್ನು ಕಾಪಾಡುವಲ್ಲಿ ರಾಜ್ಯ ಸರ್ಕಾರ ವಿಫಲವಾಗಿದೆ ಎಂದು ನನ್ನ ಭಾವನೆ. ಈ ರಾಜ್ಯದಲ್ಲಿರತಕ್ಕಂಥ ಇರಿಗೇಷನ್ ಪೊಟೆನ್ಶಿಯಾಲಿಟಿ ನೀರಾವರಿ ಲಭ್ಯತೆ ೫೫ ಲಕ್ಷ ಹೆಕ್ಟೇರ್, ಅದರಲ್ಲಿ ೪೦ ವರ್ಷ ನಮ್ಮ ಎಲ್ಲಾ ಸರ್ಕಾರಗಳು ಸೇರಿಕೊಂಡು ನಾವು ಸೃಷ್ಟಿ ಮಾಡಿರುವಂಥದ್ದು, ಸೃಜಿಸಿರುವಂಥದ್ದು, ನೀರಾವರಿ ಬಳಸಿಕೊಂಡಿರುವುದು ಕೇವಲ ೨೨ ಲಕ್ಷ ಹೆಕ್ಟೇರ್ ಮಾತ್ರ. ಅಂದರೆ ನಮಗೆ ಲಭ್ಯವಿರುವ ೫೫ ಲಕ್ಷ ಹೆಕ್ಟೇರ್ ನೀರಾವರಿ ಸಾಮರ್ಥ್ಯದಲ್ಲಿ ನಾವು ಬಳಸಿಕೊಂಡಿರುವುದು ಕೇವಲ ೨೨ ಲಕ್ಷ ಎಕರೆಗಳಿಗೆ ಮಾತ್ರ. ರಾಷ್ಟ್ರದ ನೀರಾವರಿಯಲ್ಲಿ ಶೇ. ೩೨ರಷ್ಟು ಜಮೀನು ಕರ್ನಾಟಕದ್ದು ಎಂದು ನಮ್ಮ ಸ್ನೇಹಿತರು ನೆಳಗ್ಗೆ ಹೇಳುತ್ತಿದ್ದರು. ಇದಕ್ಕೆ ಪ್ರಾಮಾಣಿಕವಾದ ಪ್ರಯತ್ನವನ್ನು ಮಾಡಿಲ್ಲವೆಂದು ಸಹ ಹೇಳಿದರು. ಕರ್ನಾಟಕ ನೀರಾವರಿಯು ಶೇಕಡವಾರು ೧೩.೮ ಇದ್ದು ಇವತ್ತು ೧೪.೩೬ ಎಂದರೆ ನಾನು ಇದ್ದಂತಹ ಸರ್ಕಾರವು ಸೇರಿ ನಾವೆಲ್ಲ ನಾಚಿಕೆ ಪಡಬೇಕಾಗಿದೆ. ಒಂದು ದಶಕದಲ್ಲಿ ನಾವು ಸೃಜಿಸಿದಂತಹ ನೀರಾವರಿ ಸಾಮರ್ಥ್ಯ ಒಂದೇ ಒಂದು ಪರ್ಸೆಂಟ್ ೧೩.೮ in 1980 and now it is 14.36 in 1993. In the entire ten years, the potential used in karnataka is only one percent.

ಇದು ಸಾಧನೆ ಏನು? ಇದನ್ನು ತಮ್ಮ ಗಮನಕ್ಕೂ, ಸರ್ಕಾರದ ಗಮನಕ್ಕೂ ಏತಕ್ಕೆ ತರುತ್ತಿದ್ದೇನೆ ಎಂದರೆ ನೀವು ೧೧ ಲಕ್ಷ ಎಕರೆಗಿಂತ ಜಾಸ್ತಿ ನೀರಾವರಿ ಮಾಡಬಾರದು ಎನ್ನತಕ್ಕಂಥ ಕತ್ತಿಯನ್ನು ನಮ್ಮ ತಲೆಯ ಮೇಲೆ ತೂಗು ಹಾಕಿರುವಂತಹ ಗಂಭೀರವಾದಂತಹ ಪರಿಸ್ಥಿತಿ. ಅವರೂ

ವಿಶೇಷವಾದ ಸನ್ನಿವೇಶವಿರುವಾಗ ಈ ಸರ್ಕಾರಗಳು ಮಾಡಿರುವಂತಹ ಮಹತ್ ಸಾಧನೆ ಏನು ಎಂದರೆ ಒಂದು ದಶಕದಲ್ಲಿ ಒಂದೇ ಒಂದು ಪರ್ಸೆಂಟ್ ನೀರಾವರಿ ಹೆಚ್ಚು ಮಾಡಿರುವುದು. ಇದು ಸರ್ಕಾರದ ವಿಫಲತೆಯಲ್ಲವೇನು? ನೀರಾವರಿಯ ವಿಷಯದಲ್ಲಿ ಎಷ್ಟು ಆದ್ಯತೆ ಕೊಡಬೇಕಾಗಿತ್ತೋ ಅಷ್ಟು ಇವರು ಕೊಟ್ಟಿಲ್ಲ, ಯಾವುದಕ್ಕೂ ಕೊಟ್ಟಿಲ್ಲ. ನಾನು ಬೆಳಿಗ್ಗೆ ಒಟ್ಟಾರೆ ಸರ್ಕಾರದವರು ಕೊಡಬೇಕಾದ ಬಿಲ್ಲಿನ ಬಗ್ಗೆ ಹೇಳಿದೆ. ನೀವು ಇದನ್ನು ಇಲ್ಲಿ ಹೇಳಬೇಡಿ ಪೇಪರ್‌ಗಳಲ್ಲಿ ಬರುತ್ತದೆ, ತಮಿಳುನಾಡಿನವರಿಗೆ ಗೊತ್ತಾಗುತ್ತದೆ ಎಂದು, ಮೊದಲನಿಂದಲೂ ಅಂದರೆ ೧೦ ವರ್ಷಗಳಿಂದಲೂ ನನಗೆ ಹೇಳಿಕೊಂಡು ಬರುತ್ತಿದ್ದಾರೆ. ಆದರೆ ವಿಧಿ ಇಲ್ಲ, ಇವತ್ತು ಇದನ್ನು ಹೇಳುತ್ತಿದ್ದೇನೆ. ಸುಮಾರು ಒಂದೆರಡು ಕೋಟಿ ರೂಪಾಯಿಗಳನ್ನು ಖರ್ಚು ಮಾಡಿ ಡೀಪ್ ಕಟ್ ಚಾನಲ್ ತೆಗೆದರೆ ತುಮಕೂರು ಜಿಲ್ಲೆಯಲ್ಲಿ ೪ ಲಕ್ಷ ಎಕರೆ ನೀರಾವರಿಯಾಗುತ್ತದೆ. ಈ ಕೆಲಸಕ್ಕೆ ಕೊಡಬೇಕಾದಂತಹ ೩೦ ಕೋಟಿ ರೂಪಾಯಿಗಳ ಬಿಲ್ಲನ್ನು ಕೊಟ್ಟಿಲ್ಲ. Let the irrigation Minister ascertain himself whether I am telling truth or not? If Iam not telling truth, let him dispute.

೩೦ ಕೋಟಿ ರೂಪಾಯಿಗಳನ್ನು ಇವತ್ತು ಆ ಗುತ್ತಿಗೆದಾರರಿಗೆ ಬಾಕಿಯನ್ನು ಕೊಡಬೇಕಾಗಿದೆ. ಬೆಳಿಗ್ಗೆ ಶ್ರೀ ಚಂದ್ರೇಗೌಡರು "ಸುಪ್ರೀಂ ಕೋರ್ಟ್ ಮಾಡಿರುವಂತಹ ತೀರ್ಮಾನದಿಂದ ನಮಗೆ ಅನ್ಯಾಯವಾಗಿದೆ, ಮೋಸವಾಗಿದೆ, ಇದಕ್ಕೆ ಪರಿಹಾರವೇನು?" ಎಂದರು. ಅದಕ್ಕೆ ಪರಿಹಾರವನ್ನು ನಾನು ಹೇಳಬೇಕಾಗಿಲ್ಲ.

ಈ ರಾಜ್ಯದ ಸಾಮಾನ್ಯ ಜನರು ಹೇಳಿದ್ದಾರೆ, ಎಲ್ಲಕ್ಕಿಂತ ಹೆಚ್ಚಾಗಿ ಈ ರಾಜ್ಯದ ಜನ ೬೨ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಒಂದು ತೀರ್ಮಾನ ಮಾಡಿದ್ದಾರೆ. ಬಹುಶಃ ಅದನ್ನು ಹೇಳಿದರೆ ಇವರ್‍ಯಾರಿಗೂ ಸಿಟ್ಟು ಬರುವುದಿಲ್ಲ, ಏಕೆಂದರೆ ಇದನ್ನು ನಾವು ಹೇಳುತ್ತಿಲ್ಲ. ನಾವು ಹೇಳಿದರೆ you are taking politcs out of everything. ಕರ್ನಾಟಕದ ನೆಲ, ಜಲ, ಭಾಷೆ, ಸಂಸ್ಕೃತಿಗಳಿಗೆ ಎದುರಾಗಿರುವ ಎಲ್ಲಾ ಬಗೆಯ ಅಭಾಸ, ಅಪಾಯ, ಆತಂಕದ ಮೂಲ ಕಾರಣ ಬೆನ್ನುಹುರಿ ಇಲ್ಲದ ರಾಜ್ಯದ ರಾಜಕಾರಣ ಮತ್ತು ರಾಜಕಾರಣಿಗಳು ಎಂಬ ನೇರ ಹಾಗೂ ನಿಷ್ಠುರವಾದ ತೀರ್ಮಾನಕ್ಕೆ ಸಾಹಿತಿಗಳು ಬಂದಿದ್ದಾರೆ. ಅಂದರೆ ಈ ೪೦ ವರ್ಷದಲ್ಲಿ ಕರ್ನಾಟಕದಲ್ಲಿ ಇರುವಂತಹ ೫೫ ಲಕ್ಷ ಹೆಕ್ಟೇರ್ ನೀರಾವರಿ ಸಾಮರ್ಥ್ಯವನ್ನು ಬಳಸಿಕೊಳ್ಳುವುದಕ್ಕೆ ಆಗದೇ ಹೋದಂತಹ ಅಸಮರ್ಥತೆ, ಅಸಡ್ಡೆ, ಅಲಕ್ಷ್ಯ, ಅವಿವೇಕತನ, ಮೋಸ, ದ್ರೋಹ ಇವೆಲ್ಲದಕ್ಕೂ ಕೂಡ ಈ ಬೆನ್ನುಹುರಿ ಇಲ್ಲದ ರಾಜಕಾರಣಿಗಳು ಎಂದು. ರಾಜಕಾರಣಿಗಳಾದಂತಹ ನಾವು ಇದನ್ನು ಹೇಳುತ್ತಾ ಇಲ್ಲ. ಆದಕ್ಕೇ ನಾನು ಬೆಳಿಗ್ಗೆ ಹೇಳಿದ್ದು, ಇಂತಹ ಒಂದು ಸಂದರ್ಭ ಬಂದಾಗ ಸ್ವಲ್ಪ ಗಂಡಸುತನ ಇರುವ ಸರ್ಕಾರ ಬೇಕಾಗುತ್ತದೆ. ದೃಢವಾದ ಸರ್ಕಾರ ಬೇಕಾಗುತ್ತದೆ ಎಂದು. ಅಧ್ಯಕ್ಷರೇ, ಸರ್ಕಾರ ಬಹಳ ದೃಢವಾಗಿದೆಯಲ್ಲವೇ? ಈಗ ನಾನು ಇವತ್ತು ಪ್ರಾಮಾಣಿಕವಾಗಿ ಒಂದು ಮಾತು ಹೇಳುತ್ತಿದ್ದೇನೆ. ಸುಮಾರು ೭೦-೮೦ ಜನ ಶಾಸಕರು ವಿರೋಧ ಮಾಡುತ್ತಿರುವಂತಹ ಈ ಸರ್ಕಾರಕ್ಕೆ ದಿಟ್ಟ ನಿಲುವನ್ನು ತೆಗೆದುಕೊಳ್ಳುವಂತಹ ಆಸಕ್ತಿ ಇಲ್ಲ, ಸಾಧ್ಯನೂ ಇಲ್ಲ. ಗಂಡಹೆಂಡಿರ ಜಗಳದಲ್ಲಿ ಕೂಸು ಬಡವಾಗುತ್ತಿದೆ. ಒಂದು ಕಡೆ ಮುಖ್ಯಮಂತ್ರಿಗಳಿಗೆ ಭಿನ್ನಮತೀಯರ ಉಪಟಳ. ಅವರಿಗೆ ಅಧಿಕಾರವನ್ನು ಕಿತ್ತುಕೊಳ್ಳುವಂತಹ ಆಟ, ಇವರಿಗೆ ಅಧಿಕಾರವನ್ನು ಉಳಿಸಿಕೊಳ್ಳುವಂತಹ ಚಟ. ಈ ಮಧ್ಯೆ ಈ ರಾಜ್ಯದ ಇಡೀ

ಅಭಿವೃದ್ಧಿ ಕೆಲಸಗಳು ನಿಂತುಹೋಗಿವೆ. ಇದರ ಒಳಗಡೆ ಕಾವೇರಿ ನೀರಿನಂತಹ ಅತ್ಯಂತ ಗಂಭೀರವಾದಂತಹ ಸಮಸ್ಯೆಯನ್ನು ಕೈಗೆತ್ತಿಕೊಂಡು ಅದರ ಹಿತವನ್ನು ಕಾಪಾಡುವುದರಲ್ಲಿ ಕೋರ್ಟ್ ಮುಂದೆ ಹೋಗುವವರು ಯಾರೂ ಗತಿ ಇಲ್ಲವೆ ಸ್ವಾಮಿ? ಈ ರಾಜ್ಯದ ಒಂದು ಗಂಭೀರವಾದಂತಹ ಸಮಸ್ಯೆ ಉಚ್ಚ ನ್ಯಾಯಾಲಯಕ್ಕೆ ಬಂದಾಗ ಇವರ ಕಮಿಷನರ್ ಏನು ಮಾಡುತ್ತಿದ್ದರು? ಇದರ ಸರ್ಕಾರಿ ವಕೀಲರು ಏನು ಮಾಡುತ್ತಿದ್ದರು? ಸನ್ಮಾನ್ಯ ಅಧ್ಯಕ್ಷರೇ, ನಾನು ಹೇಳುತ್ತಿದ್ದೇನೆ ಕೇಳಿ, ಇದು ಎಲ್ಲಾ ಕಾಲದಲ್ಲೂ ನಡೆಯುತ್ತದೆ. ನಮ್ಮ ಕಾಲದಲ್ಲೂ ನಡೆಯಿತು. ಯಾವಾಗ ಆಡಳಿತದಲ್ಲಿ ಬಿಕ್ಕಟ್ಟು ತಪ್ಪುತ್ತದೋ, ಭಿನ್ನತೆ ಬರುತ್ತದೋ ಆಗ ಅಧಿಕಾರಿಗಳಲ್ಲಿ ಬಹುಶಃ ಸರ್ಕಾರದ ಮಾತನ್ನು ಕೇಳುವಂತಹ ಪ್ರವೃತ್ತಿಯಲ್ಲಿ ಅತ್ಯಂತ ಗಹನವಾದಂತಹ ಬದಲಾವಣೆಯಾಗುತ್ತದೆ. ಅಂತಹ ಬದಲಾವಣೆ ಇವತ್ತೂ ಕೂಡ ಆಗಿದೆ. ಆದುದರಿಂದ ನಾನು ಮುಖ್ಯಮಂತ್ರಿ ಮತ್ತು ನೀರಾವರಿ ಸಚಿವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ, ಮುಖ್ಯಮಂತ್ರಿಗಳೇ, ನಿಮ್ಮ ನೀರಾವರಿ ಮಂತ್ರಿಗಳು ಸರಿಯಾಗಿ ಕೆಲಸ ಮಾಡದೇ ಇದ್ದರೆ ಅವರನ್ನು ಡಿಸ್‌ಮಿಸ್ ಮಾಡಿಬಿಡಿ. ಇಲ್ಲದಿದ್ದರೆ ಖಾತೆ ಬದಲಾವಣೆ ಮಾಡಿಬಿಡಿ. ನಿಮ್ಮ ನಿಮ್ಮದು ಏನಾದರೂ ಇದ್ದುಕೊಳ್ಳಲಿ. Iam not worried about it. ನೀರಾವರಿ ಸಚಿವರಿಗೆ ನಾನು ಬೆಳಿಗ್ಗೆ ಹೇಳಿದ್ದೇನೆ. ಕಾವೇರಿ ನದಿಯ ಪಾತ್ರದ ಜನರ ಹಿತವನ್ನು ಕಾಪಾಡುವಂತಹ ಸಂದರ್ಭದಲ್ಲಿ, ಅದನ್ನು ಕಾಪಾಡುವುದಕ್ಕೆ ಆಗದೇ ಇರುವಂತಹ ಸಂದರ್ಭ ಬಂದರೆ ಆ ನಿಮ್ಮ ಸ್ಥಾನವೂ ಸೇರಿದ ಹಾಗೆ ಯಾವುದೇ ಒಂದು ಬೆಲೆ ದೊಡ್ಡದಲ್ಲ. ಅದಕ್ಕೆ ಕಾರಣ ಕೂಡನೂ ಹೇಳಿದ್ದೇನೆ. ನೀವು ಒಬ್ಬ ಮಂತ್ರಿಯಾಗಿ ನಿರ್ವಹಣೆ ಮಾಡುವಂತಹ ಜವಾಬ್ದಾರಿಯ ಜೊತೆಗೆ ಮಣ್ಣಿನ ಮಗನಾಗಿ ಈ ನದಿ ಭಾಗದ ಜನರಿಗೆ ತೀರಿಸಬೇಕಾದಂತಹ ಋಣನೂ ಕೂಡ ಇದೆ. ಮತ್ತೊಮ್ಮೆ ಅದನ್ನು ನಾನು ಪುನರುಚ್ಚಾರ ಮಾಡಿ ತಮ್ಮ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ಸನ್ಮಾನ್ಯ ಅಧ್ಯಕ್ಷರೇ, ನಾನು ಬೆಳಿಗ್ಗೆ ಹೇಳಿದೆ, ಕಾವೇರಿ ನೀರಿನ ಹಕ್ಕನ್ನು ಉಳಿಸಿಕೊಳ್ಳುವುದರಲ್ಲಿ, ಬಳಸಿಕೊಳ್ಳುವುದರಲ್ಲಿ ನಮಗೆ ಇದು ಒಂದು ಪರಂಪರೆಯಾಗಿ ಬಂದಿದೆ. ೧೯೧೧ರಲ್ಲಿ ಅಡಿಪಾಯ ಇಟ್ಟಂತಹ ಸಂದರ್ಭದಲ್ಲಿ ಕೆಆರ್‌ಎಸ್ ಕಟ್ಟುವ ಸಂದರ್ಭದಲ್ಲಿ ಕೂಡ ತಮಿಳುನಾಡಿನವರು ಅಬ್‌ಜಕ್ಷನ್ ಮಾಡಿದರು. ಹಾಗಾಗಿ ಅದು ೧೦ ವರ್ಷ ಮುಂದೆ ಹೋಯಿತು. ಇದು ೧೯೨೪ರವರೆಗೆ ವಿವಾದ ನಡೆಯುತ್ತದೆ. ಆದರೆ ಕೊನೆಗೆ ಆ ಅಣೆಕಟ್ಟು ೧೯೩೧ರಲ್ಲಿ ಮುಗಿಯುತ್ತದೆ. ಆದರೆ ಅಂದು ಕೇಂದ್ರೀಕೃತ ವ್ಯವಸ್ಥೆಯ ಸಂಕೇತವಾಗಿದ್ದಂತಹ ಮಹಾರಾಜರು ಆಳುತ್ತಾ ಇದ್ದರು. ನಾವು ಈಗ ಬಡಾಯಿ ಕೊಚ್ಚಿಕೊಳ್ಳುತ್ತಾ ಇದ್ದೇವೆ. ಇಂದು ವಿಕೇಂದ್ರೀಕೃತ ವ್ಯವಸ್ಥೆಯನ್ನು ಮಾಡಿಕೊಂಡು ಜನರಿಂದ, ಜನರಿಗಾಗಿ, ಜನರಿಂದಲೇ ಆರಿಸಲ್ಪಟ್ಟ, ಜನರ ದುಃಖದುಮ್ಮಾನಗಳಿಗೆ ಸ್ಪಂದಿಸುವಂತಹ ಈ ಸರ್ಕಾರ ಎಂದು. ಇವತ್ತು ಈ ಮಾತನ್ನು ಬಳಸುವಾಗ ಯಾರಿಗೂ ಸಹ ನೋವಾಗದಂತಹ ರೀತಿಯಲ್ಲಿ ಬಳಸುತ್ತಿದ್ದೇನೆ. ವ್ಯವಸಾಯದ ಗಂಧವೇ ಇಲ್ಲದಂತಹ ವರ್ಗದಿಂದ ಬಂದಂತಹ ಸನ್ಮಾನ್ಯ ವಿಶ್ವೇಶ್ವರಯ್ಯನವರು ಅಧಿಕಾರದಲ್ಲಿ ಇದ್ದರು. ಸನ್ಮಾನ್ಯ ಸರ್ ಎಂ. ವಿಶ್ವೇಶ್ವರಯ್ಯನವರನ್ನು ಹೇಳುತ್ತಿರುವಾಗ now or never ಸನ್ಮಾನ್ಯ ಕೃಷ್ಣಾರವರು ಗದ್ದೆಗಳ ಮಧ್ಯೆದಲ್ಲಿಯೇ ಬದುಕುತ್ತಿದ್ದಾರೆ. ಅವರಿಗೆ ಹೇಳಬೇಕಾಗಿದೆ. ಹತ್ತು ವರ್ಷಗಳು ಕೃಷ್ಣರಾಜಸಾಗರದ ಕಟ್ಟಡದ ಕೆಲಸ ನಿಂತಾಗ ಅಲ್ಲಿ ಒಂದು ಪದ ಉಪಯೋಗಿಸುತ್ತಾರೆ. ಆ ಕೆಲಸವನ್ನು ತ್ವರಿತಗತಿಯಲ್ಲಿ ಮುಗಿಸಲಿಕ್ಕೆ ಮಾಡಿದ ಪ್ರಯತ್ನಗಳನ್ನು ಹೇಳುತ್ತಾ Hunderds of petromax lights were brought to te

spot to continue the work for 24 hours. The then Maharaja was the symbol of centiralised administration.

ಮಾನ್ಯ ವಿಶ್ವೇಶ್ವರಯ್ಯನವರು ನಿಂತುಹೋಗಿದ್ದಂಥ ಕೃಷ್ಣಾರಾಜಸಾಗರದ ಕಟ್ಟಡವನ್ನು ಸಂಪೂರ್ಣಗೊಳಿಸಲಿಕ್ಕೆ ನೂರಾರು ದೀಪಗಳನ್ನು ತಂದು ಕೆಲಸವನ್ನು ಮುಗಿಸಿರಬೇಕಾದರೆ, ವಿಕೇಂದ್ರೀಕರಣದ ಸಂಕೇತವಾಗಿರತಕ್ಕಂಥ ಜನರಿಂದಲೇ ಆರಿಸಿ ಬಂದಿರುವಂಥ ವಿಶೇಷ ಪರಿಸ್ಥಿತಿಯಲ್ಲಿ ಈ ಸರ್ಕಾರ ಏನು ಕೆಲಸ ಮಾಡಿದೆ ಎಂಬುದನ್ನು ಹೇಳಲಿ ಸ್ವಾಮಿ?

Let them give me once instance as to what is the speical programme they have adopted to expedite the work.

ಎರಡು ಸಾರಿ ಸನ್ಮಾನ್ಯ ನೀರಾವರಿ ಸಚಿವರು ಕೆಲಸ ನೋಡಲಿಕ್ಕೆ ಬಂದಿದ್ದರು, ಅದಕ್ಕಾಗಿ ನಾನು ಅವರನ್ನು ಅಭಿನಂದಿಸುತ್ತೇನೆ. ನಮ್ಮ ಮುಖ್ಯಮಂತ್ರಿಗಳಿಗಂತು ವ್ಯವದಾನ ಆಗಿಲ್ಲ, ಆಗುವಂತೆ ಕಾಣುವುದೂ ಇಲ್ಲ. ಇನ್ನು ಎಷ್ಟು ದಿನ ತಳ್ಳಿಕೊಂಡು ಹೋಗುತ್ತಾರೆ. ಇನ್ನೊಂದು ೧೫ ದಿವಸ, ತಿಂಗಳು ತಳ್ಳಿಕೊಂಡು ಹೋಗುತ್ತಾರೆ, ಕಂತೆ ಬೀಸಾಕುತ್ತಾರೆ. ನಾನು ಹೇಳಿದೆ ನಿಮಗೆ ಕಾಲಿಗೆ ನಮಸ್ಕಾರವನ್ನು ಮಾಡುವುದು ಬಿಟ್ಟು ಇನ್ನು ಉಳಿದ್ದೆಲ್ಲವನ್ನು ಹೇಳಿದೆ, ಬನ್ನಿ ನೋಡಿ ಎಂದು. ಆದರೆ ಅವರು ಬರಲಿಲ್ಲ. ಸ್ವಾಮಿ ಕೃಷ್ಣರಾಜಸಾಗರವನ್ನು ಕಟ್ಟತಕ್ಕಂಥ ಸಂದರ್ಭದಲ್ಲಿ ಆ ಮಹಾರಾಜರಿಗೆ, ಆ ಒಂದು ಸರ್ಕಾರಕ್ಕೆ ಎಷ್ಟು ಆಸಕ್ತಿ ಇತ್ತು ಎಂದರೆ, ಅವತ್ತಿನ ಸರ್ಕಾರದ The total income of the then Mysore State was 253 lakhs and the estimate for the Krishnarajasagar was 223 lakhs. ಮಹಾರಾಜ ಸರ್ಕಾರದ ಅವತ್ತಿನ ಒಟ್ಟಾರೆ ಹುಟ್ಟುವಳಿ ೨೩೦ ಲಕ್ಷ. ಆ ಯೋಜನೆಗೆ ಅವರು ಇಟ್ಟುಕೊಂಡಂಥ ಹಣ ೨೨೩ ಲಕ್ಷ. ಇಡಿ ಹುಟ್ಟುವಳಿಯನ್ನು ನೀರಾವರಿಯ ಒಂದೇ ಒಂದು ಕೆಲಸಕ್ಕೆ ನಿಗದಿ ಮಾಡುವಂಥ ರಾಜಕೀಯ ಇಚ್ಛಾಶಕ್ತಿ ಅವತ್ತಿನ ದಿವಸ ರಾಜರಿಗೆ ಇದ್ದರೆ, ಈ ರಾಜ್ಯ ಸರ್ಕಾರಕ್ಕೆ ಅದಕ್ಕೆ ಹಣವನ್ನು ಒದಗಿಸತಕ್ಕಂಥ ಇಚ್ಛಾಶಕ್ತಿ ಏತಕ್ಕೆ ಇಲ್ಲ. ಅದಕ್ಕಾಗಿಯೇ ನಾನು ಹೇಳುತ್ತಿರತಕ್ಕಂಥದ್ದು ಶ್ರೀಮಾನ್ ವೀರಪ್ಪ ಮೊಯಿಲಿಯವರ ನೇತೃತ್ವದ ಈ ಸರ್ಕಾರ, ಈ ರಾಜ್ಯದ ಜನರಿಗೆ ನೀರಾವರಿಯ ವಿಷಯದಲ್ಲಿ ಆಗಿರುವಂಥ ಅನ್ಯಾಯದ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುತ್ತಿದೆ.

ಇನ್ನು ಹಣವನ್ನು ಕೊಡುವ ವಿಷಯದಲ್ಲಿ ಹೇಳುವುದಾದರೆ, ಸನ್ಮಾನ್ಯ ಅಧ್ಯಕ್ಷರೇ, ನೀರಾವರಿಗಾಗಿ ೮೦೦ ಕೋಟಿ ರೂಪಾಯಿಗಳನ್ನು ಕೊಟ್ಟಿದ್ದೇವೆಂದು ಆಯವ್ಯಯ ಪತ್ರದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳು ಭಾಷಣ ಮಾಡಿದ್ದಾರೆ. ಏತಕ್ಕೆ ಸುಳ್ಳನ್ನು ಹೇಳುತ್ತೀರಾ? ಏತಕ್ಕೆ ಬುರುಡೆಯನ್ನು ಬಿಡುತ್ತೀರಾ? ಏತಕ್ಕೆ ದೊಂಬರಾಟವನ್ನು ಆಡುತ್ತೀರಾ? ಸನ್ಮಾನ್ಯ ಅಧ್ಯಕ್ಷರೇ, ದಯವಿಟ್ಟು ತಾವು ಗಮನಿಸಬೇಕು. ಇವರ ಅಭಿವೃದ್ಧಿಯೇತರ ವೆಚ್ಚ, ಸಾಮಾನ್ಯ ನಿರ್ವಹಣೆಯೂ ಸೇರಿದಂತೆ ೫೩.೩೦ ೨೦ ಪರ್ಸೆಂಟ್. ಇದು ಕಳೆದ ವರ್ಷ ೬೭ ಪರ್ಸೆಂಟ್ ಇತ್ತು. ಈ ವರ್ಷ ನಮ್ಮ ಮಾಜಿ ಹಣಕಾಸಿನ ಸಚಿವರು ಇದ್ದಾರೆ, ೬೩.೩೦ Percent is your total inplanned exenditure. ಅಂದರೆ ಇದರ ಗಾತ್ರ ೩೦೨೫. ಆ ೩೦೨೫ರಲ್ಲಿ ೬೩ ಪರ್ಸೆಂಟ್ ಎಂದರೆ ೨೦೧೬ ಕೋಟಿ.

ಇವರ ನಾನ್ ಪ್ಲಾನ್ ೬೩ ಪರ್ಸೆಂಟ್ ಇವೆಯಲ್ಲ ಅದು ೨೦೧೬ ಕೋಟಿ ಉಳಿಯುವುದು ೧೦೦೯ ಕೋಟಿ. ಇದು ಸರಿಯೇ? ಎದ್ದು ನಿಂತು ಹೇಳಿ ನಾವು ಮೋಸ ಮಾಡುತ್ತಿದ್ದೇವೆ ಎಂದು.

ಇವರಿಗೆ ಇಡೀ ಯೋಜನಾ ವೆಚ್ಚಕ್ಕಾಗಿ ಇರುವ ಹಣ ಕೇವಲ ೧೦೦೯ ಕೋಟಿ. ಇದರಲ್ಲಿ ೯೦೦ ಕೋಟಿ ನೀರಾವರಿಗೆ ಕೊಡುತ್ತೇವೆ. ೬೦೦ ಕೋಟಿ ವಿದ್ಯುಚ್ಛಕ್ತಿಗೆ ಕೊಡುತ್ತೇವೆಂದು ಹೇಳಿಕೊಂಡು ಊರೂರು ತಿರುಗುತ್ತಾರಲ್ಲ ಏನು ಮಾಡಬೇಕು ಹೇಳಿ, ಎಲ್ಲಿದೆ ಸ್ವಾಮಿ ದುಡ್ಡು? ನಿಮ್ಮ ಸರ್ಕಾರದ ಈ ದ್ರೋಹದ ಪರಂಪರೆಯನ್ನು ಅಂಕಿಅಂಶಗಳ ಜಾಲದಲ್ಲಿ ರೈತರನ್ನು ಸಿಕ್ಕಿಸಿ ಸ್ವರ್ಗಕ್ಕೆ ಎತ್ತುವಂತ ಮೋಸದ ಪರಂಪರೆಯನ್ನು ನೀವು ಮುಂದುವರಿಸಿಕೊಂಡು ಹೋಗುತ್ತಿದ್ದೀರಿ. ಈಗಲಾದರೂ ಬೇಡ, ದಯವಿಟ್ಟು. ಎಲ್ಲದಕ್ಕೂ ಒಂದು ಮಿತಿ ಇದೆ. ರೈತನ ಸಂಯಮಕ್ಕೂ ಮಿತಿ ಇದೆ. ಈ ಕಾವೇರಿ ತೀರ್ಪು ಬಂದಾಗ ಆದಂತ ಘಟನೆಗಳ ಬಗ್ಗೆ ನಿಮ್ಮ ಗಮನ ಸೆಳೆಯುವುದಕ್ಕೆ ಇಷ್ಟಪಡುತ್ತೇನೆ. ೧೯೮೨ರಲ್ಲಿ ನಾನು ಅಲ್ಲಿ ಕುಳಿತುಕೊಂಡು ನನ್ನ ಸರ್ಕಾರಕ್ಕೆ ಹೇಳಿದೆ, "ಕಾವೇರಿ ಕೊಳ್ಳದ ಜನ ರೊಚ್ಚಿಗೆದ್ದಾರು ಎಚ್ಚರಿಕೆ" ಎಂದು. ಅವರು ಕೇಳಲಿಲ್ಲ. ಈಗಲೂ ಹೇಳುತ್ತಿದ್ದೇನೆ. ನಾನು ಮಾಡಿದಂತಹ ಪ್ರತಿಯೊಂದು ಆಪಾದನೆಯನ್ನು ಅಂಕಿಅಂಶಗಳ ಪ್ರಕಾರ ಪ್ರತಿಪಾದನೆ ಮಾಡುವುದಕ್ಕೆ ನಿಂತುಕೊಂಡಿದ್ದೇನೆ. ಆದುದರಿಂದ ೯೦೦ ಕೋಟಿ ರೂಪಾಯಿಗಳನ್ನು ಖರ್ಚು ಮಾಡಿ ನಾವು ಈ ರಾಜ್ಯದ ಅಭಿವೃದ್ಧಿಗಾಗಿ ಆಗಬೇಕಾಗಿರುವ ನೀರಾವರಿ ಕೆಲಸಗಳನ್ನು ಮಾಡುತ್ತೇವೆಂಬ ಸರ್ಕಾರದ ಹೇಳಿಕೆ ಏನಿದೆ, ಪ್ರತಿಪಾದನೆ ಏನಿದೆ ಇದನ್ನು ವಿಧಿ ಇಲ್ಲದೆ ಇದು ಸತ್ಯಕ್ಕೆ ದೂರವಾದುದು, ಇದನ್ನು ಮಾಡಲಿಕ್ಕೆ ಸಾಧ್ಯವಿಲ್ಲದ್ದು ಎಂದು ಹೇಳುತ್ತಿದ್ದೇನೆ. ಈ ಕಾರಣಕ್ಕಾಗಿ ೨೦೦೦ ಇಸವಿಯೊಳಗೆ ಕೃಷ್ಣಾ ನದಿ ನೀರನ್ನು ಬಳಸಿಕೊಳ್ಳುವಂತಹ ಕೆಲಸವನ್ನು ಮಾಡುವುದಕ್ಕೆ ಇವರಿಗೆ ಸಾಧ್ಯವಿಲ್ಲ. ಬೆಳಿಗ್ಗೆ ಕೂಡ ಈ ಮಾತನ್ನು ಹೇಳಿದ್ದೆ. ೧೯೯೩-೯೪ರಲ್ಲಿ ನಾನು ರೈತನ ಮಗನಾಗಿ ಈ ಮಾತನ್ನು ಹೇಳದಿದ್ದರೆ ನನ್ನ ಋಣವನ್ನು ತಡೆದುಕೊಳ್ಳುವುದಕ್ಕೆ ಸಾಧ್ಯವಾಗುತ್ತಿಲ್ಲ. ಅಭಿವೃದ್ಧಿ ಕೆಲಸಗಳಿಗೆ ಅಡ್ಡಿ ಮಾಡುವಂತಹ ಎಲ್.ಓ.ಸಿ. ಎಂಬ ಅನಿಷ್ಟ ಪದ್ಧತಿಯನ್ನು ಕೈಬಿಡಬೇಕು. ಇದರ ಪ್ರತಿಫಲ ಏನೆಂದರೆ ಇವರು ನಿಗದಿ ಮಾಡಿದ ಹಣವನ್ನು ಖರ್ಚು ಮಾಡುವುದರಲ್ಲಿ ಎರಡರಲ್ಲೂ ಅವರು ವಿಫಲರಾಗಿದ್ದಾರೆ.

* * *

ಉಪಾಧ್ಯಕ್ಷರು: ಎಷ್ಟು ಸಮಯ ಬೇಕಾಗುತ್ತದೆ?

ಅಧ್ಯಕ್ಷರೇ, ಈಗ ಶುರುವಾಗಿದೆ. ಅನ್ಯಾಯದ ಪರಂಪರೆಯ [illegible] ಜನತೆಗೆ ಬಿಚ್ಚಿಡಬೇಕಾಗುತ್ತದೆ. ಅನಾವಶ್ಯಕ ಬೇಡ ಎಂದರೆ ನಿಲ್ಲಿಸುತ್ತೇನೆ.

ಇವರ ಗುರಿ ೪,೭೨,೦೪೦ ಲಕ್ಷ. ಇವರು ಸಾಧನೆ ಮಾಡಿರುವುದು [illegible]. ನಾನು ಅಂಕಿ ಅಂಶಗಳನ್ನು ಕೊಡುತ್ತಿರುವ ಉದ್ದೇಶವೇನೆಂದರೆ ನೀವು ಹೇಳುವ ರೀತಿಯಲ್ಲಿ ಕಾರ್ಯವನ್ನು ಮಾಡಲಿಕ್ಕೆ ಸಾಧ್ಯವಿಲ್ಲ. ಇವತ್ತು ಮುಖ್ಯಮಂತ್ರಿಗಳು ಅತ್ಯಂತ ಕಷ್ಟದ ಪರಿಸ್ಥಿತಿಯಲ್ಲಿದ್ದಾರೆ. ನಾನು ಇವತ್ತು ಅತ್ಯಂತ ಕಟುವಾಗಿ ಮಾತನಾಡಬೇಕೆಂದು ಬಂದೆ ಅವರನ್ನು ನೋಡಿದರೆ ಏಕೋ ಏನೋ ಅಯ್ಯೋ ಅನಿಸುತ್ತಿದೆ. ಪಾಪ ಅನಿಸುತ್ತಿದೆ. ತಮ್ಮದೇ ಪಕ್ಷದ ಶಾಸಕರಿಂದ ನಾಲ್ಕು ಸಾರಿ ನನ್ನ ಪ್ರಾಣಕ್ಕೆ ಅಪಾಯ ಒದಗಿತ್ತು ಎಂದು ಹೇಳುವಂತಹ ಸ್ಥಿತಿಗೆ ಅವರು ಬಂದಿರುವಾಗ, ನಾನು ಕಟುವಾಗಿ ಮಾತನಾಡುವುದು ಸರಿಯಲ್ಲವೆನ್ನುವ ಭಾವನೆ ಬರುತ್ತಿದೆ. ಆದರೆ ವಿಧಿಯಿಲ್ಲ, ಹೇಳಬೇಕಾಗುತ್ತದೆ. ಅವರ ಅಮೂಲ್ಯವಾದ ಭಾಷಣದಲ್ಲಿ ಅಪ್ಪಣೆ ಕೊಡಿಸುತ್ತಾರೆ. ೧೯೯೩-೯೪ರಲ್ಲಿ ಹೊಸದಾಗಿ ಸೃಜಿಸಿರುವ ನೀರಾವರಿ ಸಾಮರ್ಥ್ಯವನ್ನು ಬಳಸಿಕೊಳ್ಳಲಾಗುವುದು ಎಂದು ಅವರ ಪೌರುಷ ಇನ್ನೂ ಮುಂದಕ್ಕೆ ಹೋಗುತ್ತದೆ. ನೀರಾವರಿ ಸಾಮರ್ಥ್ಯವನ್ನು ಸೃಜಿಸಿ

ಬಳಸಿಕೊಳ್ಳುವ ನಡುವಿನ ಅವಧಿಯ ಅಂತರ ಇನ್ನು ಮುಂದೆ ಗರಿಷ್ಠ ಒಂದು ವರ್ಷಕ್ಕೆ ಸೀಮಿತಗೊಳಿಸಲಾಗುವುದು ಎಂದು ಮುಖ್ಯಮಂತ್ರಿಗಳು ಅವತ್ತು ಭಾಷಣ ಮಾಡಿದ್ದಾರೆ. ಇದನ್ನು ಎಷ್ಟರಮಟ್ಟಿಗೆ ರೆಡ್ಯೂಸ್ ಮಾಡಿದ್ದಾರೆ. ಅದನ್ನು ದಯಮಾಡಿ ಮುಖ್ಯಮಂತ್ರಿಗಳು ಅಥವಾ ಉಪಮುಖ್ಯಮಂತ್ರಿಗಳು ನನಗೆ ನಿರ್ದಿಷ್ಟವಾದ ಉತ್ತರವನ್ನು ಕೊಡಬೇಕು. ನಾನು ಅವತ್ತೇ ಹೇಳಿದ್ದೆ ನಿಮ್ಮ ಕೈಯಲ್ಲಿ ಇದು ಸಾಧ್ಯವಿಲ್ಲವೆಂದು. "ಇಲ್ಲಾ ಇಲ್ಲ ನೀವು ಎಲ್ಲಕ್ಕೂ ಚಾಪೆ ಎಳೆಯಬೇಡಿ ನಾನು ಸಾಧಿಸುತ್ತೇನೆ" ಎಂದು ಮುಖ್ಯಮಂತ್ರಿಗಳು ಹೇಳಿದ್ದಾರೆ. 'ಅದನ್ನು ನೀವು ಎಷ್ಟರಮಟ್ಟಿಗೆ ಸಾಧನೆ ಮಾಡಿದ್ದೀರಿ?' ಎಂದು ನಿರ್ದಿಷ್ಟವಾಗಿ ಹೇಳಬೇಕೆಂದು ನಾನು ಮುಖ್ಯಮಂತ್ರಿಗಳಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಮತ್ತೊಂದು ವಿಷಯವನ್ನು ಸದನದ ಮುಖಾಂತರ ಜನತೆಯ ಗಮನಕ್ಕೆ ತರಬೇಕಾಗಿದೆ. ಕರ್ನಾಟಕ ರಾಜ್ಯದಲ್ಲಿ ಅಣೆಕಟ್ಟುಗಳನ್ನು ಕಟ್ಟಿ ಇರುವ ಸಾಮರ್ಥ್ಯದ ಬಹುಭಾಗವನ್ನು ನಾವು ಉಪಯೋಗಿಸಿಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ೧೨ ಲಕ್ಷದ ೪೪ ಸಾವಿರದ ೯೩.೬ ಲಕ್ಷ ಎಕರೆಗೆ ಆಗುವಂತಹ ನೀರು ನಮ್ಮ ಡ್ಯಾಮ್‌ಗಳಲ್ಲಿ ತುಂಬಿ ತುಳುಕುತ್ತಿದೆ. ಆದರೆ ಅವಕ್ಕೆ ಕಾಲುವೆ ಇಲ್ಲ. ಹೇಮಾವತಿ, ಕಬಿನಿ, ನಾರಾಯಣಪುರ ಡ್ಯಾಮ್‌ಗಳಲ್ಲಿ ಅಷ್ಟೊಂದು ನೀರಿದೆ. ಈ ಸರ್ಕಾರಕ್ಕೆ ಕಾಲುವೆ ಕೆಲಸವನ್ನು ಮಾಡಿ ರೈತರ ಜಮೀನುಗಳಿಗೆ ನೀರು ಬಿಡುವ ಯೋಗ್ಯತೆ ಇಲ್ಲ. ಇದಕ್ಕಿಂತ ಇನ್ನೊಂದು ದುರಂತ ಬೇಕೆ? ಡ್ಯಾಮ್‌ಗಳಲ್ಲಿರುವ ನೀರನ್ನು ಕಾಲುವೆ ಮಾಡಿ ಬಿಟ್ಟು ಕೊಡುವ ರಾಜಕೀಯ ಇಚ್ಛಾಶಕ್ತಿ, ಕಳಕಳಿಯಿಲ್ಲವೆ? ಇಲ್ಲ ಎನ್ನುವುದಾದರೆ ಏಕೆ ಇಲ್ಲ? ನಾನು ಅದಕ್ಕೇ ಹೇಳಿದ್ದು: ನಮ್ಮ ಮುಖ್ಯಮಂತ್ರಿಗಳಿಗೆ ಉಪ್ಪು ನೀರಿನ ಬಗ್ಗೆ ಇರುವಂತಹ ಆಸಕ್ತಿ, ಆಸೆ, ಪ್ರಾಮಾಣಿಕತೆ ನದಿಯ ನೀರಿನ ಬಗ್ಗೆ ಇಲ್ಲ. ನನಗೆ ಪರಿಣತಿ ಇಲ್ಲ. ತಮ್ಮ ಮುಖಾಂತರ ಕೇಳಿಕೊಳ್ಳುತ್ತೇನೆ. ಯಾರಾದರೂ ಪರಿಣತರು ಇದ್ದರೆ ಅವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಒಂದು ವರ್ಷಕ್ಕೆ ೧೨ ಲಕ್ಷದ ೪೪ ಸಾವಿರದ ೯೩.೬ ಲಕ್ಷ ಎಕರೆಗೆ ನೀರು ಕೊಟ್ಟರೆ ಈ ರಾಜ್ಯದ ಆರ್ಥಿಕ ಪರಿಸ್ಥಿತಿ ಎಷ್ಟು ಉತ್ತಮವಾಗುತ್ತದೆ ಇಷ್ಟೊಂದು ಎಕರೆಗಳಿಗೆ ಆಗುವಂತಹ ನೀರನ್ನು ನಮ್ಮ ಡ್ಯಾಮ್‌ಗಳಲ್ಲಿ ತುಂಬಿಕೊಂಡು ಜಮೀನುಗಳಿಗೆ ನೀರು ಕೊಡಲಿಕ್ಕೆ ಆಗದಿರುವಂತಹ ಪಾಪದ ಅನ್ಯಾಯಕ್ಕೆ ನಾವೆಲ್ಲರೂ ಸೇರಿದ್ದೇವೆ.

ಸನ್ಮಾನ್ಯ ಅಧ್ಯಕ್ಷರೇ, ೮೩ ರಿಂದ ೮೮ರವರೆಗೆ ನಾವು ಸೋತಿದ್ದೇವು. ನಾನು ಅದಕ್ಕೇ ಹೇಳುತ್ತಿದ್ದೇನೆ. ನೀವು ಅರ್ಥ ಮಾಡಿಕೊಳ್ಳುತ್ತಿಲ್ಲ. ಇದು ಅನ್ಯಾಯದ ಪರಂಪರೆ ಎಂದು ಹೇಳಿದ ಮೇಲೂ ಎಲ್ಲರೂ ಭಾಗಿಯಾಗಿದ್ದೇವು ಎಂದು ನನ್ನನ್ನೂ ಸೇರಿಸಿಕೊಂಡು ಹೇಳುತ್ತಿದ್ದೇನೆ. ನಮ್ಮ ಸರ್ಕಾರವನ್ನು ಹೊರತುಮಾಡಿ ನಾನು ಹೇಳುತ್ತಿಲ್ಲ. ಅದ್ದರಿಂದ ಅಲ್ಲಿಂದ ನಾವು ಏನು ಮಾಡಿದೆವು? ಅವರ ಚರಿತ್ರೆಯನ್ನು ಬಿಡಿಸುವುದು ಬೇಡ. ನಾನು ರಾಜೀನಾಮೆ ಕೊಟ್ಟಿದ್ದು ಯಾಕೆ? The very first day when I disagreed with the then Chief Minister I tendered my resignation. I never stayed even for a day after having a difference with the then Chief Minister. ಒಂದೇ ಒಂದು ದಿವಸ ನಾನು ಮಂತ್ರಿಮಂಡಲದ ಸದಸ್ಯನಾಗಿ ಉಳಿದುಕೊಳ್ಳಲಿಲ್ಲ. ಮುಖ್ಯಮಂತ್ರಿಗಳ ಕಾರ್ಯವೈಖರಿಯನ್ನು ಪ್ರತಿಭಟನೆ ಮಾಡಿ ೨೪ ಗಂಟೆಯಲ್ಲೇ ರಾಜೀನಾಮೆ ಕೊಟ್ಟೆ. ಅದು ಪ್ರಾಮಾಣಿಕವಾಗಿ ಕೊಟ್ಟಿದ್ದಾರೆಯೇ ಅಂತ ಸರ್ಕಾರಕ್ಕೆ ನಾನು ಒಂದು ಮಾತನ್ನು ಹೇಳಿದ್ದೆ. "ಈ ಸರ್ಕಾರದಲ್ಲಿ ಗಂಡಸ್ತನ ಇದ್ದರೆ ನೀವು ಈ ಕೆಲಸ ಮಾಡಿ" ಎಂದು. ಆ ಪದವನ್ನು ನಾನು ಇಲ್ಲಿ ಹೇಳಿಲ್ಲ. ಸನ್ಮಾನ್ಯ ರಂಗನಾಥ್ ಅವರು ಹಿರಿಯರು ಇದ್ದಾರೆ. ಅವರ ಬಗ್ಗೆ ನನಗೆ ಬಹಳ ಅಭಿಮಾನ ಇದೆ. ದಯವಿಟ್ಟು ಓದಿನೋಡಿ ಅದನ್ನು.

ನೀವು ತಾಳಿ ಕೊಡೋದು, ಸೀರೆ ಕೊಡೋದು, ಕುಪ್ಪಸ ಕೊಡೋದು ನಿಲ್ಲಿಸಿಬಿಡಿ ಅಂತ ಅವತ್ತು ಹೇಳಿದ್ದೇನೆ. "ಸ್ವಾಮಿ, ನೀರಾವರಿಗೆ ನೀರು ಕೊಟ್ಟುಬಿಟ್ಟರೆ ಬೇರೆ ಕಾರ್ಯಕ್ರಮವನ್ನು ಮುಚ್ಚಬೇಕಾಗುತ್ತದೆ" ಎಂದು ನಿಮ್ಮ ಪಕ್ಷದ ಸದಸ್ಯರು ಅವತ್ತು ಕುಳಿತುಕೊಂಡು ಪ್ರಶ್ನೆ ಮಾಡಿದ್ದರು. ಅದಕ್ಕೇ ನಾನು ಹೇಳಿದ್ದು: ನೀರಾವರಿಗೆ ಹಣ ಖರ್ಚು ಮಾಡಿದರೆ ಒಂದು ವರ್ಗದ ಜನತೆಗೆ ಮಾತ್ರ ಅನುಕೂಲವಾಗುತ್ತದೆ - ಎನ್ನುವ ವ್ಯಾಖ್ಯಾನವನ್ನು ನಿಮ್ಮ ಮುಖ್ಯಮಂತ್ರಿಗಳು ತಿದ್ದಿಕೊಳ್ಳಬೇಕು. ರಾಜಕಾರಣದಲ್ಲಿ ಈ ಮನೆಯ ಸದಸ್ಯನಾಗಿ ನನಗೂ ಹತ್ತು ವರ್ಷ ವಯಸ್ಸಾಗಿದೆ. ಆದ್ದರಿಂದ ನಾನು ಏನು ಮಾಡಬಲ್ಲೆ ಎಂಬುದು ನನ್ನ ಆತ್ಮಕ್ಕೆ ಗೊತ್ತು. ಲೆಜಿಸ್ಲೇಟಿವ್ ಕೌನ್ಸಿಲ್‌ನಲ್ಲಿ ಹೇಮಾವತಿ ಟನಲ್ ಕೆಲಸ ನಿಲ್ಲಿಸಬೇಕೆಂದು ಅವತ್ತಿನ ಮಾನ್ಯ ನೀರಾವರಿ ಸಚಿವರಾದ ಶ್ರೀಮಾನ್ ದೇವೇಗೌಡರು ಹೇಳಿದಾಗ ನಾನು ಹೇಳಿದ್ದೆ ನನ್ನ ಮಂತ್ರಿ ಪದವಿಯ ರಾಜೀನಾಮೆ ತೆಗೆದುಕೊಳ್ಳಿ ಎಂದು. ಆದ್ದರಿಂದ ನಮ್ಮ ಸರ್ಕಾರ ಇದ್ದಾಗ ಪರಿಪೂರ್ಣವಾಗಿ ಎಲ್ಲ ಮಾಡಿದ್ದೇವೆ ಎಂದು ಹೇಳದೇ ಇದ್ದರೂ ಕೂಡ ನಮ್ಮ ಆತ್ಮಕ್ಕೆ ವಂಚನೆ ಇಲ್ಲದ ಹಾಗೆ ನಾನು ಕೆಲಸ ಮಾಡಿದ್ದೇನೆ ಎಂದು ಮಾತ್ರ ನನ್ನ ಸ್ನೇಹಿತರಿಗೆ ಹೇಳುವುದಕ್ಕೆ ಇಚ್ಛೆಪಡುತ್ತೇನೆ.

ಸನ್ಮಾನ್ಯ ಅಧ್ಯಕ್ಷರೇ, ಇರುವಂಥ ಪರಿಸ್ಥಿತಿಯ ದುರ್ಲಾಭವನ್ನು ಪಡೆಯುವುದಕ್ಕೆ ನನಗೆ ಇಷ್ಟವಿಲ್ಲ. ಮಾನ್ಯ ಬಂಗಾರಪ್ಪನವರ ಕಾಲದಲ್ಲಿ ಕಾವೇರಿ ನೀರನ್ನು ಉಳಿಸಿಕೊಳ್ಳುವಂಥ ಪ್ರಾಮಾಣಿಕವಾದ ಪ್ರಯತ್ನ ನಡೆಯಿತು ಎಂದು ಹೇಳಿದರೆ, ಇದು ನಾನು ಬಂಗಾರಪ್ಪನವರನ್ನು ಖುಷಿ ಮಾಡಲಿಕ್ಕೆ ಅಲ್ಲ. ಬಂಗಾರಪ್ಪನವರು, ರಾಮಯ್ಯ ಈ ಸದನಕ್ಕೆ ಬರಲೇಕೂಡದು, ಏನಾದರೂ ಮಾಡಿ ಬರದಂತೆ ತಡೆಯಬೇಕೆಂದು ಕೆಲಸ ಮಾಡಿದರು. ಆದರೆ ಅವರ ಬಗ್ಗೆ ನನ್ನಲ್ಲಿ ಸೇಡಿಲ್ಲ. ತಪ್ಪೋ, ಸರಿಯೋ ಅವರು ಒಂದು ಆರ್ಡಿನೆನ್ಸ್ ತಂದು ನಿರ್ಣಯ ಮಾಡಿದರು. ನಾನು ಅವತ್ತು ಶಾಸನ ಸಭೆಯ ಸದಸ್ಯನಾಗಿರಲಿಲ್ಲ. ಆದರೂ ಕೂಡ, ನನ್ನನ್ನೂ ಸೇರಿಸಿಕೊಂಡು ಒಂದು ಉನ್ನತ ಮಟ್ಟದ ಸಭೆ ಕರೆದರು. ಆ ಸಭೆಯಲ್ಲಿ ಒಂದಲ್ಲ ನಾಲ್ಕು ಸಾರಿ ಚರ್ಚೆ ಮಾಡಿದರು. ಇವತ್ತು ಸನ್ಮಾನ್ಯ ಮಂತ್ರಿಗಳು ಹೇಳಬೇಕು. ನಿಮ್ಮ ಮುಖ್ಯಮಂತ್ರಿಗಳಿಗೆ ಏನಾಗಿದೆ ೯ ತಿಂಗಳಿಂದ ನಾನು ಅವರಿಗೆ ಸತತವಾಗಿ ಬೇಡಿಕೊಳ್ಳುತ್ತಿದ್ದೇನೆ. ಕೊನೆಯ ಪಕ್ಷ ಕಾವೇರಿ ಬೇಸಿನ್‌ಗೆ ಸಂಬಂಧಪಟ್ಟ ಶಾಸಕರನ್ನು ಕರೆದು, ಅಲ್ಲಿ ಆಗಿರುವಂಥ ಕಾರ್ಯಕ್ರಮದ ಬಗ್ಗೆ, ಯೋಜನೆಯ ಅನುಷ್ಠಾನದ ಬಗ್ಗೆ ಚರ್ಚೆ ಮಾಡಬೇಕೆಂದು ಹೇಳಿದೆ. ಅವರು ಕರೆದಿದ್ದಾರೆಯೇ, ಕೇಳಿ ಏಕೆ ಕರೆಯಲಿಲ್ಲ. ಆದರೆ, ನಮ್ಮ ಸರ್ಕಾರವಿದ್ದಾಗ ಚರ್ಚೆಯಾದರೂ ನಡೆಯುತ್ತಿತ್ತು. ಇದನ್ನಾದರೂ ತಮ್ಮ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ಈ ಸರ್ಕಾರದ ನಿಷ್ಕ್ರಿಯತೆಗೆ ಏನು ಕಾರಣ? ಅಧ್ಯಕ್ಷರೇ, ನಾನು ಹೇಳಿದ ಹಾಗೆ ಈಗ ಮುಖ್ಯಮಂತ್ರಿಗಳು ಇರಬೇಕಾಗಿತ್ತು, ಬಹಳ ಚೆನ್ನಾಗಿರುತ್ತಿತ್ತು. ೧೯೮೫ರಲ್ಲಿ ತೆಲುಗು ಗಂಗಾ ವಿಷಯ ಬಂದಾಗ, ಇವತ್ತಿನ ಸನ್ಮಾನ್ಯ ಮುಖ್ಯಮಂತ್ರಿಗಳು ಮಾಡಿರತಕ್ಕಂಥ ಭಾಷಣವನ್ನು, ನಾನು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಓದಿದೆ ಏಕೆಂದರೆ, ಅವು ಬಹಳ ಸಣ್ಣ ಅಕ್ಷರಗಳು. ಅವರ ಭಾಷಣದ ಸಾರಾಂಶ ಇಷ್ಟೆ. ಸನ್ಮಾನ್ಯ ರಾಮಕೃಷ್ಣ ಹೆಗಡೆಯವರು ರಾಷ್ಟ್ರ ರಾಜಕಾರಣದ ತೆವಲು ತೀರಿಸಿಕೊಳ್ಳುವುದಕ್ಕೆ, ಎನ್.ಟಿ. ರಾಮರಾಯರ ಸ್ನೇಹವನ್ನು ಪಡೆಯುವುದಕ್ಕೆ, ಈ ರಾಜ್ಯದ ಹಿತವನ್ನು ಮಾರಾಟ ಮಾಡುತ್ತಿದ್ದಾರೆ ಎಂದು, ಇದರ ಒಟ್ಟು ಸಾರಾಂಶ. ಇದಕ್ಕೆ ಪೇಪರ್ ಕಟಿಂಗ್ಸ್, ಎಡಿಟೋರಿಯಲ್ ಬಹಳ ಇದೆ. ಅದರ ತಾರೀಖು ಹೇಳುತ್ತೇನೆ, ಬೇಕಾದರೆ, ತರಿಸಿ ಓದಿಕೊಳ್ಳಿ. ೨೬ನೇ ಜುಲೈ ೧೯೮೫. ಅವತ್ತು,

ಇವತ್ತಿನ ಸಭಾನಾಯಕರಾದ ಸನ್ಮಾನ್ಯ ಮೊಯಿಲಿಯವರು ವಿರೋಧ ಪಕ್ಷದ ನಾಯಕರು. ಅವತ್ತಿನ ಮುಖ್ಯಮಂತ್ರಿಗಳಿಗೆ ಮೊಯಿಲಿ ಅವರು 'ಎನ್.ಟಿ. ರಾಮರಾಯರ ಸ್ನೇಹ ಮಾಡಿ, ಅವರ ಸ್ನೇಹವನ್ನು ಉಳಿಸಿಕೊಂಡು, ರಾಷ್ಟ್ರರಾಜಕಾರಣದ ತೆವಲು ತೀರಿಸಿಕೊಳ್ಳುತ್ತಾ, ರಾಜ್ಯದ ಹಿತವನ್ನು ಬದಿಗೊತ್ತುತ್ತಿದ್ದೀರಿ' ಎಂದರು. ಇವತ್ತು ಕಾವೇರಿ ನೀರಿನ ಬಳಕೆ ಮಾಡುವುದಕ್ಕಾಗಲೀ, ಆ ನೀರಿನ ಹಕ್ಕನ್ನು ಉಳಿಸಿಕೊಳ್ಳುವುದಕ್ಕಾಗಲೀ, ವೀರಪ್ಪ ಮೊಯಿಲಿಯವರ ನಿರಾಸಕ್ತಿಯನ್ನು ಕಂಡಾಗ, ಇವರು ಯಾವ ತೆವಲು ತೀರಿಸಿಕೊಳ್ಳುವುದಕ್ಕೆ, ಕರ್ನಾಟಕದ ಜನರ ಹಿತವನ್ನು ಬದಿಗೊತ್ತುತ್ತಿದ್ದಾರೆ ಎನ್ನುವ ಪ್ರಶ್ನೆಯನ್ನು ಕೇಳಬೇಕಾಗಿದೆ. ಅವತ್ತು ರಾಮಕೃಷ್ಣ ಹೆಗಡೆಯವರು ರಾಷ್ಟ್ರ ರಾಜಕಾರಣದ ತೆವಲಿಗಾಗಿ, ಈ ರಾಜ್ಯದ ಹಿತವನ್ನು ಬದಿಗೊತ್ತಿದರು. ನಾನು ಇವತ್ತು ಮೊಯಿಲಿ ಅವರನ್ನು ಕೇಳಬೇಕಾಗುತ್ತದೆ, ನಿಮ್ಮನ್ನು ಮುಖ್ಯಮಂತ್ರಿ ಮಾಡಿರುವಂಥ ಆಂಧ್ರದ ನರಸಿಂಹರಾಯರನ್ನು ಸಂಪ್ರೀತರನ್ನಾಗಿ ಮಾಡುವುದಕ್ಕೆ, ನೀವು ಕೃಷ್ಣಾದ ಬಗ್ಗೆ ನಿಷ್ಕ್ರಿಯರಾಗಿದ್ದೀರಿ ಎಂದು ವಿಧಿ ಇಲ್ಲದೆ ಹೇಳಬೇಕಾಗುತ್ತದೆ. ನಿಮ್ಮನ್ನು ಮುಖ್ಯಮಂತ್ರಿ ಕುರ್ಚಿಗೆ ತಂದು ಕೂಡಿಸಿರುವಂಥ ಪ್ರಧಾನಮಂತ್ರಿಯವರನ್ನು ಸಂಪ್ರೀತರನ್ನಾಗಿ ಮಾಡುವುದಕ್ಕೆ, ನೀವು ಇವತ್ತು ನಿಷ್ಕ್ರಿಯರಾಗಿದ್ದೀರಿ.

ಮಾನ್ಯ ಅಧ್ಯಕ್ಷರೇ, ನಾನು ಈಗಾಗಲೇ ಹೇಳಿದಂತೆ ಕಾನೂನು ತಮಗೆ ಕೈ ಕೊಟ್ಟಿದೆ. ನ್ಯಾಯಾಲಯ ನಮಗೆ ಅನ್ಯಾಯ ಮಾಡಿದೆ. ಪರಿಸ್ಥಿತಿ ದುಸ್ತರವಾಗಿದೆ ಎಂದು ಬೆಳಿಗ್ಗೆ ನಾನು ಹೇಳಿದಾಗ ನಮ್ಮ ಶ್ರೀ ಕೆ.ಎಚ್. ರಂಗನಾಥ ಸಾಹೇಬರು ಇಲ್ಲಿ ಇರಲಿಲ್ಲ. ಎಲ್ಲಾ ಸರ್ಕಾರಗಳಲ್ಲೂ ನೀರಾವರಿ ಮಂತ್ರಿಗಳೇ ಡಿಸಿಡೆಂಟ್ ಲೀಡರ್ಸ್ ಆಗಬೇಕು. ಎಂತಹ ದುರಾದೃಷ್ಟ ನಮ್ಮದು ಅಂತ. ನಮ್ಮ ಕಾಲದಲ್ಲೂ ಅಷ್ಟೆ, ಅವಾಗಲೂ ಅಂಗೇ ಆಯಿತು.

ಆ ೮೦ರ ದಶಕದಾಚೆಗೆ ನೀರಾವರಿ ಮಂತ್ರಿಗಳು ಡಿಸಿಡೆಂಟ್ ಲೀಡರ್ಸ್ ಆಗಿದ್ದು ಕೂಡ ಈ ಒಂದು ಕೆಲಸ ಪ್ರಗತಿ ಆಗದೆ ಇರುವುದಕ್ಕೆ ಕಾರಣ ಎಂದು ನನ್ನ ಭಾವನೆ. Because there is LCC system. The Irrigation Minister will be reduced to the position of a Maistry in this system.

ಮೇಸ್ತ್ರಿಗೆ ದುಡ್ಡು ಕೊಟ್ಟರೆ ಕೆಲಸ ಮಾಡಿಸುತ್ತಾನೆ. ಮಣ್ಣು ಹಾಕಿಸುತ್ತಾನೆ. ಕಂಟ್ರಾಕ್ಟರ್ ದುಡ್ಡು ಕೊಡದಿದ್ದರೆ ಮೇಸ್ತ್ರಿ ಮರದ ಕೆಳಗೆ ಮಂಕ್ರಿ ಎಸೆದು ಮಲಗಿಕೊಳ್ಳುತ್ತಾನೆ. ಬಹುಶಃ ನೀರಾವರಿ ಕೆಲಸ ಕೂಡ ಹಾಗೆ ಆಗಿದೆ. ಹಣಕಾಸು ಕೊಡಬೇಕಾದಂತಹ ಮುಖ್ಯಮಂತ್ರಿಗಳು ರಾಜಕೀಯ ಕಾರಣಕ್ಕಾಗಿ ಇವರ ಮೇಲೆ ಲಗಾಮು ಹಾಕುತ್ತಾರೆ. The ultimate victms are the formers of karntaka. I think I am not wrong in this Analysis.

ಅವತ್ತೂ ಇದೇ ಆಯಿತು. ಇವತ್ತೂ ಇದೇ ಆಯಿತು. ಆದರೆ what is the cumulative effect of tis? the cumulative effect of this particular game is that we have deprived water to the crores of people. This is the cumulative effect of this narticular game.

೧೨ ಲಕ್ಷ ಎಕರೆ ನೀರು ಬಿಡದೆ ಕಟ್ಟೆಯ ಒಳಗೆ ಇಟ್ಟುಕೊಂಡಿರತಕ್ಕಂಥ ಪಾಪದ ಪರಿಸ್ಥಿತಿಯನ್ನು ಸೃಷ್ಟಿ ಮಾಡುವುದಕ್ಕೆ ನಾವೆಲ್ಲ ಕಾರಣಕರ್ತರಾಗಿದ್ದೇವೆ. ಎಲ್ಲದರಲ್ಲೂ ನಾವು ರಾಜಕಾರಣ ಮಾಡಬೇಕೇ?

ಆದ್ದರಿಂದ ಇಂತಹ ಒಂದು ಸಂದರ್ಭದಲ್ಲಿ ಕಾನೂನು ಕೈ ಕೊಟ್ಟಿದೆ. ಪರಿಸ್ಥಿತಿ ನಮಗೆ ವಿರುದ್ಧವಾಗಿದೆ. ನಮ್ಮ ತಮಿಳುನಾಡಿನ ವಿರೋಧಿಗಳು ನಮ್ಮ ಮೇಲೆ ಗದಾ ಪ್ರಹಾರ ಮಾಡುವುದಕ್ಕೆ ಸನ್ನದ್ಧರಾಗಿ ನಿಂತಿದ್ದಾರೆ. ದೈವ ಕೂಡ ಮುನಿದಿದೆ. ಇಂತಹ ಪರಿಸ್ಥಿತಿಯಲ್ಲಿ ಈ ಸಮಸ್ಯೆಯನ್ನು ಬಗೆಹರಿಸಬೇಕಾದರೆ ನಾವು ಕಾನೂನಿನ ದೃಷ್ಟಿಯಿಂದ ತಾಂತ್ರಿಕ ದೃಷ್ಟಿಯಿಂದ ಮತ್ತು ರಾಜಕೀಯವಾಗಿ ವ್ಯವಸ್ಥೆಯ ದೃಷ್ಟಿಯಿಂದ, ಕೂಡ ಇದನ್ನು ಟ್ರಾಜಿಡಿ ಅಂತ ಹೇಳುತ್ತೀರೋ ಅಥವಾ ವ್ಯವಸ್ಥೆ ಎಂದು ಹೇಳುತ್ತೀರೋ ನನಗೆ ಗೊತ್ತಿಲ್ಲ. ಇದಕ್ಕೆ ಒಂದು ವ್ಯವಸ್ಥೆಯನ್ನು ಮಾಡಬೇಕಾಗುತ್ತದೆ. ಕಾನೂನಿನ ಕ್ಷೇತ್ರದಲ್ಲಿ ರಾಜಕೀಯ ಕ್ಷೇತ್ರದಲ್ಲಿ ಮತ್ತು ತಾಂತ್ರಿಕವಾಗಿ ಈ ವ್ಯವಸ್ಥೆಯಲ್ಲಿ ಕೂಡ ನಾವು ಈ ಪರಿಸ್ಥಿತಿಯನ್ನು ನಿವಾರಣೆ ಮಾಡುವುದಕ್ಕೆ ಸನ್ನದ್ಧರಾಗಬೇಕಾಗುತ್ತದೆ. ಆದರೆ ಇದು ರಾಜಕಾರಣದ ಪ್ರಶ್ನೆ ಆಗಿರುವುದರಿಂದ ಹೇಳಬೇಕೋ ಬಿಡಬೇಕೋ ನನಗೆ ಗೊತ್ತಿಲ್ಲ. ಈಗಿನ ಪರಿಸ್ಥಿತಿಯಲ್ಲಿ ಮಾನ್ಯ ಅಧ್ಯಕ್ಷರೇ ಇಂತಹ ಒಂದು ಗಂಭೀರವಾದ ಸಮಸ್ಯೆಯನ್ನು ನಾವು ವಿಶ್ಲೇಷಿಸಿ ಅದಕ್ಕೆ ಸಮರ್ಪಕವಾದ ಪರಿಹಾರವನ್ನು ದೊಕಿಸಿಕೊಡಲಿಕ್ಕೆ ಈ ಸರ್ಕಾರಕ್ಕೆ ಶಕ್ತಿ ಇದೆ ಎಂದು ನಾನು ಭಾವಿಸಿಕೊಳ್ಳುವುದಿಲ್ಲ. ನಾಮಕಾವಸ್ತೆಗೆ ಸರ್ಕಾರ ಇದೆ. ಸರ್ಕಾರ ಇದೆ ಎಂದು ಕೂಗುಡುತ್ತಿದ್ದಂತೆ ನಾನು ಸಂವಿಧಾನದ ಪುಸ್ತಕ ತರಿಸಿ ಸರ್ಕಾರ ಎಲ್ಲಿಯವರೆಗೆ ಇದೆ ಎಂದು ನೋಡಿದೆ. ಸಂವಿಧಾನದ ಪ್ರಕಾರ ಸರ್ಕಾರ ಇದೆ. ಮಂತ್ರಿಗಳು ಇದ್ದಾರೆ. ಮುಖ್ಯಮಂತ್ರಿಗಳು ಇದ್ದಾರೆ. ಉಪಮುಖ್ಯಮಂತ್ರಿಗಳು ಇದ್ದಾರೆ. ಸರ್ಕಾರ ಇದೆ. ಆದರೆ ನಮ್ಮ ಹಳ್ಳಿಯ ಕಡೆ ಹೇಳುತ್ತಾರೆ. "ನಾಮಕಾವಸ್ತೆ ಪಟೇಲ" ಅಂತ.

* * *

**ಉಪಾಧ್ಯಕ್ಷರು:** ತಾವು ಮುಗಿಸಿ. ತಾವು ಈಗಾಗಲೇ ೧೦೦ ನಿಮಿಷ ಮಾತನಾಡಿದ್ದೀರಿ. ಯಾರೂ ಇಷ್ಟು ವೇಳೆ ತೆಗೆದುಕೊಂಡಿಲ್ಲ. ಇನ್ನೂ ಮಾನ್ಯ ಸದಸ್ಯರು ಮಾತನಾಡುವವರಿದ್ದಾರೆ. ತಾವು ಸುದೀರ್ಘವಾಗಿ ಮಾತಾಡಿದ್ದೀರಿ, ಮುಗಿಸಿ.

ಅಧ್ಯಕ್ಷರೇ, ನಾನು ಇದರಲ್ಲಿ ರಾಜಕೀಯ ಮಾಡುವುದಿಲ್ಲ. ನಾನು ರಾಜಕೀಯ ಮಾಡುವುದರಲ್ಲಿ ಕೊನೆಯ ಮನುಷ್ಯ. ನನ್ನ ಆಸೆ ಇಷ್ಟೇ. ಪರಿಸ್ಥಿತಿಯನ್ನು ನಿವಾರಣೆ ಮಾಡುವುದಕ್ಕೆ, ನಮ್ಮ ಈ ಜನರ ದುಃಖ ದುಮ್ಮಾನಗಳಿಗೆ ಸ್ಪಂದಿಸಲಿಕ್ಕೆ, ಈ ಸರ್ಕಾರಕ್ಕೆ ರಾಜಕೀಯ ಇಚ್ಛಾಶಕ್ತಿ ಇದ್ದರೂ ಕೂಡ ದೃಢತೆ ಇಲ್ಲ. ನಿಮ್ಮ ಪ್ರಾಮಾಣಿಕತೆಯನ್ನು ನಾನು ಪ್ರಶ್ನೆ ಮಾಡುತ್ತೇನೆ. ಆ ಪ್ರಾಮಾಣಿಕತೆ ಇದ್ದರೂ ಕೂಡ ಇವತ್ತು ಸನ್ಮಾನ್ಯ ವೀರಪ್ಪ ಮೊಯಿಲಿ ನೇತೃತ್ವದ ಸರ್ಕಾರಕ್ಕೆ ದೃಢ ಸಂಕಲ್ಪ ಇಲ್ಲ. ಸಂಕಲ್ಪ ಇಲ್ಲದೆ ಇರತಕ್ಕಂಥ ಈ ಸರ್ಕಾರ ಕಾವೇರಿ ನೀರನ್ನು ಉಳಿಸಿಕೊಳ್ಳಲಿಕ್ಕೆ, ಬಳಸಿಕೊಳ್ಳಲಿಕ್ಕೆ, ತನ್ನ ಮುಖಾಂತರ ಈ ರಾಜ್ಯದ ಜನರ ಹಿತವನ್ನು ಕಾಪಾಡುವಂತಹ ಶಕ್ತಿ ಈ ಸರ್ಕಾರಕ್ಕೆ ಇಲ್ಲ. ಎಷ್ಟು ಸಾರಿ ಹೇಳಿದರೂ ಕೇಳದಿದ್ದರೆ ಹೇಳಬೇಕಾಗುತ್ತದೆ. ನನಗೆ ಗೊತ್ತಿರುವ ಹಾಗೆ ತಮ್ಮ ಪಕ್ಷದ ಶಾಸಕರು "ನನ್ನ ಪ್ರಾಣದ ಮೇಲೆ ಹಲ್ಲೆ ಮಾಡಿದರು" ಅಂತ ಹೇಳತಕ್ಕಂಥ ಮುಖ್ಯ ಮಂತ್ರಿಗಳು, ಇಂತಹ ಪರಿಸ್ಥಿತಿಯನ್ನು ಸೃಷ್ಟಿ ಮಾಡಿರಬೇಕಾದರೆ, ಇನ್ನು ಈ ರಾಜ್ಯದ ರೈತರ ಹಿತವನ್ನು ಕಾಪಾಡುತ್ತೀರಿ ಅಂತ ನಾನು ಹೇಗೆ ಹೇಳಲಿ.

ನಾನು ಇದನ್ನು ಇಲ್ಲಿ ಮೊದಲನೇ ಸಲ ಹೇಳುತ್ತಿದ್ದೇನೆ. ಈಗಾಗಲೇ ಹೊರಗೆ ಬೇರೆ ಎಲ್ಲಾ ಕಡೆ ಹೇಳಿದ್ದೇನೆ. ನೀರಾವರಿ ಯೋಜನೆಗಳಿಗೆ ದುಡ್ಡು ಕೊಟ್ಟಿಲ್ಲ ಎಂದು ಹೇಳಿದ್ದೇನೆ. ಸರ್ಕಾರ ಕೆಲಸ ಮಾಡಿಲ್ಲ ಎಂದು ಹೇಳಿದ್ದೇನೆ. ಸರ್ಕಾರಕ್ಕೆ ರಾಜಕೀಯವಾದ ದೃಢತೆ ಇಲ್ಲ ಎಂದು

ಹೇಳಿದ್ದೇನೆ. ಈ ರಾಜ್ಯದ ಜನರ ಹಿತವನ್ನು ಕಾಪಾಡುವಲ್ಲಿ ನಿರ್ವೀರ್ಯರಾಗಿದ್ದಾರೆ ಎಂದು ಹೇಳಿದ್ದೇನೆ. ರಾಜಕೀಯ ಶಕ್ತಿ ಸಂಕಲ್ಪ ಇಲ್ಲ ಎನ್ನತಕ್ಕಂಥ ಮಾತನ್ನು ಹೇಳುವಾಗ ನಾನು ಇದನ್ನು ಹೇಳಲೇಬೇಕಾಗುತ್ತದೆ. ನನಗೆ ಅವರ ಗುಂಪಿನ ಬಗ್ಗೆ ಆಸಕ್ತಿ ಇಲ್ಲ. ಒಬ್ಬರು ಹೋಗುತ್ತಾರೆ, ಇನ್ನೊಬ್ಬರು ಬರುತ್ತಾರೆ. ನನ್ನ ಆಸೆ ಇಷ್ಟೇ, ರಾಜಕೀಯವಾಗಿ ಶಕ್ತಿ ಇಲ್ಲದೆ ಇರುವಂತಹ ಸಂದರ್ಭದಲ್ಲಿ, ಇವರಿಗೆ ಸಮಸ್ಯೆಯನ್ನು ನಿಭಾಯಿಸಲಿಕ್ಕೆ ಸಾಧ್ಯವಾಗುತ್ತಿಲ್ಲವೆಂದು ನಾನು ಹೇಳುತ್ತೇನೆ. ಕೊನೆಯದಾಗಿ ಒಂದು ಮಾತು ಹೇಳಿ ಮುಗಿಸುತ್ತೇನೆ. ಕಾವೇರಿ ಜಲವಿವಾದದ ಇತ್ತೀಚಿನ ತೀರ್ಪಿನಿಂದ ಯಾರಿಗಾದರೂ ಹೆಚ್ಚಿನ ಅನ್ಯಾಯವಾಗಿದ್ದರೆ ಅದು ತುಮಕೂರು ಜಿಲ್ಲೆಯ ಜನರಿಗೆ. ೨೦೫ ಟಿ.ಎಂ.ಸಿ. ನೀರನ್ನು ತಮಿಳುನಾಡಿಗೆ ಕಂತಿನ ಪ್ರಕಾರ ಬಿಟ್ಟು ಕೊಡಬೇಕೆಂದು ತೀರ್ಪು ಆಯಿತು. ಆ ತೀರ್ಪಿನಿಂದ ಯಾರಿಗಾದರೂ ಅನ್ಯಾಯವಾಗಿದ್ದರೆ ಅದು ನಮಗೆ. ಮಂಡ್ಯ ಜಿಲ್ಲೆಯವರಿಗೆ ಕಾವೇರಿ ನದಿ ಪಾತ್ರದಲ್ಲಿ ಎಷ್ಟು ಅಚ್ಚುಕಟ್ಟು ಆಗಬೇಕಾಗಿತ್ತೋ ಅಷ್ಟು ಆಗಿದೆ. ಹಾಸನ ಜಿಲ್ಲೆಯವರಿಗೆ ಎಷ್ಟು ಅಚ್ಚುಕಟ್ಟು ಆಗಬೇಕಾಗಿತ್ತೋ ಅಷ್ಟು ಆಗಿದೆ. ಇದೇ ಪರಿಸ್ಥಿತಿ ಮುಂದುವರಿದರೆ ಸ್ವಲ್ಪ ಉತ್ತಮ ಎಂದು ತಿಳಿದುಕೊಂಡಿದ್ದಾರೆ. ಏಕೆಂದರೆ ಒಂದು ವೇಳೆ ಬೆಳೆಯುವ ಬದಲಾಗಿ ಮೂರು ಬೆಳೆ ಬೆಳೆದುಕೊಳ್ಳಬಹುದು ಎಂಬುದು ಅವರ ಇಚ್ಚೆ. ಅವರು ತಿಟ್ಟು ಬಿಟ್ಟು ಬಿಟ್ಟರೆ ತುಮಕೂರಿಗೆ ಅವರು ಒಂದು ಬೆಳೆ ಮಾತ್ರ ಮಾಡಿಕೊಳ್ಳಲಿಕ್ಕೆ ಆಗುತ್ತದೆ. ಆದ್ದರಿಂದ ಡೀಪ್ ಕಟ್ ಕೆಲಸ ಮಾಡದೆ ಇದ್ದರೆ ಮೂರು ಮೂರು ಬೆಳೆ ಬೆಳೆದುಕೊಳ್ಳಲಿಕ್ಕ ಆಗುತ್ತದೆ. ಆದ್ದರಿಂದ ಈ ಒಂದು ತೀರ್ಪಿನಿಂದ ಯಾರಿಗಾದರೂ ನಿರ್ದಿಷ್ಟವಾಗಿ ಕಣ್ಣಿಗೆ ಕಾಣುವಂತಹ ಅನ್ಯಾಯವಾಗಿದ್ದರೆ ಅದು ತುಮಕೂರು ಜಿಲ್ಲೆಯ ಜನತೆಗೆ. ನೀವು ಆ ೨೦೫ ಟಿ.ಎಂ.ಸಿ. ನೀರನ್ನು ನೀವು ಶ್ರೀಮತಿ ಜಯಲಲಿತಾ ಅವರಿಗೆ ಬಿಟ್ಟುಕೊಡಬೇಕೋ? ತುಮಕೂರು ಜಿಲ್ಲೆಯಲ್ಲಿ ೪ ಲಕ್ಷ ಎಕರೆ ಒಣಗಿರುವ ಜಮೀನಿಗೆ ಬಿಟ್ಟುಕೊಡಬೇಕೋ? ಇದು ನನ್ನ ಪ್ರಮುಖವಾದ ಪ್ರಶ್ನೆ. ನಾನು ಇಷ್ಟೆಲ್ಲಾ ಶ್ರಮಪಡುತ್ತಿರುವುದು, ಹೋರಾಟ ಮಾಡುತ್ತಿರುವುದು ನಮಗೆ ತಾವು ಸ್ವಲ್ಪ ಸಹಾಯ ಮಾಡಿದರೆ, ತಾವು ಸ್ವಲ್ಪ ಆಸಕ್ತಿ ವಹಿಸಿದರೆ, ''ಸ್ವಲ್ಪ ಹಣ ಕೊಟ್ಟರೆ'' ನಮ್ಮ ಕಡೆ ಸ್ವಲ್ಪ ಕರುಣೆ ತೋರಿಸಿದರೆ ಆ ೪ ಲಕ್ಷ ಎಕರೆಗೆ ಶಿಂಷಾ ನದಿ ಪಾತ್ರಕ್ಕೆ ನೀರು ಬರುವಂತಹ ಕೆಲಸವನ್ನು ಇನ್ನು ೩-೪ ತಿಂಗಳಲ್ಲಿ ಮಾಡುವುದಕ್ಕ ಸಾಧ್ಯ ಇದೆ. ಅದಕ್ಕೆ ನಾನು ತಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಈ ದೃಷ್ಟಿಯಿಂದ ಕೇಂದ್ರದ ನೀರಾವರಿ ಸಚಿವ ಶ್ರೀ ವಿದ್ಯಾಚರ ಶುಕ್ಲಾರವರು ಏನು ಹೇಳಿದ್ದಾರೆ? ವೀರಪ್ಪ ಮೊಯ್ಲಿಯವರು ಏನು ಹೇಳಿದ್ದಾರೆ? ಇದು ನಡೆಯುತ್ತಾ ಇರುತ್ತದೆ. ಇದು ಯಾರ ಕಾಲಕ್ಕೂ ಮುಗಿಯುವುದಿಲ್ಲ. ಮೊದಲು ತಮಿಳುನಾಡಿನ ಮರುಸೋಳಿಮಾರನ್ ಇದ್ದರು. ಆಗಲೂ ಕೂಡ ಹೀಗೇ ಆಯಿತು. ನಾವು ಶುಕ್ಲಾರವರ ಮೇಲೂ ಹೇಳುತ್ತೇವೆ. ಅದು ಏನಾದರೂ ಆಗಿಕೊಂಡು ಹೋಗಲಿ. ಅದರ ಬಗ್ಗೆ ನನಗೆ ಅಷ್ಟು ದೊಡ್ಡ ಆಸಕ್ತಿ ಇಲ್ಲ. ನನ್ನ ಆಸಕ್ತಿ ಇಷ್ಟೇ ಕಾವೇರಿ ನೀರಿನ ಹಕ್ಕು ಉಳಿಸಿಕೊಳ್ಳಲಿಕ್ಕೆ ನಡೆಸತಕ್ಕಂಥ ಹೋರಾಟ ಅದು ಒಂದು ಕಡೆ ನಡೆಯಲಿ. ಅದಕ್ಕೆ ನೀವು ಏನು ತೀರ್ಮಾನ ತೆಗೆದುಕೊಂಡರೂ ಕೂಡ ನಾವು ವಿರೋಧ ಪಕ್ಷದಿಂದ ನಿಮ್ಮ ಬೆಂಬಲಕ್ಕೆ ನಿಲ್ಲುತ್ತೇವೆ. ನಮ್ಮ ತಕರಾರು ಏನಿದೆ ಅಂದ್ರೆ, ನಿಮ್ಮ ಮೇಲೆ ನಮ್ಮ ಕೋಪ ಏನೆಂದರೆ, ನೀವು ಕೆಲಸವನ್ನು ಪ್ರಗತಿ ರೂಪದಲ್ಲಿ ತರುತ್ತಿಲ್ಲ ಎಂದು. ಆದ್ದರಿಂದ ಹೋರಾಟ ಅದರ ಪಾಡಿಗೆ ಅದು ನಡೆಯಲಿ. ಆದರೆ ನೀರನ್ನು ಬಳಸಿಕೊಳ್ಳತಕ್ಕಂಥ ಕೆಲಸವನ್ನು ತ್ವರಿತವಾಗಿ ಮಾಡಿ ಎಂದು ನಾನು ಸರ್ಕಾರದಲ್ಲಿ ಪ್ರಾರ್ಥನೆ ಮಾಡಿಕೊಂಡು, ಇಷ್ಟು ವಿಷಯವನ್ನು ಪ್ರಸ್ತಾಪ ಮಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ, ನನ್ನ ಮಾತನ್ನು ಮುಗಿಸುತ್ತೇನೆ.

# ನೀರಾವರಿ ಯೋಜನೆಯ ಗಾತ್ರ

೫ ಸೆಪ್ಟೆಂಬರ್ ೧೯೯೪

ಸನ್ಮಾನ್ಯ ಅಧ್ಯಕ್ಷರೇ, ನಮ್ಮ ಪಕ್ಷದ ಹಿರಿಯರಾದ ಚಂದ್ರೇಗೌಡರು ಹೇಳಿದ ಒಂದು ಮಾತನ್ನೇ ನಾನು ಮುಂದುವರೆಸುವುದಕ್ಕೆ ಇಷ್ಟಪಡುತ್ತೇನೆ. ಅವರ ಮಾತು ಏನೆಂದರೆ ಈ ರಾಜ್ಯದ ಮುಖ್ಯಮಂತ್ರಿಗಳು ಈ ವರ್ಷದ ಯೋಜನಾ ಗಾತ್ರದಲ್ಲಿ "ನಾವು ಕಡಿತ ಮಾಡುವುದಿಲ್ಲ" ಎಂಬ ಸವಾಲನ್ನು ರಾಜ್ಯದ ಮೂಲೆಮೂಲೆಯಲ್ಲಿ ಹಾಕಿಕೊಂಡು ಬಂದಿದ್ದಾರೆ. ಆದರೆ ಈ ಸವಾಲು ಸರಿಯಿಲ್ಲ. ಇದು ಸುಳ್ಳು ಎನ್ನುತ್ತೀರೋ? ಅಥವಾ ಅಂಕಿ ಅಂಶ ಪರಿಶೀಲನೆ ಮಾಡಿದಾಗ ತಪ್ಪು ಎನ್ನುತ್ತೀರೋ? ಅದನ್ನೇ ನಾನು ಮುಂದುವರೆಸಿಕೊಂಡು ಹೋಗುವುದಕ್ಕೆ ಇಷ್ಟಪಡುತ್ತೇನೆ. ಎಲ್ಲಾ ಇಲಾಖೆಗಳನ್ನು ತೆಗೆದುಕೊಳ್ಳುವುದಕ್ಕೆ ನನಗೆ ಇಷ್ಟ ಇಲ್ಲ. ನನ್ನ ಚರ್ಚೆಗೆ ನೀರಾವರಿ ಇಲಾಖೆ ಒಂದು ಸಾಕು. ಕಳೆದ ವರ್ಷ ಆಯವ್ಯಯದಲ್ಲಿ ನೀರಾವರಿ ಬಗ್ಗೆ, ತಾವು ಈ ಸದನದಲ್ಲಿ ಇದ್ದರೋ ಇಲ್ಲವೋ ಗೊತ್ತಿಲ್ಲ. ಅವತ್ತು ನಾನು ಒಂದು ಮಾತನ್ನು ಹೇಳಿದ್ದೆ. "ಈ ರಾಜ್ಯದಲ್ಲಿ ಆಯವ್ಯಯದಲ್ಲಿ ನೀರಾವರಿಗೆ ಇಷ್ಟು ಹಣ ಖರ್ಚು ಮಾಡುತ್ತೇವೆ ಅಂಥ ಎಂದು ಹೇಳಿ, ಹಣ ಖರ್ಚು ಮಾಡದೇ ಇರುವಂಥ ಮೋಸದ ಪರಂಪರೆ ಸೃಷ್ಟಿಯಾಗಿದೆ. ಆ ಮೋಸದ ಪರಂಪರೆಗೆ ನೀವೂ ಕೂಡ ಭಾಗಸ್ಥರಾಗುತ್ತೀರಿ" ಎಂದು ಸಚಿವರಿಗೆ ಹೇಳಿದೆ. ಅವತ್ತು ಅವರು, "ಇಲ್ಲ ಇಲ್ಲ ನಾವು ಖರ್ಚು ಮಾಡುತ್ತೇವೆ" ಎಂದು ಹೇಳಿದರು. "ಇಲ್ಲ, ನೀವು ಖರ್ಚು ಮಾಡುವುದಿಲ್ಲ" ಎಂದು ಹೇಳಿದೆ. "ಆಗಲಿ, ರಾಮಯ್ಯನವರೆ, ಮುಂದಿನ ವರ್ಷ ನಾವು ನೀವು ಇರುತ್ತೇವಲ್ಲ let usexchange notes" ಅಂತ ಅವರು ಅವತ್ತು ಹೇಳಿದರು. ಇವತ್ತು ಅವರು ನೋಟ್ಸ್ ಎಕ್ಸ್‌ಚೇಂಜ್ ಮಾಡಿಕೊಳ್ಳುವುದಕ್ಕೆ ಸಿದ್ಧರಾಗಬೇಕಾಗುತ್ತದೆ. ಸನ್ಮಾನ್ಯ ಅಧ್ಯಕ್ಷರೇ, ಯೋಜನಾ ಗಾತ್ರದ ಹಿಂಜರಿತ ತಡೆಯುವುದಕ್ಕೆ ಮೊಯಿಲಿಯವರ ಕೈಯಲ್ಲಿ ಆಗುವುದಿಲ್ಲ. ಅವರಂತಹ ಹತ್ತು ಜನ ಮುಖ್ಯಮಂತ್ರಿಗಳು ಬಂದರೂ ಸಾಧ್ಯವಾಗುವುದಿಲ್ಲ. ಅದಕ್ಕೆ ಪ್ರಮುಖ ಕಾರಣ ಏನೆಂದರೆ, ರಾಜಕಾರಣಿಗಳಾದ ನಮಗೆ ಇರುವ ಒಂದು ದುರಭ್ಯಾಸ. "ಅವರು ಮಾಡಿದ್ದಕ್ಕಿಂತ ನಾವು ಜಾಸ್ತಿ ಮಾಡಿದೆವು, ಜನತಾ ದಳದವರಿಗಿಂತ ನಾವು ಜಾಸ್ತಿ ಮಾಡಿದೆವು, ಕಾಂಗ್ರೆಸ್ಸಿಗಿಂತ ನಾವು ಜಾಸ್ತಿ ಮಾಡಿದೆವು" ಎಂದು ಬಡಾಯಿ ಕೊಚ್ಚಿಕೊಳ್ಳುವುದಕ್ಕೆ ಯೋಜನಾ ಗಾತ್ರದ ವಾಸ್ತವಿಕತೆಯನ್ನು ಗಮನದಲ್ಲಿಟ್ಟುಕೊಳ್ಳದೆ, ಹೆಚ್ಚು ಮಾಡುವ ಪ್ರವೃತ್ತಿ ಇದೆ. ಸ್ವಾಮಿ, ಅಧ್ಯಕ್ಷರೇ, ನನಗಿಂತ ತಾವು ಹಿರಿಯರಿದ್ದೀರಿ. ಇಲ್ಲಿ ಬಹಳ ಹಿರಿಯ ಸದಸ್ಯರಿದ್ದಾರೆ. ಈ ರಾಜ್ಯದ ಈ ರಾಷ್ಟ್ರದ ಯಾವುದಾದರೂ ಆಯವ್ಯಯದಲ್ಲಿ ಒಂದು ವರ್ಷ ೧೦೦ಕ್ಕೆ ೫೮ ರಷ್ಟು ಹೆಚ್ಚು ಮಾಡಿದಂಥ ನಿದರ್ಶನ ಇದೆಯೇ? ಹೇಳಿ. There is 58% jump in the plan size. I have never come across any such instance either in the Central Budget or in the State Budget, in India.

ಹೊರದೇಶದ ಮಾಹಿತಿ ಬಗ್ಗೆ ನನಗೆ ಗೊತ್ತಿಲ್ಲ. ಆದ್ದರಿಂದ ಅವತ್ತೇ ನಾನು ಹೇಳಿದ. "ಈ ರಾಜ್ಯದ ಜನತೆಗೆ ಸುಳ್ಳಿನ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುವುದಕ್ಕೆ ನೀವು ಮಾಡುತ್ತಿರುವ ತಂತ್ರ, ಮೋಸ" ಎಂದು. ಅದು ಇವತ್ತು ಸಾಬೀತಾಗಿದೆ. ಇದಕ್ಕೆ ಸ್ಪಷ್ಟೀಕರಣ ಕೊಡುವುದಕ್ಕೆ ಇನ್ನೊಂದು ಮಾತನ್ನು ನಾನು ಸ್ಥಾಪಿಸಿಕೊಳ್ಳುವುದಕ್ಕೆ ಇಷ್ಟಪಡುತ್ತೇನೆ. ಕಳೆದ ವರ್ಷ

ನೀರಾವರಿ ಸಚಿವರು ಉತ್ತರ ಕೊಡುತ್ತಾ ಒಂದು ಮಾತು ಹೇಳಿದರು. There is not sanctity for the budget unless and until the LOC system is removed and discontinued. It has also been proved now.

ಅವರೇ ಹೇಳಿದಂಥ ಈ ಎರಡು ಮಾತುಗಳು. ಈ ಯೋಜನಾ ಗಾತ್ರವನ್ನು ಸಂಪೂರ್ಣವಾಗಿ ಇವರು ನಿರ್ವಹಿಸುವುದಕ್ಕೆ ಸಾಧ್ಯವಾಗಿಲ್ಲ ಎಂಬುದನ್ನು ಅಂಕಿ ಅಂಶಗಳ ಮುಖಾಂತರ ಕಾರ್ಯರೂಪಕ್ಕೆ ತಂದಿದೆ.

ಉದಾಹರಣೆಗೆ ಲೋಕೋಪಯೋಗಿ ಇಲಾಖೆಗೆ ನಿಗದಿ ಮಾಡಿದಂತಹ ಹಣ ೧೬೨ ಕೋಟಿ ರೂಪಾಯಿ. ಆ ೧೬೨ ಕೋಟಿ ರೂಪಾಯಿಯಲ್ಲಿ ಎಷ್ಟು ಖರ್ಚಾಯಿತು ಎನ್ನುವುದು ಬೇಕಾಗಿಲ್ಲ. ನಮ್ಮ ನೀರಾವರಿ ಇಲಾಖೆಯ ಕಾರ್ಯದರ್ಶಿಗಳು ಮತ್ತು ಆರ್ಥಿಕ ಇಲಾಖೆಯ ಕಾರ್ಯದರ್ಶಿಗಳು ಇಬ್ಬರು ಕೂಡ ಸಮಿತಿಯ ಮುಂದೆ ಬಂದು ಹೇಳಿದ್ದಾರೆ "The pending bill as of 31st March was Rs. 48 cr." Iit is not my record. ನೀರಾವರಿ ಇಲಾಖೆಯ ವಿಷಯ ಆರ್ಥಿಕ ಇಲಾಖೆಯ ಕಮಿಷನರ್‌ರವರು ಸಮಿತಿಯ ಮುಂದೆ ಬಂದು ಒಪ್ಪಿಕೊಂಡಿದ್ದಾರೆ. ಲೋಕೋಪಯೋಗಿ ಇಲಾಖೆಯ ಒಂದೇ ಒಂದು ಇಲಾಖೆಯಲ್ಲಿ ೪೮ ಕೋಟಿ ರೂಪಾಯಿಗಳ ಪೆಂಡಿಂಗ್ ಬಿಲ್ ಇವತ್ತು. ಈಗ ಏನು ಹೇಳುತ್ತೀರಿ ಸ್ವಾಮಿ? Have you not cut the size of your plan?

ಏಕೆ ಹೇಳುತ್ತೀರಿ? ಈ ದಿಸೆಯಲ್ಲಿ ನಾವು ಕಡಿತ ಮಾಡುವುದಿಲ್ಲ, ಕಡಿತ ಮಾಡುವುದಿಲ್ಲವೆಂದು ಹೇಳುತ್ತೀರಿ. ಅಲ್ಲಿಗೇ ಇದು ನಿಲ್ಲಲಿಲ್ಲ. ನನ್ನ ಮೆಚ್ಚಿನ ವಿಷಯ. ನಾನು ಹೇಳುತ್ತಿದ್ದೆ. ನೀರಾವರಿ ಇಲಾಖೆಗೆ ಹಣವನ್ನು ಕೊಡುತ್ತೇವೆಂದು ಹೇಳಿ ಮೋಸ ಮಾಡುತ್ತೀರಿ. ಕೊಟ್ಟಿರುವ ಹಣವನ್ನು ನಿಮ್ಮ ಕೈಯಲ್ಲಿ ಖರ್ಚು ಮಾಡುವುದಕ್ಕಾಗುವುದಿಲ್ಲ. ಹೀಗೆ ಅವತ್ತು ನಾನು ಹೇಳಿದ್ದಕ್ಕೆ ನೀರಾವರಿ ಸಚಿವರು ಹೇಳಿದರು: let us exchange the notes ಅಂಥ. ಇವತ್ತು ಅವರ ಜೊತೆಯಲ್ಲಿ ನೋಟ್ಸನ್ನು ಎಕ್ಸ್‌ಚೇಂಜ್ ಮಾಡಿಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತೇನೆ. ನೀರಾವರಿ ವಿಷಯದಲ್ಲಿ ನಾನು ಅವತ್ತಿನಿಂದ ಹೇಳುತ್ತಾ ಬಂದಿದ್ದೇನೆ. ಎರಡು ಬೃಹತ್ ನೀರಾವರಿ ಯೋಜನೆಗಳಲ್ಲಿ ಕೂಡ. ಇದು ವಿಶೇಷ ಸಂದರ್ಭ. ಕೃಷ್ಣಾ ನೀರಾವರಿ ಯೋಜನೆಗಳನ್ನು ೨೦೦೦ದ ಇಸವಿಯೊಳಗೆ ಮಾಡಿ ಮುಗಿಸಬೇಕಾದಂತಹ ವಿಶೇಷ ಪರಿಸ್ಥಿತಿ ಇದೆ. ಈ ರಾಜ್ಯದ ಜನತೆಗೆ ಸರ್ಕಾರ ಇವತ್ತು ಹೇಳಬೇಕಾಗುತ್ತದೆ. ಈ ಎರಡೂ ಯೋಜನೆಗಳ ಬಗ್ಗೆ ಇರುವಂತಹ ವಿಶೇಷ ಪರಿಸ್ಥಿತಿಯನ್ನು ನೀಗಿಸುವುದಕ್ಕೆ ಈ ಸರ್ಕಾರ ವಿಶೇಷವಾದ ಕಾರ್ಯಕ್ರಮವನ್ನು ಹಾಕಿಕೊಂಡಿದೆಯೇ? ಅದನ್ನು ಯಾರೂ ಅಲ್ಲಗಳೆಯುವುದಕ್ಕೆ ಆಗುವುದಿಲ್ಲ. ಎರಡೂ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ, ಅನುಷ್ಠಾನಗೊಳಿಸುವ ವಿಷಯದಲ್ಲಿ ವಿಶೇಷವಾದ ಕಾರ್ಯಕ್ರಮವನ್ನು ಸರ್ಕಾರ ಹಾಕಿಕೊಂಡಿದೆಯೇ? ಎಂದು ಪ್ರಶ್ನೆ ಕೇಳಿದ್ದಕ್ಕೆ ಸರ್ಕಾರದ ಉತ್ತರ ಈ ರೀತಿ ಇದೆ. ಮೊದಲು ನನ್ನ ಪ್ರಶ್ನೆ ಏನೆಂದರೆ ಕೃಷ್ಣಾ ಮತ್ತು ಕಾವೇರಿ ಯೋಜನೆಗಳನ್ನು ಸಕಾಲದಲ್ಲಿ ಮುಗಿಸಲು ಸರ್ಕಾರದ ವಿಶೇಷ ಕಾರ್ಯಕ್ರಮಗಳೇನು? ಸರ್ಕಾರದ ಉತ್ತರ ಮಂತ್ರಿಗಳ ಉತ್ತರವಲ್ಲ. ವಿಶೇಷವಾದ ಕಾರ್ಯಕ್ರಮವೇನು ಇಲ್ಲ. ಈ ದುಸ್ಥಿತಿಗೆ ರಾಜ್ಯದ ರೈತರನ್ನು ತಂದಿದ್ದೀರಿ. ಕಾವೇರಿ ಜಲಾನಯನ ಪ್ರದೇಶಗಳ ಬಗ್ಗೆ ಸುಪ್ರೀಂಕೋರ್ಟ್‌ನಲ್ಲಿ ಕೇಸ್ ಪೆಂಡಿಂಗ್ ಇದೆ. ತಮಿಳುನಾಡಿನವರು ಕುತ್ತಿಗೆ ಹಿಸುಕುತ್ತಿದ್ದಾರೆ. ಈ ಕಡೆ ಕೃಷ್ಣಾ ಜಲಾನಯನ ಯೋಜನೆಗಳಲ್ಲಿ ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದವರು ಅವರ ಪಾಲಿನ ನೀರನ್ನು ಉಪಯೋಗಿಸಿಕೊಂಡು ನಮ್ಮ ಪಾಲಿನ ನೀರಿಗೆ ಕೈ ಹಾಕುತ್ತಿದ್ದಾರೆ. ವಿಶೇಷವಾದ ಕಾರ್ಯಕ್ರಮ ಏನೂ ಇಲ್ಲವೆಂದು ಹೇಳುತ್ತೀರಿ.

ಇನ್ನು ಹಣದ ವಿಷಯ. ನೀರಾವರಿಗೆ ಒದಗಿಸುವ ಹಣವನ್ನು ನಾವು ಸಂಪೂರ್ಣವಾಗಿ ಖರ್ಚು ಮಾಡುತ್ತೇವೆನ್ನುವ ಸವಾಲನ್ನು ಅವತ್ತು ಮಂತ್ರಿಗಳು ಹಾಕಿದರು. ಮಾಡಿದ್ದೀರಾ? ಉತ್ತರವನ್ನು ನಾನೇ ಓದುತ್ತೇನೆ. "This year again bills worth Rs. 160 crores are pending as on 31st Marchin Irrigatin." This statement was made by none other than the Finance Secretary before subject committee. ಎಕ್ಸ್‌ಪ್ಲೇನ್ ನೋಟ್ಸ್, ನೀವು ಮಾಡಿ. ಅವತ್ತು ರಾಜ್ಯದ ಜನತೆಗೆ ಸವಾಲನ್ನು ಹಾಕಿದ್ದಿರಿ: ಇಷ್ಟು ಹಣವನ್ನು ನೀರಾವರಿಗೆ ನಿಗದಿ ಮಾಡಿದ್ದೇವೆ. ಆ ಹಣವನ್ನು ಸಂಪೂರ್ಣವಾಗಿ ಖರ್ಚು ಮಾಡುತ್ತೇವೆಂದು. ಹೌಸ್‌ನಲ್ಲಿ ಯಾವ ಪೆಂಡಿಂಗ್ ಬಿಲ್ಸ್ ಇಲ್ಲ. ಎಲ್ಲವನ್ನೂ ಕೊಟ್ಟಿದ್ದೇವೆಂದು ಹೇಳಿದ್ದೀರಿ. ನಮ್ಮ ಮುಖ್ಯಮಂತ್ರಿಗಳು ಈ ದೇಶವನ್ನೆಲ್ಲಾ ಡಂಗೂರ ಹೊಡೆಯುತ್ತಾರೆ, ನೀರಾವರಿ ಯೋಜನೆಯ ಗಾತ್ರವನ್ನು ಕಡಿಮೆ ಮಾಡುವುದಿಲ್ಲವೆಂದು. ಮಾರ್ಚ್ ೩೧ನೇ ತಾರೀಖಿಗೆ ಪೆಂಡಿಂಗ್ ಬಿಲ್ಸ್‌ನ ಹಣ ೧೬೦ ಕೋಟಿ ರೂಪಾಯಿ. ಅದ್ದರಿಂದ ಅವತ್ತು ನೀವು ಹೇಳಿದ ಮಾತು, ಆಯವ್ಯಯಕ್ಕೆ ಪಾವಿತ್ರ್ಯತೆ ಇಲ್ಲವೆನ್ನುವ ಮಾತನ್ನು ಸಾಕ್ಷ್ಯರೂಪದಲ್ಲಿ ಕಾರ್ಯರೂಪಕ್ಕೆ ತಂದಿದ್ದೀರಿ. ಅದಕ್ಕೆ ನಾನು ಹೇಳುವುದು: ಈ ರಾಜ್ಯದಲ್ಲಿ ಮೊದಲಿನಿಂದಲೂ ನೀರಾವರಿ ಯೋಜನೆಗಳಿಗೆ ಹಣವನ್ನು ಖರ್ಚು ಮಾಡುತ್ತೇವೆಂದು ಜನರಿಗೆ ಹೇಳಿ ಮೋಸವನ್ನು ಮಾಡಲಾಗಿದೆ. ಈ ಪ್ರಶ್ನೆಗೂ ಉತ್ತರ ಇಲ್ಲವೆ? ಈ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಯಾವುದಾದರೂ ಒಂದು ವರ್ಷ ನೀರಾವರಿ ಯೋಜನೆಗಳಿಗೆ ನಿಗದಿ ಮಾಡಿರುವ ಹಣವನ್ನು ಸಂಪೂರ್ಣವಾಗಿ ಬಿಡುಗಡೆ ಮಾಡಲಾಗಿದೆಯೆ? ಅದಕ್ಕೇನು ಉತ್ತರ? ಸರ್ಕಾರದವರು ಉತ್ತರ ಕೊಟ್ಟಿದ್ದಾರೆ. ಹಣಕಾಸು ಇಲಾಖೆಯವರು ಉತ್ತರ ಕೊಟ್ಟಿದ್ದಾರೆ. ನನಗೆ ತಿಳಿದಮಟ್ಟಿಗೆ ಹಾಗೆ ಆಗಿಲ್ಲ. ಅಂದರೆ ಈ ರಾಜ್ಯದಲ್ಲಿ ಈ ದೇಶಕ್ಕೆ ಸ್ವಾತಂತ್ರ್ಯ ಬಂದಮೇಲೆ ಯಾವ ವರ್ಷವೂ ಆಯವ್ಯಯದಲ್ಲಿ ಒದಗಿಸಿದಷ್ಟು, ನಿಗದಿ ಮಾಡಿದಷ್ಟು, ಇಯರ್‌ಮಾರ್ಕ್ ಮಾಡಿದಷ್ಟು ಹಣವನ್ನು ಬಿಡುಗಡೆ ಮಾಡಲಿಲ್ಲ. ನಾನು ಹೇಳಿದ ಮಾತನ್ನು ಸರ್ಕಾರ ಇವತ್ತು ಒಪ್ಪಿಕೊಂಡಿದೆ. ಮೋಸದ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವುದರಲ್ಲಿ ಒಬ್ಬರಿಂದ ಮತ್ತೊಬ್ಬರಿಗೆ ಸ್ಪರ್ಧೆ ನಡೆದಿದೆ. ಈ ರಾಜ್ಯದ ಅಭಿವೃದ್ಧಿಗೊಳಿಸಿದಂತಹ ಆದ್ಯತಾ ಪಟ್ಟಿಯನ್ನು ತೆಗೆದಾಗ ನೀರಾವರಿ ಆದ್ಯತಾವಲಯವೆಂದು ನೀರಾವರಿ ಇಲಾಖೆ ಹೇಳಿದೆ. ಆಮೇಲೆ ವಿದ್ಯುಚ್ಛಕ್ತಿ. ಆದ್ಯತಾವಲಯದಲ್ಲಿ ಆಗಿರುವ ಅಭಿವೃದ್ಧಿ ಎಷ್ಟು? ೧೯೮೦ರವರೆಗೆ ಒಂದು ದಶಕದಲ್ಲಿ ಈ ರಾಜ್ಯದಲ್ಲಿ ಆಗಿರುವಂತಹ ನೀರಾವರಿ ಹೆಚ್ಚಳ ಆದ್ಯತಾವಲಯದಲ್ಲಿ ನಾವು ಸಾಧಿಸಿರುವ ಸಾಧನೆ ಶೇ. ೧ ರಷ್ಟು. ಅಂದರೆ ೧೯೮೦ರಲ್ಲಿ ೧೩ ಪರ್ಸೆಂಟ್, ೧೯೯೦ರಲ್ಲಿ ೧೪ ಪರ್ಸೆಂಟ್. ಇದು ನನ್ನ ಪ್ರಕಾರ ಅಲ್ಲ. ಸರ್ಕಾರದವರು ಹೊರಡಿಸಿರುವ ಆರ್ಥಿಕ ಸಮೀಕ್ಷೆಯ ಪ್ರಕಾರ. ೧೯೮೦ರಲ್ಲಿ ೧೩ ಪರ್ಸೆಂಟ್, ಇವತ್ತು ೧೪ ಪರ್ಸೆಂಟ್ ಇದೆ. ರಾಜ್ಯದ ಆದ್ಯತಾವಲಯ ನೀರಾವರಿ ವಲಯದಲ್ಲಿ ಒಂದು ದಶಕದ ಸಾಧನೆ ಶೇ. ೧ರಷ್ಟು. ನಾಚಿಕೆಯಾಗುವುದಿಲ್ಲವೆ? ಏಕೆ ಕರೆಯುತ್ತೀರಿ ಆದ್ಯತಾವಲಯವೆಂದು? ರೈತರಿಗೆ ನೀರು ಕೊಡುತ್ತೇವೆಂದು. ಇದು ನನ್ನ ಅಂಕಿ ಅಂಶಗಳಲ್ಲ, ನಿಮ್ಮ ಸರ್ಕಾರ ಹೊರಡಿಸಿರುವ ಆರ್ಥಿಕ ಸಮೀಕ್ಷೆ, ನಾಚಿಕೆಪಟ್ಟುಕೊಳ್ಳಬೇಕು. ಈ ರಾಷ್ಟ್ರದ ನೀರಾವರಿ ೩೬ ಪರ್ಸೆಂಟ್. ಇಷ್ಟಾದರೂ ನೀವು ವಿಶೇಷವಾದ ಕಾರ್ಯಕ್ರಮವನ್ನು ಹಾಕಿಕೊಂಡಿದ್ದೀರಾ? ಅಂಥ ಕೇಳಿದರೆ, ಯಾವ ಕಾರ್ಯಕ್ರಮವೂ ಸರ್ಕಾರದ ಮುಂದೆ ಇಲ್ಲ ಎಂದು ಹೇಳುತ್ತಾರೆ.

ಸನ್ಮಾನ್ಯ ಅಧ್ಯಕ್ಷರೇ, ಮುಖ್ಯಮಂತ್ರಿಗಳು ಸರಿಯಾದ ಸಮಯಕ್ಕೇ ಎಲ್ಲಿಗೋ ಹೊರಟು ಹೋದರು. ಕಳೆದ ಸಾರಿ, ಅವರು ಭಾಷಣ ಮಾಡುತ್ತಾ ಹೇಳಿದರು. Creation of potentialities and utilities ಮಧ್ಯದಲ್ಲಿರುವಂಥ ಗ್ಯಾಪ್, ಅದನ್ನು I will reduce it ot one year. ಈಗ ನಾವು

ಸಾಮರ್ಥ್ಯವನ್ನು ಸೃಷ್ಟಿ ಮಾಡುತ್ತೇವೋ, ಆ ಸೃಷ್ಟಿ ಮಾಡಿದ ಸಾಮರ್ಥ್ಯದ ಉಪಯುಕ್ತತೆಯನ್ನು ಒಂದು ವರ್ಷಕ್ಕೆ ಇಳಿಸಿದರು. ಸ್ವಾಮಿ, ನಿಮ್ಮ ಇಲಾಖೆಯವರು ಕೊಟ್ಟಿರುವಂಥ ಅಂಕಿ ಅಂಶದ ಪ್ರಕಾರ, We have water in out dams which is sufficient for 12 lakh hectares, but weare incapable of drawing the water because we don't have field channels.

ನಿಮ್ಮ ಅಂಕಿ ಅಂಶದ ಪ್ರಕಾರ ನೀರು, ಇವತ್ತು ನಮ್ಮ ಅಣೆಕಟ್ಟುಗಳಲ್ಲಿ ತುಂಬಿ ತುಳುಕುತ್ತಿದೆ. ಅದು ಹೇಮಾವತಿ ಇರಬಹುದು. ಕಬಿನಿ ಇರಬಹುದು, ನಾರಾಯಣಪುರ ಡ್ಯಾಮ್ ಇರಬಹುದು. ಈ ಅಂಕಿ ಅಂಶಗಳನ್ನು ನಿಮ್ಮ ಇಲಾಖೆಯವರೇ ಕೊಟ್ಟಿದ್ದಾರೆ. ಮಾನ್ಯ ಮೊಯಿಲಿಯವರಿಗೆ, ಬಹುಶಃ ಹೇಮಾವತಿಗೆ ಬಂದಾಗ ಮನಸ್ಸು ಕರಗಿತು. ಅದೊಂದು ವಿಷಯದಲ್ಲಿ ಮಾತ್ರ ಅವರನ್ನು ಒಪ್ಪಿಕೊಳ್ಳುತ್ತೇನೆ. ಕೇವಲ ಕೆಲವೇ ಕೋಟಿ ರೂಪಾಯಿಗಳನ್ನು ಖರ್ಚು ಮಾಡಿ, ೪ ಲಕ್ಷ ಎಕರೆಗೆ ನೀರು ಬಿಡುವಂಥ ಪರಿಸ್ಥಿತಿ ಬಂದಾಗ, 'ರಾಮಯ್ಯನವರೊಬ್ಬರಿಗೇ ಏಕೆ ಬ್ಲಡ್ ಪ್ರೆಷರ್ ಜಾಸ್ತಿಯಾಗಬೇಕು, ನನಗೂ ಆಗುತ್ತೆ' ಎಂದು ಹೇಳಿದರು. ಇವತ್ತು ೧೨ ಲಕ್ಷ ಎಕರೆಗಳಿಗೆ ಆಗುವಷ್ಟು ನೀರು ನಮ್ಮ ಅಣೆಕಟ್ಟುಗಳಲ್ಲಿ ತುಂಬಿದೆ. ಆದರೆ, ಆ ಸೃಷ್ಟಿಸಿದ ಸಾಮರ್ಥ್ಯವನ್ನು, ಕಾಲುವೆಗಳ ಮೂಲಕ ಬಿಟ್ಟುಕೊಂಡು, ಆ ಸಾಮರ್ಥ್ಯವನ್ನು ಉಪಯೋಗಿಸಿಕೊಳ್ಳುವುದಕ್ಕೆ ನಮಗೆ ಸಾಧ್ಯವಾಗಲಿಲ್ಲ. ಇಡೀ ರಾಜ್ಯದಲ್ಲಿ ನಮಗಿರುವಂಥ ಸಾಧ್ಯತೆ, ೫೦ ಲಕ್ಷ ಎಕರೆ. ೫೦ ಲಕ್ಷ ಎಕರೆಯಲ್ಲಿ. ನಾವು ಸಾಮರ್ಥ್ಯವನ್ನು ಉಪಯೋಗಿಸಿಕೊಂಡಿರುವುದು ಕೇವಲ ಶೇ. ೧೪ ಭಾಗ ಮಾತ್ರ. ಇನ್ನುಳಿದ ನೀರಿನ ಉಪಯುಕ್ತತೆ ಪಡೆಯುವಲ್ಲಿ ನಾವು ವಿಫಲರಾಗಿದ್ದೇವೆಂದು ಸರ್ಕಾರಕ್ಕೆ ಹೇಳುವುದಕ್ಕೆ ಇಷ್ಟಪಡುತ್ತೇನೆ.

* * *

**ವೈಸ್ ಚೇರ್ಮನ್** :- ತಾವು ಇನ್ನೂ ಎಷ್ಟು ಟೈಮ್ ತೆಗೆದುಕೊಳ್ಳುತ್ತೀರಿ?

ನೀವು ಕುಳಿತುಕೊಳ್ಳಿ, ಎಂದು ಹೇಳಿದರೆ, ಕುಳಿತುಕೊಳ್ಳುತ್ತೇನೆ. ಇಲ್ಲವೇ ತಾವು ಅಪ್ಪಣೆ ಕೊಡಿಸಿದರೆ, ಇನ್ನೊಂದೆರಡುಮೂರು ನಿಮಿಷ ಮಾತನಾಡುತ್ತೇನೆ. ಸನ್ಮಾನ್ಯ ಅಧ್ಯಕ್ಷರೇ, ಇನ್ನೊಂದು ವಿಷಯವನ್ನು ನಾನು ಸರ್ಕಾರದ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ಈ ರಾಷ್ಟ್ರದ ಶೇಕಡಾವಾರು ನೀರಾವರಿಗೆ, ಈ ರಾಷ್ಟ್ರದ ಇತರೆ ರಾಜ್ಯಗಳ ಶೇಕಡಾವಾರು ನೀರಾವರಿಗೆ ಹೋಲಿಸಿಕೊಂಡಾಗ. ಕರ್ನಾಟಕ ರಾಜ್ಯದ ನೀರಾವರಿ ಅತ್ಯಂತ ಕೆಳಗಿದೆ. ಇದಕ್ಕೆ ನೀರಾವರಿ ಇಲಾಖೆಯವರು, ಈ ನೀರಾವರಿ ಆದ್ಯತಾವಲಯದಲ್ಲಿ ನಾವೆಷ್ಟು ಸಾಧನೆ ಮಾಡಬೇಕಾಗಿತ್ತೋ, ಅಷ್ಟು ಸಾಧನೆಯನ್ನು ಏಕೆ ಮಾಡಲಿಲ್ಲ ಎನ್ನುವುದಕ್ಕೆ ನಮಗೆ ಒಂದು ಟಿಪ್ಪಣಿಯನ್ನು ಕೊಟ್ಟಿದ್ದಾರೆ. We have to list out reasons as to why we could not achieve more. ಮೊದಲನೇ ಕಾರಣ ಯಾವುದೆಂದರೆ, ಅವರು ಹೇಳಿರುವುದನ್ನು ಓದುತ್ತೇನೆ :

"ಸರ್ಕಾರವು ನೀರಾವರಿಗೆ ಆಯವ್ಯಯದಲ್ಲಿ ನಿಗದಿಪಡಿಸಿದಂತಹ ಅನುದಾನವನ್ನು ಸಂಪೂರ್ಣವಾಗಿ ಖರ್ಚು ಮಾಡದಿರುವುದು ಈ ರಾಜ್ಯದ ಯೋಜನೆಗಳು ಕುಂಠಿತವಾಗುವುದಕ್ಕೆ ಮೊದಲನೇ ಕಾರಣ."

That is the first and foremost reason. ಹಣ ಒದಗಿಸದೇ ಇರುವುದು ಒಂದೇ ಒಂದು ಪ್ರಮುಖವಾದ ಕಾರಣ. ಈ ರಾಜ್ಯದಲ್ಲಿ ನಾವು ನೀರಾವರಿಯಲ್ಲಿ ಇಷ್ಟೊಂದು ಹಿಂದೆ ಬಿದ್ದಿರುವುದಕ್ಕೆ ಇಲಾಖೆಯವರೇ ಒಪ್ಪಿಕೊಂಡಿದ್ದಾರೆ. ಆದ್ದರಿಂದ, ಕೃಷ್ಣಾ ಮತ್ತು ಈ ರಾಜ್ಯದ ಇತರೆ ನೀರಾವರಿ ಯೋಜನೆಗಳನ್ನು ಸಂಪೂರ್ಣ ಮಾಡುವುದಕ್ಕೆ ಸುಮಾರು ೬,೫೦೦ ಕೋಟಿ ರೂಪಾಯಿಗಳು ಎಂದು ಅವರು ಲೆಕ್ಕ ಕೊಡುತ್ತಾರೆ. ಆದರೆ, If you keep the escalation in the mind.

ಬಹುಶಃ ಸುಮಾರು ೧೦ ಸಾವಿರ ಕೋಟಿ ರೂಪಾಯಿಗಳು ಬೇಕಾಗುತ್ತವೆ. ಕೃಷ್ಣಾ ಯೋಜನೆ ಕಾರ್ಯಕ್ರಮಗಳನ್ನು, ಎರಡು ಸಾವಿರದ ವರ್ಷದೊಳಗಾಗಿ ಮುಗಿಸುತ್ತೇವೆಂದು, Day in and day out ಮುಖ್ಯಮಂತ್ರಿಗಳು ಹೋದ ಕಡೆಯಲ್ಲೆಲ್ಲಾ ಸಾರಿ, ಸಾರಿ ಭಾಷಣವನ್ನು ಮಾಡುತ್ತಾರೆ. ಅವರಿಗೆ ನೇರವಾಗಿ ಒಂದು ಪ್ರಶ್ನೆಯನ್ನು ಕೇಳುವುದಕ್ಕೆ ಇಷ್ಟಪಡುತ್ತೇನೆ. ಇನ್ನಿರುವಂಥ ಆರು ವರ್ಷಗಳಲ್ಲಿ, ನಮಗೆ ಬೇಕಾಗಿರುವಂಥ ೬-೭ ಸಾವಿರ ಕೋಟಿ ರೂಪಾಯಿಗಳನ್ನು ನಿಮ್ಮ ಕೈಲಿ ಖರ್ಚು ಮಾಡುವುದಕ್ಕೆ ಸಾಧ್ಯವೇ? ಎರಡು ಸಾವಿರದ ಇಸವಿಯವರೆಗೂ ನಿಮ್ಮನ್ನೇ ಮುಖ್ಯಮಂತ್ರಿ ಮಾಡಿಬಿಡೋಣ. ಇಲಾಖೆಯವರು ಕೊಟ್ಟಿರುವಂಥ ಮಾಹಿತಿ ಪ್ರಕಾರವೇ, ಕೊನೇ ಪಕ್ಷ ಒಂದು ವರ್ಷಕ್ಕೆ, ೧,೫೦೦ ಕೋಟಿ ರೂಪಾಯಿಗಳಿಗೆ ಕಡಿಮೆ ಇಲ್ಲದಂತೆ ನೀವು ಅನುದಾನವನ್ನು ಕೊಡಬೇಕಾಗುತ್ತದೆ. ಕಳೆದ ವರ್ಷದ್ದನ್ನು ಬಿಟ್ಟುಬಿಟ್ಟೆ, ಈ ವರ್ಷ ಮಾಡಿದ್ದೀರಾ? ೧,೫೦೦ ಕೋಟಿ ರೂಪಾಯಿಗಳನ್ನು ಈ ವರ್ಷವೂ ಕೊಟ್ಟಿಲ್ಲ. ಇವರು, ಈ ವರ್ಷ ಕೊಟ್ಟಿರತಕ್ಕ ಹಣ ಎಷ್ಟೆಂದರೆ, ೬,೫೦೦ ಕೋಟಿ ಎಂದರೆ, ೧೦ ಸಾವಿರ ಕೋಟಿ ನಮಗೆ ಬೇಕಾಗುತ್ತವೆ. ಇವರು ನಮಗೆ ಒದಗಿಸಿರುವುದು, ಅವರ ಲೆಕ್ಕದ ಪ್ರಕಾರವೇ, ೯೨೦ ಕೋಟಿ. ಎಲ್ಲಾ ಸೇರಿ ನೀರಾವರಿಗೆ ೯೨೦ ಕೋಟಿ. ಈ ರಾಜ್ಯದ ನೀರಾವರಿ ಯೋಜನೆಗಳ ಅನುಷ್ಠಾನಕ್ಕಾಗಿ ಸರ್ಕಾರ ಒದಗಿಸಿರುವಂಥ ಅನುದಾನ ೯೨೦ ಕೋಟಿ. ಇವರ ಇಲಾಖೆಯವರ ಪ್ರಕಾರವೇ, ಅವಶ್ಯಕವಾಗಿ ಬೇಕಾಗಿರುವಂಥ ಹಣ ೧,೫೦೦ ಕೋಟಿ. ಆದ್ದರಿಂದ, ಗತಕಾಲದ ವೈಭವದ ಬಗ್ಗೆ ಬಿಡೋಣ. ಮುಖ್ಯಮಂತ್ರಿಯವರು ಯಾವಾಗಲೂ ಒಂದು ಪದ ಉಪಯೋಗಿಸುತ್ತಾರೆ. "ಪರಂಪರೆ" ಎಂದು. ನಾನು ೧೨ ವರ್ಷದಿಂದ ನೋಡುತ್ತಿದ್ದೇನೆ, ಈ ಪರಂಪರೆ ಎನ್ನುವ ಪದವನ್ನು ಬಹಳ ಚೆನ್ನಾಗಿ ಉಪಯೋಗಿಸುತ್ತಾರೆ. ಪರಂಪರೆ ಬಿಟ್ಟುಬಿಡೋಣ. ಅದು ಹೊಸದೋ, ಕೆಟ್ಟದೋ, ಒಳ್ಳೆಯದೋ, ಇದಕ್ಕೆ ನಾವೂ ಭಾಗಸ್ಥರು. ಈಗ ತಾನೆ ಓದಿದೆ. ಎಲ್ಲರೂ ಅದರಲ್ಲಿ ಭಾಗಸ್ಥರಾಗಿದ್ದೇವೆ. ಆದರೆ, ನಾವು ಮುಂದೆಯಾದರೂ ಇದನ್ನು ಸರಿ ಮಾಡಿಕೊಳ್ಳುತ್ತಿದ್ದೇವೆಯೇ? ೧,೫೦೦ ಕೋಟಿ ರೂಪಾಯಿಗಳು ಬೇಕು ಎಂದು ಲೆಕ್ಕ ಇರುವಾಗ, ಒದಗಿಸಿರುವಂಥ ಹಣ ೯೨೦ ಕೋಟಿ. ಆದ್ದರಿಂದ ಈ ಪರಂಪರೆಯನ್ನು ಇಲ್ಲಿಗೇ ನಿಲ್ಲಿಸುವ ಪ್ರಯತ್ನ ಇಲ್ಲಿಯೂ ಮಾಡಿಲ್ಲ. ಈ ರಾಜ್ಯದ ರೈತರಿಗೆ ನೀರು ಕೊಡುತ್ತೇವೆ ಎಂದು ಹೇಳಿಕೊಂಡು ಬಂದಿರುವಂಥ 'ಮೋಸದ ಪರಂಪರೆ' ಇವತ್ತಿಗೂ ನಿಂತಿಲ್ಲ. ಮುಂದಿನ ವರ್ಷಕ್ಕೂ ಅದನ್ನು ಮುಂದುವರಿಸಿಕೊಂಡು ಹೋಗುವುದಕ್ಕೆ ನೀವು ಏರ್ಪಾಡನ್ನು ಮಾಡಿದ್ದೀರಿ. ಅದಕ್ಕಾಗಿ ಅಭಿನಂದಿಸಬೇಕೋ, ಛೀಮಾರಿ ಹಾಕಬೇಕೋ ನನಗಂತೂ ಗೊತ್ತಿಲ್ಲ.

ಮಾನ್ಯ ಅಧ್ಯಕ್ಷರೇ, ನನ್ನ ಮಾತನ್ನು ನಿಲ್ಲಿಸುವುದಕ್ಕೆ ಇಷ್ಟಪಡುತ್ತೇನೆ. ಅದಕ್ಕಿಂತ ಮೊದಲು ಇಷ್ಟನ್ನು ಹೇಳಲಿಕ್ಕೆ ಪ್ರಯತ್ನ ಪಡುತ್ತೇನೆ. ನೂರಕ್ಕೆ ಶೇಕಡ ೫೦ ರಷ್ಟು ಯೋಜನೆಯ ಗಾತ್ರವನ್ನು ಹೆಚ್ಚು ಮಾಡಿ ಮಾನ್ಯ ಮುಖ್ಯಮಂತ್ರಿಗಳು ರಾಜ್ಯದಲ್ಲಿ ದೊಡ್ಡ ಸಾಧನೆಯನ್ನು ನಾವು ಮಾಡಿದ್ದೇವೆಂದು ತೋರಿಸಿಕೊಳ್ಳುವಂತಹ ಭ್ರಮೆಯಲ್ಲಿದ್ದು, ವಿಧಿ ಇಲ್ಲದೆ ಯೋಜನಾ ಗಾತ್ರವನ್ನು ಕಡಿತ ಮಾಡುವಂತಹ ಪರಿಸ್ಥಿತಿಯನ್ನು ಅವರೇ ಸೃಷ್ಟಿಸಿಕೊಂಡರು. ಆದ್ದರಿಂದಲೇ ಲೋಕೋಪಯೋಗಿ ಇಲಾಖೆ ಒಂದರಲ್ಲಿಯೇ ೩೧ನೇ ಮಾರ್ಚಿಗೆ ೪೮ ಕೋಟಿ ರೂಪಾಯಿ ಪೆಂಡಿಂಗ್ ಬಿಲ್ ಇವೆ. ಮತ್ತೆ ನೀರಾವರಿ ಇಲಾಖೆಯಲ್ಲಿ ೧೬೦ ಕೋಟಿ ರೂಪಾಯಿಗಳ ಪೆಂಡಿಂಗ್ ಬಿಲ್ ಇವೆ.

If you want to dispute it I would like to read the statement of the Finance commissioner. This year again Rs. 160 crores are pending as on 31.3.1994 (Rs.

48 crores in PWD). This is not my statement. This is the statement made by your Finance Secretary before the subject committee and further he said, we are not able to make any finances available forfurther 3 months.

ಮತ್ತೆ ಏಕೆ ಸ್ವಾಮಿ ನಾವು ಯೋಜನಾ ಗಾತ್ರವನ್ನು ಕಡಿತ ಮಾಡುವುದಿಲ್ಲ. ಕಡಿತ ಮಾಡುವುದಿಲ್ಲ ಅಂಥ ಈ ರಾಜ್ಯದ ಜನತೆಗೆ ಹೇಳುತ್ತಾ ಬರುತ್ತೀರಿ? ರಾಜ್ಯದ ಜನ ನಾವು ಅದನ್ನು ಓದಿಕೊಂಡು ಸಂತೋಷಪಡಬೇಕೇ? ಕಡಿತ ಮಾಡಿದ್ದೇವೆಂದು ಇವತ್ತಾದರೂ ಒಪ್ಪಿಕೊಳ್ಳುತ್ತೀರಾ? ತಾವು ಫಸ್ಟ್‌ಕ್ಲಾಸ್ ಆಗಿ ಉತ್ತರ ಕೊಡಬಹುದು. ಅಲ್ಲಿ ೧೬೦ ಕೋಟಿ ರೂಪಾಯಿ ಪೆಂಡಿಂಗ್ ಬಿಲ್ ಇದೆ ಅಂತ ಹೇಳಿ, ಯೋಜನಾ ಗಾತ್ರವನ್ನು ಕಡಿಮೆ ಮಾಡಿದಿರಿ. ಇದು ಒಂದು. ಆದ್ದರಿಂದ ನಾನು ತಮ್ಮ ಮೇಲೆ ಆಪಾದನೆ ಮಾಡುತ್ತಿಲ್ಲ. ಒಂದು ಮಾತನ್ನು ಹೇಳಿದರೆ ಯಾರಾದರೂ ಬಹುಶಃ ರಾಮಯ್ಯನವರು ಮುಖ್ಯಮಂತ್ರಿಗಳ ಜೊತೆಯಲ್ಲಿ, ಕಾಂಗ್ರೇಸ್‌ನವರ ಜೊತೆಯಲ್ಲಿ ಶಾಮೀಲಾಗಿದ್ದಾರೆಂದು ಅಂದುಕೊಂಡರೂ ನನಗೆ ಚಿಂತೆ ಇಲ್ಲ. ಅದಕ್ಕೆ ನಾನು ಆಗಲೇ ಹೇಳಿದೆ. ನಾನು ಈಗಾಗಲೇ ಬೇಕಾದಷ್ಟು ಸಪರಿಂಗ್ ಮಾಡಿದ್ದೇನೆ, ಏನೂ ತೊಂದರೆ ಇಲ್ಲ. ಒಂದು ವಿಷಯದಲ್ಲಿ ನಾನು ಅವರನ್ನು ಅಭಿನಂದಿಸುತ್ತೇನೆ ನನ್ನ ಜಿಲ್ಲೆಗೆ ಹೇಮಾವತಿ ನೀರನ್ನು ಹರಿಸುವುದರಲ್ಲಿ ಅವರು ಸಹಕಾರ ನೀಡುತ್ತಿದ್ದಾರೆ. ಇಷ್ಟು ಹೊತ್ತಿನವರೆಗೆ ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದನೆಗಳನ್ನು ಹೇಳಿ ನನ್ನ ಮಾತು ನಿಲ್ಲಿಸುತ್ತೇನೆ.

"ಇನ್ನು ನಾವು ಮುಂದೆ ಮಾಡಬೇಕಾದಂಥ ಕ್ರಮ ಯಾವುದು? ನಾವು ಯಾವ ನಿಲುವನ್ನು ಅನುಸರಿಸಬೇಕು?" ಎಂದು ಮಾನ್ಯ ಸದಸ್ಯರೊಬ್ಬರು ಕೇಳಿದರು. ನಾನು ಅವರಿಗೆ ಆಗಲೇ ಈ ವಿಷಯ ಕೋರ್ಟಿನ ಮುಂದೆ ಇದೆ ಎಂದು ಹೇಳಿದ್ದೇನೆ. ನಾನು ಸಹ ಸ್ವಲ್ಪ ದಿನ ವಕೀಲನಾಗಿ ಕೆಲಸ ಮಾಡಿದ್ದೇನೆ. ಅದನ್ನು ಅವಾಯಿಡ್ ಮಾಡಿಕೊಂಡು ಹೋಗುತ್ತಿದ್ದೇನೆ. ಕೋರ್ಟ್ ಮುಂದೆ ಒಪ್ಪಿಗೆಗೆ ತಾವು ಇರಲಿಲ್ಲ. ಅದರ ಬಗ್ಗೆ ಕೂಡಲೇ ನಿಯಮದ ಪ್ರಕಾರ ಚರ್ಚೆ ಮಾಡುವುದಕ್ಕೆ ಅವಕಾಶ ಕೊಡದಿದ್ದರೂ ಪರವಾಗಿಲ್ಲ, ವೈಯಕ್ತಿಕವಾಗಿ ಇನ್ನು ಯಾವುದಾದರೊಂದು ವೇದಿಕೆಯಲ್ಲಿ ಚರ್ಚೆ ಮಾಡಲು ಅವಕಾಶ ಮಾಡಿಕೊಟ್ಟರೆ ನಾನು ಅವರ ಊರಿಗೆ ಒಂದು ವಾದ ಮಾಡುತ್ತೇನೆ. ಆದ್ದರಿಂದ ಕೋರ್ಟಿನಲ್ಲಿ ಏನು ಇದೆ ಅದು ಸರಿಯಲ್ಲವೇನೋ ಎಂದು ನನ್ನ ಭಾವನೆ. ಅದಕ್ಕೆ ನಾನು ಅದನ್ನು ಅವಾಯಿಡ್ ಮಾಡಿಕೊಳ್ಳುತ್ತಿದ್ದೇನೆ. ಅಧ್ಯಕ್ಷರೇ ನಾವು ಕೊಟ್ಟಿರತಕ್ಕದ್ದು ಮತ್ತು ಪಡೆದುಕೊಂಡಿರತಕ್ಕದ್ದರ ಬಗ್ಗೆ ಆಗಲೇ ಹೇಳಿದ್ದೇನೆ. ೧೯೭೦ರಲ್ಲಿ ಇದ್ದ ಕರ್ನಾಟಕದ ನೀರಾವರಿಯ ಪ್ರದೇಶ ಸಾವಿರ ಎಕರೆಗಳಲ್ಲಿ ೨೭೪, ಅದೇ ಸಮಯದಲ್ಲಿ ತಮಿಳುನಾಡಿನಲ್ಲಿ ಇದ್ದದ್ದು ೯೫೭ ಎಕರೆ. The contribution is 53% and the utility is 2,72,000 acres.

ಅವರು ಇವತ್ತು ೯೫೭ ಇದ್ದದ್ದನ್ನು ಸಾಕಷ್ಟು ಜಾಸ್ತಿ ಮಾಡಿಕೊಂಡಿದ್ದಾರೆ. ನಮ್ಮ ಸಾಗುವಳಿ ಮಾಡತಕ್ಕ ಪ್ರದೇಶ ೧೯ ಭಾಗವಾದರೆ ತಮಿಳುನಾಡಿನವರದ್ದು ೪೭ ಭಾಗ. ಶೇ. ೫೩ರಷ್ಟು ನೀರನ್ನು ಕಾವೇರಿ ಕಣಿವೆಗೆ ದೇಣಿಗೆಯಾಗಿ ಕೊಟ್ಟಿರತಕ್ಕ ಜನರಿಗೆ ಸಿಕ್ಕಿರತಕ್ಕ ಪ್ರತಿಫಲವೇನು ಎನ್ನುವುದನ್ನು ಈ ಅಂಕಿಅಂಶಗಳಿಂದ ಕಾಣಬಹುದು. ನನ್ನ ವಾದ ಮತ್ತು ಅನಿಸಿಕೆ ಏನೆಂದರೆ ಯಾರೋ ಒಬ್ಬರು ಇದನ್ನು ಮಾಡಿದ್ದಾರೆ. ಈಗ ಇರತಕ್ಕ ಮುಖ್ಯಮಂತ್ರಿಗಳು, ಮಂತ್ರಿಗಳು ಮಾಡಿದ್ದಾರೆ ಎನ್ನತಕ್ಕ ವಾದವಲ್ಲ; The successive governments. ತಾವು ಇದನ್ನು ಕೊನೆಗಾಣಿಸಲು ಏನಾದರೂ ಪ್ರಯತ್ನ ಮಾಡಿದ್ದೀರಾ? ನನ್ನ ಪ್ರಕಾರ ಏನೂ ಪ್ರಯತ್ನ ಮಾಡಿಲ್ಲ.

ಆದಕ್ಕಾಗಿ ನಾನು ಒತ್ತಿ ಹೇಳುತ್ತಿದ್ದೇನೆ ರಾಜಕೀಯವಾಗಿ ಕೂಡ ಕಾವೇರಿ ಕಣಿವೆಯಲ್ಲಿ ನಮ್ಮ ಪಕ್ಷವನ್ನು ಪ್ರತಿಪಾದನೆ ಮಾಡುವುದರಲ್ಲಿ, ಅದನ್ನು ರಕ್ಷಿಸಿಕೊಳ್ಳುವುದರಲ್ಲಿ ನಾವು ಸೋತಿದ್ದೇವೆ. ಅವರು ಕೊಟ್ಟಿರತಕ್ಕ ಒಂದು ವಾಕ್ಯದಲ್ಲಿ ಇಲ್ಲಿ ಓದುತ್ತೇನೆ. ಅದೇನೆಂದರೆ 'ಶತಶತಮಾನಗಳಿಂದ ನಡೆದಿರುವ ಕಾವೇರಿ ಕಣಿವೆಯ ಮೇಲ್ಭಾಗದ ರೈತರ ಶೋಷಣೆ ನಿಲ್ಲಬೇಕು' ಎಂಬುದನ್ನು This is an official record.

ಶತಮಾನಗಳಿಂದ ಕಾವೇರಿ ಕೊಳ್ಳದ ಜನರು ಶೋಷಣೆಗೆ ಗುರಿಯಾಗಿದ್ದಾರೆ ಎನ್ನತಕ್ಕದನ್ನು ನಾವೆಲ್ಲರೂ ಒಪ್ಪಿಕೊಳ್ಳುತ್ತೇವೆ. ನಾನು ಈ ಸದನಕ್ಕೆ ಬಂದು ೬೫ ತಿಂಗಳಾಯಿತು. ನಾನು ಸತತವಾಗಿ ಈ ಒಂದೇ ವಿಷಯದಲ್ಲಿ ಈ ಸದನದಲ್ಲಿ ಅನೇಕ ಸಲ ಹೇಳುತ್ತಿದ್ದೇನೆ. ತಾವು ಏನು ಮಾಡಿದ್ದರೂ ಪರವಾಗಿಲ್ಲ; ಕೊನೆಯ ಪಕ್ಷ ಒಂದು ಸಭೆಯನ್ನು ಕರೆದು ಅದರ ಬಗ್ಗೆ ಏನಾಗಿದೆ ಎಂಬುದನ್ನು ಹೇಳಿ What is happening before the Court? what is the stand of this government? what is the special arrangement you have not done. ಆದರೆ ಅದನ್ನು ಮಾಡಿಲ್ಲ. ಇದು ಕಾವೇರಿ ಕಣ್ಣೀರಿನ ಕತೆಯಾದರೆ ಇನ್ನು ಕೃಷ್ಣೆಯದ್ದು ಅಪಾರ. ನಾರಾಯಣಪುರ ಕೆರೆಯನ್ನು ಕಟ್ಟಿ ಹತ್ತು ವರ್ಷಗಳಾಯಿತು. ಉಳಿದ ವಿಷಯದ ಬಗ್ಗೆ ವಿವರಣೆಗೆ ಹೋಗುವುದಿಲ್ಲ; ಮತ್ತೆ ಒಂದು ವಿಷಯದ ಬಗ್ಗೆ ಉಪಮುಖ್ಯಮಂತ್ರಿಗಳು ಕ್ಲಾರಿಫೈ ಮಾಡುತ್ತಾರೆಯೋ? ಎಂಬ ಬಗ್ಗೆ ಅನುಮಾನವಿದೆ. Creation of potentuality is at what stage? ಎಂಬ ಪ್ರಶ್ನೆ ನನ್ನದು.

ಇನ್ನು ಕೃಷ್ಣಾ ನೀರಿನ ಬಗ್ಗೆ ವಿಧಾನಪರಿಷತ್ತಿನಲ್ಲಿ ಮಾನ್ಯ ಮಂತ್ರಿಗಳು ಅಪ್ಪಣೆ ಕೊಡಿಸಿದ್ದಾರೆ. ಕೃಷ್ಣಾ ನೀರಿನ ರಾಜ್ಯದ ಪಾಲಿನ ಪೂರ್ಣ ಬಳಕೆಯ ಭರವಸೆ ಬಂತ. ಇದನ್ನು ನೀವು ಮಾಡುತ್ತೀರಾ? 'ರಾಜ್ಯದ ಕೃಷ್ಣಾ ನದಿಯ ನೀರನ್ನು ೨೦೦೦ನೇ ಇಸವಿಯೊಳಗೆ ಪೂರ್ಣವಾಗಿ ಬಳಸಿಕೊಳ್ಳಲು ಸರ್ಕಾರ ಪ್ರಾಮಾಣಿಕ ಪ್ರಯತ್ನ ನಡೆಸಿದೆ. ಇದರ ಬಗ್ಗೆ ಯಾವುದೇ ಅನುಮಾನ ಬೇಡ' ಎಂದು ಹೇಳಿದ್ದಾರೆ.

Again I should say.

ಸ್ವಾಮಿ, ಮತ್ತೊಮ್ಮೆ ನಾನು ಹೇಳುತ್ತೇನೆ. ಇದು ಸಾಧ್ಯವಿಲ್ಲ. ಮಾನ್ಯ ಅಧ್ಯಕ್ಷರ ಮುಖಾಂತರ ಮಾನ್ಯ ಉಪಮುಖ್ಯಮಂತ್ರಿಗಳ ಗಮನಕ್ಕೆ ತರಬಯಸುತ್ತೇನೆ. ನೀವು ಮಾತ್ರವಲ್ಲ, ನಾನು ಮಾತ್ರವಲ್ಲ ಯಾರೇ ಮಂತ್ರಿ, ಉಪಮುಖ್ಯಮಂತ್ರಿ, ಮುಖ್ಯಮಂತ್ರಿಯಾದರೂ ಕೂಡ ೨೦೦೦ನೇ ಇಸವಿಯೊಳಗೆ ಕೃಷ್ಣಾ ಕೊಳ್ಳದ ಎಲ್ಲಾ ನೀರನ್ನೂ ಉಪಯೋಗ ಮಾಡಿಕೊಳ್ಳಲು ಸಾಧ್ಯವಿಲ್ಲ. By the way in which you have formulated the programmes for all these days, I don't believe that this is possible.

೨೦೦೦ನೇ ಇಸವಿಯೊಳಗೆ ಉಪಯೋಗ ಮಾಡಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ನಾನಾದರೂ ಹೇಳುತ್ತೇನೆ. ಇನ್ನೂ ಮೂರು ವರ್ಷ ಇದೆ. ಏತಕ್ಕೆ ಸಾಧ್ಯವಿಲ್ಲ ಎಂದರೆ, ಮೊನ್ನೆ ಅಂದರೆ ಕಳೆದ ೩ ದಿವಸದ ಹಿಂದೆ ಮಾನ್ಯ ಉಪಮುಖ್ಯಮಂತ್ರಿಗಳು ದೂರದರ್ಶನದಲ್ಲಿ ಒಂದು ಸಂದರ್ಶನವನ್ನು ಕೊಟ್ಟರು. The greatest touch is the finance. This is the statistics that I have submitted before the House and iam expecting Rs. 4.000 crores of expenditure. How can you dare enough to declare that you are going to complete this project within 2000 A.D.?

ಇದು ನನಗಂತೂ ಸಾಧ್ಯವೆಂದು ಅನಿಸುವುದಿಲ್ಲ. ತಮ್ಮ ಹತ್ತಿರ ಯಾವುದಾದರೂ ಮಂತ್ರ ದಂಡ ಇದ್ದು ಒಂದು ಸಾರಿ ತಿರುಗಿಸಿದರೆ ಏರಿ ಆಗಬೇಕು, ಇನ್ನೊಂದು ಸಾರಿ ತಿರುಗಿಸಿದರೆ ಕಾಲುವೆ ಆಗಬೇಕು, ಮತ್ತೊಂದು ಸಾರಿ ತಿರುಗಿಸಿದರೆ ತೂಬು ಆಗಬೇಕು ಎನ್ನುವ ರೀತಿಯಲ್ಲಿ ತಾವೇನಾದರೂ ಶ್ರೀಕೃಷ್ಣ ಪರಮಾತ್ಮನ ರೂಪದಲ್ಲಿ ಬಂದು ತಮ್ಮ ಚಕ್ರವನ್ನು ಬಿಟ್ಟು ಮಾಡಿದರೆ ಸಾಧ್ಯ ಆಗಬಹುದೇನೋ ನನಗೆ ಗೊತ್ತಿಲ್ಲ. ಆದರೆ ವಾಸ್ತವ ಸ್ಥಿತಿಗೆ ತಾವು ಇಳಿದು ಬಂದರೆ, ನಿಜಸ್ಥಿತಿಯನ್ನು ವಿಶ್ಲೇಷಣೆ ಮಾಡಿದರೆ, ನಿಮ್ಮ ಆರ್ಥಿಕ ಪರಿಸ್ಥಿತಿಯನ್ನು ನೀವೇ ಮತ್ತೊಂದು ಸಾರಿ ಪುನರಾಲೋಚನೆ ಮಾಡಿದರೆ, ಆಗಲೂ ಕೂಡ ಈ ಕೆಲಸವನ್ನು ನೀವು ಮಾಡುವುದಕ್ಕೆ ಸಾಧ್ಯವಿಲ್ಲ. ನಾನು ಈಗಾಗಲೇ ಹೇಳಿದೆ. Firstly, even from the outlay of this year's budget. ನಿಮಗೆ ಅಭಿವೃದ್ಧಿ ಕೆಲಸಗಳಿಗೆ ಉಳಿದುಕೊಳ್ಳುವುದೇ ೧೦೦೯ ಕೋಟಿ ರೂ. ಇದರಲ್ಲಿ ಇನ್ನೂ ಬೇರ ಬೇರೆ ಕೊರತೆ ಇರುತ್ತದೆ. ಮುಂದಿನ ವರ್ಷ ಮಾನ್ಯ ವೀರಪ್ಪ ಮೊಯಿಲಿಯವರ ಸರ್ಕಾರದ ಅವಧಿ ಮುಗಿಯುತ್ತದೆ. ಅವರ ಸಾಧನೆಯ ಸಮಾವೇಶಕ್ಕೆ ಹಣ ಬೇಕಾಗುತ್ತದೆ. ಈಗಲೇ ಇನ್ನು ಯಾವುದಕ್ಕೆ ಒಂದು ಕೋಟಿ ಕೊಡಬೇಕಾಗಿದೆಯೋ? ನಾನು ಇದನ್ನು ಸಾಧ್ಯವಿಲ್ಲವೆಂದು ಏತಕ್ಕೆ ಹೇಳುತ್ತಿದ್ದೇನೆಂದರೆ, ಮೊನ್ನೆ ನನ್ನ ಪ್ರಶ್ನೆಗೆ ಉತ್ತರ ಕೊಡುವಾಗ ಮಂತ್ರಿಗಳು ಹೇಳಿರುವ ಒಂದೇ ಕಾರಣದಿಂದ, ಇವರು ಇದನ್ನು ಕಾರ್ಯರೂಪಕ್ಕೆ ತರುವುದಕ್ಕಾಗುವುದಿಲ್ಲವೆಂಬುದಕ್ಕೆ ಸಾಕ್ಷಿ.

* * *

**ಅಧ್ಯಕ್ಷರು:** ಮಾನ್ಯ ರಾಮಯ್ಯನವರೇ, ತಮಗೆ ಇನ್ನು ಎಷ್ಟು ಹೊತ್ತು ಬೇಕಾಗಬಹುದು?

ಮಾನ್ಯ ಅಧ್ಯಕ್ಷರೇ, ೭೮ರ ಕೆಳಗಡೆ ಇದರ ಚರ್ಚೆ ಮಾಡಬೇಕೆಂದು ಕೇಳಿದಾಗ ನೀವು ಆಯವ್ಯಯದ ಮೇಲೆ ಭಾಷಣ ಮಾಡುವಾಗ ಹೇಳಿ ಎಂದು ಹೇಳಿದಿರಿ. ಮತ್ತೆ ಬೆಳಿಗ್ಗೆ ಪ್ರಶ್ನೆಗೆ ಮತ್ತೊಂದು ಪೂರಕವಾದ ಪ್ರಶ್ನೆಯನ್ನು ಕೇಳುತ್ತೇನೆಂದಾಗ, ಆಯವ್ಯಯದ ಮೇಲೆ ಮಾತನಾಡುವಾಗ ಹೇಳಿ ಎಂದು ಹೇಳಿದಿರಿ. ಇದು ತಮಗೆ ಬಿಟ್ಟಿದ್ದು.

**ಅಧ್ಯಕ್ಷರು:** ಇಲ್ಲಿ ಇನ್ನೂ ಮಾತನಾಡುವವರು ೨೬ ಜನರು ಇದ್ದಾರೆ. ಈಗಾಗಲೇ ತಮಗೆ ೪೦ ನಿಮಿಷಗಳಾಗಿರುತ್ತವೆ.

ಅಧ್ಯಕ್ಷರೇ, ದಯವಿಟ್ಟು ಏನಾದರೂ ಪ್ರಯೋಜನವಾಗುತ್ತದೆಂದರೆ ನಾನು ಮುಂದುವರಿಸುತ್ತೇನೆ.

**ಅಧ್ಯಕ್ಷರು:** ಅದು ತಮಗೆ ಬಿಟ್ಟಿದ್ದು.

**ಶ್ರೀ ಎಸ್.ಎಂ. ಕೃಷ್ಣ:** ನನ್ನದು ಸ್ವಲ್ಪ ಕಾಲವನ್ನು ಅವರಿಗೇ ಕೊಟ್ಟುಬಿಡಿ.

ಮಾನ್ಯ ಅಧ್ಯಕ್ಷರೆ, ಮೊದಲನೇ ಅಡ್ಡಿ, ಮೊದಲನೇ ತೊಂದರೆ ೨೦೦೦ನೇ ಇಸವಿಯೊಳಗಾಗಿ ಇದನ್ನು ಸಂಪೂರ್ಣ ಮಾಡಲಿಕ್ಕೆ ಸಾಧ್ಯ ಇದೆಯೇ? ಎನ್ನುವುದು. Crux is money....

ಇದನ್ನು ಮಾನ್ಯ ಉಪಮುಖ್ಯಮಂತ್ರಿಗಳೂ ಒಪ್ಪಿಕೊಂಡಿರುತ್ತಾರೆ. ನಾನು ಅಂಕಿಅಂಶಗಳನ್ನು ತೋರಿಸುತ್ತೇನೆ. ಇದು ಬಹುಶಃ ಈ ಮಾತನ್ನು ತಾವು ಹೇಳಿದ ಮೇಲೆ ಎಲ್ಲರೂ ಒಪ್ಪಿಕೊಳ್ಳುತ್ತಾರೆ. Atleast to that extent your creadibility will be not be shakened, will not be questioned or suspected.

ಅದನ್ನು ಬಿಟ್ಟು ಬಿಟ್ಟು ೮೦೦ ಕೋಟಿ ರೂಪಾಯಿಗಳನ್ನು ಇಟ್ಟಿದ್ದೀರಿ. ..... Crux is finance....

ಇದರಲ್ಲಿ ಮತ್ತೊಂದು ತೊಂದರೆ ಏನಿದೆ ಎಂದರೆ ಬೃಹತ್ ನೀರಾವರಿ ಯೋಜನೆಗಳನ್ನು ಅನುಷ್ಠಾನಕ್ಕೆ ತರುವಂಥ ಸಂದರ್ಭದಲ್ಲಿ ಆಗುತ್ತಿರುವ ಹಣದ ದುರುಪಯೋಗದ ಮೇಳ. ರಾಜ್ಯದ ಮುಖ್ಯಮಂತ್ರಿಗಳು ಅಪ್ಪಣೆ ಕೊಡುತ್ತಾರೆ. ಇದನ್ನು ಕಾರ್ಯರೂಪಕ್ಕೆ ತರುವಂಥ ಅಧಿಕಾರಿಗಳು ಮತ್ತು ಗುತ್ತಿಗೆದಾರರ ಮಧ್ಯದಲ್ಲಿ ದುರುಪಯೋಗದ ಮೇಳ ನಡೆಯುತ್ತಿದೆ ಎಂದು. ಏತಕ್ಕೆಂದರೆ ಅವರು ಕವಿಗಳು, ಅವರ ಪದಪ್ರಯೋಗ ನಮಗೆ ಒಂದೊಂದು ಸಾರಿ ಅರ್ಥವಾಗುವುದಿಲ್ಲ. ಅವರು ಹೇಳುತ್ತಾರೆ ನೀರಾವರಿ ಇಲಾಖೆಗೆ ಕಂಟ್ರಾಕ್ಟರ್ಸ್ ಹಾಗೂ ಅಧಿಕಾರಿಗಳು ಶಾಮೀಲಾಗಿ ಹಣವನ್ನು ದುರುಪಯೋಗದ ಮೇಳ ನಡೆಸುತ್ತಿದ್ದಾರೆಂದು ಮತ್ತೆ ಹೇಳುತ್ತಾರೆ. ಈ ನೀರಾವರಿ ಯೋಜನೆಗಳಿಂದ ಈ ರೀತಿ ೧-೨ ಕೋಟಿ ರೂಪಾಯಿಗಳ ದುರುಪಯೋಗ ಮಾಡಿರುವ ದುರಂತದ ಒಂದು ಪ್ರಕರಣದ ಬಗ್ಗೆ ವಿಚಾರಣೆ ನಡೆಯುತ್ತಿದೆ ಅದರ ಬಗ್ಗೆ ತಾವು ನಿನ್ನೆ ಒಂದು ಆಜ್ಞೆಯನ್ನು ಮಾಡಿರುವುದಾಗಿಯೂ ಕೂಡ ತಿಳಿಸಿದ್ದಾರೆ. ದಯವಿಟ್ಟು ತಾವು ಉತ್ತರವನ್ನು ಕೊಡುವಾಗ ಯಾವುದು ಇನ್‌ಸ್ಟೆನ್ಸ್ ಇದೆ ಅದನ್ನು ಗಮನಕ್ಕೆ ತರಬೇಕು. ೧-೨ ಕೋಟಿ ರೂಪಾಯಿಗಳು ದುರುಪಯೋಗ ಆಗಿರುವಂಥದ್ದು ನಿಮ್ಮ ಗಮನಕ್ಕೂ ಸಾಕಷ್ಟು ಬಂದಿದೆ. ಆದರೆ ಅದನ್ನು ಹೇಳುತ್ತಾ ಕುಳಿತುಕೊಂಡರೆ ಆಗುವುದಿಲ್ಲ. ಪ್ರಮುಖವಾಗಿ ನಮ್ಮ ಏಕಾಂತಯ್ಯನವರು. ಹಣದ ದುರುಪಯೋಗದ ಬಗ್ಗೆ, ಸೋರಿಕೆಯ ಬಗ್ಗೆ ಎರಡು ವಿಷಯಗಳನ್ನು ಹೇಳಿದ್ದಾರೆ. ಎಲ್ಲಿ ಹಣದ ಸೋರ್ಸ್‌ನಲ್ಲಿ ಡಿಡೆಕ್ಟ್ ಆಗುತ್ತದೆಂದರೆ ನಿನ್ನೆ ನಡೆದ ಚುನಾವಣೆಯಲ್ಲಿ ಡಿಡೆಕ್ಟ್ ಆಯಿತು. ಪಾರ್ಲಿಮೆಂಟ್ ಚುನಾವಣೆಯಲ್ಲಿ ಡಿಡೆಕ್ಟ್ ಆಯಿತು. ನಮ್ಮ ಜಿಲ್ಲೆಯಲ್ಲಿ ನಾಲ್ಕನೇ ಮಂತ್ರಿಗಳಿಗೆ ಇದೇ ಕೆಲಸ. ಇಲ್ಲಿ ಮೂರು ಜನ ಮಂತ್ರಿಗಳು ಕುಳಿತುಕೊಳ್ಳುತ್ತಾರೆ. ಇನ್ನೊಬ್ಬ ಮಂತ್ರಿಯನ್ನು ಸೋರ್ಸ್‌ನಲ್ಲಿ ಡಿಡೆಕ್ಟ್ ಮಾಡಿಕೊಳ್ಳುವುದಕ್ಕೆ ಹೇಮಾವತಿ ಪ್ರಾಜೆಕ್ಟ್‌ನಲ್ಲಿ ಬಿಟ್ಟಿದ್ದಾರೆ. ನಾನು ಮನ್ಯ ಮುಖ್ಯಮಂತ್ರಿಗಳಿಗೆ ಹೇಳದಿರುವುದನ್ನು ಹೇಳಿಬಿಟ್ಟಿದ್ದೇನೆ. ಆದರಿಂದ ನನಗೆ ಸ್ವಲ್ಪ ಕಷ್ಟವಾಗುತ್ತದೋ ಏನೋ. ಅವರು ರಾಮಯ್ಯನವರೇ ಯಾರು ನಿಮಗೆ ಹೇಳಿದ್ದು ಅಂಥದ್ದು ಏನೂ ನಡೆಯುತ್ತಿಲ್ಲವೆಂದು ಹೇಳಬಹುದು.

ಮಾನ್ಯ ಅಧ್ಯಕ್ಷರೇ, ಏತಕ್ಕೆ ಈ ಮಾತನ್ನು ಹೇಳುತ್ತಿದ್ದೇನೆಂದರೆ, ಮೊದಲನೇ ತೊಂದರೆ ಎಂದರೆ ಹಣದ ಕೊರತೆ. ಆ ಕೊರತೆಯಲ್ಲಿ ಸೋರುವಿಕೆ ಬೇರೆ. ನಮ್ಮ ಸಿದ್ಧ ಗಂಗಾಸ್ವಾಮಿಗಳು ಒಮ್ಮೆ ಒಂದು ಸಣ್ಣ ಉದಾಹರಣೆ ಕೊಟ್ಟರು. ಯಾರೋ ಒಬ್ಬ ಮಹಾರಾಜನಿಗೆ ದೇವಸ್ಥಾನದ ಅರ್ಚಕರು ಒಂದು ಕಾಗದವನ್ನು ಬರೆದು ನನಗೆ ೧೦೦ ಸೇರು ಎಣ್ಣೆ ಕಳುಹಿಸಿಕೊಡಿ. ಒಂದು ವರ್ಷಕ್ಕೆಲ್ಲ ದೀಪಕ್ಕೆ ಬೇಕಾಗುತ್ತದೆಂದು ಕೇಳಿದ್ದನಂತೆ. ಮಹಾರಾಜರು ೧೦೦೦ ಲೀಟರ್ ಸ್ಯಾಂಕ್ಷನ್ ಮಾಡಿದರಂತೆ. ಅದಕ್ಕೆ ಪಕ್ಕದಲ್ಲೇ ಇರುವವರು ಕೇಳಿದರಂತೆ. ಅವನು ಕೇಳಿರುವುದು ೧೦೦ ಲೀಟರ್ ಮಾತ್ರ, ನೀವು ಏತಕ್ಕೆ ಸಾವಿರ ಲೀಟರ್ ಕಳುಹಿಸಿಕೊಡುತ್ತಿದ್ದೀರಿ ಎಂದು. ಅದಕ್ಕೆ ಮಹಾರಾಜರು ಇಲ್ಲಪ್ಪ ಅದು ತಲುಪುವಷ್ಟು ಹೊತ್ತಿಗೆ ೧೦೦ ಲೀಟರ್ ಆಗುವುದು, ಏತಕ್ಕೆ ನೀವು ಯೋಚನೆ ಮಾಡುತ್ತೀರಿ ಎಂದು ಹೇಳಿದರಂತೆ. ಆದ್ದರಿಂದ ಈ ೯೦೦ ಕೋಟಿಯೊಳಗೆ ನನಗೆ ನಿಮ್ಮ ಕ್ಯಾಪಾಸಿಟಿ ಗೊತ್ತು, ಸರ್ಕಾರದ ಯೋಗ್ಯತೆ ಗೊತ್ತು. ಏತಕ್ಕೆಂದರೆ ಈ ವರ್ಷದಲ್ಲಿ ಎಷ್ಟು ಹಣವನ್ನು ಖರ್ಚು ಮಾಡಿದ್ದೀರಿ ಎನ್ನುವುದನ್ನು ನೋಡಿದರೆ "ಹಾರುವಾಗಲೆ ಕಾಣುತ್ತವೆ ಕಾಗೆ ಪುಕ್ಕ" ಎಂದು ನಮ್ಮ ಹಳ್ಳಿಯ ಜನ ಹೇಳುತ್ತಾರೆ. ನಿಮ್ಮ ಶಕ್ತಿ ಎಷ್ಟಿದೆ ಎನ್ನುವುದನ್ನು ಮುಂದಿನ ವರ್ಷಕ್ಕೆ ನಿರೀಕ್ಷೆ ಮಾಡಬಹುದು. ಆ ನಿರೀಕ್ಷೆ ಮಾಡಿಕೊಂಡು ಅದರ ಆಧಾರದ ಮೇಲೆ ಅಂಕಿಅಂಶಗಳನ್ನು ತೆಗೆದುಕೊಂಡರೆ ನಿಮಗೆ ಕೃಷ್ಣಾ ಕಣಿವೆಯ ಕೆಲಸ ಮಾಡಲಿಕ್ಕೆ ಹಣ

ಸಾಕಾಗುವುದಿಲ್ಲ. ಈ ಸೋರಿಕೆಯಿಂದ ನಿಮ್ಮ ಕೆಲಸ ಕಡಿಮೆಯಾಗುತ್ತದೆ. ಆದರೆ ಮಾನ್ಯ ಮುಖ್ಯಮಂತ್ರಿಗಳು ಈ ಮಾತನ್ನು ಹೇಳುವ ಸಂದರ್ಭದಲ್ಲಿ ಒಂದು ವಿಚಾರವನ್ನು ಗಮನಕ್ಕೆ ತರುತ್ತೇನೆ. ಮಾನ್ಯ ಮಂತ್ರಿಗಳೇ ಸೋರಿಕೆ ಆಗುತ್ತಿದೆ, ಮಿಸ್ ಅಪ್ರಾಪ್ರಿಯೇಷನ್ ಆಗುತ್ತಿದೆ. ಕಂಟ್ರಾಕ್ಟರ್‌ಗಳು ದುಡ್ಡು ತಿಂದುಹಾಕಿಬಿಟ್ಟಿದ್ದಾರೆನ್ನುವ ನೆಪಗಳನ್ನು ನಿಮ್ಮ ಕಾರ್ಯದರ್ಶಿಗಳು ಹೇಳಬಹುದು. ದಯವಿಟ್ಟು ಅವರ ಮಾತಿಗೆ ಕಿವಿ ಕೊಡಬೇಡಿ. ಇದರಿಂದ, ಬಾಗೂರು ನವಿಲೆ ಕೆಲಸವನ್ನು ನಿಲ್ಲಿಸುವ ಕೆಲಸ ಮಾತ್ರ ತಾವು ಮಾಡಬೇಡಿ ಸ್ವಾಮಿ.

ಮಾನ್ಯ ಮಂತ್ರಿಗಳೇ, ಹಣ ಸೋರಿಕೆಯಾಗುತ್ತಿದ್ದರೆ, ಕಂಟ್ರಾಕ್ಟರ್, ಅಧಿಕಾರಿಗಳು ಹಣ ತಿನ್ನುವಂತ ಮೇಳವಾಗುತ್ತಿದ್ದರೆ ಅಂಥವರನ್ನು ನೀವು ಹಿಡಿದು ಶಿಕ್ಷಿಸಿ, ಅಂಥವರನ್ನು, ನೀವು ಕಾನೂನಿನಲ್ಲಿ ಅವಕಾಶ ಇದ್ದರೆ ವೃತ್ತದಲ್ಲಿ ಕಂಬಕ್ಕೆ ಕಟ್ಟಿ ಛಾಟಿಯಿಂದ ಹೊಡೆಯಿರಿ. ನೇಣುಗಂಬಕ್ಕೆ ಏರಿಸಿ. ನಾವು ಯಾರೂ ಅಡ್ಡಿ ಬರುವುದಿಲ್ಲ. ಆದರೆ ಈ ಕುಂಟು ನೆಪ ಇಟ್ಟುಕೊಂಡು, ಅವ್ಯವಹಾರ ನಡೆಯುತ್ತಿದೆ ಎಂಬ ನೆಪ ಒಡ್ಡಿ ಕೆಲಸ ನಿಲ್ಲಿಸುವಂತಹ ಕೆಲಸ ಮಾಡಬೇಡಿ.

You can order for the enquiry. I have no objection but at the same time I request you not to stop the work. You can conduct any enquiry. You enquire it, you suspend the culprit - I have no objection. I reqest you at this stage with past experience.

ಹಿಂದೆ ಒಂದು ಸಾರಿ ನಮಗೆ ಹೀಗೆ ಮಾಡಿದ್ದೀರಿ. ನಾವೆಲ್ಲ ಸದಸ್ಯರಲ್ಲದಿದ್ದರೂ ಕೌನ್ಸಿಲ್‌ನಲ್ಲಿ ಹೋಗಿ ಕುಳಿತುಕೊಂಡೆವು. ಅಲ್ಲಿ ಹೇಳಿದರು ಏಕ್‌ದಂ ಎನ್‌ಕ್ವೈರಿ ಮಾಡುತ್ತೇವೆ. ಕೆಲಸ ನಿಲ್ಲಿಸುತ್ತೇವೆ ಎಂದು. ಕೆಲಸ ನಿಲ್ಲಿಸುವುದಿಲ್ಲವೆಂದು ಹೇಳಿಸಬೇಕಾದರೆ ಪುನಃ ಒಂದು ತಾಯಿ ಹೊಟ್ಟೆಯಲ್ಲಿ ಹುಟ್ಟಿ ಬಂದ ಹಾಗೆ ಆಯಿತು. ಆ ಒಂದು ಪರಿಸ್ಥಿತಿ ಸೃಷ್ಟಿಯಾಗುವುದು ಬೇಡ. ಆಗುವಂತಹ ಅವ್ಯವಹಾರದ ಬಗ್ಗೆ ತಾವು ಮಾಡುವಂತಹ ಯಾವುದೇ ಒಂದು ವಿಚಾರಣೆಗೆ ನಮ್ಮ ಅಭ್ಯಂತರವಿಲ್ಲ. ಆದರೆ ನಿಲ್ಲಿಸಿರುವ ಕೆಲಸವನ್ನು ಮಾತ್ರ ಶುರು ಮಾಡಬೇಕೆಂದು ನಾನು ಪ್ರಾರ್ಥಿಸುತ್ತೇನೆ. ಇದರ ಜೊತೆಗೆ ಈ ಕೆಲಸ ಆಗದೆ ಇರಲಿಕ್ಕೆ ಇವರು ಕೊಡುವಂತಹ ಜುಜುಬಿ ಹಣದಲ್ಲಿ ಈ ವರ್ಷ ತೀರ್ಮಾನವಾಗುವ ಪರ್ಸೇಂಟೇಜ್ ಬಿಲ್ ಮುಂದಿನ ವರ್ಷ ಕೊಡಬೇಕಾಗುತ್ತದೆ. ಹಳೆಯ ಬಿಲ್ಲುಗಳು ಪೆಂಡಿಂಗ್ ಇವೆ. ಎರಡನೆಯದಾಗಿ, ಪರ್ಸೆಂಟೇಜ್ ವಿವಾದದಲ್ಲಿ ತೀರ್ಮಾನಗಳು ಬರುತ್ತವೆ. ಅದಕ್ಕೆ ಕೋಟ್ಯಾಂತರ ರೂಪಾಯಿ ಕೊಡಬೇಕಾಗುತ್ತದೆ. ಸಂಬಳ ಸಾರಿಗೆಗೆ ಕೊಡಬೇಕಾಗುತ್ತದೆ. ಹೊಸ ಯಂತ್ರಗಳ ಖರೀದಿಗೆ ಕೊಡಬೇಕಾಗುತ್ತದೆ. ದರಗಳು ಈಗಾಗಲೇ ಏರಿವೆ. ಡಿಡಕ್ಷನ್ ಅಟ್ ಸೋರ್ಸ್ ಕೂಡ ಹೋಗುತ್ತದೆ. ಇಷ್ಟೆಲ್ಲ ಹೋಗುವುದರಿಂದ ಇವರು ಎಷ್ಟು ಹಣ ಖರ್ಚು ಮಾಡಿ ಈ ಕಾರ್ಯವನ್ನು ಅನುಷ್ಠಾನಕ್ಕೆ ತರುತ್ತಾರೆ? ಅದನ್ನು ತರುವುದಕ್ಕೆ ಸಾಧ್ಯವಾಗುವುದಿಲ್ಲ. ನಾನು ಕೇವಲ ಸರ್ಕಾರವನ್ನು ಅಥವಾ ಈ ಕಾರ್ಯಕ್ರಮವನ್ನು ಅನುಷ್ಠಾನ ಮಾಡುತ್ತಿರುವವರನ್ನು ಹೊಣೆ ಮಾಡುವುದಕ್ಕೆ ಅಷ್ಟಾಗಿ ಸಾಧ್ಯವಿಲ್ಲ. ಈ ಕೆಲಸಗಳನ್ನು ಕಾರ್ಯರೂಪಕ್ಕೆ ತರಬೇಕಾದರೆ ನಿರೀಕ್ಷೆ ಮಟ್ಟಕ್ಕಿಂತ ಹೆಚ್ಚಾಗಿ ಕೆಲಸ ಆಗಬೇಕಾದರೆ ಏನು ಮಾಡಬೇಕು ಮತ್ತೊಂದು ವಿಷಯ ಏನೆಂದರೆ, ರಾಷ್ಟ್ರದ ಎಲ್ಲಾ ಬೊಕ್ಕಸದ ಹಣವನ್ನು ನೀರಾವರಿಗೆ ಖರ್ಚು ಮಾಡಿದರೆ ಬೇರೆ ಕಾರ್ಯಕ್ರಮಗಳಿಗೆ ಅಡ್ಡಿಯಾಗುತ್ತದೆ ಎನ್ನುವ ಒಂದು

ಪ್ರತಿಪಾದನೆ ಇದೆ. ಈ ಪ್ರತಿಪಾದನೆ ಇವತ್ತು ಹುಟ್ಟಿದ್ದು ಅಲ್ಲ. ಇದನ್ನು ದಿವಾನ್ ಆನಂದರಾಯರ ಕಾಲದಲ್ಲಿ ಇದ್ದ ಸೆಕ್ರೆಟರಿ ಒಬ್ಬರು ಬರೆದರು. ಇತ್ತೀಚಿನ ೧೯೮೦ರ ದಶಕದಲ್ಲಿ ಕೂಡ ಒಂದು ಇದೆ. ಅದನ್ನು ತಾವು ತರಿಸಿನೋಡಬೇಕು. ಒಬ್ಬ ಆರ್ಥಿಕ ಕಾರ್ಯದರ್ಶಿ ಬರೆಯುತ್ತಾರೆ: This Government will become Divali.......

ಇದೇ ರೀತಿ ನೀರಾವರಿಗೆ ರಾಜ್ಯ ಸರ್ಕಾರ ಹಣ ಖರ್ಚು ಮಾಡುವುದಾದರೆ ರಾಜ್ಯದ ಬೊಕ್ಕಸ ಬರಿದಾಗಿ ದಿವಾಳಿಯಾಗಬೇಕಾಗುತ್ತದೆ. The attitude of the bureaucrary is not changed even after a century I believe.....

ಅವತ್ತು ಏನು ನರಸಿಂಹರಾವ್ ಅವರು ಕನ್‌ಸರ್ವೇಟೀವ್ ಎಂಬ ಪದವನ್ನು ಬರೆದರೋ, ಅದೇ ಪದವನ್ನು ೧೯೮೦ರ ದಶಕದಲ್ಲೂ ಬರೆಯುತ್ತಾರೆ. ೧೯೯೩ಕ್ಕೆ ಬದಲಾವಣೆಯಾಗಿದೆಯೋ ಏನೋ ಗೊತ್ತಿಲ್ಲ. ಕೇವಲ ನೀರಾವರಿಗೆ ದುಡ್ಡು ಖರ್ಚು ಮಾಡಿದರೆ ಈ ದೇಶದ ಬೊಕ್ಕಸ ಬರಿದಾಗುತ್ತದೆಂದು ಆರ್ಥಿಕ ಇಲಾಖೆ ಅಭಿಪ್ರಾಯ ಪಡುತ್ತದೆ. ಈ ಅಭಿಪ್ರಾಯದಲ್ಲಿ ಇತ್ತೀಚಿನ ವರ್ಷದಲ್ಲಿ ಬದಲಾವಣೆಯಾಗಿದೆಯೇ ಎಂದು ತಮ್ಮ ಮೂಲಕ ಉತ್ತರ ಬಯಸುತ್ತೇನೆ. ಏಕೆಂದರೆ ಈ ರಾಜ್ಯದಲ್ಲಿ ಜಮೀನು ಇರುವವರು ೬೭ ಲಕ್ಷ ಜನರಿದ್ದಾರೆ. ಅವರಲ್ಲಿ ೧೫ ಲಕ್ಷ ಜನ ಸಾಲಗಾರರಾಗಿದ್ದಾರೆ. ಅವರು ಯಾರು ಸೊಸೈಟಿಗಳಿಂದ ಸಾಲ ತೆಗೆದುಕೊಂಡಿರುವವರು. ಇನ್ನು ಮಾರ್ವಾಡಿಗಳಿಂದ, ಅಣ್ಣತಮ್ಮಂದಿರ ಹತ್ತಿರ ಸಾಲ ತೆಗೆದುಕೊಂಡಿರುವವರು. ಎಲ್ಲವನ್ನು ಲೆಕ್ಕಕ್ಕೆ ತೆಗೆದುಕೊಂಡರೆ ೬೭ ಲಕ್ಷದಲ್ಲಿ ೫೦ ಲಕ್ಷ ಜನಗಾರರಾಗುತ್ತಾರೆ. ನಾವು ೯೦೦ ಕೋಟಿ ರೂಪಾಯಿಗಳನ್ನು ಬರೀ ೬೭ ಲಕ್ಷ ಜನರಿಗೆ ಖರ್ಚು ಮಾಡುತ್ತೇವೆಂದು ವಾದ ಮಾಡಿದವರು ಈ ಸದನದಲ್ಲಿದ್ದಾರೆ. ಇದು ಒಳ್ಳೆಯದಲ್ಲ. ಈ ತೊಂದರೆ ಕೂಡ ತಮಗೆ ಇದೆ. ನೀರಾವರಿಗೆ ಹಣ ಖರ್ಚು ಮಾಡಿದರೆ ಹಾಸ್ಟೆಲ್ ಕಟ್ಟುವುದು ಬೇಡವೆ ಸ್ಕಾಲರ್‌ಶಿಪ್ ಕೊಡುವುದು ಬೇಡವೆ? ಆಶಾಕಿರಣ ಮಾಡುವುದು ಬೇಡವೆ? ಆಶ್ರಯ ಯೋಜನೆ ಮಾಡಬಾರದು ಗಂಡಸತ್ತ ಮುಂಡೆಯರಿಗೆ ಮಾಸಾಶನ ಕೊಡಬಾರದೆ? ಇವನ್ನೆಲ್ಲ ಮಾಡದೆ ಒಂದೇ ವರ್ಗದ ಜನರಿಗೆ ಅನುಕೂಲ ಮಾಡುವುದೆ? ಆದುದರಿಂದ, ಇದು ಸಾಧ್ಯವಾಗುವುದಿಲ್ಲವೆಂದು ವಾದ ಮಾಡುವವರು ಇದ್ದಾರೆ.

ಅಧ್ಯಕ್ಷರೇ, ನನ್ನ ಪ್ರಾರ್ಥನೆ ಇಷ್ಟೇ: ಇದನ್ನು ಸ್ವಲ್ಪಮಟ್ಟಿಗೆ ನಾನು ಒಪ್ಪಿಕೊಳ್ಳುತ್ತೇನೆ. ರಾಷ್ಟ್ರದ ಜನಸಂಖ್ಯೆಯಲ್ಲಿ ಶೇ. ೪೦ ಭಾಗ ಜನಕ್ಕೆ ಸತ್ತರೆ ಹೂಳಲು ಬೇಕಾದ ೩ ಅಡಿ x ೬ ಅಡಿ ಜಾಗ ಇಲ್ಲದೇ ಇರುವವರು ಇದ್ದಾರೆ. ಇವರ ಹಿತವನ್ನು ನಾವು ಕಡೆಗಣಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಅವರಿಗೂ ಕಾರ್ಯಕ್ರಮ ಹಾಕಿಕೊಳ್ಳಬೇಕು. ಆದರೆ ಪಾವಗಡದಲ್ಲಿ ಒಂದು ಆಳಿನ ಕೂಲಿ ದಿನಕ್ಕೆ ೮ ರೂಪಾಯಿ. ಅದೇ ಬೆಸಗರಹಳ್ಳಿಯಲ್ಲಿ ಅದೇ ಗದ್ದೆ ತವಡೆ ಎತ್ತುವವನಿಗೆ ದಿನಕ್ಕೆ ೫೫ ರೂಪಾಯಿ ಕೂಲಿ. ಕಾರಣ ಏನು? ಕಾರಣ ಎಂದರೆ, ರೈತನ ಉತ್ಪಾದನಾ ಶಕ್ತಿ, ಆರ್ಥಿಕ ಸಾಮರ್ಥ್ಯ ಮಂಡ್ಯದಲ್ಲಿ ಜಾಸ್ತಿ ಇದೆ. because of the KRS water he is able to pay increased wage, because of the earth of water that cannot be done in pavagada.

ನನ್ನ ಸ್ನೇಹಿತರು ಈ ಸದನದಲ್ಲಿ ಇರಬಹುದು, ಹೊರಗಡೆ ಇರಬಹುದು. ನೀರಾವರಿ ಯೋಜನೆಗಳಿಗೆ ಹಣ ಖರ್ಚು ಮಾಡುವುದು ವ್ಯರ್ಥ. ಅದು ಕೇವಲ ಒಂದೇ ವರ್ಗದ ಜನರಿಗೆ

ಅನುಕೂಲವಾಗುತ್ತದೆ, ಕೇವಲ ೬೭ ಲಕ್ಷ ಜನರಿಗೆ ಮಾತ್ರ ಅನುಕೂಲವಾಗುತ್ತದೆಯೆಂದು ಏನು ವಾದ ಮುಂದೆ ಇಡುತ್ತಾರೋ ಅವರು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಜಮೀನಿಗೆ ಭೂಮಿಯನ್ನು ಕೊಟ್ಟಿರುವುದರಿಂದ ಆ ರೈತನ ಆರ್ಥಿಕ ಶಕ್ತಿ ವೃದ್ಧಿಯಾಗಿ, ಆ ರೈತನ ಆರ್ಥಿಕ ಶಕ್ತಿ ವೃದ್ಧಿಯಾದ ಕಾರಣದಿಂದಲೇ ಮಂಡ್ಯ ಜಿಲ್ಲೆಯಲ್ಲಿ ಕೃಷಿ ಕಾರ್ಮಿಕರಿಗೆ ದಿನಕ್ಕೆ ೫೦-೬೦ ರೂಪಾಯಿ ಕೂಲಿ ಸಿಗುತ್ತದೆ. ನನ್ನ ಜಿಲ್ಲೆಯ ಪಾವಗಡದ ಒಣಭೂಮಿಯಲ್ಲಿ ದಿನಕ್ಕೆ ೮-೧೦ ರೂಪಾಯಿ ಕೂಲಿ ಸಿಗುತ್ತದೆ. ಆದುದರಿಂದ ನೀರಾವರಿಗೆ ಹಣವನ್ನು ಖರ್ಚು ಮಾಡುವುದರಿಂದ ಕೇವಲ ಕೆಲವರಿಗೆ ಮಾತ್ರ ಅನುಕೂಲವಾಗುತ್ತದೆ ಎನ್ನುವ ವಾದ ಏನು ಇದೆಯೋ ಅದು ಸಮರ್ಥನೀಯವಾದುದಲ್ಲ. ಇದರ ಬಗ್ಗೆ ನನ್ನ ಅಭಿಪ್ರಾಯವನ್ನು ತಮ್ಮ ಮುಂದೆ ತರುವುದಕ್ಕೆ ಇಷ್ಟಪಡುತ್ತೇನೆ.

ಶ್ರೀ ಹಲಗೇಗೌಡರು, "ಆ ವರ್ಗ ಉತ್ಪಾದನೆ ಮಾಡಿದ್ದನ್ನು ಅವರೇ ತಿನ್ನುತ್ತಾರೆಯೋ? ಬೇರೆಯವರಿಗೆ ಅವರು ಕೊಡುವುದಿಲ್ಲವೇ?" ಎಂದು ನಡುವೆ ಒಳ್ಳೆಯ ಪ್ರಶ್ನೆಯನ್ನು ಕೇಳಿದರು.

ಅದಕ್ಕೆ ಒಂದು ಮಾತು ಹೇಳಬೇಕಾಗುತ್ತದೆ: ಕೃಷಿ ಕ್ಷೇತ್ರದಲ್ಲಿ ಆಗುವ ಉತ್ಪಾದನೆಯನ್ನು ಬೆಳೆದವನೊಬ್ಬನೇ ತಿನ್ನುವುದಿಲ್ಲ. ಬೇರೆ ವರ್ಗದವರೂ ತಿನ್ನುತ್ತಾರೆ. ಅಷ್ಟೇ ಅಲ್ಲ, ಅಲ್ಲಿ ನಿಂತರೆ ಎಲ್ಲವೂ ನಿಂತು ಹೋಗುತ್ತದೆ. ರೈತರನ್ನು ನಿಂತುಹೋದರೆ ಎಲ್ಲರವೂ ನಿಂತು ಹೋಗುತ್ತದೆ. ಉಳುವುದನ್ನು ಬಿಟ್ಟರೆ ನಿಮ್ಮದೆಲ್ಲವೂ ನಿಂತುಹೋಗುತ್ತದೆ. ಆದುದರಿಂದ ನಾನು ಅದನ್ನು ಒತ್ತಾಯಪೂರ್ವಕವಾಗಿ ಹೇಳುವುದಕ್ಕೆ ಅರ್ಥ ಇದೆ. ಹಿಂದೆ ಇದರ ಬಗ್ಗೆ ಚರ್ಚೆ ನಡೆದಿದೆ. ಇದರ ಬಗ್ಗೆ ನಮ್ಮನ್ನು ಎಲ್ಲರೂ ಬ್ರಾಂಡ್ ಮಾಡಿದ್ದಾರೆ. ಅದಕ್ಕೇ ನಾನು ಒತ್ತಾಯಪೂರ್ವಕವಾಗಿ ಈ ಮಾತನ್ನು ಹೇಳುತ್ತಿದ್ದೇನೆ.

ಅಧ್ಯಕ್ಷರು: ೫೦ ನಿಮಿಷ ಆಯಿತು. ಬೇಗ ಮುಗಿಸಿ.

ಸನ್ಮಾನ್ಯ ಅಧ್ಯಕ್ಷರೇ, ನಾನು ಇಷ್ಟೆಲ್ಲಾ ಹೇಳಿ ಹೇಮಾವತಿ ಕೆಲಸದ ಅನುಷ್ಠಾನದ ಬಗ್ಗೆ, ನೀರಾವರಿ ಕಾರ್ಯವನ್ನು ಅನುಷ್ಠಾನಕ್ಕೆ ತರುವುದರಲ್ಲಿ ನಮ್ಮನ್ನು ಮೋಸಗೊಳಿಸಿದ್ದಾರೆ ಎನ್ನುವುದನ್ನು ಸಬ್‌ಸ್ಟಾಂಷಿಯೇಟ್ ಮಾಡುವುದಕ್ಕೆ ಮತ್ತೊಂದು ಸಂದರ್ಭವನ್ನು ತಮ್ಮ ಗಮನಕ್ಕೆ ತರುತ್ತೇನೆ. 1988-89 amount earmarked was 20 crores. Please verify it. on 27.5.1988 this 22 crores was reduced to 10 crores. out of this 10 crores 2.5 crores was ermarked for the work. out of this 2.5 crores. 1 crore 75 lakhs as earmarked for channel if works.

ದಯಮಾಡಿ ಗುರ್ತು ಹಾಕಿಕೊಂಡು ನೋಡಿ. If my figures are wrong you are every liberty to correct me. 1 crore 70 lakhs for construction of channel in your constitutency and my constitutency. out of this 1 crore 70 lakhs. 60 lakhs is paid for this work out of it. ಅದಕ್ಕೇ ನಾನು ಹೇಳಿದ್ದು ಸ್ವಾಮಿ. ಅಂಕಿಅಂಶಗಳ ಮಾಯಾಜಾಲದಲ್ಲಿ ನಮ್ಮನ್ನು ಎತ್ತಿಕೊಂಡು ಹೋಗಿ ಮೇಲೆ ಬಿಡುತ್ತಿದ್ದಾರೆ. Out of this 20 crores - officially in the bills only 60 iakhs is paid.

ಅಧ್ಯಕ್ಷರೇ, ಈಗ ನಾವು ಕೇಳಬೇಕು, ಈ ಅಂಕಿಅಂಶಗಳ ಮುಖಾಂತರ ನಮ್ಮನ್ನು ಮೋಸ ಮಾಡುತ್ತೀರಾ? ಅಥವಾ ನಿಜವಾದ ಪರಿಸ್ಥಿತಿಗೆ ತೆಗೆದುಕೊಂಡು ಹೋಗುತ್ತೀರಾ? ಎಂದು.

ಅಂತಿಮವಾಗಿ ತಮ್ಮ ಮೂಲಕ ಸರ್ಕಾರಕ್ಕೆ ಪ್ರಾರ್ಥನೆ ಇಷ್ಟೆ, ಕಾವೇರಿ ಕೊಳ್ಳದಲ್ಲಿ ನಮಗೆ ಎಷ್ಟು ನೀರು ದಕ್ಕಬೇಕೋ ಆ ನೀರನ್ನು ದಕ್ಕಿಸಿಕೊಳ್ಳುವುದಕ್ಕೆ ನಿಮಗೆ ಸಾಧ್ಯತೆಯಿದೆ. ಅದಕ್ಕೆ ಕಾರಣ ಮತ್ತೆ ನಾನು ಮುಖ್ಯಮಂತ್ರಿಗಳ ಹೇಳಿಕೆಗೇ ಮೊರೆ ಹೋಗುತ್ತೇನೆ. ಏಕೆಂದರೆ ನಾವು ಹೇಳಿದ್ವೇವೆಂದರೆ ಸ್ವಲ್ಪ ಕಷ್ಟವಾಗುತ್ತದೆ. "ಕೆಲವು ವಿಶಿಷ್ಟ, ಹಿತಾಸಕ್ತಿಗಳು ರಾಜ್ಯದ ಹಿತಕ್ಕೆ ಮಾರಕವಾದ ಕೆಲಸ ಮಾಡುತ್ತಿವೆ"ಯೆಂದು ಮಾನ್ಯ ವೀರಪ್ಪ ಮೊಯಿಲಿಯವರು ವಿಧಾನಸಭೆಯಲ್ಲಿ ಹೇಳಿದರು. ಯಾರು ಸ್ವಾಮಿ ಹೊರಗಿನ ಹಿತಾಸಕ್ತಿಗಳು? ಕಾವೇರಿ ಕೊಳ್ಳದ ನೀರಿನ ಹಂಚಿಕೆಯ ವಾದ ವಿವಾದದ ಬಗ್ಗೆ ಈ ರಾಜ್ಯದ ಮುಖ್ಯಮಂತ್ರಿಗಳು ತೆಗೆದುಕೊಂಡಂತಹ ಸುಗ್ರೀವಾಜ್ಞೆ, ಅದು ಒಳ್ಳೆಯದೋ ಕೆಟ್ಟದೋ ಸಿಂಧುವೋ ಅಸಿಂಧುವೋ ಕಾನ್ಸಿಟ್ಯುಷನ್‌ನೋ ಅನ್‌ಕಾನ್ಸಿಟ್ಯುಷನ್‌ನೋ ಲೀಗಲೋ ಇಲ್ಲೀಗಲೋ That is immaterial. that is why I congradulated Mr. Bangarappa on that day.

ಈ ಸುಗ್ರೀವಾಜ್ಞೆಯ ಸಿಂಧುತ್ವವನ್ನು ಪರೀಕ್ಷೆ ಮಾಡುವುದಕ್ಕೆ ಸುಪ್ರೀಂ ಕೋರ್ಟ್‌ಗೆ ಕಳುಹಿಸಿದವರು ಯಾರು ಸ್ವಾಮಿ? can you tell me any precedent, any parallel to this action of the then president of India.....

ಅವತ್ತು ನಾನು ಈ ಸದನದಲ್ಲಿ ಇರಲಿಲ್ಲ. ನೀವೆಲ್ಲರೂ ಯುನಾನಿಮಸ್ ರೆಸುಲೂಷನ್ ಮುಖಾಂತರ ಬಾಯ್‌ಕಾಟ್ ಮಾಡಬೇಕೆಂದು ಹೇಳಿದರು. ಅವತ್ತಿನ ಮುಖ್ಯಮಂತ್ರಿಗಳು ತಮ್ಮದೇ ಆದಂತಹ ಸರ್ಕಾರ ತೆಗೆದುಕೊಂಡಂತಹ ನಿಲುವಿನ ವಿರುದ್ಧವಾಗಿ ಸುಗ್ರೀವಾಜ್ಞೆಯನ್ನು ಹೊರಡಿಸಿದರು. I should congratualte the Chief Minister and others for the courage you taken in the Ruling Party. I should not shirk....

ನಾನು ಅದನ್ನು ಹೇಳದಿದ್ದರೆ ದ್ರೋಹ ಮಾಡಿದಂತಾಗುತ್ತದೆ. ಇಂತಹ ಒಂದು ಸುಗ್ರೀವಾಜ್ಞೆಯ ಸಿಂಧುತ್ವವನ್ನು ಪರೀಕ್ಷೆ ಮಾಡಬೇಕಾದವರು ಯಾರು ಸ್ವಾಮಿ? Any party aggrieved. Is you then president of India - a aggrieved party? why he referred to the Supreme Court. That is the only solitary case in the history of India....

ಈ ರಾಷ್ಟ್ರದ ಸರ್ವಭೌಮತ್ವ ಇಲ್ಲದಿದ್ದರೂ ಕೂಡ ತನ್ನದೇ ಆದಂತಹ ಸಂವಿಧಾನದ ಚೌಕಟ್ಟಿನಲ್ಲಿ ಅಧಿಕಾರವನ್ನು ಹೊಂದಿರುವಂತಹ ಒಂದುರಾಜ್ಯದ ಆರ್ಡಿನೆನ್ಸ್ ಸುಗ್ರೀವಾಜ್ಞೆಯ ಸಿಂಧುತ್ವವನ್ನು ಇದು ಸರಿಯೋ ತಪ್ಪೋ ಎಂದು ಪರೀಕ್ಷೆ ಮಾಡಲಿಕ್ಕೆ ಅವತ್ತಿನ ರಾಷ್ಟ್ರಪತಿಗಳು ಸರ್ವೋಚ್ಚ ನ್ಯಾಯಾಲಯಕ್ಕೆ ಕಳುಹಿಸಿಕೊಟ್ಟರು. I don't know whether it is etiquitte. I don't want to mention the name... ನಾನು ಇವತ್ತು ಹೇಳುತ್ತಿದ್ದೇನೆ ಅವತ್ತಿನ ರಾಷ್ಟ್ರಪತಿಗಳಿಂದ ನಮ್ಮ ರಾಜ್ಯಕ್ಕೆ ಅನ್ಯಾಯವಾಯಿತು. In order to protect the interest of the farmers of Tamil Nadu the then president of Indian has referred that Ordiance to the Supreme Court to test its vercity and find out whether it could witstand and can be implemented...

"ಅಧ್ಯಕ್ಷರು ಕನ್‌ಕ್ಲೂಸ್ ಮಾಡಿ, ಒಂದು ಗಂಟೆಯಾಯಿತು, ತಾವು ಮಾತನಾಡಲಿಕ್ಕೆ ಶುರುಮಾಡಿ" ಎನ್ನುತ್ತಿದ್ದಾರೆ. ಆದರೆ ಇದು ಇಲ್ಲಿಗೇ ನಿಲ್ಲಲ್ಲ, ಇದು ಇಲ್ಲಿಗೇ ನಿಂತಿದ್ದರೆ ನಾನು ಸುಮ್ಮನಿರುತ್ತಿದ್ದೆ. ಅವರ ಅಧ್ಯಕ್ಷಗಿರಿ ಹೋಯಿತು. He is today an ordinary man like me. That is why I am telling deceptive attitude is being perpetuated and continued. Why and how?

ನಾನು ಮುಖ್ಯಮಂತ್ರಿಗಳ ಹೇಳಿಕೆಯಲ್ಲಿ ಯಾವುದೋ ಶಕ್ತಿಯ ಕೈವಾಡ ಇದೆಯೆಂದು ಹೇಳಿರುವುದನ್ನು ಇಲ್ಲಿ ದುರುಪಯೋಗ ಮಾಡಿಕೊಳ್ಳುವುದಕ್ಕೆ ಇಷ್ಟವಿಲ್ಲ. ಈ ಹಿಂದೆ ಹೇಳಿದ್ದೇನೆ. ಇವತ್ತೂ ಹೇಳುತ್ತೇನೆ. ಕೃಷ್ಣಾ ಕೊಳ್ಳದ ನೀರಿಗೆ ಇಂತಹದ್ದೇ ಅನ್ಯಾಯ ದ್ರೋಹದ ಪರಂಪರೆ ಮುಂದುವರೆಯುತ್ತಿದೆ. ನಾನು ಬೆಳಿಗ್ಗೆ ಈ ಬಗ್ಗೆ ಪ್ರಶ್ನೆ ಕೇಳಿದ್ದೇನೆ. ಎರಡು ಪ್ರಮುಖ ಜಲಾಶಯಗಳಾದ ಶ್ರೀಶೈಲ ಮತ್ತು ನಾಗಾರ್ಜುನಸಾಗರ ಎರಡೂ ಜಲಾಶಯಗಳು ನನಗೆ ತಿಳಿದಿರುವ ಪ್ರಕಾರ ಆಂಧ್ರಪ್ರದೇಶದ ಶೇಕಡ ೪೦ ಭಾಗಕ್ಕೆ ನೀರನ್ನು ಹೊರಗಡೆ ತೆಗೆದುಕೊಂಡು ಹೋಗಿದೆ. ೪೦% of water is taken out of the basin. ಮಾನ್ಯ ಉಪಮುಖ್ಯಮಂತ್ರಿಗಳು ಉತ್ತರ ಕೊಡುತ್ತಾರೆ ನಾವು ಪ್ರೊಟೆಸ್ಟ್ ಮಾಡಿದ್ದೇವೆ. ಕೇಂದ್ರ ಸರ್ಕಾರದಲ್ಲಿ ವಿರೋಧ ಮಾಡಿದ್ದೇವೆ. ಲಕ್ಷಾಂತರ ಜನಗಳು ಜಾತಕ ಪಕ್ಷಿಗಳಂತೆ ಕಾಯುತ್ತಾ ಕುಳಿತಿದ್ದಾರೆ ಎಂದು. Is it sufficient?

ಜನರು ಆ ಕೊಳ್ಳದಲ್ಲೂ ಕಾಯುತ್ತಿದ್ದಾರೆ, ಈ ಕೊಳ್ಳದಲ್ಲೂ ಕಾಯುತ್ತಿದ್ದಾರೆ. ತೆಲುಗು ಗಂಗಾ ಯೋಜನೆ ಕಾರ್ಯರೂಪಕ್ಕೆ ಬರುವಾಗ, ಇವತ್ತು ಇಲ್ಲಿ ಮುಖ್ಯಮಂತ್ರಿಗಳು ಹಾಜರಾತಿ ಇದ್ದರೆ ಚೆನ್ನಾಗಿ ಇತ್ತು. ಅವರು ಇಲ್ಲಿ ಕುಳಿತು ಆಡಲಾದ ಎಲ್ಲ ಮಾತುಗಳನ್ನು ಓದಬೇಕೆಂದು ತೆಗೆದುಕೊಂಡು ಬಂದಿದ್ದೇನೆ. I came prepared to read the whole thing what he has said on the floor of this House when Sri Ramekrishna Hegde was the Cheif Minister.

ಅವರು ಅವತ್ತು ಎಲ್ಲಿಯವರೆಗೆ ಹೋಗುತ್ತಾರೆ ಎಂದರೆ, ಎನ್.ಟಿ. ರಾಮರಾವ್ ಅವರ ಸ್ನೇಹವನ್ನು ಬೆಳೆಸುವುದಕ್ಕೆ, ರಾಷ್ಟ್ರರಾಜಕಾರಣದ ಉತ್ತುಂಗ ಶಿಖರವನ್ನು ಏರುವುದಕ್ಕೆ, ಈ ಹಿತವನ್ನು ನೀವು ಮಾರುತ್ತಾ ಇದ್ದೀರಿ ಎನ್ನುವ ಮಾತನನು ಇಲ್ಲಿ ಉಪಯೋಗಿಸಿದ್ದಾರೆ. You are seling the interest on the state in order to become a national leader and in ordr to safeguard the friendship between you and Mr. N.T. Rama Rao. He tried to draw distinction between him and Mr. Devegowda.

ಶ್ರೀ ವೀರಪ್ಪ ಮೊಯಿಲಿಯವರು ಈಗ ಆಗಮಿಸಿದ್ದಾರೆ. ಇದು ೨೬.೭.೧೯೮೫ರದ್ದು, ತಮಗೆ ಆಸಕ್ತಿ ಇದ್ದರೆ ತರಿಸಿಕೊಂಡು ಓದಬಹುದು, ಬಹಳ ಚೆನ್ನಾಗಿದೆ. ಒಂದು ತಮಾಷೆ ಎಂದರೆ ಇಲ್ಲಿ ಕುಳಿತುಕೊಂಡು ಮಾತನಾಡಿದವರು ಅಲ್ಲಿ ಹೋಗಿದ್ದಾರೆ. ಪಾತ್ರ ಬದಲಾವಣೆಯಾಗಿದೆ. ಪಾರ್ಟು ಬದಲಾವಣೆಯಾಗುತ್ತದೆ. ಇಲ್ಲಿ ರಾಮನ ಪಾರ್ಟು, ಕೃಷ್ಣನ ಪಾರ್ಟು, ಧರ್ಮರಾಯನ ಪಾರ್ಟು ಹಾಕಿಕೊಂಡು ಇರುತ್ತೇವೆ. ಆ ಕಡೆಗೆ ಹೋಗುತ್ತಿದ್ದ ಹಾಗೆ ಪಾತ್ರಗಳು ಬದಲಾವಣೆಯಾಗಿ ಬಿಡುತ್ತವೆ. ಸನ್ಮಾನ್ಯ ಅಧ್ಯಕ್ಷರೇ, ನಾನು ಏಕೆ ಈ ಮಾತನ್ನು ಹೇಳುತ್ತಿದ್ದೇನೆ ಎಂದರೆ, ತೆಲುಗುಗಂಗಾ ಯೋಜನೆ ಕಾರ್ಯರೂಪಕ್ಕೆ ಬರುವಾಗ, ನಿಜ, ಬೆಳಿಗ್ಗೆ ಕೂಡ ಅವರು ಒಪ್ಪಿಕೊಂಡಿದ್ದಾರೆ. There is a violatin of the terms. ಅವತ್ತಿನ ಮುಖ್ಯಮಂತ್ರಿಗಳಿಗೆ ಇವತ್ತಿನ ಮುಖ್ಯಮಂತ್ರಿಗಳು ಹೇಳಿದ್ದರು.

"ನಿಮ್ಮ ರಾಷ್ಟ್ರ ರಾಜಕಾರಣದ ತೆವಲು ತೀರಿಸಿಕೊಳ್ಳುವ ಉದ್ದೇಶಕ್ಕಾಗಿ ಈ ರಾಜ್ಯದ ಜನರನ್ನು ಕೊಲ್ಲುತ್ತಿದ್ದೀರಿ. ಅವರ ಹಿತವನ್ನು ಮಾರುತ್ತಿದ್ದೀರಿ....." ಎಂದು.

ಇವತ್ತು ಬೆಳಿಗ್ಗೆ ಈ ಸರ್ಕಾರ ನನಗೆ ಉತ್ತರ ಕೊಟ್ಟಿದೆ. ಆಂಧ್ರಪ್ರದೇಶದ ಸರ್ಕಾರ ಕೃಷ್ಣಾಕೊಳ್ಳದ ನೀರನ್ನು ಅಕ್ರಮವಾಗಿ ಉಪಯೋಗಿಸಿಕೊಳ್ಳುತ್ತಿದೆ ಎನ್ನುವುದನ್ನು ಅವರೇ

ಒಪ್ಪಿಕೊಂಡಿದ್ದಾರೆ. ಅದನ್ನು ಓದುವ ಅವಶ್ಯಕತೆ ಇಲ್ಲ. ಈ ಅಕ್ರಮ ಉಪಯೋಗವನ್ನು ತಡೆಯುವುದರಲ್ಲಿ ಸರ್ಕಾರ ಸಾಕಷ್ಟು ಕೆಲಸ ಮಾಡಿಲ್ಲ, ಕಾರ್ಯಕ್ರಮ ತೆಗೆದುಕೊಂಡಿಲ್ಲ ಎಂದರೆ, ಇವತ್ತಿನ ಮುಖ್ಯಮಂತ್ರಿಗಳು ಪ್ರಧಾನಿಗಳ ಹಿತವನ್ನು ಕಾಪಾಡಲಿಕ್ಕೆ ಅಥವಾ ರಕ್ಷಣೆ ಮಾಡುವಂಥ ಪ್ರಯತ್ನದಲ್ಲಿ ವಿಫಲರಾಗಿದ್ದಾರೆ, ಸೋತಿದ್ದಾರೆ. ಇನ್ನೂ ಮುಂದೆ ಹೋಗಿ ಹೇಳಬೇಕು. ಎಂದರೆ, ಆಂಧ್ರಪ್ರದೇಶದ ಪ್ರಧಾನಿಯವರನ್ನು ವಿರೋಧ ಮಾಡಿಕೊಳ್ಳುವಂಥ ಪ್ರಯತ್ನಕ್ಕೆ ಅವರು ಕೈ ಹಾಕುತ್ತಿಲ್ಲ. I should charge.

ಈ ರಾಷ್ಟ್ರದ ಪ್ರಧಾನಿಗಳು ಆಂಧ್ರದವರು. ಈ ಪ್ರಧಾನಿಯವರ ಕೃಪಾಕಟಾಕ್ಷದಿಂದ ಇವರು ಮುಖ್ಯಮಂತ್ರಿಯಾದರು. ಪ್ರಧಾನಮಂತ್ರಿಯವರ ಕೃಪಾಕಟಾಕ್ಷದಿಂದ ಏನು ಮುಖ್ಯಮಂತ್ರಿ ಸ್ಥಾನವನ್ನು ಆಕ್ರಮಿಸಿಕೊಂಡಿದ್ದಾರೋ, ಆ ಸ್ಥಾನವನ್ನು ಉಳಿಸಿಕೊಳ್ಳುವುದಕ್ಕೋಸ್ಕರ ಕರ್ನಾಟಕ ರಾಜ್ಯದ ಹಿತವನ್ನು ಬಲಿಕೊಡುತ್ತಿದ್ದೀರಿ ಎಂದು ನಾನು ಹೇಳಬೇಕಾಗುತ್ತದೆ.

* * *

**ಅಧ್ಯಕ್ಷರು: ಕ್ಲೋಸ್ ಮಾಡಿ.**

I have no other alternative. well me what is the other reasoin for keeping quitet for all these 3 months. What is the other reason? have you called a meeting of the Cauvery and Krishna basin legislators? have you consulted them? you are goiing in a normal course.

ಸನ್ಮಾನ್ಯ ಅಧ್ಯಕ್ಷರೇ, ಎರಡು ಸಾವಿರ ಇಸವಿಯೊಳಗೆ ಆ ನೀರನ್ನು ಉಪಯೋಗಿಕೊಳ್ಳಬೇಕು ಎನ್ನುವ ಆ ಕತ್ತಿ ನಮ್ಮ ತಲೆಯ ಮೇಲೆ ತೂಗಾಡುತ್ತಿದ್ದೆ. ಇನ್ನು ಕಾವೇರಿಯ ಕತೆ? ೧೧ ಲಕ್ಷ ೨೦ ಸಾವಿರ ಎಕರೆ ನೀರನ್ನು ಉಪಯೋಗಿಸಿಕೊಳ್ಳುವುದಕ್ಕೆ ಅವಕಾಶ ಕೊಡುವುದಿಲ್ಲ ಎಂದು ಅವರು ಹೇಳುತ್ತಿದ್ದಾರೆ. Why this Government has not taken anything wiht all seriousness?

ನಾನು ಅದಕ್ಕೇ ನನ್ನ ಭಾಷಣವನ್ನು ಪ್ರಾರಂಭ ಮಾಡುವಾಗಲೇ ಹೇಳಿದ್ದೆ. ಕರ್ನಾಟಕದ ಈ ಎರಡೂ ಕಣ್ಣುಗಳಲ್ಲೂ ನೀರು ಬರುತ್ತಿದೆ. ಅದು ಆನಂದಬಾಷ್ಪ ಅಲ್ಲ. ನೋವು, ಅನ್ಯಾಯ, ಮೋಸ, ವಂಚನೆಯಿಂದ ಬಂದ ಕಣ್ಣೀರು. ಏನು ಮಾಡಿದ್ದೀರಿ ಸ್ವಾಮಿ? ಪ್ರತಿವರ್ಷ ಅಂದಾಜು ತರುತ್ತೀರಿ, ನಾವು ಭಾಷಣ ಮಾಡುತ್ತಿದ್ದೇವೆ. ಅದಕ್ಕಾಗಿ ಇಂತಹ ಒಂದು ಗಂಭೀರ ಪರಿಸ್ಥಿತಿ ಇರುವಾಗ, ಇಂತಹ ಒಂದು ವೈವಿಧ್ಯಮಯ ಪರಿಸ್ಥಿತಿ ಇರುವಾಗ, ಇಂತಹ ಸಂಕಷ್ಟ ನಮ್ಮ ತಲೆಯ ಮೇಲೆ ತೂಗಾಡುತ್ತಿರುವಾಗ, ದಯವಿಟ್ಟು ನಿಮ್ಮ ಎದೆ ಮುಟ್ಟಿಕೊಂಡು ಹೇಳಿ, ಯಾವ ವಿಶೇಷವಾದ ಕಾರ್ಯಕ್ರಮವನ್ನು ನೀವು ಹಾಕಿಕೊಂಡಿದ್ದೀರಿ? ಮಾನ್ಯ ಉಪಮುಖ್ಯಮಂತ್ರಿಗಳೇ, ಎಷ್ಟು ದಿವಸ ಅಂತ ಆ ನಾರಿಮನ್ ಹಿಂದುಗಡೆ ಓಡಾಡುತ್ತೀರಿ ನೀವು ಎಷ್ಟು ದಿವಸ ಬಚಾವತ್ ಕಮೀಷನನ್ನು ಪ್ರಶ್ನೆ ಮಾಡುತ್ತೀರಿ? I am not wasting the time. I want to tell this Government.

ನೀವು ಕೃಷ್ಣಾ ನೀರಿನ ಹಂಚಿಕೆ ಬಗ್ಗೆ ವ್ಯಾಜ್ಯವನ್ನು ಮುಂದುವರಿಸುವುದರ ಜೊತೆಗೆ, ಏನು ಸುಪ್ರೀಂಕೋರ್ಟ್ ನ್ಯಾಯಾಲಯದಲ್ಲಿರುವ ಕಾವೇರಿ ನೀರಿನ ವ್ಯಾಜ್ಯವನ್ನು ಮುಂದುವರಿಸುವುದರ ಜೊತೆಗೆ, ಈ ರಾಜ್ಯದಲ್ಲಿ ಆಗಬೇಕಾಗಿರುವಂಥ ನೀರಾವರಿ ಕೆಲಸಗಳ ಅನುಷ್ಠಾನದ ವೇಗವನ್ನೂ ಜಾಸ್ತಿ ಮಾಡಬೇಕು.

ನಾನು ಭಾಷಣ ಶುರು ಮಾಡುವಾಗಲೇ ಹೇಳಿದೆ. ನಾವೂ ಸೋತಿದ್ದೇವೆ ಎಂಬ ಮಾತನ್ನು ಹೇಳಿದ್ದೇವೆ. ಈ ಸದನದ ಮುಖಾಂತರ ಹಾಗೂ ತಮ್ಮ ಮುಖಾಂತರ ನನ್ನ ಕಳಕಳಿ ಇಷ್ಟೆ. ಸ್ವಲ್ಪ ಹೆಚ್ಚು ಕಡಿಮೆ ಇಲ್ಲಿರುವವರಲ್ಲಿ ನೂರಕ್ಕೆ ೯೦ ಭಾಗ ಬೇಸಾಯಗಾರರು. ಒಂದು ವೇಳೆ ಬೇಸಾಯಗಾರರು ಅಲ್ಲದಿದ್ದರೂ, ಅವರ ಮಕ್ಕಳು ಇದ್ದಾರೆ. ಅಥವಾ ಬೇಸಾಯಗಾರರಿಂದ ಅನ್ನ ತಿನ್ನುವವರು ಇದ್ದಾರೆ. ಅವರೆಲ್ಲರ ಪರವಾಗಿ, ಈ ಸರ್ಕಾರಕ್ಕೆ ಅತ್ಯಂತ ಗಂಭೀರವಾಗಿ ಮತ್ತು ಅತ್ಯಂತ ವಿನಯವಾಗಿ ಪ್ರಾರ್ಥನೆ ಮಾಡಿಕೊಳ್ಳುವುದಿಷ್ಟೆ. ನಿಮ್ಮ ಈ ಎರಡು ಯೋಜನೆಗಳ ಅನುಷ್ಠಾನದ ವೇಗವನ್ನು ಹೆಚ್ಚು ಮಾಡಬೇಕು. ಇದಕ್ಕೆ ಏನು ಮಾಡಬೇಕು? ಆದರೆ ಇದು ಸಾಂಪ್ರದಾಯಿಕವಾದ ಪದ್ಧತಿಯಿಂದ ಸಾಧ್ಯವಿಲ್ಲ. ಇವತ್ತೇನು ನಿಮ್ಮ ಹಣಕಾಸಿನ ಪರಿಸ್ಥಿತಿ ಇದೆಯೋ, ನಿಮ್ಮ ಆಡಳಿತದ ವ್ಯವಸ್ಥೆ ಇದೆಯೋ, ನಿಮ್ಮ ಮನೋಭೂಮಿಕೆ ಇದೆಯೋ, ಅದರಿಂದ ಇದು ಸಾಧ್ಯವಾಗುವುದಿಲ್ಲ. ನಿಮಗೆ ಎರಡು ಸಾವಿರ ವರ್ಷದೊಳಗಾಗಿ, ಕೊನೇಪಕ್ಷ ಈ ಯೋಜನೆಗೆ ಕ್ರಿಯೇಟ್ ಆಗಿರತಕ್ಕ, I am not asking you to create new potentialities. ಇರುವಂಥ ಸಾಮರ್ಥ್ಯ ಉಪಯೋಗಿಸುವಂಥ ಪ್ರಾಮಾಣಿಕವಾದ ಆಸಕ್ತಿ ಇದ್ದರೆ, ಈ ಸಾಂಪ್ರದಾಯಿಕವಾದ ನಡವಳಿಕೆಗಳಿಂದ ಹೊರತಾದ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು. Cry halt for all these popular schemes.

ಓಟಿನ ಚೀಟಿಗಾಗಿ ನಾವೂ ಮಾಡಿದೆವು. ನಾನು ಅದಕ್ಕಾಗಿಯೇ ಇಲ್ಲಿ ಕೂತಿರುವ ಮಾನ್ಯ ನಂಜಪ್ಪನವರಿಗೆ ಹೇಳಿದೆ. ಓಟಿನ ಚೀಟಿಗಾಗಿ ನಾವು ತಾಳಿಭಾಗ್ಯ ತಂದೆವು. ಹಿಂದೆ, ಮಾನ್ಯ ಕೆ.ಹೆಚ್. ಪಾಟೀಲರು ಇಲ್ಲಿ ಕುಳಿತಿದ್ದರು. ಅವರು ಒಂದು ಮಾತನ್ನು ಬಹಳ ತಮಾಷೆಯಾಗಿ ಹೇಳಿದರು. "ನಿಮ್ಮ ಸರ್ಕಾರ ಎಲ್ಲಾ ಕಾರ್ಯಕ್ರಮಗಳನ್ನೂ ತಂದಿದೆ. ವೆಡ್ಡಿಂಗ್ ಸೆರಮನಿಗಾಗಿ, ಸಾಮಾನು ಕೊಡಿಸುವ ಕಾರ್ಯಕ್ರಮ ತರುವುದಿಲ್ಲವೇ?" ಎಂದು ಕೇಳಿದರು. ಪಾಪ, ಇವೊತ್ತು ಅವರು ದಿವಂಗತರಾಗಿದ್ದಾರೆ. "ತಾಳಿ ಕೊಟ್ಟಿರಿ, ಸೀರೆ ಕೊಟ್ಟಿರಿ, ಪಂಚೆ ಕೊಟ್ಟಿರಿ, ಎಲ್ಲಾ ಕೊಟ್ಟಿರಿ, ಇವತ್ತು ವೆಡ್ಡಿಂಗ್ ಸೆರಮನಿಗಾಗಿ ಸಾಮಾನು ಕೊಡುವುದಿಲ್ಲವೇ"? ಎಂದು ಅವರು ಕೇಳಿದ್ದರು. ಆದ್ದರಿಂದ ಈ ನೀರಾವರಿಗಾಗಿ ಹಣವನ್ನು ಖರ್ಚು ಮಾಡುವುದಕ್ಕಾಗಿ, ಇತರ ಯೋಜನೆಗಳನ್ನು ಎಲ್ಲಾ ಕಾಲಕ್ಕೂ ಸ್ಥಗಿತಗೊಳಿಸಬೇಕೆಂಬುದು ನನ್ನ ವಾದ. At least, for sometime, for some period cry halt for all these popular schemes.

ಓಟಿನ ಚೀಟಿಗಾಗಿ, ಜನರನ್ನು ವಂಚಿಸುವುದಕ್ಕಾಗಿ, ನಾವು ಯಾವ ಯಾವುದೋ ಯೋಜನೆಗಳಿಗೆ ಹಣವನ್ನು ಖರ್ಚು ಮಾಡುತ್ತಿದ್ದೇವೆಯೋ, ಆ ರೀತಿ ಖರ್ಚು ಮಾಡುವಂಥ ಹಣವನ್ನು, ವೆಚ್ಚವನ್ನು ದಯಮಾಡಿ ಕಡಿಮೆ ಮಾಡಿ. ಎರಡನೆಯದಾಗಿ, ನಾವು ಕೇವಲ ಸಮಸ್ಯೆಗಳನ್ನು ಸೃಷ್ಟಿಸುವುದು ಸುಲಭ. ಇದಕ್ಕೆ ಪರಿಹಾರ ಕೊಡುವುದನ್ನೂ ಕೂಡ ಅವರ ಗಮನಕ್ಕೆ ತರಬೇಕು. ನೀರಾವರಿ ಯೋಜನೆಗಳಲ್ಲಿ ಸೋರಿಕೆ ಏನಾಗುತ್ತಿದೆ ಎಂದು ಹೇಳುತ್ತೇವೆಯೋ, ಈ ಸೋರಿಕೆಯನ್ನು ತಡೆಗಟ್ಟುವುದರ ಜೊತೆಗೆ, ನಾನು ಈಗಾಗಲೇ ಹೇಳಿದ್ದೇನೆ. ಅದರ ನೆಪದಲ್ಲಿ ಈ ಅನುಷ್ಠಾನದ ಪ್ರಗತಿಯ ವೇಗ ಕುಂಠಿತವಾಗುವುದು ಬೇಡ. ಇಷ್ಟನ್ನು ಹೇಳಿ, ಕೊನೆಯದಾಗಿ ನಾನು ಒಂದು ಮಾತನ್ನು ಸರ್ಕಾರಕ್ಕೆ ಹೇಳಬೇಕಾಗುತ್ತದೆ. ಎಲ್ಲಾ ಕಾಲಕ್ಕೆ, ಎಲ್ಲಾ ವಿಷಯಗಳಲ್ಲಿ, ಎಲ್ಲರನ್ನೂ, ಯಾವಾಗಲೂ ಮೋಸ ಮಾಡುವುದಕ್ಕೆ ಸಾಧ್ಯವಿಲ್ಲ. ೧೯೮೮ನೇ ಇಸವಿಯಲ್ಲಿ, ಅಕ್ಟೋಬರ್ ೧೧ನೇ ತಾರೀಖು ಈ ಸದನದಲ್ಲಿ, ನಾನು ಆ ಕಡೆ, ಆಡಳಿತ ಪಕ್ಷದಲ್ಲಿ ಕುಳಿತು ಒಂದು ಮಾತು ಹೇಳಿದ್ದೆ "ರೈತರ ಸಂಯಮಕ್ಕೆ ಒಂದು ಮಿತಿ ಇದೆ. ಅವನು ಅನುಭವಿಸುವ ಕಷ್ಟ,

ಕಾರ್ಪಣ್ಯಗಳಿಗೆ ನೀರು ಇಲ್ಲದೆ ಭೂಮಿಯಲ್ಲಿ ಬೆಳೆ ಕಳೆದುಕೊಳ್ಳುವುದಕ್ಕೆ, ರೋಗ ತಗಲಿ ಬೆಳೆ ನಾಶ ಮಾಡುವುದಕ್ಕೆ ಒಂದು ಮಿತಿ ಇದೆ. ನೀವು ಏನಾದರೂ ಪ್ರಾಮಾಣಿಕ ಪ್ರಯತ್ನವನ್ನು ಮಾಡಿ, ಕಾವೇರಿ ಕೊಳ್ಳದ ನೀರಾವರಿ ಯೋಜನೆಗಳನ್ನು ಅನುಷ್ಠಾನಕ್ಕೆ ತರುವುದಕ್ಕೆ ಸೋತರೆ, ಕಾವೇರಿ ಕೊಳ್ಳದ ಜನರು ರೊಚ್ಚಿಗೆದ್ದಾರು ಎಚ್ಚರಿಕೆ" ಎಂದು. ಈ ಮಾತನ್ನು ನಾನು ದಿನಾಂಕ ೧೩.೧೦.೧೯೮೮ರಲ್ಲಿಯೇ ಕಾವೇರಿ ಕೊಳ್ಳದ ಜನರು ರೊಚ್ಚಿಗೆದ್ದಾರು ಎನ್ನುವ ಎಚ್ಚರಿಕೆಯ ಮಾತನ್ನು ಆಡಳಿತ ಪಕ್ಷದಲ್ಲಿದ್ದುಕೊಂಡೇ ಆಡಳಿತ ಮಾಡತಕ್ಕಂಥ ಜನರಿಗೇ ನಾನು ಹೇಳಿದ್ದೆ. ಅವರೂ ನನ್ನ ಮಾತನ್ನು ಕೇಳಲಿಲ್ಲ. ಅದರ ಫಲ ಹೋಯಿತು ಸಾಮಿ, ಕಾವೇರಿ ಕೊಳ್ಳದ ಜನರು ರೊಚ್ಚಿಗೆದ್ದು ಹತ್ತಾರು ಜನಗಳ ಪ್ರಾಣ ನಾಶವಾಯಿತು. ಕೋಟ್ಯಾಂತರ ರೂಪಾಯಿಗಳ ಆಸ್ತಿ ನಷ್ಟವಾಯಿತು. ಮತ್ತೆ ಈ ಸದನದ ಮೂಲಕ ತಮಗೆ ಅದೇ ಮಾತನ್ನು ಪುನರುಚ್ಚಾರ ಮಾಡುತ್ತೇನೆ. ನಮಗೆ ನೀರು ಎಲ್ಲಿ ಸಿಗುತ್ತದೆ? ಬೋರ್‌ವೆಲ್‌ಗಳ ಮೂಲಕ ನೀರು ಹಾಯಿಸಿಕೊಳ್ಳೋಣ ಎಂದರೆ ನೀರೇ ಇಲ್ಲ. ಸಣ್ಣ ಕೆರೆಗಳು ಎಲ್ಲಾ ಹಾಳಾಗಿ ಹೋಗಿವೆ. ನಮಗೆ ಇರುವುದು ಇದೊಂದೇ ಮಾರ್ಗ. ಅಂದರೆ ನೀರಾವರಿ ಯೋಜನೆಗಳನ್ನು ಅನುಷ್ಠಾನಗೊಳಿಸುವುದು. ಇಲ್ಲದಿದ್ದರೆ ಮತ್ತೆ ರೈತರ ಕೆಂಗಣ್ಣು ಅನುತಾಪ ಕಷ್ಟಕಾರ್ಪಣ್ಯಗಳ ಬೆಂಕಿಗೆ ಬಿದ್ದು ನೀವೂ ಕೂಡ ನಮ್ಮ ಪರಿಸ್ಥಿತಿಯನ್ನು ಅನುಭವಿಸಬೇಕಾಗುತ್ತದೆ. There is a limitaiton.

ಅದಕ್ಕೆ ಸರ್ಕಾರದಲ್ಲಿ ಮತ್ತೊಮ್ಮೆ ಎಚ್ಚರಿಕೆ ಕೊಡುವುದರ ಮೂಲಕ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ದಯಮಾಡಿ ಈ ಎರಡೂ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವಂತಹ ಪ್ರಾಮಾಣಿಕ ಪ್ರಯತ್ನವನ್ನು ಮಾಡಬೇಕು. ರೈತರಿಗೆ ಹಿಂದಿನಿಂದಲೂ ನಡೆದುಕೊಂಡು ಬಂದಂತಹ ದ್ರೋಹ ಮೋಸ ಮತ್ತು ಅಂಕಿಅಂಶಗಳ ಮಾಯಾಜಾಲ ಮುಂದುವರಿಸಿಕೊಂಡು ಹೋದರೆ ಆ ಪರಂಪರೆಗಳ ಜನಾಂಗಕ್ಕೆ ನೀವೂ ಸೇರಿ ಹೋಗುತ್ತೀರಿ. ಸನ್ಮಾನ್ಯ ಉಪಮುಖ್ಯಮಂತ್ರಿಗಳಿಗೆ ಅತ್ಯಂತ ಕಠಿಣವಾದ ಎರಡು ಮಾತುಗಳನ್ನು ಹೇಳಬೇಕಾಗಿದೆ. ನೀರಾವರಿ ಅಷ್ಟೇ, ವಿದ್ಯುತ್‌ಶಕ್ತಿಯ ಅನುಷ್ಠಾನಕ್ಕೆ ಕೂಡ ತಾವು ಈಗ ತೆಗೆದುಕೊಂಡಿರುವ ಆಸಕ್ತಿ ಸಾಲದು. ನಾನು ಹೇಳುತ್ತಿರುವುದು ಸರಿಯೋ ತಪ್ಪೋ ನನಗೆ ತಿಳಿಯದು. ಆದರೂ ತಾವು ಈ ಯೋಜನೆಗಳನ್ನು ಪ್ರಾಮಾಣಿಕವಾಗಿ ಅನುಷ್ಠಾನ ಮಾಡಲು ಇನ್ನೂ ಸ್ವಲ್ಪ ಆಸಕ್ತಿ ವಹಿಸಬೇಕಾಗಿದೆ. ಅದರ ಜೊತೆಗೆ ನಾನು ಇನ್ನೊಂದು ಮಾತನ್ನು ಹೇಳಲೇಬೇಕಾಗಿದೆ. ಮೊನ್ನೆ ಟಿ.ವಿ.ಯಲ್ಲಿ ತಾವು ಹೇಳಿದ ಮೇಲೆ ಇದನ್ನು ನಾನು ಹೇಳಬೇಕಾಗಿದೆ. The greatest threat is the finance.

ಹಣ ಖರ್ಚು ಮಾಡಬೇಕು. ಉಳಿದಿದ್ದು ಏನಾದರೂ ಮಾಡಿಕೊಳ್ಳಿ. ದುಡ್ಡು ಕೊಟ್ಟರೆ ಮೇಸ್ತ್ರಿ ಕೆಲಸ ಮಾಡುತ್ತಾನೆ. ದುಡ್ಡು ಕೊಡುವವರು ಯಜಮಾನರು. ಯಜಮಾನರು ದುಡ್ಡು ಕೊಡಬೇಕಾಗಿಲ್ಲ. ಅದಕ್ಕೆ ಒಂದು ಮಾತು ಹೇಳುತ್ತೇನೆ. ಈ ಯೋಜನೆಗಳಿಗೆ ಹಣ ತೊಡಗಿಸುವುದು ಮಾತ್ರ ಅಲ್ಲ, ಹಣ ಖರ್ಚು ಮಾಡಬೇಕಾಗಿದೆ. ಸನ್ಮಾನ್ಯ ಸಚಿವರು ಬ್ಯೂರೋಕ್ರಾಟ್ಸ್ ಮೇಲೆ, ಮುಖ್ಯಮಂತ್ರಿಗಳ ಮೇಲೆ, ಫೈನಾನ್ಸ್ ಮಂತ್ರಿಗಳ ಮೇಲೆ, ಸೆಕ್ರೆಟರಿ ಮೇಲೆ ತೊಡಗಿಸುತ್ತಾ ಹೋದರೆ ಅದು ನಮಗೆ ಹಿಡಿಸುವುದಿಲ್ಲ. ನಿಮ್ಮ ರಾಜಕೀಯ ಏನೇ ಮಾಡಿಕೊಳ್ಳಿ. ಏನು ಆಶ್ವಾಸನೆ ಬಜೆಟ್‌ನಲ್ಲಿ ಕೊಟ್ಟಿದ್ದೀರಿ. ಆ ಪ್ರಕಾರ ನೀರಾವರಿ ಯೋಜನೆಗಳನ್ನು ಮಾಡಲಿಕ್ಕೆ ಎಷ್ಟು ಹಣ ಅದಕ್ಕಾಗಿ ಒದಗಿಸಿದ್ದೀರಿ ಅಷ್ಟನ್ನೂ ಪೂರ್ಣವಾಗಿ ಖರ್ಚು ಮಾಡಿ. First you spend the money which is earmarked in the Budget.

ಈ ಮಾತುಗಳು ಸನ್ಮಾನ್ಯ ಹಾಲಿ ಮುಖ್ಯಮಂತ್ರಿಗಳು ಈ ಸದನದಲ್ಲಿ ದಿನಾಂಕ ೧೩ನೇ ಅಕ್ಟೋಬರ್ ೧೯೮೮ರಂದು ಆಡಿದಂತಹ ಅಮೃತ ನುಡಿಗಳು. First you spend you money

which is earmarked for irrigation in the Budget. ಏನು ಮಾನ್ಯ ಮುಖ್ಯಮಂತ್ರಿಗಳು ಆಗ ಅಮೃತ ನುಡಿಗಳನ್ನು ನುಡಿದಿದ್ದರೋ, ಅದನ್ನು ಈಗ ಅನುಷ್ಠಾನಕ್ಕೆ ತರುವಂತಹ ಶಕ್ತಿಯನ್ನು ದೇವರು ಅವರಿಗೆ ಕೊಟ್ಟಿದ್ದಾನೆ. ತಾವು ಮಾಡಬೇಕು. I request the Hon. Chief Minister. I repeat his own words: spend first the money for irrigation purpose. ಅದು ಇಲ್ಲದಿದ್ದರೆ ಏನೂ ಆಗುವುದಿಲ್ಲ. ನೀರಾವರಿಗೆ ಹೆಚ್ಚು ಹಣ ಖರ್ಚು ಮಾಡಿ ಎಂದು ನಾನು ಒತ್ತಾಯ ಮಾಡುತ್ತೇನೆ. ಬೇರೆ ವಿಷಯಗಳಿಗೆ ಹಣ ಖರ್ಚು ಮಾಡದಿದ್ದರೂ ಪರವಾಗಿಲ್ಲ. ಈ ನೀರಾವರಿಗೆ ಹಣ ಖರ್ಚು ಮಾಡದಿದ್ದರೆ ಏನೂ ಆಗುವುದಿಲ್ಲ. ನಾನು ಈಗಾಗಲೇ ಹೇಳಿದಂತೆ ಇದು ಕೇವಲ ಕನ್ನಡ ಗಂಟು ಆಗುತ್ತದೆ. ನೀರಾವರಿಯನ್ನು ರಾಜ್ಯದಲ್ಲಿ ಅನಾಥ ಶಿಶುವನ್ನಾಗಿ ಈ ಸರ್ಕಾರ ಮಾಡಿದೆ ರಾಮಕೃಷ್ಣ ಹೆಗಡೆಯವರು ಮುಖ್ಯಮಂತ್ರಿಗಳಾಗಿದ್ದಾಗ ಅವರು ಆಡಿದಂತಹ ಮಾತು ಇದು. ನಾನು ಇದನ್ನು ಓದುತ್ತಿದ್ದರೆ ಅವರು ಹೇಳಿದರೋ ಇಲ್ಲಾ ಬೇರೆಯವರು ಹೇಳಿದರೋ ಎನ್ನುವ ಅನುಮಾನ ಬರುತ್ತಿದೆ.

ಮಾನ್ಯ ವೀರಪ್ಪ ಮೊಯಿಲಿಯವರು ಹೇಳಿದ ಮಾತು: "ಇದು ಅತ್ಯಂತ ಪ್ರಮುಖವಾದಂಥ ವಿಚಾರ, ನೀರಾವರಿ ವಿಷಯ. ಈ ಅನಾಥ ಶಿಶುವನ್ನು ದೇವೇಗೌಡರ ಕೈಯಲ್ಲಿ ಕೊಟ್ಟು ನೀವ್ಯಾರೂ ನಿದ್ರೆ ಮಾಡಬೇಡಿ". ಅದೇ ಮಾತನ್ನು ನಾನು ಇವತ್ತಿನ ಸರ್ಕಾರಕ್ಕೆ ಹೇಳುತ್ತೇನೆ. ಈ ಅನಾಥ ಶಿಶುವನ್ನು ಸನ್ಮಾನ್ಯ ಕೃಷ್ಣರವರ ಕೈಯಲ್ಲಿ ಕೊಟ್ಟು ನೀವ್ಯಾರು ನಿದ್ರೆ ಮಾಡಬೇಡಿ. ವಾದ ಮಾಡಬೇಡಿ. ಅಡ್ಡಿ ಮಾಡಬೇಡಿ. ಅವತ್ತು ಬಜೆಟ್‌ನಲ್ಲಿ ಕೊಟ್ಟಿರುವಂಥ ಹಣವನ್ನು ಖರ್ಚು ಮಾಡುವಂಥ ಶಕ್ತಿ ನಿಮಗಿಲ್ಲ, ಮನಸ್ಸು ನಿಮಗಿಲ್ಲ, ಯೋಗ್ಯತೆ ನಿಮಗಿಲ್ಲ, ಎಂದು ನಿಮ್ಮ ಮುಖ್ಯಮಂತ್ರಿಗಳು ಏನು ಹೇಳಿದ್ದರೋ ಆ ಮಾತನ್ನು ಇವತ್ತು ನಾನು ಇವರಿಗೆ ಇಷ್ಟು ಬೇಗನೇ ಹೇಳಲು ಇಷ್ಟಪಡುವುದಿಲ್ಲ. ಈಗ ತಾನೇ ಅವರು ಬಂದಿದ್ದಾರೆ. ಮುಂದಿನ ವರ್ಷ ಬಜೆಟ್‌ನಲ್ಲಿ ಹೇಳೋಣ. ಈಗ ನಾನು ಅವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ನಾವು ಹೇಳಿದಂಥ ಮಾತುಗಳನ್ನು ದಯಮಾಡಿ ಕಾರ್ಯರೂಪಕ್ಕೆ ತನ್ನಿ. ಹಾಗೆ ಕಾರ್ಯರೂಪಕ್ಕೆ ತರುವ ಸಂದರ್ಭದಲ್ಲಿ ಆ ಅನಾಥ ಶಿಶುವನ್ನು ಯಾರದೋ ಕೈಯಲ್ಲಿ ಕೊಟ್ಟು ಸುಮ್ಮನೆ ಕುಳಿತುಕೊಳ್ಳಬೇಡಿ ಎಂದು ಹೇಳಬಯಸುತ್ತೇನೆ. ಅಧ್ಯಕ್ಷರೇ, ಇಷ್ಟು ಹೊತ್ತು ನನಗೆ ಮಾತನಾಡಲು ಅವಕಾಶ ಕೊಟ್ಟ ತಮಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

## ಕರ್ನಾಟಕ ಮತ್ತು ಕಾವೇರಿ

೧೩ನೇ ಮಾರ್ಚ್ ೨೦೦೧

ಕರ್ನಾಟಕದ ನೀರಾವರಿ ವಿಷಯದಲ್ಲಿ ಅನ್ಯಾಯದ ಪರಂಪರೆ ಏನು ನಡೆದು ಬಂದಿದೆ ಎನ್ನುವುದರ ಬಗ್ಗೆ ನನ್ನ ಸ್ಪಷ್ಟವಾದಂಥ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತೇನೆ. ಏಕೆಂದರೆ, ಸ್ವಾತಂತ್ರ್ಯಾನಂತರ ಕರ್ನಾಟಕ ರಾಜ್ಯದಲ್ಲಿ ಆಡಳಿತಕ್ಕೆ ಬಂದಂಥ ಯಾವ ಸರ್ಕಾರವೂ ಕೂಡ ಆಯವ್ಯಯದಲ್ಲಿ ನಿಗದಿಪಡಿಸಿದಷ್ಟು ಹಣವನ್ನು ಖರ್ಚು ಮಾಡಿಲ್ಲ. ನಾನು ದಿವಂಗತ ಜಿ.ಹೆಚ್. ಪಟೇಲರಿಗೆ ಸ್ವಾತಂತ್ರ್ಯ ಬಂದ ಮೇಲೆ ಕರ್ನಾಟಕ ರಾಜ್ಯದ ನೀರಾವರಿಯಲ್ಲಿ ಅನ್ಯಾಯದ ಪರಂಪರೆ ನಡೆದುಕೊಂಡು ಬಂದಿದೆ. ಯಾವ ಸರ್ಕಾರವು ಆಯವ್ಯಯದಲ್ಲಿ ನಿಗದಿ ಮಾಡಿದ ಹಣವನ್ನು

ನಿರ್ಧಾರ ಮಾಡಿಲ್ಲ. ನೀವು ಕೂಡ ಆ ಅನ್ಯಾಯವನ್ನು ಮಾಡಬೇಡಿ ಎಂದು ಒಂದು ಕಾಗದವನ್ನು ಬರೆದೆ. ನಾನು ಇವತ್ತು ಅವರನ್ನ ಸ್ಮರಿಸಿಕೊಳ್ಳುತ್ತೇನೆ. ಈ ಸತ್ಯದ ಮಾತನ್ನು ನಾನು ಏಕೆ ಹೇಳಿದನೆಂದರೆ, ಸತ್ಯವನ್ನು ಒಪ್ಪಿಕೊಳ್ಳಲಿಕ್ಕೆ, ಸತ್ಯವನ್ನು ಮಾತನಾಡಲಿಕ್ಕೆ, ಆದರ್ಶಗಳನ್ನು ಕಾರ್ಯರೂಪಕ್ಕೆ ತರಲಿಕ್ಕೆ ಜೀವನದಲ್ಲಿ ಬಾಳಿಯಲ್ಲಿ ತರಬೇಕಾಗುತ್ತದೆ. ದಿವಂಗತ ಜೆ.ಹೆಚ್. ಪಟೇಲರು ಈ ಸತ್ಯವನ್ನು ಮೆರೆದಿದ್ದಾರೆ. ಅದಕ್ಕಾಗಿ ಅವರನ್ನು ನಾನು ಮೆಚ್ಚಿಕೊಳ್ಳುತ್ತೇನೆ. ನೀರಾವರಿ ವಿಷಯದಲ್ಲಿ ಈ ರಾಜ್ಯಕ್ಕೆ ಅನ್ಯಾಯವಾಗಿದೆ. ನಾನು ಆಗಲೇ ಹೇಳಿದ ಹಾಗೆ, ಕೃಷ್ಣಾ ಮತ್ತು ಕಾವೇರಿ ನದಿಗಳು ಈ ನಾಡಿನ ಎರಡು ಕಣ್ಣುಗಳು. ಈ ಎರಡು ಕಣ್ಣುಗಳಲ್ಲಿಯೂ ಆನಂದಬಾಷ್ಪ ಸುರಿದು, ಭೂಮಿ ತೊಯ್ದು ಬೆಳೆ ಬಂದು ಹೆಚ್ಚು ಸಮೃದ್ಧಿಯನ್ನು ಕಾಣಬೇಕಾಗಿತ್ತು.

ಆದರೆ ದುರಾದೃಷ್ಟವಶಾತ್ ಈ ತಾಯಿಯ ಎರಡು ಕಣ್ಣುಗಳಲ್ಲಿಯೂ ಕಣ್ಣೀರು ಸುರಿಯುವುದನ್ನೇ ನೋಡುತ್ತಿದ್ದೇವೆ. ಎರಡು ಸಾವಿರ ಇಸವಿಯೊಳಗಾಗಿ ಕೃಷ್ಣಾನದಿಯ ಕೊಳ್ಳದ ಎಲ್ಲ ನೀರನ್ನು ಉಪಯೋಗಿಸಿಕೊಳ್ಳುವಂಥ ಒಂದು ನಿಬಂಧನೆ ಈ ರಾಜ್ಯ ಸರ್ಕಾರಕ್ಕೆ ಕಟ್ಟಿಹಾಕಿ ಕೊಟ್ಟಿರುವಂಥ ಒಂದು ನಿಬಂಧನೆಯಾಗಿದೆ. ಎರಡು ಸಾವಿರ ಒಂದನೇ ಇಸವಿಯೊಳಗಾಗಿ ಈ ನೀರನ್ನು ಉಪಯೋಗಿಸಿಕೊಳ್ಳದೇ ಇದ್ದರೆ The right of karntaka will be extinguished. that is how said the Chief Minster.

ಮಾನ್ಯ ಉಪಾಧ್ಯಕ್ಷರೆ, ನಾನು ಪೂರ್ತಿ ಹೇಳುವುದನ್ನು ಅವರು ಕೇಳಿದ್ದರೆ ಈ ತಪ್ಪು ಕಲ್ಪನೆ ಅವರಿಗೆ ಬರುತ್ತಿರಲಿಲ್ಲ. ಅವರು ಏನು ಹೇಳಿದರು ಎನ್ನುವುದನ್ನು ಹೇಳಿಯೇ ಅದು ಸರಿಯಿಲ್ಲ ಎಂದು ನಾನು ಹೇಳುವುದಕ್ಕೆ ಹೊರಟಿದ್ದೆ. ಅವತ್ತು ಅವರು ಹೇಳಿದ್ದು ಪ್ರೊಸೀಡಿಂಗ್ಸ್‌ನಲ್ಲಿದೆ. ನಮ್ಮ ಹಕ್ಕು ಹೊರಟುಹೋಗುತ್ತದೆಂದು ಅವರ ವಾದ. ನಮ್ಮ ಹಕ್ಕು ಹೋಗುವುದಿಲ್ಲ. ಬಿ ಶೆಡ್ಯೂಲ್‌ನಲ್ಲಿ ನೀರನ್ನು ಹಾಯಿಸುವಂಥ ಸಂದರ್ಭದಲ್ಲಿ ನಮಗೆ ಈ ನೀರನ್ನೂ ಪಡೆದುಕೊಳ್ಳುವಂಥ ಹಕ್ಕು ಉಳಿದುಕೊಳ್ಳುತ್ತದೆ.

ಈ ಒಂದು ದಿಶೆಯಲ್ಲಿ ಕೃಷ್ಣಾ ಕೊಳ್ಳದ ನೀರನ್ನು ಎರಡು ಸಾವಿರ ಇಸವಿಯೊಳಗಾಗಿ ಉಳಿಸಿಕೊಳ್ಳಬೇಕಾಗಿತ್ತು. ಆಂಧ್ರ ಸರ್ಕಾರದವರು ಹತ್ತಾರು ವಿಷಯಗಳಲ್ಲಿ ಈ ಒಂದು ಒಪ್ಪಂದವನ್ನು ಮುರಿದಿದ್ದಾರೆ. ಜುರಾಲ ಅಣೆಕಟ್ಟನ್ನು ಕರ್ನಾಟಕ ರಾಜ್ಯದ ಭೂಮಿ ಮೇಲೆ ಕಟ್ಟಿದ್ದಾರೆ. ಜುರಾಲ ಅಣೆಕಟ್ಟನ್ನು ಕಟ್ಟುವ ಸಂದರ್ಭದಲ್ಲಿ ನೂರಾರು ಹಳ್ಳಿಗಳು, ಸಾವಿರಾರು ಎಕರೆ ಜಮೀನು ಮುಳುಗಿಹೋಗಿವೆ. ಇವತ್ತಿನವರೆಗೆ ಆಂಧ್ರ ಸರ್ಕಾರದವರು ಅವರಿಗೆ ಪರಿಹಾರ ಕೊಟ್ಟಿಲ್ಲ. ಇದು ಬಹುಶಃ ರಾಯಚೂರು ಕ್ಷೇತ್ರಕ್ಕೆ ಬರುತ್ತದೆ. ಕೇವಲ ಎಷ್ಟು ನೀರನ್ನು ಶೇಖರಿಸಿಕೊಳ್ಳಬೇಕು ಎನ್ನುವ ಮಾತು ಇರುತ್ತದೆಯೇ ಹೊರತು, ಎಷ್ಟು ಎತ್ತರದ ಅಣೆಕಟ್ಟು ಕಟ್ಟಬೇಕೆಂದು ನಮ್ಮ ಮುಂದೆ ಇಲ್ಲ. ನಾನು ಒಬ್ಬ ವಕೀಲನಾಗಿ ಈ ವ್ಯತ್ಯಾಸವನ್ನು ತಿಳಿಸಲಿಕ್ಕೆ ಇಷ್ಟಪಡುತ್ತೇನೆ. ಕರ್ನಾಟಕ ರಾಜ್ಯಕ್ಕೆ ಎಷ್ಟು ಟಿ.ಎಂ.ಸಿ. ನೀರನ್ನು ಶೇಖರಿಸಿಕೊಳ್ಳಲಿಕ್ಕೆ ಅಧಿಕಾರ ಇದೆ, ಹಕ್ಕು ಇದೆ, ನ್ಯಾಯಯುತವಾದಂಥ ಶೇರ್ ಇದೆ. ಅಷ್ಟು ಮುಖ್ಯವೇ ಹೊರತು, ಎಷ್ಟು ಅಡಿ ಎತ್ತರಿಸಬೇಕು ಎನ್ನುವುದು ಇಲ್ಲ.

ಆ ವಿಷಯದಲ್ಲಿ ಆಂಧ್ರದವರು ತಕರಾರು ತೆಗೆದರು. ತಮಿಳುನಾಡಿಗೆ ಕುಡಿಯುವ ನೀರಿಗಾಗಿ ೫ ಟಿ.ಎಂ.ಸಿ. ನೀರನ್ನು ತೆಗೆದುಕೊಂಡು ಹೋಗುತ್ತೇವೆ ಎಂದು ಒಂದು ಕಾಲುವೆಯನ್ನು ಮಾಡುವ ಕಾರ್ಯವನ್ನು ಕೈಗೆತ್ತಿಕೊಂಡು ೧೫ ಟಿ.ಎಂ.ಸಿ. ನೀರನ್ನು ತೆಗೆದುಕೊಂಡು ಹೋಗುವ ಪ್ರಯತ್ನವನ್ನು ಮಾಡಿದರು.

ಈ ಸಂದರ್ಭದಲ್ಲಿ ನಾನು ಏನು ಹೇಳುತ್ತೇನೆಂದರೆ, ಕರ್ನಾಟಕ ರಾಜ್ಯದಲ್ಲಿ ಕೃಷ್ಣ ಮತ್ತು ಕಾವೇರಿ ನದಿಯ ವಿಷಯಕ್ಕೆ ಸಂಬಂಧಪಟ್ಟಂತೆ ನಮ್ಮ ಪಾಲಿನ ನದಿಯ ನೀರಿನ ಹಕ್ಕಿಗಾಗಿ ನಡೆದ ಹೋರಾಟ ನಿಜವಾಗಿಯೂ ಕೂಡ ರೋಮಾಂಚಕ, ಅದ್ಭುತ ಮತ್ತು ಚರಿತ್ರಾರ್ಹವಾದ ಹೋರಾಟವಾಗಿದೆ. ೧೮೮೯ನೇ ಇಸವಿ ಅಕ್ಟೋಬರ್ ೧೩ನೇ ತಾರೀಖು ಮೈಸೂರಿನಲ್ಲಿ ನಡೆದಂಥ ಜನಪ್ರತಿನಿಧಿ ಸಭೆಯಲ್ಲಿ ೩ನೇ ವಿಷಯಕ್ಕೆ ಸಂಬಂಧಪಟ್ಟಂತೆ, ಕಾವೇರಿ ನೀರಿನ ಹಂಚಿಕೆಯ ವಿಷಯ ಚರ್ಚೆಯಾಗಿದೆ. ಆ ದಿನ ಮೈಸೂರಿನ ಪರವಾಗಿ ಮಾತನಾಡಿದವರು ಈ ಮಣ್ಣಿನಲ್ಲಿ ಹುಟ್ಟಿದವರಲ್ಲ ಮತ್ತು ಇಲ್ಲಿನ ಯಾವ ಜಾತಿಗೂ ಸಹ ಸೇರಿದವರಲ್ಲ. ಬ್ರಿಟಿಷ್ ಪ್ರತಿನಿಧಿಯೊಬ್ಬರು ಮೈಸೂರಿನ ಮಹಾರಾಜರ ಮುಂದೆ ವಾದ ಮಾಡುತ್ತಾ, ಯಾವ ಭೂಮಿಯ ಮೇಲೆ ಮಳೆ ಬೀಳುತ್ತದೆಯೊ ಆ ಭೂಮಿಗೆ ನೀರನ್ನು ಕೊಡುವುದಕ್ಕೆ ಸಾಧ್ಯವಿಲ್ಲ. ಇದನ್ನು ತಮಿಳುನಾಡು ರಾಜ್ಯಕ್ಕೆ ತೆಗೆದುಕೊಂಡು ಹೋಗಿ ಕೊಡಬೇಕೆನ್ನತಕ್ಕಂಥ ವಾದವನ್ನು ಯಾವ ದಡ್ಡ ಕೂಡಾ ಒಪ್ಪುವುದಿಲ್ಲ ಎಂದು ವಾದಿಸಿದರು. ನಾನು ಈ ಮಾತನ್ನು ಏಕೆ ಹೇಳುತ್ತಿದ್ದೇನೆಂದರೆ, ೧೯೨೪ರಲ್ಲಿ ಅಗ್ರಿಮೆಂಟ್ ಆದಮೇಲೆ ಸರ್ ಎಂ. ವಿಶ್ವೇಶ್ವರಯ್ಯನವರು ಮತ್ತು ಶ್ರೀ ಮಿರ್ಜಾ ಇಸ್ಮಾಯಿಲ್ ಅವರು ದಿವಾನರಾಗಿದ್ದಂಥ ಕಾಲದಲ್ಲಿ. ಕಾವೇರಿ ನದಿಯ ನೀರಿನ ಹಂಚಿಕೆ ವಿಷಯದಲ್ಲಿ ಯಾವ ರೀತಿಯಾಗಿ ಕಿತಾಪತಿ ಮತ್ತು ತೊಂದರೆಗಳು ಇತ್ತೊ, ಅಷ್ಟೆ ತೊಂದರೆಗಳು ಇವತ್ತೂ ಕೂಡ ಇದೆ. ನಾನು ಯಾರನ್ನಾದರೂ ಕುರಿತು ಮಾತನಾಡಿದರೆ ಕೆಲವರಿಗೆ ಇಷ್ಟ ಆಗದೇ ಇರಬಹುದು. ಈ ಸಂದರ್ಭದಲ್ಲಿ ನನ್ನನ್ನೂ ಸೇರಿಸಿಕೊಂಡು ಹೇಳುವುದಾದರೆ, ನಾವೆಲ್ಲ ಮಣ್ಣಿನ ಮಕ್ಕಳು ಮತ್ತು ರೈತರ ಮಕ್ಕಳೆಂದು ಹೇಳಿಕೊಳ್ಳುತ್ತೇವೆ. ಆದರೆ ಸರ್ ಎಂ. ವಿಶ್ವೇಶ್ವರಯ್ಯನವರು ಮತ್ತು ಶ್ರೀ ಮಿರ್ಜಾ ಇಸ್ಮಾಯಿಲ್‌ರವರು ಮಣ್ಣಿನ ಮಕ್ಕಳಲ್ಲ. ಅವತ್ತಿನ ದಿವಸ ಮೈಸೂರು ರಾಜ್ಯಗಳಿಗೆ ಇದ್ದಂಥ ವ್ಯಾಜ್ಯದಲ್ಲಿ ಕೆಲಸ ನಿಲ್ಲಿಸತಕ್ಕಂಥ ಕಡತ ಮುಂದೆ ಹೋದಾಗ I have seen writings.m he has said, provide petromax lights and see the work continues for all the 24 hours.

ಇದನ್ನು ಬರೆದವರು ಮಣ್ಣಿನ ಅಥವಾ ರೈತರ ಮಕ್ಕಳಲ್ಲ. ಈ ನಾಡಿನ ರೈತರ ಬಗ್ಗೆ ಕಾಳಜಿ ಇದ್ದಂಥ ವಿಶ್ವೇಶ್ವರಯ್ಯನವರು ಬರೆದಿದ್ದಾರೆ. ಆದರೆ, ಇವತ್ತಿನ ದಿವಸ ಆ ತುಮುಲ ಮತ್ತು ನೋವು ನಮಗೆ ಇದೆಯಾ ಈ ಸಂದರ್ಭದಲ್ಲಿ ಪ್ರಾಮಾಣಿಕವಾಗಿ ಹೇಳುವಂಥದೇನೆಂದರೆ, ಕರ್ನಾಟಕ ಮಾತೆಯ ಎರಡು ಕಣ್ಣುಗಳಂತಿರುವ ಕಾವೇರಿ ಮತ್ತು ಕೃಷ್ಣೆಯರ ಮಡಿಲಿನಲ್ಲಿ ಸಮೃದ್ಧವಾದಂಥ ನೀರು ಹರಿಯಲೆಂದು ನಾನು ಭಾವಿಸಿದ್ದೆ. ಆದರೆ ಇಲ್ಲಿ ೧೧ ಲಕ್ಷ ೨೦ ಸಾವಿರ ಎಕರೆಗಿಂತ ಹೆಚ್ಚಿಗೆ ಬೇಸಾಯವನ್ನು ಮಾಡಬಾರದೆಂದು ಮಧ್ಯಂತರ ಆದೇಶದ ಕತ್ತಿಯನ್ನು ನಮ್ಮ ಮೇಲೆ ತೂಗು ಹಾಕಿದ್ದಾರೆ. ೨೦೦೨ ಇಸವಿಯೊಳಗೆ ಎಲ್ಲಾ ಕೆಲಸವನ್ನು ಮುಗಿಸಿಕೊಳ್ಳಬೇಕು ಎನ್ನತಕ್ಕಂಥ ಪರಿಸ್ಥಿತಿ ಅಲ್ಲಿದೆ. ಈ ಸಂದರ್ಭದಲ್ಲಿ, ಕರ್ನಾಟಕ ರಾಜ್ಯ ಸರ್ಕಾರದವರಲ್ಲಿ ಅತ್ಯಂತ ಹೆಮ್ಮೆಯಿಂದ ಹೇಳುವುದೇನೆಂದರೆ, ನಾನು ಬಹಳ ಹತ್ತಿರದಿಂದ ನೋಡಿಕೊಂಡು ಬಂದಂತೆ, ಎರಡು ನದಿಗಳ ನೀರಿನ ಹಂಚಿಕೆ ವಿಷಯದ ಪರಿಸ್ಥಿತಿಯನ್ನು ನೀಗಿಸಲಿಕ್ಕೆ, ಜನ ಮೆಚ್ಚುವಂತೆ ಕಾರ್ಯಕ್ರಮಗಳನ್ನು ನಮ್ಮ ಸರ್ಕಾರ ಹಮ್ಮಿಕೊಂಡಿದೆ. ಆದರೆ, ಇದು ಇಷ್ಟಕ್ಕೆ ಸಾಲದು. ಈ ಎರಡು ಕೊಳ್ಳದಲ್ಲಿರತಕ್ಕಂಥ ನೀರನ್ನು ಸಂಪೂರ್ಣವಾಗಿ ಸದುಪಯೋಗಪಡಿಸಿಕೊಳ್ಳುವುದಕ್ಕೆ ವಿಶೇಷವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕೆಂದು ಸರ್ಕಾರದವರಲ್ಲಿ ನಾನು ಪ್ರಾರ್ಥನೆ

ಮಾಡಿಕೊಳ್ಳುತ್ತೇನೆ. ೨೧ನೇ ಶತಮಾನದ ಪ್ರಥಮ ವರ್ಷದಲ್ಲಿ, ಈ ಎರಡು ನದಿಗಳ ನೀರನ್ನು ಸಂಪೂರ್ಣವಾಗಿ ಉಪಯೋಗಿಸಲು ಸಂಕಲ್ಪ ಮಾಡುವ ಮತ್ತು ನಿರ್ಧಾರ ಮಾಡತಕ್ಕಂಥ ವರ್ಷ ಆಗಲೆಂದು ಆಶಿಸುತ್ತೇನೆ. ಆದರೆ ರೈತರ ಹಿತವನ್ನು ಕಾಪಾಡುವುದಕ್ಕೆ ಸ್ಪರ್ಧೆ ಮಾಡತಕ್ಕಂಥ ಯುಗವಾಗುವುದು ಬೇಡ ಎನ್ನುವ ವಿಷಯವನ್ನು ಹೇಳುತ್ತಾ, ಕರ್ನಾಟಕ ರಾಜ್ಯದಲ್ಲಿ ನೀರಿನ ವಿಷಯದಲ್ಲಿ ಆಗಿರುವ ಅನ್ಯಾಯದ ಪರಂಪರೆಯನ್ನು ಮುರಿಯಲಿಕ್ಕೆ ಪ್ರಯತ್ನ ಮಾಡುತ್ತಿರುವ ಈ ಸರ್ಕಾರಕ್ಕೆ ಅಭಿನಂದಿಸುತ್ತೇನೆ. ನಾನು ಇಷ್ಟು ಹೊತ್ತು ಕಾಲಹರಣ ಮಾಡಲಿಕ್ಕೆ ಮಾತನಾಡಲಿಲ್ಲ. ನನ್ನ ಮನಸ್ಸಿನ ನೋವು, ಚಿಂತನೆಯನ್ನು ನನ್ನ ಎಲ್ಲ ಸ್ನೇಹಿತರ ಜೊತೆಯಲ್ಲಿ ಆತ್ಮಪೂರಕವಾಗಿ ಹಂಚಿಕೊಳ್ಳಬೇಕೆಂಬ ಸದುದ್ದೇಶದಿಂದ ನಾನು ಮಾತನಾಡಿದ್ದೇನೆ.

## ಕೃಷಿ ಮತ್ತು ನೀರಾವರಿ

೩ನೇ ಮಾರ್ಚ್ ೧೯೮೪

ಮಾನ್ಯ ಅಧ್ಯಕ್ಷರೇ, ಭಾರತದೇಶದಲ್ಲಿ ವ್ಯವಸಾಯ ಬಹಳ ಪ್ರಧಾನವಾದುದು. ಈ ದೇಶದಲ್ಲಿ ವ್ಯವಸಾಯಗಾರನಿಗೆ ನೀರಿನ ಪ್ರಾಮುಖ್ಯತೆ, ನೀರಿನ ಅವಶ್ಯಕತೆ ಎಷ್ಟು, ಇರಬೋಕೋ ಅಷ್ಟು ಇಲ್ಲ ಅನ್ನುವುದನ್ನು ಒತ್ತಿ ಹೇಳುವ ಅವಶ್ಯಕತೆ ಇಲ್ಲ. ವ್ಯವಸಾಯದಾರನಿಗೆ ಉತ್ತಮ ಬೀಜ ಮತ್ತು ಉತ್ತಮವಾದ ಗೊಬ್ಬರ ಕೊಟ್ಟರೂ ಕೂಡ ಅವನಿಗೆ ನೀರು ಇಲ್ಲದೇ ಹೋದರೆ, ನೀರನ್ನು ಸಾಕಷ್ಟು ಒದಗಿಸದೇ ಹೋದರೆ ಅವನ ಬೆಳೆಯೆಲ್ಲಾ ಹಾಳಾಗಿ ಹೋಗುತ್ತದೆ. ಇಂಥಾ ಒಂದು ದಾರುಣ ಪರಿಸ್ಥಿತಿಯನ್ನು ನಾವು ಪ್ರತಿವರ್ಷವೂ ನೋಡುತ್ತಾ ಇದ್ದೇವೆ. ಈ ಒಂದು ಪರಿಸ್ಥಿತಿಯನ್ನು ನೀಗಲಿಕ್ಕಾಗಿ ಕಾವೇರಿ ನದಿ ಮತ್ತು ಹೇಮಾವತಿ ನದಿಗೆ ಅಣೆಕಟ್ಟನ್ನು ಕಟ್ಟುವ ಒಂದು ಯೋಜನೆಯನ್ನು ಸುಮಾರು ೧೯೬೮ರಲ್ಲಿ ಪ್ರಾರಂಭ ಮಾಡಿ ೧೯೮೦ರಲ್ಲಿ ಮುಗಿಸಿದರು. ಈ ಒಂದು ಯೋಜನೆಗೆ ಇವತ್ತಿನ ವೆಚ್ಚ ೩೮೬ ಕೋಟಿ ರೂಪಾಯಿಗಳು. ಈ ಒಂದು ಯೋಜನೆಯ ಪ್ರಕಾರ ೬ ಲಕ್ಷ ೫೫ ಸಾವಿರ ಎಕರೆ ಭೂಮಿಗೆ ನೀರನ್ನು ಉಣಿಸಿ ರೈತ ಒಂದು ಆರ್ಥಿಕ ಪರಿಸ್ಥಿತಿಯನ್ನು ಉತ್ತಮ ಪಡಿಸಬೇಕಾಗಿತ್ತು. ರೈತನಿಗೋಸ್ಕರ ಈ ಒಂದು ಯೋಜನೆಯನ್ನು ರೂಪಿಸಲಾಯಿತು.

ಇದು ೧೯೬೮ರಲ್ಲಿ ಮೊದಲು ಪ್ರಾರಂಭ ಮಾಡಿದರೂ ಕೂಡ, ೧೯೭೩ನೇ ಇಸವಿಗೆ ತುಮಕೂರು ಜಿಲ್ಲೆಯ ಗುಬ್ಬಿ, ತಿಪಟೂರು, ತುಮಕೂರು ಮತ್ತು ಕುಣಿಗಲ್ ಇವರ ಜೊತೆಗೆ ಮಂಡ್ಯ ಜಿಲ್ಲೆ ಯಾವಾಗಲೂ ಬರಗಾಲ ಇರುವ ನಾಗಮಂಗಲ ತಾಲ್ಲೂಕಿನ ಕೆಲವು ಸ್ಥಳಗಳಿಗೆ ಈ ನೀರನ್ನು ಕೊಡಬೇಕೆನ್ನುವ ತೀರ್ಮಾನವನ್ನು ತೆಗೆದುಕೊಳ್ಳಲಾಯಿತು. ಇದು ದುರಾದೃಷ್ಟವೋ ಅದೃಷ್ಟವೋ ನನಗೆ ಗೊತ್ತಿಲ್ಲ. ೧೯೭೩ನೇ ಇಸವಿಗೆ ಆ ಸ್ಥಳಗಳಿಗೆ ಈ ನೀರನ್ನು ಕೊಡಬೇಕೆನ್ನುವ ತೀರ್ಮಾನ ತೆಗೆದುಕೊಂಡಿದ್ದರೂ ಕೂಡ ಈ ಸ್ಥಳಗಳಿಗೆ ನೀರನ್ನು ಒದಗಿಸಲಿಲ್ಲ. ಅಷ್ಟೇ ಅಲ್ಲ, ಬಾಗೂರು ನವಿಲೆ ಸುರಂಗ ಮಾರ್ಗವನ್ನೂ ಸಹ ತೋಡುವ ಕೆಲಸವನ್ನೂ ಸಹ ೧೯೭೯ನೇ ಇಸವಿಯವರೆಗೂ ಮಾಡಲಿಲ್ಲ. ಈ ರೀತಿಯಾಗಿ ಇದುವರೆಗೆ ಈ ಯೋಜನೆಯಲ್ಲಿ ಹಿಡದಿಟ್ಟಿರುವ ನೀರನ್ನು ಉಪಯೋಗಿಸಿಕೊಳ್ಳದೇ ಇರುವುದು ನಮ್ಮ ದುರಾದೃಷ್ಟಕರ ಎಂದು ಹೇಳಬೇಕಾಗಿದೆ.

ಈ ಪರಿಸ್ಥಿತಿಯನ್ನು ನಾವು ನೋಡಿದಾಗ ಈ ಬಗ್ಗೆ ತೀರ್ಮಾನ ತೆಗೆದುಕೊಂಡು ೬ ವರ್ಷವಾದರೂ ಕೂಡ ಈ ಬಾಗೂರು ನವಿಲೆ ಸುರಂಗ ಮಾರ್ಗವನ್ನು ಇದುವರೆಗೂ ಏತಕ್ಕೆ ಮಾಡಲಿಲ್ಲ ಈ ಬಗ್ಗೆ ಹಿಂದಿನ ಸರ್ಕಾರವೇ ಆಗಲಿ, ಯಾವ ಸರ್ಕಾರವೇ ಆಗಲಿ, ಇವೊತ್ತಿನ ದಿವಸ ಇದಕ್ಕೆ ಉತ್ತರ ಹೇಳಬೇಕು ಎಂದು ನಾನು ಬಯಸುತ್ತೇನೆ. ಲಕ್ಷಾಂತರ ಜನರ ರೈತರ ಪರವಾಗಿ ನಾನು ಈ ಮಾತನ್ನು ಕೇಳುತ್ತಿದ್ದೇನೆ. ಈ ಅವಧಿಯಲ್ಲಿ ಈ ಕೆಲಸ ಮಾಡದೇ ಇರುವುದರಿಂದ ನನಗೆ ಅಪಾರವಾದ ದುಃಖವಾಗುತ್ತದೆ. ೬ ಲಕ್ಷದ ೫೫ ಸಾವಿರ ಎಕರೆಗೆ ನೀರು ಒದಗಿಸುವಂಥಾ ಈ ಯೋಜನೆಯನ್ನು ಯಾಕೆ ರೂಪಿಸಲಿಲ್ಲ ಎಂದು ಅಧಿಕಾರ ಸ್ಥಾನದಲ್ಲಿರುವವರನ್ನು ನಾವು ಕೇಳಬೇಕಾಗಿದೆ. ಮತ್ತು ಅಧಿಕಾರ ಮಾಡಬೇಕು ಎಂದು ಬುಡಬುಡಿಕೆ ಹೊಡೆದುಕೊಂಡು ತಿರುಗಾಡುತ್ತಾ ಇರತಕ್ಕಂಥಾ ರಾಜಕಾರಣಿಗಳನ್ನು ನಾನು ಪ್ರಶ್ನೆ ಮಾಡುತ್ತೇನೆ. ಮೊದಲು ೬ ಲಕ್ಷ ೫೫ ಸಾವಿರ ಎಕರೆಗೆ ನೀರನ್ನು ಕೊಟ್ಟು, ಉಳಿದ ೫ ಲಕ್ಷ ೭೫ ಸಾವಿರ ಎಕರೆಗೆ ನೀರನ್ನು ಕೊಡುವ ಹಾಗೆ ಯೋಜನೆಯನ್ನು ರೂಪಿಸಿದ್ದಾರೆ. ಅವರು ಅಧಿಕಾರದಲ್ಲಿರುವಾಗ ಈ ಒಂದು ಯೋಜನೆಯನ್ನು ರೂಪಿಸಲು ಅಧಿಕಾರ ಚಲಾಯಿಸಿದಂಥಾ ರಾಜಕಾರಿಣಿಗಳು ಏನು ಇದ್ದಾರೆ, ಆ ಕಾಲದಲ್ಲೇ ಅವರು ಏನೂ ಮಾಡಲಿಲ್ಲ. ಇಂದಿನ ಪರಿಸ್ಥಿತಿ ನೋಡಿದರೆ ಇನ್ನು ೧೦ ವರ್ಷವಾದರೂ ಕೂಡ ಈ ಕಾಲುವೆ ಕೆಲಸಗಳು ಮುಗಿಯುವುದಕ್ಕೆ ಸಾಧ್ಯವಾಗುವುದಿಲ್ಲ. ೧೯೮೦ನೇ ಇಸವಿಯಲ್ಲಿ ಪ್ರಾರಂಭ ಮಾಡಿದರೂ ಇನ್ನೂ ಮುಗಿದಿಲ್ಲ. ೧೯೯೦ನೇ ಇಸವಿಯಾದರೂ ಮುಗಿಯುವುದಿಲ್ಲ. ಇಲ್ಲಿ ೧೯೮೦ನೇ ಇಸವಿಯಿಂದ ೧೯೯೦ನೇ ಇಸವಿಯವರೆಗೆ ೫ ಲಕ್ಷ ೯೦ ಸಾವಿರ ಎಕರೆಗೆ ನೀರು ಕೊಟ್ಟಿದ್ದರೆ ಎಷ್ಟು ಬೆಳೆಯುತ್ತಿತ್ತು ಅನ್ನುವುದನ್ನು ಲೆಕ್ಕಾಚಾರ ಹಾಕಿ ನೋಡಿದರೆ, ಎಷ್ಟು ಉತ್ಪನ್ನ ನಷ್ಟವಾಗಿದೆ ಅನ್ನುವುದನ್ನು ತಿಳಿದುಕೊಳ್ಳಬಹುದು.

ಅದರಿಂದ ಬರುವ ಆದಾಯ ಎಷ್ಟು? ಇದರಿಂದ ದೇಶದ ಬೊಕ್ಕಸಕ್ಕೆ ಬರುತ್ತಿದ್ದಂಥ ಹಣ ಎಷ್ಟು? ರೈತನ ಕಣಜಕ್ಕೆ ಹಾನಿಮಾಡಿದಂಥ ಅಧಿಕಾರಿಯಾಗಲೀ, ಸರ್ಕಾರವಾಗಲೀ ಚಟ್ಟಿಯ ಬಡ ರೈತನ ಶಾಪಕ್ಕೆ ತುತ್ತಾಗದೇ ಇರುವುದಿಲ್ಲ. ಇವತ್ತು ಕಟ್ಟೆಯನ್ನು ೫ ಲಕ್ಷ ೯೦ ಸಾವಿರ ಎಕರೆಗೆ ಬೇಕಾಗುವಷ್ಟು ನೀರು ಇದೆ. ಇಂಥ ಒಂದು ಕೆಟ್ಟ ವ್ಯವಸ್ಥೆಯನ್ನು ಮಾಡಿದವರು ಯಾರೇ ಇರಲಿ ಜನತಾ ಸರ್ಕಾರದವರಿರಲಿ ತುತ್ತು ಅನ್ನ ಇಲ್ಲದೇ ನರಳುತ್ತಿರುವ ಬಡ ರೈತನ ಶಾಪಕ್ಕೆ ಗುರಿಯಾಗುತ್ತೀರೆಂದು ಖಡಾಖಂಡಿತವಾಗಿ ಹೇಳುತ್ತೇನೆ. ಇದಕ್ಕೆ ರಾಜಕೀಯ ಬಣ್ಣವನ್ನು ಕೊಡುವುದು ಬೇಡ. ಉಳಿದಿರುವಂಥ ನೀರನ್ನು ಉಪಯೋಗಿಸಿಕೊಳ್ಳುವ ದಿಸೆಯಲ್ಲಿ ಸೂಕ್ತ ಕ್ರಮವನ್ನು ಮಾನ್ಯ ಮಂತ್ರಿಗಳು ಕೈಗೊಳ್ಳಬೇಕೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ.

ಸ್ವಾಮಿ, ಮಾನ್ಯ ಮಂತ್ರಿಯವರು ನಮ್ಮನ್ನು ಸ್ಥಳಕ್ಕೆ ಕರೆದುಕೊಂಡು ಹೋಗಿದ್ದರು. ತುಮಕೂರು ಜಿಲ್ಲೆಗೆ ನೀರು ಕೊಡುವುದಕ್ಕೆ ನಿಧಾನವಾಗಿರುವುದಕ್ಕೆ ಕಾರಣ ಏನು ಎನ್ನುವುದನ್ನು ತೋರಿಸಲಿಕ್ಕೆ ಕರೆದುಕೊಂಡು ಹೋಗಿದ್ದರು. ಬಹಳ ಪ್ರಮುಖವಾದ ಕಾರಣ ಬಾಗೂರು ನವಿಲೆ ಸುರಂಗ ಮಾರ್ಗದ ಉದ್ದ ಸುಮಾರು ೯ ಕಿಲೋಮೀಟರುಗಳು. ಸುರಂಗ ಮಾರ್ಗದ ಕೆಲಸ ಮಾಡಬೇಕೆಂದು ತೀರ್ಮಾನವಾದುದು ೧೯೭೩ರಲ್ಲಿ. ಕೆಲಸ ಪ್ರಾರಂಭವಾದುದು ೧೯೭೮ರಲ್ಲಿ. ೧೯೭೮ರಿಂದ ಇಲ್ಲಿಯವರೆಗೆ ೧,೩೦೦ ಮೀಟರ್ ಕೆಲಸ ಮಾತ್ರ ಆಗಿದೆ. ಶೇಕಡ ೫೦ ಭಾಗದ ಕೆಲಸ ಕೂಡ ಆಗಿಲ್ಲ. ತುಮಕೂರು ಜಿಲ್ಲೆಗೆ ನೀರು ಕೊಡಬೇಕೇ? ಕೊಡಬಾರದೇ? ಕೊಡಲೇಬಾರದು ಎನ್ನುವ ಪ್ರಶ್ನೆಯನ್ನೂ ರಾಜಕಾರಣಿಗಳು ಎತ್ತಿದ್ದಾರೆ. ಸುರಂಗ ಮಾರ್ಗದ ಕೆಲಸ ನಿಧಾನವಾಗಿರುವುದಕ್ಕೆ

ನಿಜವಾದಂಥ ಕಾರಣ ಏನು ಎನ್ನುವುದನ್ನು ಮಾನ್ಯ ಮಂತ್ರಿಗಳಿಂದ ನಾನು ತಿಳಿಯಬಯಸುತ್ತೇನೆ. ತುಮಕೂರು ಜಿಲ್ಲೆಯ ಕೆಲವರು ಪ್ರತಿಭಾವಂಥ ದೊಡ್ಡ ರಾಜಕಾರಣಿಗಳ ಪ್ರಕಾರ, ಶ್ರೀಮಾನ್ ದೇವೇಗೌಡರು ಹಾಸನ ಜಿಲ್ಲೆಯವರು ಹಾಸನ ಜಿಲ್ಲೆಯ ರೈತರಿಗೆ ಅನುಕೂಲ ಮಾಡಿಕೊಡಲು ತುಮಕೂರು ಜಿಲ್ಲೆಯ ರೈತರಿಗೆ ದ್ರೋಹ ಮಾಡುತ್ತಿದ್ದಾರೆ. ಅದಕ್ಕಾಗಿ ಸುರಂಗ ಮಾರ್ಗದ ಕೆಲಸವನ್ನು ನಿಧಾನ ಮಾಡುತ್ತಿದ್ದಾರೆ. ಬೇಕೆಂದೆ ಕೆಲಸ ಸ್ಥಗಿತಗೊಳಿಸಿದ್ದಾರೆ. ಆದ್ದರಿಂದ ಜಿಲ್ಲೆಯಾದ್ಯಂತ ರೈತರು ಹೋರಾಟ ಮಾಡಬೇಕು. ಶ್ರೀಮಾನ್ ದೇವೇಗೌಡರನ್ನು ಮಂತ್ರಿ ಪದವಿಯಿಂದ ಕಿತ್ತುಹಾಕಬೇಕು ಎನ್ನುವ ಅಪಾದನೆಯನ್ನು ಮಾಡುತ್ತಿದ್ದಾರೆ.

ನಾನು ಒಬ್ಬ ರಾಜಕಾರಣಿ ಎನ್ನುವುದನ್ನು ಮಾನ್ಯ ಬೈರಪ್ಪಾಜಿಯವರು ಮರೆಯಬಾರದು. ಚುನಾವಣೆ ಹತ್ತಿರ ಬಂದಾಗ ಬುಡಬುಡಿಕೆ ಆಡಿಸಿಕೊಂಡು ನಾನು ಹೋಗುತ್ತೇನೆ. ಸೂರ್ಯಚಂದ್ರರ ಬೆಳಕು ಎಷ್ಟು ಸತ್ಯವೋ, ಅಷ್ಟೇ ಸತ್ಯ ನಾನು ಒಬ್ಬ ರಾಜಕಾರಣಿ ಎನ್ನುವುದು. ಯಾವುದೇ ಒಬ್ಬ ವ್ಯಕ್ತಿಯಾಗಲಿ, ಗುಂಪಿಗಾಗಲಿ ಕುರಿತು ನಾನು ಮಾತನಾಡುತ್ತಿಲ್ಲ. ಸ್ವಾಮಿ, ಬಾಗೂರು ನವಿಲೆ ಸುರಂಗ ಮಾರ್ಗದ ಕೆಲಸ ನನ್ನ ಮಿತ್ರರು ಹೇಳಿದಂತೆ ನಿಧಾನವಾಗಿದ್ದರೆ ನಿಧಾನವಾಗಿರುವುದಕ್ಕೆ ಅವರು ಹೇಳಿರತಕ್ಕಂಥ ಕಾರಣ ಇದ್ದರೆ, ದಯವಿಟ್ಟು ಆ ಕೆಲಸವನ್ನು ಆದಷ್ಟು ಜಾಗ್ರತೆ ಮುಗಿಸಿ ತುಮಕೂರು ಜಿಲ್ಲೆಯ ಬಡ ರೈತನ ಜಮೀನಿಗೆ ನೀರು ಕೊಡಿಸಿ, ಒಳ್ಳೆಯ ಹೆಸರು ಪಡೆಯಿರಿ ಎಂದುಹೇಳುತ್ತೇನೆ. ಸುರಂಗದ ಕೆಲಸವನ್ನು ಚುರುಕಾಗಿ ಮಾಡುವುದಕ್ಕೆ ಸಾಧ್ಯವಿಲ್ಲ. ಬಲವಾದಂಥ ಭೂಮಿ ಸಿಗದೆ ಜಿಯಾಲಜಿಕಲ್ ಫಾಲ್ಟ್ ಸಿಕ್ಕಿದ್ದರಿಂದ ನಿಧಾನವಾಗುತ್ತಿದೆ ಎನ್ನುವ ಕಾರಣ ಹೇಳುತ್ತಿದ್ದೀರಿ. ನನ್ನ ಹತ್ತಿರ ಸಂಪೂರ್ಣ ಮಾಹಿತಿ ಇಲ್ಲ. ೧೦ ಕೋಟಿ ರೂಪಾಯಿ ವೆಚ್ಚದ ಹಾರಿಸಾಂಟಲ್ ಬೋಟ್ ತರಿಸಿ, ಶೀಘ್ರವಾಗಿ ಕೆಲಸವನ್ನು ಮುಗಿಸಬೇಕೆಂದು ಹೇಳುತ್ತೇನೆ. ೧೦ ಕೋಟಿ ರೂಪಾಯಿ ಖರ್ಚು ಮಾಡಿತಂದರೆ ನಮ್ಮ ರಾಜ್ಯಕ್ಕೆ ಕೆಲಸ ಮಾಡಿಸಿಕೊಡುವುದಲ್ಲದೆ ಪಕ್ಕದ ರಾಜ್ಯಗಳಿಗೂ ಅದನ್ನು ಕೊಡಬಹುದು.

೧೯೮೦ರಲ್ಲಿ ಕೆಲಸ ಮುಗಿದರೂ ಇವತ್ತಿನವರೆಗೂ ರೈತರ ಜಮೀನಿಗೆ ನೀರು ಕೊಡುವುದಕ್ಕಾಗಿಲ್ಲ. ಹಿಂದಿನ ಸರ್ಕಾರದ ಪ್ರಕಾರ. ಸುರಂಗದ ಕೆಲಸ ಮುಗಿದ ಮೇಲೆ ತುಮಕೂರು ಜಿಲ್ಲೆಯಲ್ಲಿ ಕೆಲಸ ಪ್ರಾರಂಭ ಮಾಡುತ್ತೇವೆ. ಸುರಂಗದ ಕೆಲಸೊಂದೆರಡು ವರ್ಷಗಳಲ್ಲಿ ಮುಗಿಯುವ ಸೂಚನೆ ಕಂಡುಬಂದ ಮೇಲೆ, ಕಾಲುವೆ ಕೆಲಸ ಪ್ರಾರಂಭ ಮಾಡುತ್ತೇವೆಂದು ಹೇಳಿದ್ದಾರೆ. ಯೋಜನಾ ಇಲಾಖೆಯಲ್ಲಿ ಒಂದು ಕಾನೂನು ಇದೆ. ಇವತ್ತು ಹಣ ಖರ್ಚು ಮಾಡಿದರೆ ಮೂರು ವರ್ಷಗಳಲ್ಲಿ ಹಾಕಿದ ಹಣಕ್ಕೆ ಪ್ರತಿಫಲ ಬರಬೇಕೆಂದು ಇದೆ. ಆ ರೀತಿಯಾಗಿ ಆಗದಿದ್ದರೆ ಹುಚ್ಚುತನ, ದಡ್ಡತನ ಎಂದು ಕರೆಯಬೇಕೆಂದು ಇದೆ. ಈ ಯೋಜನೆಯನ್ನು ಮಾಡಿದಂಥವರಿಗೆ ಈ ಪ್ರಜ್ಞೆ ಇದ್ದಿದ್ದರೆ ೧೯೮೦ರ ಅಣೆಕಟ್ಟು ಮುಗಿಯುವಷ್ಟರಲ್ಲಿ ಕಾಲುವೆಗಳ ಕೆಲಸವನ್ನು ಮುಗಿಸಬೇಕಾಗಿತ್ತು. ಇಂಥ ದಡ್ಡ ಯೋಜನೆ, ದಡ್ಡತೀರ್ಮಾನವನ್ನು ಅಧಿಕಾರಿಗಳು ಏತಕ್ಕೆ ತೆಗೆದುಕೊಂಡರೋ ಗೊತ್ತಿಲ್ಲ. ಮೂರು ವರ್ಷಕ್ಕೆ ಹಣ ಹಿಂದಿರುಗಿ ಬರಬೇಕೆಂದು ಕಾನೂನು ಇದ್ದರೂ ಏತಕ್ಕೆ ಪರಿಗಣಿಸಲಿಲ್ಲ. ಇವತ್ತು ಮಾನ್ಯ ಮಂತ್ರಿಯವರ ಮೇಲೆ ಗುರುತರವಾದ ಅಪವಾದ ಇದೆ. ಮೊದಲು ನನ್ನ ಮನೆ, ನನ್ನ ಮಕ್ಕಳ ವಿದ್ಯಾಭ್ಯಾಸ ನನ್ನ ಗದ್ದೆಗೆ ನೀರು ಬರಬೇಕೆಂದು ಬಯಸುವುದು ಸಹಜವಾದಂಥ ಮನೋಭಾವ ಎಂದು ನಾನು ನಂಬಿದ್ದೇನೆ. ಮಾನವ ಸಹಜವಾದಂಥ ಮನೋಭಾವ ಮಾನ್ಯ ಮಂತ್ರಿಗಳಿಗೆ ಇಲ್ಲವೆಂದು ತೋರಿಸಿಕೊಡಬೇಕಾದರೆ, ಆದಷ್ಟು ಕೂಡಲೇ ತುಮಕೂರು ಜಿಲ್ಲೆಯಲ್ಲಿ

ಒಂದು ಡಿವಿಷನ್ ಮಾಡಿ ಕಾಲುವೆಗಳ ಕೆಲಸ ಮಾಡುವಂಥ ತೀರ್ಮಾನ ಹಾಕಿಕೊಳ್ಳಬೇಕಾಗುತ್ತದೆ.

ನಾನು ಇದನ್ನು ಬಹು ಕಟ್ಟುವಾಗಿ ಹೇಳುತ್ತಿದ್ದೇನೆ. ಅನುಮಾನ ಪರಿಹಾರ ಮಾಡುತಕ್ಕಂಥ ಕೆಲಸವನ್ನು ಕೂಡಲೇ ಮಾಡಬೇಕಾಗುತ್ತದೆ. ಈ ಯೋಜನೆಯ ಕೆಲಸ ನಿಧಾನವಾಗಲಿಕ್ಕೆ ಎರಡು ಕಾರಣಗಳಿರಬಹುದು. ಮೊದಲನೆಯದಾಗಿ ಹಣದ ಕಾರಣವಿರಬಹುದು. ಎರಡನೆಯದಾಗಿ: ತಾಂತ್ರಿಕ ದೋಷಗಳು ಕಾರಣವಿರಬಹುದು. ದೋಷಗಳ ತೊಂದರೆಗಳನ್ನು ತಪ್ಪಿಸಲಿಕ್ಕೆ ಏನು ಮಾಡಬೇಕು ಎನ್ನುವುದನ್ನು ಈ ಸದನದ ಗಮನಕ್ಕೆ ತಂದಿದ್ದೇನೆ. ಎರಡನೆಯದಾಗಿ ಈ ಯೋಜನೆಗೆ ಕೊಟ್ಟಿರುವಂಥಾ ಹಣದಿಂದ ಈ ಯೋಜನೆಯ ಕೆಲಸ ಸ್ಥಗಿತಗೊಂಡಿದೆ. ವೇಗದ ಮಿತಿ ಕಡಿಮೆಯಾಗಿದೆ ಎಂದು ಹೇಳುವುದಾದರೆ, ಅದರ ಬಗ್ಗೆ ಹಣ ಕೊಟ್ಟಿರತಕ್ಕದ್ದನ್ನು ಸಹ ನೋಡಿದರೆ, ಅದೂ ಸಹ ಸರಿಯಿಲ್ಲವೆಂದು ಅನ್ನಿಸುತ್ತದೆ. ಏತಕ್ಕೆಂದರೆ, ಈ ಯೋಜನೆಗೆ ತೆಗೆದಿಟ್ಟಿರತಕ್ಕ ಹಣ ೧೯೮೦-೮೧ರಲ್ಲಿ ೧೦ ಕೋಟಿ ರೂ.ಗಳು. ೧೯೮೧-೮೨ರಲ್ಲಿ ೧೧ ಕೋಟಿ ರೂ.ಗಳು. ೧೯೮೩-೮೪ರಲ್ಲಿ ೨೦ ಕೋಟಿ ರೂ.ಗಳು. ೧೯೮೪-೮೫ರಲ್ಲಿ ೩೫ ಕೋಟಿ ರೂ.ಗಳನ್ನು ಒದಗಿಸಿದೆ. ಇದನ್ನು ನೋಡಿದಾಗ ಬಹುಶಃ ಶ್ರೀಮಾನ್ ದೇವೇಗೌಡರವರು ಈ ಕೆಲಸವನ್ನು ಸ್ಥಗಿತಗೊಳಿಸುವುದಕ್ಕೆ ಹಣವನ್ನು ಕೊಟ್ಟಿಲ್ಲವೆಂದು ಹೇಳುವುದಾದರೆ, ಈ ಅಂಕಿ-ಸಂಖ್ಯೆಗಳಿಂದ ಆ ವಾದವನ್ನು ಸಹ ಒಪ್ಪುವುದಕ್ಕಾಗುವುದಿಲ್ಲ. ಇನ್ನೊಂದು ವಾದವಿದೆ ಅದು ಏನೆಂದರೆ, ತುಮಕೂರು ಜನರಿಗೆ, ರೈತರಿಗೆ ನೀರು ಸಿಕ್ಕದ ಹಾಗೆ ಮಾಡಲಿಕ್ಕೆ ಹಾಸನ ಜಿಲ್ಲೆಯಲ್ಲಿ ಅನೇಕ ಏತದ ನೀರಾವರಿ ಕಾಮಗಾರಿಗಳನ್ನು ಕೈಗೊಂಡಿದ್ದಾರೆ ಎಂದೂ ಇದೆ. ಈ ವಾದವನ್ನು ಇವತ್ತು ನಮ್ಮ ಮುಂದಿಟ್ಟಿದ್ದಾರೆ. ಕಾನೂನಿನ ದೃಷ್ಟಿಯಿಂದ ಈ ವಾದ ಸರಿಯಲ್ಲ. ಆದರೆ ಅಲ್ಲಿ ನಿಜವಾದ ಪರಿಸ್ಥಿತಿ ಏನಿದೆ ಎನ್ನುವುದನ್ನು ಸರ್ಕಾರದ ಗಮನಕ್ಕೆ ತರಬೇಕಾಗುತ್ತದೆ. ಸನ್ಮಾನ್ಯ ಅಧ್ಯಕ್ಷರೆ, ಈ ಯೋಜನೆಯಲ್ಲಿ ನಮಗೆ ಸಿಕ್ಕಿರುವಂಥಾ ನೀರು ಎಷ್ಟು? ನಾವು ಎಷ್ಟು ಉಪಯೋಗಿಸಿಕೊಳ್ಳುತ್ತೇವೆ? ಇನ್ನು ಎಷ್ಟು ನೀರು ಉಳಿಯುತ್ತದೆ? ಎನ್ನುವ ಬಗ್ಗೆ ನಾನು ಶ್ರಮಪಟ್ಟು ಕೆಲವು ಅಂಕಿ-ಅಂಶಗಳನ್ನು ಸಂಗ್ರಹಣೆ ಮಾಡಿಕೊಂಡು, ಈ ಸದನದ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ಹೇಮಾವತಿ ಯೋಜನೆಗೆ ಕಾವೇರಿ ನದಿಯಿಂದ ನಮಗೆ ಸಿಗುವಂಥಾ ನೀರು ಎಷ್ಟು ಅಂದರೆ....

**(ಸದಸ್ಯರುಗಳಿಂದ ಅಡಚಣೆ)**

ಅಧ್ಯಕ್ಷರೇ, ಕರ್ನಾಟಕ ರಾಜ್ಯದ ಹಿತವನ್ನು ಕಾಪಾಡುವುದರಲ್ಲಿ ಮಾನ್ಯ ಸದಸ್ಯರುಗಳಿಗೆ ಏನು ಆತುರವಿದೆಯೋ, ನಮಗೂ ಅದೇ ಆತುರ-ಕಾತುರವಿದೆ. ಹೇಮಾವತಿ ನದಿಯಿಂದ ಉಪಯೋಗಿಸಿಕೊಳ್ಳತಕ್ಕ ನೀರಿನ ಬಗ್ಗೆ ಹೇಳುವುದಾದರೆ, ೫೫ ಏತದ ನೀರಾವರಿಯನ್ನು ಉಪಯೋಗಿಸಿಕೊಳ್ಳುತ್ತಿದ್ದೇವೆ. ಅನಂತರ ಯಗಚಿಯಿಂದ ನೀರನ್ನು ಉಪಯೋಗಿಸಿಕೊಳ್ಳುತ್ತಿದ್ದೇವೆ. ಇಷ್ಟೆಲ್ಲಾ ನೀರನ್ನು ಉಪಯೋಗ ಮಾಡಿದ ಮೇಲೂ ನಮಗೆ ಏನಾದರೂ ನೀರು ಕಡಿಮೆಯಾಗಿದೆಯೆ? ಎನ್ನುವ ಬಗ್ಗೆ ನಾನು ಅಂಕಿ-ಅಂಶಗಳನ್ನು ಕೊಡುವುದಕ್ಕೆ ಇಷ್ಟಪಡುವುದಿಲ್ಲ. ತುಮಕೂರಿಗೆ ನೀರನ್ನು ಕೊಡಲು ಯಾವುದೇ ಧಕ್ಕೆ ಬರುವುದಿಲ್ಲ. ಧಕ್ಕೆ ಬಾರದ ರೀತಿಯಲ್ಲಿ ಏನು ಏರ್ಪಾಡನ್ನು ಮಾಡಿಕೊಂಡಿದ್ದಾರೆ ಎನ್ನುವ ಬಗ್ಗೆ ಉತ್ತರವನ್ನು, ಮಾನ್ಯ ಮಂತ್ರಿಗಳವರು ನೀಡುತ್ತಾರೆಂದು ತಿಳಿದಿದ್ದೇನೆ.

ಅಧ್ಯಕ್ಷರೆ, ಈ ವಿಷಯವನ್ನು ನಾನು ಈ ಸದನದಲ್ಲಿ ತರುವುದಕ್ಕೆ ಉದ್ದೇಶವೇನೆಂದರೆ, ಮಾನ್ಯ ಶ್ರೀ ಬೈರಪ್ಪಾಜಿಯವರು ಹೇಳಿದ ಹಾಗೆ, ಯಾವುದೇ ರಾಜಕಾರಣವನ್ನು ತರಲಿಕ್ಕೋಸ್ಕರವಾಗಿ

ಅಥವಾ ಸರ್ಕಾರವನ್ನು ಇಕ್ಕಟ್ಟಿಗೆ ಸಿಕ್ಕಿಸುವ ದೃಷ್ಟಿಯಿಂದ ಈ ವಿಷಯವನ್ನು ನಾನು ಸದನಕ್ಕೆ ತಂದಿದ್ದು ಅಲ್ಲ. ನಾನು ಹೊಟ್ಟೆಪಾಡಿಗಾಗಿ ರಾಜಕಾರಣಮಾಡಿ ಅಧಿಕಾರಕ್ಕಾಗಿ ಅಧಿಕಾರವನ್ನೇ ನಂಬಿಕೊಂಡಿಲ್ಲ. ಮಾಡಬಾರದ್ದನ್ನು ಮಾಡಿ, ಕ್ಷುಲ್ಲಕ ರಾಜಕೀಯ ಮಾಡುವಂಥಾ ಉದ್ದೇಶದಿಂದ ನಾನು ಶಾಸಕನಾಗಿ ಬಂದಿಲ್ಲವೆಂದು ಈ ಸದನದಲ್ಲಿ ಸ್ಪಷ್ಟಪಡಿಸುವುದಕ್ಕೆ ಇಷ್ಟಪಡುತ್ತೇನೆ. ಆದುದರಿಂದ ಇದನ್ನು ಹೇಳಿದರೆ ರಾಜಕೀಯವಾಗಲಾರದು ಎಂದು ತಿಳಿದುಕೊಂಡಿದ್ದೇನೆ. ನನ್ನ ತಾಲ್ಲೂಕಿನಲ್ಲಿ ಒಂದು ಸಕ್ಕರೆ ಕಾರ್ಖಾನೆಯನ್ನು ಮಾಡಬೇಕೆಂದು ಒಂದು ಯೋಜನೆ ತಯಾರಾಯಿತು. ಸುಮಾರು ಲಕ್ಷಾಂತರ ರೂ.ಗಳ ಹಣವನ್ನು ಸಂಗ್ರಹಣೆಮಾಡಿ ಬ್ಯಾಂಕ್‌ನಲ್ಲಿಡಲಾಯಿತು. ಆದರೆ ಈ ಸಕ್ಕರೆ ಕಾರ್ಖಾನೆ ಕುಣಿಗಲ್‌ನಲ್ಲಿ ಮಾಡಲು ಆಗಲಿಲ್ಲ. ಇದಕ್ಕೆ ಕಾರಣ ಹೇಳುವುದಕ್ಕೆ ಹೋದರೆ ಶ್ರೀ ಬೈರಪ್ಪಾಜಿಯವರು ನಾವು ರಾಜಕೀಯ ಮಾಡುತ್ತೇವೆಂದು ಹೇಳುತ್ತಾರೆ. ಆದರೆ ಈ ಸಹಕಾರಿ ಸಕ್ಕರೆ ಕಾರ್ಖಾನೆ ಏತಕ್ಕೆ ನಿಂತುಹೋಯಿತು? ಯಾರ ಹಿತವನ್ನು ಕಾಪಾಡುವುದಕ್ಕೋಸ್ಕರವಾಗಿ ನಿಂತುಹೋಯಿತು? ಎನ್ನುವುದು ಅಲ್ಲಿಯ ಜನತೆಗೆಲ್ಲಾಗೊತ್ತಿದೆ. ಆದುದರಿಂದ ಅದನ್ನು ಪುನಃ ನಾನು ಇಲ್ಲಿ ಹೇಳುವುದಕ್ಕೆ ಇಷ್ಟಪಡುವುದಿಲ್ಲ.

ಶ್ರೀಮಾನ್ ದೇವೇಗೌಡರವರು ಲೋಕೋಪಯೋಗಿ ಇಲಾಖೆಯ ಮಂತ್ರಿಗಳಾಗಿದ್ದಾರೆ. ಜನತಾ ಸರ್ಕಾರ ಅಧಿಕಾರವನ್ನು ನಡೆಸುತ್ತಿದೆ. ಯಾವುದೋ ಒಂದು ರಾಜಕೀಯ ಉದ್ದೇಶದಿಂದ ಜನಗಳ ಹಿತವನ್ನು, ಸಾರ್ವಜನಿಕರ ಹಿತವನ್ನು ಅದರಲ್ಲೂ ತುಮಕೂರಿನ ಬಡ ರೈತರ ಹಿತವನ್ನು, ಕಾಪಾಡುವುದರಲ್ಲಿ ಪಕ್ಷವಾಗಲೀ ಅಥವಾ ಈಒಂದು ಶಾಸನ ಸಭೆಯಾಗಲೀ ಅಡ್ಡಬರಲಾರದು ಎನ್ನುವುದನ್ನು ನನ್ನ ಮಿತ್ರರಿಗೆ ಹೇಳುವುದಕ್ಕೆ ಇಷ್ಟಪಡುತ್ತೇನೆ. ಇದಕ್ಕೆ ಕಾರಣವಿಷ್ಟೆ, ಶ್ರೀಮಾನ್ ದೇವೇಗೌಡರು ಒಬ್ಬ ರೈತನ ಮಗನಾಗಿದ್ದಾರೆ ಎಂದು ನಾನಾದಿರೂ ತಿಳಿದುಕೊಂಡಿದ್ದೇನೆ. ರೈತ ಎಂದರೆ ಹಾಸನದವನಾಗಿರಲಿ, ಕೇರಳದವನಾಗಿರಲೀ, ಪಂಜಾಬ್‌ನವರೇ ಆಗರಲಿ ಎಲ್ಲಾ ರೈತರೂ ಒಂದೇ ಎನ್ನುವ ನಂಬಿಕೆ ಅವರಲ್ಲಿದ್ದರೆ, ಇವತ್ತಿನ ದಿವಸ ತುಮಕೂರಿನಲ್ಲಿ ಏನು ಕೆಲಸವಾಗಬೇಕಾಗಿದೆ, ಅದನ್ನು ಎಷ್ಟು ದಿವಸದಲ್ಲಿ ಮಾಡಿ ಮುಗಿಸುತ್ತಾರೆ, ಎನ್ನುವ ಬಗ್ಗೆ ನಿರ್ದಿಷ್ಟವಾದ ಹೇಳಿಕೆಯನ್ನು ಅವರು ಕೊಡಬೇಕೆಂದು ಪ್ರಾರ್ಥನೆ ಮಾಡಕೊಂಡು ನನ್ನ ಮಾತನ್ನು ಮುಗಿಸುತ್ತೇನೆ.

## ರೈತ

## ಬರಗಾಲ ಕುರಿತು

೨೦ನೇ ಮಾರ್ಚ್ ೧೯೮೩

ಮಾನ್ಯ ಅಧ್ಯಕ್ಷರೇ, ಇವತ್ತು ರಾಜ್ಯದಲ್ಲಿ ಬರಗಾಲ ಬಂದಿದೆ. ಜನತಾ ಪಕ್ಷದ ಸರ್ಕಾರ ನಿರ್ಮಾಣ ಆದಾಗ ಈ ಬರದ ಶಾಪ ಏಕೆ ತಾಂಡವವಾಡುತ್ತಿದೆ ಎಂದು ನನಗೆ ಸ್ವಲ್ಪ ವೇದನೆಯಾಗಿದೆ. ಮತ್ತು ಒಂದು ಕಡೆ ಸಂತೋಷವೂ ಆಗಿದೆ. ಕಾರಣವೇನೆಂದರೆ ನಾವೆಲ್ಲರೂ ಪುರಾಣ ಪುಣ್ಯ ಕತೆಗಳನ್ನು ನೋಡಿದ್ದೇವೆ. ಒಳ್ಳೆಯ ವ್ಯಕ್ತಿಗೆ ದೇವರಲ್ಲಿ ಸಂಪೂರ್ಣವಾಗಿ ಭಕ್ತಿ ಇಟ್ಟಿಂಥವನಿಗೆ ದೇವರು ವರ ಕೊಡುವುದಕ್ಕೆ ಮೊದಲು ಆತನ ಭಕ್ತಿ ನಿಜವೋ, ಸುಳ್ಳೋ ಎಂದು ಪರೀಕ್ಷೆ ಮಾಡುತ್ತಾನೆ. ನಮ್ಮ ಜನತಾ ಪಕ್ಷಕ್ಕೆ ರಾಜ್ಯದಲ್ಲಿ ಈ ಬರಗಾಲ ಪರಿಸ್ಥಿತಿಯನ್ನು

ಎದುರಿಸುವುದು ಒಂದು ಪರೀಕ್ಷೆಯಾಗಿದೆ ಎಂದು ನಾನು ನಂಬಿದ್ದೇನೆ. ಒಂದು ವಿಷಯವನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ಶ್ರೀಮಾನ್ ಮಲ್ಲಿಕಾರ್ಜುನ ಖರ್ಗೆಯವರು ತಾವು ಹಿಂದೆ ರೆವಿನ್ಯೂ ಮಂತ್ರಿಯಾಗಿದ್ದಾಗ ಏನೇನು ಸಾಧನೆಗಳನ್ನು ಮಾಡಿದ್ದೆವು ಎಂಬುದರ ಒಂದು ಪಟ್ಟಿಯನ್ನು ಕೊಟ್ಟಿದ್ದಾರೆ. ಅವರ ಎಲ್ಲಾ ಅಭಿವೃದ್ಧಿ ಕೆಲಸಗಳಿಗೆ, ಅವರಿಗೆ ಅವರ ಸರ್ಕಾರಕ್ಕೆ ಮತ್ತು ಅವರ ಪಕ್ಷಕ್ಕೆ ರಾಜ್ಯದ ಜನ ಚಿರಋಣಿಯಾಗಿದ್ದಾರೆ. ಅವರು ಮಾಡಿರುವ ಎಲ್ಲಾ ಕೆಲಸಗಳಿಗೆ ವಂದನೆಗಳನ್ನು ಸಲ್ಲಿಸುತ್ತಾ ಇವತ್ತಿನವರೆಗೂ ನನ್ನ ಜಿಲ್ಲೆಯಲ್ಲಿ ವಿಶೇಷವಾಗಿ ಕುಣಿಗಲ್ ಪಟ್ಟಣದಲ್ಲಿ, ಕಳೆದ ಮುವ್ವತ್ತೈದು ವರ್ಷಗಳಿಂದ ಜನರಿಗೆ ಕುಡಿಯುವ ನೀರಿನ ಸೌಕರ್ಯವಿಲ್ಲ. ಇಂತಹ ಪರಿಸ್ಥಿತಿಗೆ ಜವಾಬ್ದಾರರು ಅವರು, ಅವರ ಸರ್ಕಾರ ಮತ್ತು ಅವರ ಪಕ್ಷ ಎಂದು ನಾನು ಹೇಳುತ್ತೇನೆ. ಹಿಂದೆ ನಡೆದುಹೋಯಿತು ಎಂದು ಚಿಂತಿಸುವ ಬದಲು, ಮುಂದೆ ಏನು ಮಾಡಬೇಕು ಎನ್ನುವುದನ್ನು ನಾವೆಲ್ಲರೂ ಕೂತು ಚರ್ಚಿಸಿದರೆ ಉತ್ತಮ ಎಂದು ನನಗನ್ನಿಸುತ್ತದೆ. ಸಂಪೂರ್ಣವಾಗಿ ಬರಪೀಡಿತ ಪ್ರದೇಶಗಳಲ್ಲಿ ತುಮಕೂರು ಜಿಲ್ಲೆ ಕೂಡ ಒಂದಾಗಿದೆ. ಇಲ್ಲಿ ಕುಡಿಯುವುದಕ್ಕೆ ನೀರಿಲ್ಲ. ಸುಮಾರು ೧೫೦೦ ಹಳ್ಳಿಗಳಲ್ಲಿ ಕುಡಿಯುವ ನೀರಿಲ್ಲದೆ ಜನರು ತೊಂದರೆಗೀಡಾಗಿದ್ದಾರೆ.

ಜನತಾ ಪಕ್ಷದ ಸರ್ಕಾರದವಾಗಿರಲಿ, ಅಥವಾ ಕಾಂಗ್ರೆಸ್ ಪಕ್ಷದ ಸರ್ಕಾರವಾಗಿರಲಿ ಅಥವಾ ಇನ್ಯಾವುದೇ ಪಕ್ಷದ ಸರ್ಕಾರವಾಗಿರಲಿ, ಜನಗಳಿಗೆ ಕುಡಿಯುವ ನೀರಿನ ವ್ಯವಸ್ಥೆಯನ್ನು ಮಾಡದೆ ಇರತಕ್ಕಂತಹ ಸರ್ಕಾರ ಪ್ರಜಾಪ್ರಭುತ್ವದ ಸರ್ಕಾರವೆಂದೆನಿಸುವುದಿಲ್ಲ. ಅದು ಉತ್ತಮ ಸರ್ಕಾರವೆಂದು ಹೇಳುವುದಕ್ಕೆ ನಾನು ಇಷ್ಟಪಡುವುದಿಲ್ಲ. ಜನರಿಗೆ ಕುಡಿಯುವ ನೀರನ್ನು ಕೊಡಲೇಬೇಕಾಗುತ್ತದೆ. ಪ್ರತಿ ವರ್ಷ ಈ ಬೇಗೆಯನ್ನು ತೀರಿಸಲಿಕ್ಕೆ ಹಣವನ್ನು ಖರ್ಚು ಮಾಡಿದ್ದರೂ ಜನಗಳಿಗೆ ಕುಡಿಯುವ ನೀರನ್ನು ಒದಗಿಸಲಿಕ್ಕೆ ಸಾಧ್ಯವಾಗಿಲ್ಲ ಎಂಬುದನ್ನು ಹೇಳಬೇಕಾಗುತ್ತದೆ.

ಮಾನ್ಯ ಅಧ್ಯಕ್ಷರೇ, ತಾವೂ ಕೂಡ ತುಮಕೂರು ಜಿಲ್ಲೆಯಿಂದ ಬಂದಿರತಕ್ಕಂತಹವರು. ತಮಗೆ ಒಂದು ಸಣ್ಣ ಉದಾಹರಣೆಯನ್ನು ಕೊಡುವುದಕ್ಕೆ ಇಷ್ಟಪಡುತ್ತೇನೆ. ನನ್ನ ಕ್ಷೇತ್ರದಲ್ಲಿ ಮೊದಲಸಾರಿ ಒಂದು ಹಳ್ಳಿಯಲ್ಲಿ ಒಂದು ಮೈಲಿಯಿಂದ, ಒಂದೂವರೆ ಮೈಲಿಯ ದೂರದವರೆಗೆ ಯಾವ ಕಡೆ ಹೋದರೂ ಹಕ್ಕಿ ಕುಡಿಯುವುದಕ್ಕೂ ನೀರು ಇಲ್ಲ. ಆ ಹಳ್ಳಿಯಲ್ಲಿರತಕ್ಕಂತಹ ಮಕ್ಕಳು ಮುಖತೊಳೆದು ಎಷ್ಟು ದಿವಸವಾಗಿದೆಯೋ ಹೇಳುವುದಕ್ಕಾಗುವುದಿಲ್ಲ. ಇಂತಹ ಒಂದು ಕಠಿಣ ಪರಿಸ್ಥಿತಿ ಇದ್ದರೂ, ನಮ್ಮ ಸರ್ಕಾರಿ ಅಧಿಕಾರಿಗಳು ಏನು ಮಾಡುತ್ತಿದ್ದಾರೆಂದು ನಾನು ಇವತ್ತು ತಮ್ಮ ಮೂಲಕ ಕೇಳಬೇಕಾಗಿದೆ.

ಆ ಹಳ್ಳಿಗೆ ಹೋದಂತಹ ಸಮಯದಲ್ಲಿ ನಮ್ಮ ಜೊತೆಯಲ್ಲಿ ಗ್ರಾಮಸೇವಕರನ್ನೂ ಕರೆದುಕೊಂಡು ಹೋಗಿದ್ದೆ. ದಯಮಾಡಿ ಮಾನ್ಯಮಂತ್ರಿಗಳು ಗಮನವಿಟ್ಟುಕೇಳಬೇಕು. ಇಂತಹ ಒಂದು ಕೆಟ್ಟ ಪರಿಸ್ಥಿತಿಯನ್ನು ಮೇಲಧಿಕಾರಿಗಳಿಗೆ ಏಕೆ ವರದಿ ಮಾಡಿಲ್ಲ ಎಂಬುದಾಗಿ ನಾನು ಕೇಳಿದರೆ, ಆ ಗ್ರಾಮ ಸೇವಕರು ಹೇಳುತ್ತಾರೆ. ನಾನು ಲೋನ್ ಅಪ್ಲಿಕೇಷನ್ಸ್ ಅಟೆಂಡ್ ಮಾಡುತ್ತಿದ್ದೆ ಅಂತ. ಈಗ ಇರತಕ್ಕಂತಹ ವಿಶೇಷ ಪರಿಸ್ಥಿತಿಯ ಅರಿವು ಮತ್ತು ಅದರ ಬಗ್ಗೆ ಕಳಕಳಿ ಸರ್ಕಾರಕ್ಕಿದೆ. ಆದರೆ ಈ ಸರ್ಕಾರದ ಕೈಕೆಳಗೆ ಕೆಲಸ ಮಾಡುತ್ತಿರತಕ್ಕಂತಹ ಅಧಿಕಾರಿಗಳಿಗೆ ಹಾಗೂ ನೌಕರರಿಗೆ ಈ ವಿಶೇಷ ಪರಿಸ್ಥಿತಿಯ ಅರಿವು ಆಗಿಲ್ಲ. ಅವರು ಮೊದಲು ಬರುತ್ತಿದ್ದ ಹಾಗೆ ೧೧.೦೦ ಗಂಟೆಗೆ ಆಫೀಸಿಗೆ ಬರುತ್ತಿದ್ದಾರೆ. ಮೊದಲು ಲಂಚ ತೆಗೆದುಕೊಳ್ಳುತ್ತಿದ್ದ ಹಾಗೆ ಈಗಲೂ

ಲಂಚವನ್ನು ತೆಗೆದುಕೊಳ್ಳುತ್ತಿದ್ದಾರೆ. ಈಗಲೂ ಧಿಮಾಕಿನ ಜೀವನವನ್ನು ನಡೆಸುತ್ತಿದ್ದಾರೆ ನಮ್ಮ ಅಧಿಕಾರಿಗಳು. ಈಗ ಈ ವಿಶೇಷ ಪರಿಸ್ಥಿತಿಗೆ ಹೊಂದಿಕೊಂಡು ಕೆಲಸ ಮಾಡುವುದಕ್ಕೆ ಸಾಧ್ಯ ಇರುವ ಅಧಿಕಾರಿಗಳಿಗೆ ಎಚ್ಚರಿಕೆ ಹಾಗೂ ಬಲವನ್ನು ಕೊಡಬೇಕಾಗುತ್ತದೆ. ಆ ಒಂದು ದೃಢ ಸಂಕಲ್ಪವನ್ನು ನೀವು ಮಾಡಬೇಕಾಗುತ್ತದೆ. ಅದನ್ನು ನೀವು ಮಾಡದಿದ್ದರೆ ಕೇಂದ್ರ ಸರ್ಕಾರ ಕೊಟ್ಟಂತಹ ೧೦ ಕೋಟಿ ರೂಪಾಯಿಗಳಾಗಲಿ, ರಾಜ್ಯ ಸರ್ಕಾರ ಕೊಟ್ಟಂತಹ ೫ ಕೋಟಿ ರೂಪಾಯಿಗಳಾಗಲಿ ನಿಮ್ಮ ಖಜಾನೆಯಲ್ಲಿರುತ್ತದೆಯೇ ಹೊರತು, ಜನಗಳಿಗೆ ಅನುಕೂಲವಾಗುವುದಿಲ್ಲ. ಲೆಕ್ಕದಲ್ಲಿ ಮಾತ್ರ ಖರ್ಚಾಗುತ್ತದೆ.

ಶ್ರೀಮಾನ್ ಖರ್ಗೆಯವರು ಹೇಳುತ್ತಿದ್ದರು. ಕೊಟ್ಟಂತಹ ೧೦ ಕೋಟಿ ಹಣ ಖರ್ಚು ಮಾಡಿದ್ದೇವೆ ಎಂದು. ಕೊಟ್ಟಂತಹ ಹಣ ಖರ್ಚಾದ ತಕ್ಷಣ ಜನತೆಗೆ ಸವಲತ್ತು ಸಿಕ್ಕಿತು ಎಂದು ಅರ್ಥವಲ್ಲ. ಉದಾಹರಣೆಗೆ ಹೇಳಬೇಕೆಂದರೆ, ಕೆರೆಯಿಂದ ತೂಬಿನ ಮೂಲಕವಾಗಿ ಜಮೀನಿಗೆ ಬಿಟ್ಟಂತಹ ನೀರು ಜಮೀನಿಗೆ ಹೋಗುವ ಮೊದಲು ಕಾಲುವೆಯೇ ಎಷ್ಟೋ ನೀರನ್ನು ಕುಡಿದುಕೊಳ್ಳುತ್ತದೆ. ಜಮೀನಿಗೆ ನೀರು ಹೋಗಿರುವುದಿಲ್ಲ. ಆದರೆ ನೀರು ಖರ್ಚಾಗಿದೆ, ಬೆಳೆ ಏಕೆ ಆಗಿಲ್ಲ ಎಂಬುದಾಗಿ ಕೇಳುವಂತಹ ವಾದ ಸರಿಯಾದಂತಹ ವಾದವಲ್ಲ. ಖಜಾನೆಯಿಂದ ಹೊರಟಂತಹ ಹಣ ತಲುಪುವವರಿಗೆ ತಲುಪದೇ ಎಷ್ಟೋ ಸಾರಿ ಖರ್ಚಾಗಿರುತ್ತದೆ. ಖರ್ಚಾದಂತಹ ಹಣಕ್ಕೆ ಸರಿಸಮಾನವಾದಂತಹ ಕೆಲಸಗಳಾಗಿವೆ ಎಂಬುದಾಗಿ ನಾನು ಒಪ್ಪುವುದಕ್ಕೆ ಸಾಧ್ಯವಿಲ್ಲ. ೧೦ ಕೋಟಿ ಹಣವನ್ನು ರಿಲೀಜ್ ಮಾಡಿದ್ದೇವೆ, ೨೦ ಕೋಟಿ ಹಣವನ್ನು ರಿಲೀಜ್ ಮಾಡಿದ್ದೇವೆ, ಖಜಾನೆಯಿಂದ ತೆಗೆದುಕೊಟ್ಟಿದ್ದೇವೆ ಅಂತ ಸರ್ಕಾರ ತಿಳಿದುಕೊಂಡಿದ್ದರೂ, ಖರ್ಚಾದಂತಹ ಹಣದಿಂದ ಜನರಿಗೆ ಪ್ರಯೋಜನವಾಗಿರುವುದಿಲ್ಲ. ಆದ್ದರಿಂದ ಕೊಟ್ಟಂತಹ ಹಣದ ಸದುಪಯೋಗವಾಗಿದೆಯೇ ಎಂಬುದನ್ನು ಪರಿಶೀಲನೆ ಮಾಡುವ ಏರ್ಪಾಡನ್ನು ಮಾಡಬೇಕಾಗುತ್ತದೆ.

ಮೊದಲನೆಯದಾಗಿ ಕುಡಿಯುವ ನೀರಿಗಾಗಿ ಇರತಕ್ಕ ಕೊಳವೆ ಬಾವಿಯ ವ್ಯವಸ್ಥೆ ಸರಿ ಇಲ್ಲ. ಯಾವ ಊರಿಗೆ ಕೊಳವೆ ಬಾವಿ ಬೇಕೆಂಬ ಪಟ್ಟಿಯನ್ನು ಜಿಲ್ಲಾಧಿಕಾರಿಗಳು ಪಟ್ಟಿಯನ್ನು ತಯಾರು ಮಾಡಿದ ನಂತರ, ಸಾರ್ವಜನಿಕ ಆರೋಗ್ಯ, ಇಂಜಿನೀಯರಿಂಗ್ ಇಲಾಖೆಯವರು ಕೊಳವೆ ಬಾವಿಯನ್ನು ತೆಗೆಯಬೇಕಂತೆ. ಇದರ ಬಗ್ಗೆ ನನ್ನ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ ಒಂದು ಸಣ್ಣ ಉದಾಹರಣೆಯನ್ನು ಕೊಡುತ್ತೇನೆ. ಪರಿಸ್ಥಿತಿ ಏನಾಗಿದೆ ಎಂದರೆ, ಪಟ್ಟಿ ತಯಾರಾದಾಗ ಕೊರೆಯುವಂತಹ ರಿಗ್‌ಗಳು ಇರುವುದಿಲ್ಲ. ರಿಗ್‌ಗಳು ಬಂದು ಅಮೃತೂರುನಲ್ಲಿ ನಿಂತಿದೆ. ಜಿಲ್ಲಾಧಿಕಾರಿಗಳು ಕೊಳವೆ ಬಾವಿಗಳ ಪಟ್ಟಿಯನ್ನು ಕೊಟ್ಟಿಲ್ಲ. ಇದು ಎಂತಹ ಅವ್ಯವಸ್ಥೆಯಾಗಿದೆ ಅಂತ ಹೇಳಿದರೆ, ಈ ಪರಿಸ್ಥಿತಿಯ ತಾಪ ಅಥವಾ ಕಿಚ್ಚು ನಮ್ಮ ಅಧಿಕಾರಿಗಳಿಗೆ ತಟ್ಟಿಲ್ಲ. ಆದ್ದರಿಂದ ಯಾವ ಅಧಿಕಾರಿ ಏನನ್ನಾದರೂ ಮಾಡಿಕೊಳ್ಳಲಿ, ಕುಡಿಯುವ ನೀರಿನ ವ್ಯವಸ್ಥೆಯನ್ನು ನಮ್ಮ ಸಾರ್ವಜನಿಕ ಆರೋಗ್ಯ ಇಂಜಿನಿಯರಿಂಗ್ ಇಲಾಖೆಯವರೇ ಸ್ಥಳವನ್ನು ಸೆಲೆಕ್ಟ್ ಮಾಡಿಕೊಂಡು ಕೊರೆಯುವ ವ್ಯವಸ್ಥೆಯನ್ನು ಇನ್ನು ಮೇಲಾದರೂ ಮಾಡಬೇಕಾಗುತ್ತದೆ. ಮಾನ್ಯ ಅಧ್ಯಕ್ಷರೆ, ತುಮಕೂರು ಜಿಲ್ಲೆಯ ವಿಚಾರ ತಮಗೂ ಗೊತ್ತಿರುವ ಹಾಗೆ ಹೇಳುವುದಾದರೆ, ಇದುವರೆಗೆ ಕೊಳವೆ ಬಾವಿಗಳನ್ನು ಕೊರೆಯುವುದಕ್ಕಾಗಿ ೩ ಪಟ್ಟಿಗಳನ್ನು ಜಿಲ್ಲಾಧಿಕಾರಿಗಳು ಮಾಡಿದ್ದಾರೆ. ಮೊದಲನೇ ಪಟ್ಟಿ ೩೫ ಹಳ್ಳಿಗಳಿಗೆ ಎಂದಾಯಿತು. ನಂತರ ಅದು ೫೦ಕ್ಕೆ ಹೋಯಿತು. ಇವತ್ತು ನಮ್ಮ ಜಿಲ್ಲಾಧಿಕಾರಿಗಳು ೧೦ ಊರುಗಳಿಗೆ ಮಾತ್ರ ಕೊಳವೆ ಬಾವಿಯನ್ನು ಕೊರೆಯುವುದಕ್ಕೆ ಪ್ರಾರಂಭ ಮಾಡಿದ್ದೇವೆ ಅಂತ ಹೇಳುತ್ತಾರೆ.

ಮಾನ್ಯ ಅಧ್ಯಕ್ಷರೇ, ತಮಗೂ ಗೊತ್ತಿರುವ ಹಾಗೆ ಚುನಾವಣೆಯಾಗಿ ೩ ತಿಂಗಳಾಗಿದೆ. ಈ ಸರ್ಕಾರ ಅಸ್ತಿತ್ವಕ್ಕೆ ಬಂದು ಹೆಚ್ಚು ಕಡಿಮೆ ಮೂರು ತಿಂಗಳಾಗಿದೆ. ನಾನು ಇಲ್ಲಿಗೆ ಬಂದ ಮೇಲೆ ಏನು ಮಾಡಿದ್ದಾರೋ ಗೊತ್ತಿಲ್ಲ. ಆದರೂ ಒಂದೇ ಒಂದು ಹಳ್ಳಿಯಲ್ಲೂ ಕೊಳವೆ ಬಾವಿಯನ್ನು ತೆಗೆದಿಲ್ಲ. ಪಿ.ಎಚ್.ಇ. ಇಲಾಖೆಯವರನ್ನು ಕೇಳಿದರೆ, ಜಿಲ್ಲಾಧಿಕಾರಿಗಳು ಕೊಳವೆ ಬಾವಿಗಳನ್ನು ತೆಗೆಯಬೇಕಾಗಿರುವ ಹಳ್ಳಿಗಳ ಪಟ್ಟಿಯನ್ನು ಅಪ್ರೂವ್ ಮಾಡಬೇಕು ಅಂತ ಹೇಳುತ್ತಾರೆ. ಜಿಲ್ಲಾಧಿಕಾಗಳು ಪಟ್ಟಿಯನ್ನು ಅಪ್ರೂವ್ ಮಾಡಿದಾಗ ಪಿ.ಎಚ್.ಇ. ಇಲಾಖೆಯವರಲ್ಲಿ ಕೊರೆಯುವ ರಿಗ್ಸ್ ಇಲ್ಲ ಅಂತ ಹೇಳುತ್ತಾರೆ. ಆದ್ದರಿಂದ ನಾನು ತಮ್ಮ ಮೂಲಕ ಸರ್ಕಾರದಲ್ಲಿ ಕೆಲಸ ಮಾಡುತ್ತಿರತಕ್ಕಂತಹ ಅಧಿಕಾರಿಗಳಿಗೆ ಹೇಳುವುದೇನೆಂದರೆ, ಜನತೆಯ ಸಂಕಷ್ಟಗಳ ಜೊತೆ ಸರಸವಾಡುವುದನ್ನು ಇನ್ನಾದರೂ ಬಿಡಬೇಕು. ಬೇರೆ ಯಾವುದರ ಬಗ್ಗೆಯಾದರೂ ಸರಸವಾಡಿ, ಆದರೆ ಜನರ ಸಂಕಷ್ಟಗಳನ್ನು ಅರಿತು ಅವುಗಳನ್ನು ನಿವಾರಣೆ ಮಾಡುವಂತಹ ಮನೋಭಾವನೆಯನ್ನು ಇಟ್ಟುಕೊಳ್ಳಿ.

ನಾನು ತಮ್ಮ ಮೂಲಕ ಮಾನ್ಯ ಕಾಮಗಾರಿ ಸಚಿವರಿಗೆ ಒಂದು ಸಲಹೆ ಮಾಡುವುದೇನೆಂದರೆ, ಇಲ್ಲದೇ ಇರುವ ನೀರನ್ನು ಸೃಷ್ಟಿ ಮಾಡುವುದಕ್ಕಿಂತ ಮೊದಲು, ಇರುವಂತಹ ನೀರನ್ನು ರಕ್ಷಿಸಿಕೊಳ್ಳುವುದು ಬಹಳ ಮುಖ್ಯ. ಅನೇಕ ಕೆರೆಕಟ್ಟೆಗಳಲ್ಲಿ ಸ್ವಲ್ಪ ಸ್ವಲ್ಪ ನೀರು ಇದೆ. ಇದನ್ನು ನೋಡಿಕೊಂಡು ಬೆಳೆಗಳನ್ನು ಬೆಳೆಯುವ ಸಮಯದಲ್ಲಿ ಕೆಲವರು ಅವರತೋಟದ ಹಿಂಬದಿಯಲ್ಲಿರುವ ಜಮೀನಿನಲ್ಲಿ ಬೆಳೆಯನ್ನು ಮಾಡಿಕೊಂಡಿರುತ್ತಾರೆ. ಆದ್ದರಿಂದ ಇರುವ ನೀರನ್ನು ಕುಡಿಯುವುದಕ್ಕಾಗಿ ಉಪಯೋಗಿಸಬೇಕೇ ವಿನಃ ಇನ್ನಾವುದೇ ಉಪಯೋಗಕ್ಕಾಗಿ ನೀರನ್ನು ಉಪಯೋಗಿಸಬಾರದೆಂಬ ಕಟ್ಟುನಿಟ್ಟಿಯನ್ನು ಸರ್ಕಾರದವರು ಕೊಡಬೇಕಾಗುತ್ತದೆ.

ನನಗಿಂತ ಮುಂಚೆ ಮಾತನಾಡಿದ ಮಾನ್ಯ ಸದಸ್ಯರಾದ ಶ್ರೀಮಾನ್ ಲಕ್ಷ್ಮಯ್ಯನವರು ಹೇಳಿದ್ದಾರೆ, ನಾನೂ ಕೂಡ ಮಾನ್ಯ ಮಂತ್ರಿಗಳನ್ನು ಕೇಳಿಕೊಂಡಿದ್ದೇನೆ. ತಮಗೂ ಗೊತ್ತಿರುವ ಹಾಗೆ ತುಮಕೂರು ಜಿಲ್ಲೆಯ ಅಹವಾಲು ಲೆಕ್ಕ ಸರ್ಕಾರಕ್ಕೆ ಬಂದಿದೆ. ಆದರೂ ಕೂಡ ಇದುವರೆಗೂ ಅದನ್ನು ಬರಪೀಡಿತ ಪ್ರದೇಶವೆಂದು ಘೋಷಣೆ ಮಾಡಿಲ್ಲವೆಂದು ನನಗನ್ನಿಸುತ್ತಿದೆ. ಆ ರೀತಿ ಬರಪೀಡಿತ ಪ್ರದೇಶವೆಂದು ಘೋಷಣೆ ಮಾಡಿದ್ದರೆ ಸಂತೋಷ. ಒಂದು ವೇಳೆ ಆ ರೀತಿ ಮಾಡದಿದ್ದರೆ ನಾಳೆಯೇ ಅಥವಾ ನಾಡಿದ್ದೋ ಮಾಡಬೇಕಾಗುತ್ತದೆ. ಕಾರಣ ಸದನ ಈ ದಿನ ಮುಗಿದರೆ ನಾಳೆ ನಾವೆಲ್ಲಾ ನಮ್ಮ ನಮ್ಮ ಕ್ಷೇತ್ರಕ್ಕೆ ಹೊರಟು ಹೋಗಿಬಿಡುತ್ತೇವೆ. ಮತ್ತೆ ನಿಮ್ಮನ್ನು ನೋಡುವುದಕ್ಕೆ ಬರುವುದಕ್ಕಾಗುವುದಿಲ್ಲ. ಕಾರಣ ಇಷ್ಟೇ, ಆ ರೀತಿ ಘೋಷಣೆ ಮಾಡದಿದ್ದರೆ ಸೊಸೈಟಿಯ ಅಧಿಕಾರಿಗಳು ಮನೆಗಳಿಗೆ ಬಂದು ಮನೆಯಲ್ಲಿರತಕ್ಕಂತಹ ಪಾತ್ರೆ, ಪಡಗವನ್ನು ಜಪ್ತಿ ಮಾಡುತ್ತಾರೆ. ಆದ್ದರಿಂದ ಅಧಿಕಾರಿಗಳು ಹಳ್ಳಿಗಳಿಗೆ ಹೋಗಿ ಈ ರೀತಿ ಮಾಡುವುದಕ್ಕಿಂತ ಮೊದಲು, ಆದಷ್ಟು ಬೇಗ ತುಮಕೂರು ಜಿಲ್ಲೆ ಬರಪೀಡಿತ ಪ್ರದೇಶವೆಂದು ಘೋಷಣೆ ಮಾಡಬೇಕು.

ನಮ್ಮ ತುಮಕೂರು ಜಿಲ್ಲೆಯಲ್ಲಿ ಸಾಯಿಲ್ ಕನ್ಸರ್ವೇಷನ್ ಇಲಾಖೆಗೆ ಸ್ವಲ್ಪ ಹಣವನ್ನು ಕೊಟ್ಟಿದ್ದಾರೆ. ಸಾಯಿಲ್ ಕನ್ಸರ್ವೇಶನ್‌ಗಾಗಿ ಹಣವನ್ನು ಕೊಡತಕ್ಕ ಅವಶ್ಯಕತೆ ಇಲ್ಲ ಅಂತ ನಾನು ಹೇಳುತ್ತಿದ್ದೇನೆ. ಅಲ್ಲಿಯ ಸ್ಥಳೀಯ ಅಧಿಕಾರಿಗಳನ್ನು ಈ ಬಗ್ಗೆ ವಿಚಾರ ಮಾಡಿದಾಗ ಅವರು ಹೇಳುತ್ತಾರೆ. ಈ ಒಣ ಭೂಮಿಯಲ್ಲಿ ಬದುಗಳನ್ನು ಹಾಕುವುದಕ್ಕೆ ಸಾಧ್ಯವಿಲ್ಲ. ನಮಗೆ ಇದಕ್ಕಾಗಿ

ಹಣ ಬೇಕಾಗಿಲ್ಲ ಅಂತಹೇಳುತ್ತಾರೆ. ಆದ್ದರಿಂದ ಸಾಯಿಲ್ ಕನ್ಸರ್ವೇಶನ್‌ಗಾಗಿ ಕೊಟ್ಟಿರತಕ್ಕಂತಹ ಹಣವನ್ನು ಬೇರೆ ಕೆಲಸಕ್ಕಾಗಿ ಡೈವರ್ಟ್ ಮಾಡಿ, ಯಾವುದೇ ಕಾಮಗಾರಿ ಕೆಲಸಗಳನ್ನು ಮಾಡುವುದಕ್ಕೆ ಅವಕಾಶ ಮಾಡಿಕೊಡಬೇಕೆಂದು ನನ್ನ ಪ್ರಾರ್ಥನೆ.

ಮಾನ್ಯ ಅಧ್ಯಕ್ಷರೇ, ಕೊನೆಯದಾಗಿ ನನ್ನ ಕ್ಷೇತ್ರದಲ್ಲಿ ಒಂದು ಸಣ್ಣ ಪಟ್ಟಣವೂ ಸೇರಿಕೊಂಡಿದೆ. ಹಳ್ಳಿಗಳಲ್ಲಿರುವ ಕುಡಿಯುವ ನೀರಿನ ಪರಿಸ್ಥಿತಿಗಿಂತ, ಪಟ್ಟಣದಲ್ಲೇನೂ ಉತ್ತಮವಾಗಿಲ್ಲ. ನಮ್ಮ ನಗರಾಭಿವೃದ್ಧಿ ಸಚಿವರು ಇಲ್ಲಿ ಇಲ್ಲ ಅಂತ ಕಾಣುತ್ತದೆ. ನಮ್ಮ ಕುಣಿಗಲ್ ಪಟ್ಟಣಕ್ಕೆ ಕುಡಿಯುವ ನೀರಿನ ಸೌಲಭ್ಯಕ್ಕಾಗಿ ಒಂದುಪೈಸ ಹಣವನ್ನೂ ಕೊಟ್ಟಿಲ್ಲ. ಆದ್ದರಿಂದ ಸಂಬಂಧಪಟ್ಟ ಅಧಿಕಾರಿಗಳಿಗೆ ಈ ಬಗ್ಗೆ ಸ್ಪಷ್ಟ ನಿರ್ದೇಶನವನ್ನು ಕೊಟ್ಟು, ಕೂಡಲೇ ಕುಣಿಗಲ್ ಪಟ್ಟಣದಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಮಾಡಬೇಕೆಂದು ಹೇಳುತ್ತೇನೆ. ಇಷ್ಟೊಂದು ಸಮಯ ಮಾತನಾಡಲು ನನಗೆ ಅವಕಾಶ ಮಾಡಿಕೊಟ್ಟಿದ್ದೀರಿ. ಬಹುಶಃ ನಿಮ್ಮ ಜಿಲ್ಲೆ ಅಂತ ಜಾಸ್ತಿ ಸಮಯವನ್ನು ನನಗೆ ಕೊಟ್ಟಿರಬಹುದು. ಆದರೂ ತಮಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

## ಬಡ ರೈತನ ಶಾಪ

೨೭ನೇ ಮಾರ್ಚ್ ೧೯೮೪

ಮಾನ್ಯ ಅಧ್ಯಕ್ಷರೇ, ಭಾರತ ದೇಶದಲ್ಲಿ ವ್ಯವಸಾಯ ಬಹಳ ಪ್ರಧಾನವಾದುದು. ಈ ದೇಶದಲ್ಲಿ ವ್ಯವಸಾಯಗಾರನಿಗೆ ನೀರಿನ ಪ್ರಾಮುಖ್ಯತೆ, ಎಷ್ಟು ಇರಬೇಕೋ ಅಷ್ಟು ಇಲ್ಲ ಅನ್ನುವುದನ್ನು ಒತ್ತಿಹೇಳುವ ಅವಶ್ಯಕತೆ ಇಲ್ಲ. ವ್ಯವಸಾಯಗಾರನಿಗೆ ಉತ್ತಮವಾದ ಬೀಜ ಮತ್ತು ಗೊಬ್ಬರ ಕೊಟ್ಟರೂ ಕೂಡ ಅವನಿಗೆ ಸಾಕಷ್ಟು ಒದಗಿಸದೆ ಹೋದರೆ ಅವರ ಬೆಳೆಯಲ್ಲಾ ಹಾಳಾಗಿ ಹೋಗುತ್ತದೆ. ಇಂಥ ಒಂದು ದಾರುಣ ಪರಿಸ್ಥಿತಿಯನ್ನು ನಾವು ಪ್ರತಿವರ್ಷವೂ ನೋಡುತ್ತಾ ಇದ್ದೇವೆ. ಈ ಪರಿಸ್ಥಿತಿಯನ್ನು ನೀಗಲಿಕ್ಕಾಗಿ ಕಾವೇರಿ ನದಿಯ ಮತ್ತು ಹೇಮಾವತಿ ನದಿಯ ಜಲಾಶಯಗಳನ್ನು ಕಟ್ಟುವ ಯೋಜನೆಗಳನ್ನು ಸುಮಾರು ೧೯೬೮ರಲ್ಲೇ ಪ್ರಾರಂಭ ಮಾಡಿ ೧೯೮೦ರಲ್ಲಿ ಮುಗಿಸಿದರು. ಈ ಯೋಜನೆಯ ಇಂದಿನವರೆಗಿನ ವೆಚ್ಚ ೩೮೬ ಕೋಟಿ ರೂಪಾಯಿಗಳು. ಈ ಯೋಜನೆಯ ಪ್ರಕಾರ ೬ ಲಕ್ಷ ೫೫ ಸಾವಿರ ಎಕರೆ ಭೂಮಿಗೆ ನೀರನ್ನು ಉಣಿಸಿ ರೈತನ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಪಡಿಸಬೇಕಾಗಿತ್ತು. ರೈತನಿಗೋಸ್ಕರ ಈ ಯೋಜನೆಯನ್ನು ರೂಪಿಸಲಾಯಿತು. ಈ ಯೋಜನೆಯನ್ನು ೧೯೬೮ರಲ್ಲಿ ಮೊದಲು ಪ್ರಾರಂಭ ಮಾಡಿದರೂ ಕೂಡ, ೧೯೭೩ನೆಯ ಇಸವಿಯ ವೇಳೆಗೆ ತುಮಕೂರು ಜಿಲ್ಲೆಯ ಗುಬ್ಬಿ, ತಿಪಟೂರು, ತುಮಕೂರು ಮತ್ತು ಕುಣಿಗಲ್ ಇದರ ಜೊತೆಗೆ ಮಂಡ್ಯ ಜಿಲ್ಲೆಯ ಯಾವಾಗಲೂ ಬರ ಪೀಡಿತ ಪ್ರದೇಶವಾದ ನಾಮಂಗಲ ತಾಲ್ಲೂಕಿನ ಕೆಲವು ಸ್ಥಳಗಳಿಗೆ ಈ ನೀರನ್ನು ಕೊಡಬೇಕೆನ್ನುವ ತೀರ್ಮಾನವನ್ನು ತೆಗೆದುಕೊಳ್ಳಲಾಯಿತು.

ಇದು ದುರಾದೃಷ್ಟವೋ ಅಥವಾ ಅದೃಷ್ಟವೋ ನನಗೆ ಗೊತ್ತಿಲ್ಲ. ೧೯೭೩ನೆಯ ಇಸವಿಗೆ ಆ ಸ್ಥಳಗಳಿಗೆ ನೀರನ್ನು ಕೊಡಬೇಕೆನ್ನುವ ತೀರ್ಮಾನ ತೆಗೆದುಕೊಂಡಿದ್ದರೂ ಆ ಸ್ಥಳಗಳಿಗೆ ನೀರನ್ನು ಒದಗಿಸಲಿಲ್ಲ. ಅಷ್ಟೇ ಅಲ್ಲ ಬಾಗೂರು ನವಿಲೆ ಸುರಂಗ ಮಾರ್ಗವನ್ನು ತೋಡುವ ಕೆಲಸವನ್ನೂ

ಸಹ ೧೯೭೯ನೇ ಇಸವಿಯವರೆಗೂ ಮಾಡಲಿಲ್ಲ. ಈ ರೀತಿಯಾಗಿ ಇದುವರೆಗೆ ಈ ಯೋಜನೆಯಲ್ಲಿ ಹಿಡಿದಿಟ್ಟಿರುವ ನೀರನ್ನು ಉಪಯೋಗಿಸಿಕೊಳ್ಳದೇ ಇರುವುದು ನಮ್ಮ ದುರಾದೃಷ್ಟಕರ ಎಂದು ಹೇಳಬೇಕಾಗಿದೆ. ಈ ಪರಿಸ್ಥಿತಿಯನ್ನು ನಾವು ನೋಡಿದಾಗ ಈ ಬಗ್ಗೆ ತೀರ್ಮಾನ ತೆಗೆದುಕೊಂಡು ೬ ವರ್ಷವಾದರೂ ಕೂಡ ಬಾಗೂರು-ನವಿಲೆ ಸುರಂಗ ಮಾರ್ಗವನ್ನು ಇದುವರೆಗೂ ಏತಕ್ಕೆ ಮಾಡಲಿಲ್ಲ? ಈ ಬಗ್ಗೆ ಹಿಂದಿನ ಸರ್ಕಾರವೇ ಆಗಲಿ, ಯಾವ ಸರ್ಕಾರವೇ ಆಗಲಿ, ಇಂದಿನ ಸರ್ಕಾರ ಇದಕ್ಕೆ ಉತ್ತರ ಹೇಳಬೇಕು ಎಂದು ನಾನು ಬಯಸುತ್ತೇನೆ. ಲಕ್ಷಾಂತರ ಜನ ರೈತರ ಪರವಾಗಿ ಈ ಬಾಗೂರು-ನವಿಲೇ ಸುರಂಗ ಮಾರ್ಗ ೧೯೭೩ ರಿಂದ ೧೯೭೯ನೇ ಇಸವಿಯವರೆಗೂ ಏತಕ್ಕೆ ಮಾಡಲಿಲ್ಲ? ಇದಕ್ಕೆ ತಾವು ಉತ್ತರ ಹೇಳಬೇಕು.

ಈ ಅವಧಿಯಲ್ಲಿ ಈ ಕೆಲಸ ಮಾಡದೇ ಇರುವುದರಿಂದ ನನಗೆ ಅಪಾರವಾದ ದುಃಖವಾಗುತ್ತದೆ. ೬ ಲಕ್ಷ ೫೫ ಸಾವಿರ ಎಕರೆಗೆ ನೀರು ಒದಗಿಸುವಂಥಾ ಈ ಯೋಜನೆಯನ್ನು ರೂಪಿಸತಕ್ಕಂಥಾ ಅಧಿಕಾರ ಸ್ಥಾನದಲ್ಲಿರುವವರನ್ನು ನಾವು ಕೇಳಬೇಕಾಗಿದೆ. ಮತ್ತು ಅಧಿಕಾರ ಮಾಡಬೇಕು ಎಂದು ಬುಡಬುಡಿಕೆ ಹೊಡೆದುಕೊಂಡು ತಿರುಗಾಡುತ್ತಾ ಇರತಕ್ಕ ರಾಜಕಾರಣಿಗಳನ್ನು ನಾನು ಪ್ರಶ್ನಿಸುತ್ತೇನೆ. ಮೊದಲು ೬ ಲಕ್ಷ ೫೫ಸಾವಿರ ಎಕರೆಗೆ ನೀರನ್ನು ಕೊಟ್ಟು, ಉಳಿದುದ್ದನ್ನು ೫ ಲಕ್ಷ ೭೫ ಸಾವಿರ ಎಕರೆಗೆ ಕೊಡುವ ಹಾಗೆ ಯೋಜನೆಯನ್ನು ನಿರೂಪಿಸಿದ್ದಾರೆ. ಅವರು ಅಧಿಕಾರದಲ್ಲಿರುವಾಗ ಒಂದು ಯೋಜನೆಯನ್ನು ರೂಪಿಸಲು ಅಧಿಕಾರ ಚಲಾಯಿಸಿದಂಥಾ ರಾಜಕಾರಣಿಗಳು ಯಾರಿದ್ದಾರೆ ಅವರು ಆ ಕಾಲದಲ್ಲಿ ಏನೂ ಮಾಡಲಿಲ್ಲ. ಇಂದಿನ ಪರಿಸ್ಥಿತಿ ನೋಡಿದರೆ ಇನ್ನೂ ೧೦ ವರ್ಷಗಳಾದರೂ ಕೂಡ ಈ ಕಾಲುವೆ ಕೆಲಸಗಳನ್ನು ಮುಗಿಸಲು ಸಾಧ್ಯವಿಲ್ಲ. ೧೯೮೦ನೇ ಇಸವಿಯಲ್ಲಿ ಪ್ರಾರಂಭ ಮಾಡಿದರೂ ಇನ್ನೂ ಮುಗಿದಿಲ್ಲ. ೧೯೯೦ನೇ ಇಸವಿಯಾದರೂ ಮುಗಿಯುವುದಿಲ್ಲ. ಅಲ್ಲಿಗೆ ೧೯೮೦ನೇ ಇಸವಿಯಿಂದ ೧೯೯೦ನೇ ಇಸವಿಯವರೆಗೆ ೫ ಲಕ್ಷ ೯೦ ಸಾವಿರ ಎಕರೆಗೆ ನೀರು ಕೊಟ್ಟಿದ್ದರೆ ಎಷ್ಟು ಬೆಳೆ ಬೆಳೆಯುತ್ತಿತ್ತು ಅನ್ನುವುದನ್ನು ಲೆಕ್ಕಾಚಾರ ಹಾಕಿ ನೋಡಿದರೆ, ಎಷ್ಟು ಉತ್ಪನ್ನ ಕಡಿಮೆಯಾಗಿದೆ ಅನ್ನುವುದನ್ನು ತಿಳಿದುಕೊಳ್ಳಬಹುದು.

ಅದರಿಂದ ಬರುವ ಆದಾಯ ಎಷ್ಟು, ಇದರಿಂದ ದೇಶದ ಬೊಕ್ಕಸಕ್ಕೆಬರುತ್ತಿದಂಥ ಆದಾಯ ಎಷ್ಟು ರೈತನ ಕಣಜಕ್ಕೆ ಹಾನಿಮಾಡಿದಂಥ ಅಧಿಕಾರಿಯಾಗಲೀ, ಸರ್ಕಾರವಾಗಲೀ, ಹರಕಲು ಚಡ್ಡಿಯ ರೈತನ ಶಾಪಕ್ಕೆ ತುತ್ತಾಗದೇ ಇರುವುದಿಲ್ಲ.ಇವತ್ತು ಕಟ್ಟೆಯಲ್ಲಿ ೫ ಲಕ್ಷ ೯೦ ಸಾವಿರ ಎಕರೆಗೆ ಬೇಕಾಗುವಷ್ಟು ನೀರುಇದೆ. ಇಂಥ ಒಂದು ಕೆಟ್ಟ ವ್ಯವಸ್ಥೆಯನ್ನು ಮಾಡಿದವರು ಕಾಂಗ್ರೆಸ್‌ನವರಿರಲಿ ಜನತಾ ಸರ್ಕಾರದವರಿರಲಿ ತುತ್ತು ಅನ್ನ ಇಲ್ಲದೇ ನರಳುತ್ತಿರುವ ಬಡ ರೈತನ ಶಾಪಕ್ಕೆ ಗುರಿಯಾಗುತ್ತೀರೆಂದು ಖಡಾಖಂಡಿತವಾಗಿ ಹೇಳುತ್ತೇನೆ. ಇದಕ್ಕೆ ರಾಜಕೀಯ ಬಣ್ಣವನ್ನು ಕೊಡದೇ, ಉಳಿದಿರುವಂಥ ನೀರನ್ನು ಉಪಯೋಗಿಸಿಕೊಳ್ಳುವ ದಿಸೆಯಲ್ಲಿ ಸೂಕ್ತ ಕ್ರಮವನ್ನು ಮಾನ್ಯಮಂತ್ರಿಗಳು ಕೈಗೊಳ್ಳಬೇಕೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ.

ಸ್ವಾಮಿ, ನಾವು ಪತ್ರಿಕೆಯಲ್ಲಿ ಓದಿದ ಪ್ರಕಾರ ಮಾನ್ಯ ಮಂತ್ರಿಯವರು ನಮ್ಮನ್ನು ಸ್ಥಳಕ್ಕೆ ಕರೆದುಕೊಂಡು ಹೋಗಿದ್ದರು. ತುಮಕೂರು ಜಿಲ್ಲೆಗೆ ನೀರು ಕೊಡುವುದಕ್ಕೆ ನಿಧಾನವಾಗಿರುವುದಕ್ಕೆ ಕಾರಣ ಏನು ಎನ್ನುವುದನ್ನು ತೋರಿಸಲಿಕ್ಕೆ ಕರೆದುಕೊಂಡು ಹೋಗಿದ್ದರು. ಬಹಳ ಪ್ರಮುಖವಾದ ಕಾರಣ ಬಾಗೂರು ನವಿಲೆ ಸುರಂಗ ಮಾರ್ಗದ ಕೆಲಸ ಆಗದೇ ಇರುವುದು ಎನ್ನುವ ಕಾರಣವನ್ನು ಕೊಡುತ್ತಾರೆ. ಸುರಂಗ ಮಾರ್ಗದ ಉದ್ದ ಸುಮಾರು ೯,೮೦೦ ಮೀಟರುಗಳು. ಸುರಂಗಮಾರ್ಗದ

ಕೆಲಸಮಾಡಬೇಕೆಂದು ತೀರ್ಮಾನವಾದುದು ೧೯೩೭ರಲ್ಲಿ ಕೆಲಸ ಪ್ರಾರಂಭವಾದುದು ೧೯೭೯ರಲ್ಲಿ. ೧೯೭೯ರಿಂದ ಇಲ್ಲಿಯವರೆಗೆ ೧,೩೦೦ ಮೀಟರ್ ಕೆಲಸ ಮಾತ್ರವಾಗಿದೆ. ೫೦ ಭಾಗದ ಕೆಲಸ ಕೂಡ ಆಗಿಲ್ಲ. ತುಮಕೂರು ಜಿಲ್ಲೆಗೆ ನೀರುಕೊಡಬೇಕೇ, ಕೊಡಬಾರದೇ ಕೊಡಲೇಬಾರದು ಎನ್ನುವ ಪ್ರಶ್ನೆಯನ್ನು ರಾಜಕಾರಣಿಗಳು ಎತ್ತಿದ್ದಾರೆ. ಸುರಂಗಮಾರ್ಗವ ಕೆಲಸ ನಿಧಾನವಾಗಿರುವುದಕ್ಕೆ ನಿಜವಾದಂಥ ಕಾರಣ ಏನು ಎನ್ನುವುದನ್ನು ಮಾನ್ಯ ಮಂತ್ರಿಗಳಿಂದ ನಾನು ಬಯಸುತ್ತೇನೆ. ತುಮಕೂರು ಜಿಲ್ಲೆಯ ಕೆಲವರು ಪ್ರತಿಭಾವಂತ ಬಹಳದೊಡ್ಡ ರಾಜಕಾರಣಿಗಳ ಪ್ರಕಾರ ಶ್ರೀಮಾನ್ ದೇವೇಗೌಡರು ಹಾಸನ ಜಿಲ್ಲೆಯವರು ಹಾಸನ ಜಿಲ್ಲೆಯ ರೈತರಿಗೆ ದ್ರೋಹ ಮಾಡುತ್ತಿದ್ದಾರೆ ಅದಕ್ಕಾಗಿ ಸುರಂಗಮಾರ್ಗದ ಕೆಲಸವನ್ನು ನಿಧಾನ ಮಾಡುತ್ತಿದ್ದಾರೆ. ಬೇಕೆಂದೇ ಕೆಲಸ ಸ್ಥಗಿತಗೊಳಿಸಿದ್ದಾರೆ ಆದ್ದರಿಂದ ಜಿಲ್ಲೆಯಾದ್ಯಂತ ರೈತರು ಹೋರಾಟ ಮಾಡಬೇಕು ಶ್ರೀಮಾನ್ ದೇವೇಗೌಡರನ್ನು ಮಂತ್ರಿ ಪದವಿಯಿಂದ ಕಿತ್ತುಹಾಕಬೇಕು ಎನ್ನುವ ಮಾತನ್ನಾಡುತ್ತಿದ್ದಾರೆ.

## ರೈತರ ಸಾಲವನ್ನು ಕುರಿತು

೧೩ನೇ ಮಾರ್ಚ್ ೧೯೯೩

ಮಾನ್ಯ ಅಧ್ಯಕ್ಷರೇ, ಈ ರಾಜ್ಯದ ರೈತರು ಪಡೆದಿರುವಂಥ ಸಾಲವನ್ನು ಮನ್ನಾ ಮಾಡಬೇಕೆಂಬ ಬೇಡಿಕೆಯನ್ನು ವಿರೋಧ ಪಕ್ಷದ ಮಾನ್ಯ ಸ್ನೇಹಿತರು ತಮ್ಮ ಮೂಲಕ ಸರ್ಕಾರದ ಗಮನಕ್ಕೆ ತಂದಿದ್ದಾರೆ. ಬಹುಶಃ ಆ ಕಡೆಯ ಸದಸ್ಯರಲ್ಲಿ ಒಬ್ಬಿಬ್ಬರು ಮಾತನಾಡಿದ್ದಾರೆ. ಅವರು ಏನು ಪ್ರಸ್ತಾಪನೆಯನ್ನು ವಿರೋಧ ಮಾಡುತ್ತಾರೆಯೋ ಅಥವಾ ಬೆಂಬಲಿಸುತ್ತಾರೆಯೋ ಎಂದು ಕ್ಲ್ಯೂ ಸಿಕ್ಕಿದ್ದರೆ, ಸರ್ಕಾರದ ಅಭಿಪ್ರಾಯ ಗೊತ್ತಾಗುತ್ತಿತ್ತು. ಇಲ್ಲಿ ಒಂದು ವಿಷಯ ಇದೆ. ನಿನ್ನೆ ಪೈಪಿನ ಮೇಲೆ ಹಾಕಿದ ತೆರಿಗೆಯನ್ನು ತೆಗೆದುಹಾಕಿ ಎಂದು ಹೇಳಿದ್ದೇವೆ. ರೈತರಿಗೆ ಗೊಬ್ಬರದ ಮೇಲೆ ಹಾಕಿದ ತೆರಿಗೆಯನ್ನು ತೆಗೆದುಹಾಕಿ ಎಂದು ಕೇಳುತ್ತೇವೆ. ಇವತ್ತು ಸಾಲ ಮನ್ನಾ ಮಾಡಿ ಎಂದು ಕೇಳುತ್ತೇವೆ. ಎಲ್ಲಾ ಮನ್ನಾ ಮಾಡಿಕೊಂಡು ಹೋದರೆ ಈ ರಾಜ್ಯದ ಬೊಕ್ಕಸಕ್ಕೆ ಬರಬೇಕಾದ ಹಣ ಎಲ್ಲಿಂದ ಬರಬೇಕು ಮೊಬಿಲೈಜೇಷನ್ ರಿಸೋರ್ಸ್‌ಸ್‌ಗೆ, ಅಭಿವೃದ್ಧಿ ಕೆಲಸಗಳಿಗೆ ಹಣ ಇಲ್ಲವೆಂಬ ವಾದವನ್ನು ನಾವೇ ಮಾಡುತ್ತಿದ್ದೇವೆಂದು ಅವರು ವಾದ ಮಾಡುತ್ತಾರೆ. ನೀವು ಎಲ್ಲಾ ಹೀಗೆ ಕೇಳುತ್ತಿದ್ದರೆ ಬೊಕ್ಕಸಕ್ಕೆ ಹಣ ಎಲ್ಲಿಂದ ಬರಬೇಕು? ನಾಳೆ ನಾವು ನೀರಾವರಿ ಮೇಲೆ ಮಾತನಾಡಿದಾಗ ನೀರಾವರಿಗೆ ದುಡ್ಡು ಕೊಟ್ಟಿಲ್ಲವೆಂದು ವಾದ ಮಾಡಿದರೆ, ಹೌದು, ನಿನ್ನೆ ನೀವೇ ಮಾತನಾಡಿದಿರಲ್ಲ. ೧೫೦ ಕೋಟಿ ರೂಪಾಯಿಯ ರಿಡಕ್ಷನ್ ಮಾಡಿಸಿದರಲ್ಲ ಎಂಬ ವಾದವನ್ನು ಅವರು ಮುಂದಿಡಬಹುದು.

ಈ ರಾಷ್ಟ್ರದ ರೈತ ಯಾವ ಸರ್ಕಾರದ ಮುಂದೆಯೂ ಭಿಕ್ಷೆ ಬೇಡತಕ್ಕ ಅವಶ್ಯಕತೆ ಇಲ್ಲ. ನನ್ನ ಒಂದು ಚಿಂತನೆ ಅಥವಾ ಆಲೋಚನೆ ಏನಿದೆ ಎಂದರೆ, ಈ ರಾಷ್ಟ್ರದ ರೈತನನ್ನು ಸಾಲ ಮಾಡುವಂಥ ಪರಿಸ್ಥಿತಿಗೆ ತಂದಂಥ ಅಪಕೀತ ವ್ಯವಸ್ಥೆಯನ್ನು ಸರಿ ಮಾಡಬೇಕು. ಸಾಲ ಮನ್ನಾ ಮಾಡುತ್ತೀರೋ, ಬಿಡುತ್ತೀರೋ ನನಗೆ ಅದು ಪ್ರಾಮುಖ್ಯವಲ್ಲ. ಇವತ್ತು ರೈತನನ್ನು ಸಾಲಗಾರನನ್ನಾಗಿ ಮಾಡುವಂಥ ಪರಿಸ್ಥಿತಿ ಸೃಷ್ಟಿ ಮಾಡಿದ್ದು ಯಾವುದು. ಒಂದು ದಶಕದಲ್ಲಿ ಈ ರಾಜ್ಯದಲ್ಲಿ ಹೆಚ್ಚಾಗಿರುವಂಥ ನೀರಾವರಿ ಪ್ರತಿಶತ ಅಂತ ೮ನೇ ದಶಕದಲ್ಲಿ ಒಂದೇ ಪರ್ಸೆಂಟ್. ನಮಗೆ ಸಾಲ

ಬೇಡಿ, ಮನ್ನಾ ಮಾಡಬೇಡಿ, ನಮ್ಮ ಎಲ್ಲಾ ಪಂಪುಗಳಿಗೆ ೧೨ ಗಂಟೆ ಕರೆಂಟ್ ಕೊಡಿ, ನಮಗೆ ಗೊಬ್ಬರ ಕೊಡಿ, ಸಾಲ ಮನ್ನಾ ಬೇಡಿ. ನಮಗೆ ಸಾಲ ಪಡೆಯಲಿಕ್ಕೆ ಸೃಷ್ಟಿ ಮಾಡಿದ್ದೀರಲ್ಲಾ ಪರಿಸ್ಥಿತಿ, ಆ ಪರಿಸ್ಥಿತಿ ನಿವಾರಣೆ ಮಾಡಿ ಸಾಕು.

ನಿನ್ನೆ ನನಗೆ ಸರ್ಕಾರದಿಂದ ಒಂದು ಉತ್ತರ ಬಂದಿದೆ, ಅದನ್ನು ನೋಡಿ ನಗಬೇಕೋ ಅಳಬೇಕೋ ಅರ್ಥವಾಗುತ್ತಿಲ್ಲ. ಈ ರಾಜ್ಯದ ರೈತರಿಗೆ ಬೇಕಾದ ತೆಂಗಿನ ಸಸಿಗಳನ್ನು ದುಡ್ಡು ತೆಗೆದುಕೊಂಡು ಕೊಡುವ ಪ್ರಯತ್ನ ಮಾಡುತ್ತೀರಾ, ಇದಕ್ಕೆ ಉತ್ತರ ಏನು ಬಂದಿದೆ ಎಂದರೆ, ಸಂಪನ್ಮೂಲದ ಕೊರತೆ. ಈ ರಾಜ್ಯದಲ್ಲಿ ಮನೆ ಮುಂದೆ ತೋಟದಲ್ಲಿ ನೆಟ್ಟುಕೊಳ್ಳುವುದಕ್ಕೆ ತೆಂಗಿನ ಗಿಡ ಕೊಡುವುದಕ್ಕೆ ಏರ್ಪಾಡು ಮಾಡುತ್ತೀರಾ ಸಾಧ್ಯತೆ ಇದೆಯೇ ಎಂದರೆ, ಇದಕ್ಕೆ ಸಂಪನ್ಮೂಲ ಕೊರತೆ. ಏತಕ್ಕೆ ಈ ಮಾತು ಹೇಳುತ್ತಿದ್ದೇನೆಂದರೆ, ಒಂದು ಕಡೆ ರಾಜ್ಯದ ಬೊಕ್ಕಸಕ್ಕೆ ಬರುವಂಥ ಹಣದ ಹೊಳೆ ಏನು ಹರಿಯುತ್ತಿದೆ ಅದನ್ನು ತಡೆಯುವುದರಿಂದ, ಅಭಿವೃದ್ಧಿ ಕೆಲಸಗಳಿಗೆ ನಮಗೆ ಬೇಕಾದ ಹಣಕ್ಕೆ ಕೊರತೆ ಬಂತು. ಆದುದರಿಂದ ಇವರು ಸಾಲ ಮನ್ನಾ ಮಾಡಿ ಎಂದು ಕೇಳುವಂಥ ಸಂದರ್ಭದಲ್ಲಿ, ಬೇರೆ ಯಾವ ಕ್ಷೇತ್ರ ಇದೆಯೋ ಆ ಕ್ಷೇತ್ರದಲ್ಲಿ ಇದೇ ನೀತಿಯನ್ನು ಅನುಸರಿಸುತ್ತೀರಾ ೧೫೦ ಕೋಟಿ ಏನಾಗುತ್ತದೆ, ವಿದ್ಯುಚ್ಛಕ್ತಿ ಮಂಡಲಿಯಿಂದ ಬರಬೇಕಾದ ಹಣ ಮತ್ತು ನಮ್ಮ ಬಿಳಿ ಆನೆಗಳು ಇವೆಯಲ್ಲ, ದಯವಿಟ್ಟು ಬಿಳಿ ಆನೆಗಳನ್ನು ಸರ್ಕಾರಿ ಲಾಯದಿಂದ ಆಚೆಗೆ ಹಾಕಿ ಎಂದು, ಕೆ.ಎಸ್.ಆರ್.ಟಿ.ಸಿಯಲ್ಲಿ ೯೦ ಕೋಟಿ ರೂಪಾಯಿ ಲಾಸ್ ಆಗಿದೆ. ಈ ವರ್ಷ ೧೬ ಕೋಟಿ ರೂಪಾಯಿ ಆಗಿದೆ. ಇಂಡಸ್ಟ್ರಿಗಳಿಗೆ ವರ್ಷದಲ್ಲಿ ಎಷ್ಟು ಸಬ್ಸಿಡಿ ಕೊಡುತ್ತೀರಿ 9% out of the toal outlay what is the capacity? ಈ ರಾಜ್ಯದ ದೊಡ್ಡ ಮನುಷ್ಯರು ನಡೆಸುವಂಥ ಇಂಡಸ್ಟ್ರಿಗಳಿಗೆ, ಕೈಗಾರಿಕೋದ್ಯಮಿಗಳಿಗೆ ರಾಷ್ಟ್ರದ ಒಂದು ವರ್ಷದ ಯೋಜನಾ ವೆಚ್ಚದಲ್ಲಿ ೯ ಭಾಗ ಎಂದು ಸಬ್ಸಿಡಿ ಕೊಟ್ಟಿದ್ದಾದರೆ, ಕೇವಲ ೧೫೦ ಕೋಟಿ ರೂಪಾಯಿ ಎಷ್ಟಕ್ಕೆ ಬರುತ್ತದೆ ? I think it comes to negligible point.

ಆದುದರಿಂದ ಈ ರಾಜ್ಯದ ರೈತನಿಗೆ, ತಾವು ವಿದ್ಯುಚ್ಛಕ್ತಿ ಮತ್ತು ನೀರು ಕೊಡಿ. ೧೦ ವರ್ಷದಲ್ಲಿ ಒಂದೇ ಒಂದು ಪರ್ಸೆಂಟ್ ನೀರಾವರಿಯನ್ನು ಜಾಸ್ತಿ ಮಾಡದೆ ರೈತಿಗೆ ದ್ರೋಹ ಮಾಡಿದ್ದೀರೋ, ಅದರ ಫಲವಾಗಿ ಅವನ ಆರ್ಥಿಕ ಸ್ಥಿತಿ ಶಕ್ತಿ ಕುಂದಿದೆ. ಆ ಶಕ್ತಿಯನ್ನು ಒದಗಿಸಿ, ಹಾಗಾದರೆ ಸಾಲ ಮನ್ನಾ ಮಾಡುವುದು ಬೇಡ. ಮಾನ್ಯ ಅಧ್ಯಕ್ಷರೇ, ನನ್ನ ಪ್ರಾರ್ಥನೆ ಇಷ್ಟೇ. ಈಗ ಕೆಲವು ವಿಚಾರಗಳನ್ನು ಮಾನ್ಯ ಬೈರೇಗೌಡರು ಹೇಳಿದರು. ರೇಷ್ಮೆ ಬೆಲೆ ಹೋದ ವರ್ಷ ೨೦೦ ರೂಪಾಯಿ ಇದ್ದದ್ದು ಈಗ ೬೦ ರೂಪಾಯಿಗೆ ಬಂದಿದೆ. ಅದನ್ನು ತಡೆಗಟ್ಟುವುದಕ್ಕೆ ಕ್ರಮ ತೆಗೆದುಕೊಳ್ಳಿ ಎಂದರೆ, ಈ ರಾಜ್ಯದ ರೇಷ್ಮೆ ಖಾತೆಯ ಸಚಿವರೂ ಇನ್ನೂ ಯುವಕರಿದ್ದಾರೆ, ಸ್ವಲ್ಪ ಉತ್ಸಾಹದಿಂದಿದ್ದಾರೆ. ಏನಾದರೂ ಮಾಡಬೇಕೆನ್ನುವ ಕಾತುರ ಇದೆ. ಅವರಿಗೆ ಆಗಲೇ ಮೊದಲು ಶಾಕ್ ಆಗಿದೆ. ಇಲ್ಲಿ ಚರ್ಚೆ ಆದ ಮೇಲೆ ಚಿಕ್ಕಪೇಟೆ, ಬಳೇಪೇಟೆಗೆ ಹೋಗಿ ಎರಡು ದಿನ ರೈಡ್ ಮಾಡಿಸಿದರು. ಚೈನಾ ಸಿಲ್ಕ್‌ನ್ನು ಹಿಡಿದು ಈ ದೇಶದ ರೈತನಿಗೆ ಒಳ್ಳೆಯದು ಮಾಡಬೇಕೆಂದು ಹೇಳಿದರು. ಆಮೇಲೂ ೩ ದಿವಸಗಳು ಆದ ಮೇಲೆ ನಾನು ಯಾವುದೋ ಒಂದು ಸಭೆಯಲ್ಲಿ ಅವರನ್ನು ನೋಡುತ್ತಿದ್ದೆ. ಅವರ ಸುತ್ತ ರಾಜ್ಯದ ಸಿಲ್ಕ್ ಮರ್ಚೆಂಟ್ಸ್ ನಿಂತಿದ್ದರು. ಮಾರನೆಯ ದಿವಸ ನಾನು ಫೋನ್ ಮಾಡಿ ಕೇಳಿದರೆ, ಇಲ್ಲ ಸ್ವಾಮಿ ಈ ಎನ್‌ಫೋರ್ಸ್‌ಮೆಂಟ್‌ನವರು ರೈಡ್ ಮಾಡುವುದು ನಿಲ್ಲಿಸಿದ್ದಾರೆ ಎಂದು ಹೇಳಿದರು. ಏಕೆ ಹೇಳುತ್ತಿದ್ದೇನೆ ಎಂದರೆ, ಈ ವ್ಯವಸ್ಥೆಯಲ್ಲಿ

ಬಹುಶಃ ಎಲ್ಲಾ ಪಕ್ಷದಲ್ಲಿ ನಾವು ಉಳ್ಳವರ ಹಂಗಿಗೆ, ಅವರ ಹಿಡಿತಕ್ಕೆ ಮೇಲ್ಮಟ್ಟದಲ್ಲಿರುವ ಹಣವಂತರ ಹಿಡಿತಕ್ಕೆ ಒಳಗಾಗಿದ್ದೇವೆ. ತೊಗರಿಬೇಳೆ ಬೆಳೆ ಬಗ್ಗೆ ಕಾಗದದ ಮೇಲೆ ಕೃಷಿ ಮಂತ್ರಿಗಳು ಎಲ್ಲಾ ಕಾರ್ಯಕ್ರಮ ತೆಗೆದುಕೊಂಡಿದ್ದೇವೆಂದು ತಿಳಿಸಿದ್ದಾರೆ. ಏನು ಕಾರ್ಯಕ್ರಮ ತೆಗೆದೊಂಡಿದ್ದೀರಿ ಸ್ವಾಮಿ ಗುಲ್ಬರ್ಗಾದಲ್ಲಿ ಕೋಟ್ಯಾಂತರ ರೂಪಾಯಿ ತೊಗರಿ ಬೆಳೆ ನಷ್ಟವಾಗಿದೆ. ಆದುದರಿಂದ ನನ್ನ ಪ್ರಾರ್ಥನೆ ಇಷ್ಟೇ. ರೈತರ ಸಾಲವನ್ನು ಮನ್ನಾ ಮಾಡಬೇಕೆ, ಬಿಡಬೇಕೇ ಎನ್ನುವ ಪ್ರಶ್ನೆಯಲ್ಲಿ ಮತ್ತೊಂದು ಪ್ರಾಮುಖ್ಯತೆ ಇದೆ. ತಾವೂ ಇದರಲ್ಲಿ ಭಾಗಸ್ಥರು. ೧೯೮೫ರಲ್ಲಿ ವೀರೇಂದ್ರ ಪಾಟೀಲರ ನೇತೃತ್ವದಲ್ಲಿ ಈ ರಾಜ್ಯದ ಜನತೆ ಮುಂದೆ ನಿಮ್ಮ ಪಕ್ಷ ಓಟು ಕೇಳುವುದಕ್ಕೆ ಹೋಗಿದ್ದಾಗ ಏನು ಆಶ್ವಾಸನೆ ಕೊಟ್ಟಿದ್ದೀರಿ ಸಾಲವನ್ನು ಮನ್ನಾ ಮಾಡುತ್ತೇವೆನ್ನುವ ಆಶ್ವಾಸನೆಯನ್ನು ಕೊಟ್ಟಿದ್ದೀರಿ... ನಿಮ್ಮ ಮ್ಯಾನಿಫೋಸ್ಟೋ ತೆಗೆದು ಓದಿ.

ಹಿರಿಯ ಸದಸ್ಯರಾದ ಕಾಗೋಡು ತಿಮ್ಮಪ್ಪನವರು ಏನು ಹೇಳುತ್ತಾರೋ ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ಒಂದು ಪೊಸಿಷನ್‌ಗೆ ನಾನು ಸ್ಟಿಕಾನ್ ಆಗುತ್ತೇನೆ. With the assistance of the Central Government I will stick oin to that positoin. I will come to that. ಸಂಟ್ರಲ್ ಗೌರ್ನಮೆಂಟ್ ಯಾರು ಸ್ವಾಮಿ? ನಮ್ಮ ಪಕ್ಷದ್ದು ಇದೆಯೇ ಯಡಿಯೂರಪ್ಪನವರದ್ದು ಇದೆಯೇ? ಯಾರನ್ನು ಅವರು ಕಾಲು ಕಟ್ಟಿಕೊಂಡು ತರುತ್ತಾರೋ, ಯಾರನ್ನು ಮನವೊಲಿಸಿ ಅವರು ಸಹಾಯ ಧನವನ್ನು ತರುತ್ತಾರೋ, ಅದು ನನ್ನ ಪ್ರಶ್ನೆ ಅಲ್ಲ. ಆದರೆ ಈ ರಾಜ್ಯದ ಜನತೆಗೆ ನೀವು ವಾಗ್ದಾನ ಕೊಟ್ಟಿದ್ದೀರಿ.

ನೀವು ಆ ವಾಗ್ದಾನವನ್ನು ಹೇಗೆ ಪರಿಪಾಲನೆ ಮಾಡುತ್ತೀರಿ ಎನ್ನುವ ಪ್ರಶ್ನೆಯಲ್ಲ. Iam not talking about the means. Iam talking about the aim. You have assumed the people of Karnataka that you are going to waive. Ofcourse, after the consultation and after reeiving the assistance from the Government of India. ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ತಾವು ಏನು ಹೇಳುತ್ತೀರಿ ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ನೀವು ಅದನ್ನು ಮಾಡತಕ್ಕಂತಹ ವಾಗ್ದಾನವನ್ನು ಕೊಟ್ಟು, ಈ ರಾಜ್ಯದ ನಾಲ್ಕು ಕೋಟಿ ಜನತೆಗೆ ದ್ರೋಹ ಬಗೆದಿದ್ದೀರಿ.

ನನ್ನ ಮಾತಿನ ಒಟ್ಟಾರೆ ಸಾರಾಂಶ ಇಷ್ಟೆ. ಈ ರಾಜ್ಯದಲ್ಲಿ ಆಡಳಿತ ನಡೆಸುತ್ತಿರುವ ಯಾವುದೇ ಒಂದು ಸರ್ಕಾರ ಇರಲಿ, ರೈತನನ್ನು ಸಾಲ ಮಾಡಿಸುವಂತಹ ಪರಿಸ್ಥಿತಿಗೆ ತರುವಂತಹದ್ದು ಬಹಳ ಕೆಟ್ಟದ್ದು. ಅವನಿಗೆ ಬೇಕಾದಷ್ಟು ಗೊಬ್ಬರ, ಅವಶ್ಯಕತೆ ಇರುವಷ್ಟು ನೀರಾವರಿ, ಅವನಿಗೆ ಬೇಕಾದ ತಾಂತ್ರಿಕ ಸಹಕಾರ ಇಷ್ಟನ್ನು ಕೊಟ್ಟು, ರೈತರ ಸಾಲ ಮಾಡುವುದಕ್ಕೆ ಹೋಗಬಾರದು. ಇಂತಹ ಕಾರ್ಯಕ್ರಮಗಳನ್ನು ಮಾಡಿಕೊಡುವುದರಲ್ಲಿ ನಾವು ವಿಫಲರಾಗಿರುವುದರಿಂದ ರೈತ ಕಷ್ಟದಲ್ಲಿ ಸಿಕ್ಕಿದ್ದಾನೆ. ರೈತನು ಮಾಡಿರುವ ಸಾಲನ್ನು ಮನ್ನಾ ಮಾಡುವುದಕ್ಕೆ ಕಾರ್ಯಕ್ರಮಗಳನ್ನು ರೂಪಿಸಿಲ್ಲ. ಇದರಲ್ಲಿ ಆ ಒಂದು ವಿಷಯವನ್ನು ಪ್ರಸ್ತಾಪ ಮಾಡಿಲ್ಲ. ರೈತ ಕೃಷಿ ಬ್ಯಾಂಕುಗಳಲ್ಲಿ ಸಾಲ ತೆಗೆದುಕೊಳ್ಳುವಾಗ ೭ ಪರ್ಸೆಂಟ್ ಬಡ್ಡಿ ಕೊಡುತ್ತೇನೆಂದು ತೆಗೆದುಕೊಂಡಿರುತ್ತಾನೆ. ನೀವು ಅದಕ್ಕಿಂತ ಜಾಸ್ತಿ ಕೇಳಿದರೆ It is in contravention of the agreement that we have entered into between the Band and the Loance. ನಾನು ಹಠ ಮಾಡುತ್ತಿದ್ದೇನೆ. ಆದರೆ ನೀವು ೭ ಪರ್ಸೆಂಟ್‌ಗೆ ಸಾಲ ಕೊಟ್ಟಿದ್ದೀರಿ ಇವತ್ತು. ೧೨ ಪಸೆಂಟ್ ಬಡ್ಡಿ ಕೇಳಿದರೆ ಕೊಡುವುದಿಲ್ಲ.

I will go to Court saying I have signed for only 8 percent. ನೀವು ಏನಾದರೂ ಮಾಡಿ ಮೊದಲು ಏನು ಫಿಕ್ಸ್ ಮಾಡಿದ್ದೀರಿ ಅದನ್ನು ಕೊಡುತ್ತೇನೆ. ಇದರಲ್ಲಿ ಕಾನೂನಿನ ಪ್ರಶ್ನೆ ಇದೆ. ನಮಗೆ ಸಾಲ ಕೊಡುವಾಗ ೭ ಪರ್ಸೆಂಟ್‌ಗೆ ಒಪ್ಪಂದಕ್ಕೆ ಸಹಿ ಹಾಕಿಸಿಕೊಂಡು ಇವತ್ತು ೧೨ ಪರ್ಸೆಂಟ್ ಕೇಳುವ ಪರಿಸ್ಥಿತಿ ಇದೆ. ಅದು ಕಾನೂನಿಗೆ ವಿರೋಧವಾಗಿದೆ. ಇದು ರೈತನಿಗೆ ತೊಂದರೆ ಕೊಡುವುದಾಗಿದೆ.

ದಯಮಾಡಿ ತಾವು ಏಳು ಪರ್ಸೆಂಟೇಜ್ ಆಫ್ ಇಂಟರೆಸ್ಟ್ ಏನಿದೆಯೋ, ನಾವು ಏನು ಒಪ್ಪಿಕೊಂಡಿದ್ದೇವೋ ಅದಕ್ಕೆ ಸೀಮಿತಗೊಳಿಸಬೇಕು ಅಂತ ಅವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

## ಗ್ರಾಮಪಂಚಾಯತ್ ವ್ಯವಸ್ಥೆ ಬಗ್ಗೆ

೭ನೇ ಏಪ್ರಿಲ್ ೧೯೯೩

ಮಾನ್ಯ ಅಧ್ಯಕ್ಷರೇ, ಸರ್ಕಾರದವರು ಸದನದ ಮುಂದೆ ತಂದಿರತಕ್ಕಂತಹ ಪಂಚಾಯತ್ ರಾಜ್ಯ ವಿಧೇಯಕವನ್ನು ನಾನು ಸ್ವಾಗತಿಸುತ್ತೇನೆ. ಆದರೆ ಈ ಸ್ವಾಗತ ಷರತ್ತಿನಿಂದ ಕೂಡಿದ ಸ್ವಾಗತ. ಅದಕ್ಕೆ ಕಾರಣವೇನೆಂದರೆ, ಗ್ರಾಮಪಂಚಾಯತಿಯಗಳನ್ನು ಗ್ರಾಮ ಸ್ವರಾಜ್ಯವನ್ನಾಗಿ ಮಾಡುವಂತಹ ಒಂದು ವಿಧೇಯಕವನ್ನು ತಂದಿದ್ದಾರೆ. ಆದ್ದರಿಂದ ನಾನು ಈ ವ್ಯವಸ್ಥೆಯನ್ನು ವಿರೋಧ ಮಾಡುವುದಕ್ಕೆ ಸಿದ್ಧನಿಲ್ಲ. ಆದರೆ ಈ ವ್ಯವಸ್ಥೆಯನ್ನು ತರುವುದಕ್ಕೆ ರಚಿಸಿದಂತಹ ವಿಧೇಯಕದಲ್ಲಿ ಇರುವಂತಹ ಕೆಲವು ಅಸಂಗತ ವಿಷಯಗಳನ್ನು, ತಪ್ಪುಗಳನ್ನು ಮತ್ತು ಯಾವ ಉದ್ದೇಶ ಇತ್ತು ಆ ಉದ್ದೇಶದ ವಿಫಲತೆ ಮಾಡುವಂತಹ ವಿಚಾರಗಳು ಅವುಗಳನ್ನು ಸದನದ ಮುಖಾಂತರ ಸರ್ಕಾರದ ಗಮನಕ್ಕೆ ತರುವಂತಹ ಅಧಿಕಾರವನ್ನು ಉಳಿಸಿಕೊಂಡು ಷರತ್ತಿನ ಮೇಲೆ ಈ ವಿಧೇಯಕವನ್ನು ನಾನು ಸ್ವಾಗತಿಸುತ್ತೇನೆ. ಇಂತಹ ಒಂದು ಪ್ರಾಮುಖ್ಯವಾದ ವಿಧೇಯಕವನ್ನು ತರುವಾಗ ಎಚ್ಚರಿಕೆಯನ್ನು, ಆಸಕ್ತಿಯನ್ನು ಸರ್ಕಾರ ವಹಿಸಿಲ್ಲವೆಂದು ನನ್ನ ಭಾವನೆ. ನಾನು ನಿಮಗೆ ಒಂದು ಸಣ್ಣ ಉದಾಹರಣೆಯನ್ನು ಕೊಡುತ್ತೇನೆ. ನಮ್ಮ ಮಂತ್ರಿಗಳು ನಾನು ಹಿಂದೆ ತಂದಂತಹ ಅಧಿಕಾರವನ್ನು ಉಳಿಸಿಕೊಂಡು ಷರತ್ತಿನ ಮೇಲೆ ಈ ವಿಧೇಯಕವನ್ನು ನಾನು ಸ್ವಾಗತಿಸುತ್ತೇನೆ. ಇಂತಹ ಒಂದು ಪ್ರಾಮುಖ್ಯವಾದ ವಿಧೇಯಕರನ್ನು ತರುವಾಗ ಎಚ್ಚರಿಕೆಯನ್ನು, ಆಸಕ್ತಿಯನ್ನು ಸರ್ಕಾರ ವಹಿಸಿಲ್ಲವೆಂದು ನನ್ನ ಭಾವನೆ. ನಾನು ನಿಮಗೆ ಒಂದು ಸಣ್ಣ ಉದಾಹರಣೆಯನ್ನು ಕೊಡುತ್ತೇನೆ. ನಮ್ಮ ಮಂತ್ರಿಗಳು ನಾವು ಹಿಂದೆ ತಂದಂತಹ ವಿಧೇಕದ ಅನುಭವದ ಆಧಾರದ ಮೇಲೆ ಹೊಸದಾದ ಒಂದು ವಿಧೇಯಕವನ್ನು ತಂದಿದ್ದೇವೆ ಎನ್ನುವ ಮಾತನ್ನು ಹೇಳಿದರು. ಆ ಅನುಭವದ ಆಧಾರದ ಮೇಲೆ ವಿಧೇಯಕವನ್ನು ಸಿದ್ದ ಮಾಡುವಾಗ ಗ್ರಾಮಾಂತರ ಪ್ರದೇಶದ ಆಡಳಿತ ವ್ಯವಸ್ಥೆಯನ್ನು ನಿಮ್ಮ ಮುಂದೆ ಇಡುವಾಗ ಎಷ್ಟು ಆಸಕ್ತಿಯನ್ನು ವಹಿಸಿದ್ದೀರಿ, ಎಷ್ಟು ಶ್ರಮ ತೋರಿಸಿದ್ದೀರಿ ಎನ್ನುವುದಕ್ಕೆ ನಾನು ಒಂದೇ ಒಂದು ಉದಾಹರಣೆ ಹೇಳುವುದಕ್ಕೆ ಇಷ್ಟಪಡುತ್ತೇನೆ. ಈ ವಿಧೇಯಕ ದಲ್ಲಿರತಕ್ಕಂಥ ಇಂಗ್ಲಿಷ್ ಮತ್ತು ಕನ್ನಡದ ಎರಡೂ ನಕಲುಗಳಲ್ಲಿ ಇರುವಂತಹ ವ್ಯತ್ಯಾಸವನ್ನು ನಾನು ತಮ್ಮ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. Even oin material facts, there is a glaring difference between the English version and the Kannada version. ಇದು ಕಾಗುಣಿತ ತಪ್ಪಾಗಿದ್ದರೆ ನಾನು ಗಂಭೀರವಾಗಿ ಪರಿಗಣಿಸುತ್ತಿಲ್ಲ.

ಮಾನ್ಯ ಅಧ್ಯಕ್ಷರೇ, ೩೧೦-ಜ ಇದರಲ್ಲಿ "ಜಿಲ್ಲಾ ಪಂಚಾಯತ್ ಅಧ್ಯಕ್ಷರು. ಜಿಲ್ಲಾ ಯೋಜನೆ ಸಮಿತಿಯ ಅಧ್ಯಕ್ಷರಾಗಿರತಕ್ಕದ್ದು," ನನ್ನ ಪ್ರಕಾರ ಇದರ ವರ್ಷನ್ Zilla parishat Prasident will also be the President of Planning Committe ಅಂತ ಇರಬೇಕಾಗಿತ್ತು. ಇದರ ಇಂಗ್ಲೀಷ್ ವರ್ಷನ್‌ನ್ನು ನೋಡಿದರೆ, ಇದು ಸಂಪೂರ್ಣವಾಗಿ ತದ್‌ವಿರುದ್ಧವಾಗಿದೆ. "The chairman of the District Planning Coimmitte shall be chosen in the manner as may be prescribed." ಕನ್ನಡದೊಳಗಿದೆ, ಇಲ್ಲಾ ಪರಿಷತ್ತಿನ ಅಧ್ಯಕ್ಷರು ಜಿಲ್ಲಾ ಯೋಜನೆಯ ಅಧ್ಯಕ್ಷರಾಗಿರತಕ್ಕದ್ದು, ಇಂಗ್ಲಿಷ್‌ನಲ್ಲಿದೆ. "The Chairman of the District Planning Coimmitte shall be chosen in the manner as may be prescribed". ಇದು ಆಕಸ್ಮಿಕವಾದ ತಪ್ಪು ಎಂದು ನಾನು ಭಾವಿಸಿಕೊಳ್ಳುವುದಿಲ್ಲ ಅಥವಾ ಪ್ರಜ್ಞಾಪೂರ್ವಕವಾಗಿ ಆಗಿದೆ ಎಂದು ಕೂಡ ನಾನು ಭಾವಿಸಿಕೊಳ್ಳುವುದಿಲ್ಲ. I should say, it is oinly due to the negligence oin the part of the concerned. ಇದು ಇಷ್ಟಕ್ಕೆ ನಿಲ್ಲಲಿಲ್ಲ.

ಎಷ್ಟು ಗಂಭೀರವಾಗಿ ಈ ವಿಷಯಗಳನ್ನು ತೆಗೆದುಕೊಳ್ಳಬೇಕಾಗಿತ್ತೋ ಅಷ್ಟು ಗಂಭೀರವಾಗಿ ಸಂಬಂಧಪಟ್ಟವರು ತೆಗೆದುಕೊಂಡಿಲ್ಲ ಎಂಬುದು ನನ್ನ ಭಾವನೆ. ಇದೇ ತರಹದ ತಪ್ಪನ್ನು ಈಗಾಗಲೇ ಸದಸ್ಯರ ಗಮನಕ್ಕೆ ನಾನು ತಂದಿದ್ದೇನೆ. ೧೬೦ರಲ್ಲಿ ೪೦ ಸಾವಿರ ಎಂದು ಒಂದು ಕಡೆಯಲ್ಲಿ ಇದ್ದರೆ, ಇಂಗ್ಲೀಷ್‌ನಲ್ಲಿ ೩೦ ಸಾವಿರ ಎಂದು ಇದೆ. ೫೦ ಸಾವಿರ ಎಂದೂ ಇದೆ. ಇದರ ಜೊತೆಗೆ ಇನ್ನೊಂದು ತಮಾಷೆ ಇದೆ. ಅದು ೧೧ನೇ ಸೆಕ್ಷನ್‌ನಲ್ಲಿದೆ. ಇದರಲ್ಲಿಯೂ ಇಂಗ್ಲೀಷ್‌ಗೂ ಕನ್ನಡ ವರ್ಷನ್‌ಗೂ ವ್ಯತ್ಯಾಸವಿದೆ. ಇದನ್ನೆಲ್ಲಾ ಸರಕಾರವನ್ನು ಟೀಕೆ ಮಾಡಲು ಹೇಳುತ್ತಾ ಇಲ್ಲ. ಇದು ನಮ್ಮ ಕರ್ತವ್ಯವೆಂದು ಸರಕಾರದ ಗಮನಕ್ಕೆ ತರುತ್ತಾ ಇದ್ದೇನೆ. ಯಾವುದೇ ಗ್ರಾಮಪಂಚಾಯತಿಯ ಚುನಾವಣಾ ವ್ಯಕ್ತಿಯೂ ಈ ಅಧಿನಿಯಮದ ಅಡಿಯಲ್ಲಿ ಅಥವಾ ತಾತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಅಡಿಯಲ್ಲಿ ಅನರ್ಹಗೊಂಡಿದ್ದರ ಹೊರತು, ಗ್ರಾಮ ಪಂಚಾಯತಿಯ ಸದಸ್ಯನಾಗಿ ಚುನಾಯಿಸಲು, ಚುನಾಯಿತನಾಗಲು. ಅನರ್ಹವಾಗತಕ್ಕದ್ದು.

ಮಾನ್ಯ ಅಧ್ಯಕ್ಷರೇ, ಈ ವಿಧೇಯಕದಲ್ಲಿ ತಂದಿರುವಂಥ ವಿಷಯಗಳ ಬಗ್ಗೆ ಪ್ರಸ್ತಾವನೆ ಮಾಡುವಾಗ, ಗ್ರಾಮ ಪಂಚಾಯತಿ, ಅಥವಾ ಗ್ರಾಮ ರಾಜ್ಯ, ಈ ಕಲ್ಪನೆ ಹೊಸತಲ್ಲ. ಸ್ವಾತಂತ್ರ್ಯಕ್ಕೆ ಪೂರ್ವದಲ್ಲಿ ಈ ರಾಷ್ಟ್ರದ ಗ್ರಾಮ ಪ್ರದೇಶಗಳಲ್ಲಿ ಪಂಚಾಯತ್ ವ್ಯವಸ್ಥೆಯ ಕಲ್ಪನೆ ಅಷ್ಟೇ ಇರಲಿಲ್ಲ, ಆ ವ್ಯವಸ್ಥೆ ಕೂಡ ಇತ್ತು. ನಿಮಗೆ ಗೊತ್ತಿದೆಯೋ ಇಲ್ಲವೋ, ನಾನು ಹುಟ್ಟಿದ ಊರಿನಲ್ಲಿ ಈ ಒಂದು ವ್ಯವಸ್ಥೆಯು ಇಂದೂ ಕೂಡ ಮುಂದುವರಿಯುತ್ತಾ ಇದೆ. ಅವರದ್ದೇ ಆದಂಥ ದೇವಸ್ಥಾನವನ್ನು ಕಟ್ಟಲಿಕ್ಕೆ, ಅವರ ಊರಿನ ರಸ್ತೆಯನ್ನು ಮಾಡಿಕೊಳ್ಳಲಿಕ್ಕೆ, ಆ ಊರಿನಲ್ಲಿ ನಡೆದಂಥ ಅನ್ಯಾಯಕ್ಕೆ ದಂಡ ಹಾಕಲಿಕ್ಕೆ, ಪರಿಪೂರ್ಣವಾದಂಥ ಗ್ರಾಮ ಪಂಚಾಯತ್ ವ್ಯವಸ್ಥೆಯು ಸ್ವಾತಂತ್ರ್ಯಪೂರ್ವದಲ್ಲಿಯೂ ಇತ್ತು. ಆ ಒಂದು ವ್ಯವಸ್ಥೆಯು ಕಾರ್ಯಮಾಡುತ್ತಿದ್ದಂಥ ರೀತಿಯನ್ನು ನೋಡಿದಾಗ, ಇತ್ತೀಚಿನ ದಿವಸಗಳಲ್ಲಿ ನಾವು ಕಲ್ಪನೆ ಮಾಡಿಕೊಂಡಂಥ ಗ್ರಾಮ ಸ್ವರಾಜ್ಯ ಅವೊತ್ತಿನಿಂದ ಇವೊತ್ತಿನವರೆಗೂ ಮುಂದುವರಿದುಕೊಂಡು ಬಂದಿದೆ ಎಂದು ಹೇಳಬಯಸುತ್ತೇನೆ.

ಸ್ವಾತಂತ್ರ್ಯಪೂರ್ವದಲ್ಲಿದ್ದಂಥ ಗ್ರಾಮಪಂಚಾಯತ್ ವ್ಯವಸ್ಥೆಗೆ, ಸ್ವಾತಂತ್ರ್ಯ ಬಂದ ಮೇಲೆ ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ೧೯೫೯ರಲ್ಲಿ ಗ್ರಾಮ ಸ್ವರಾಜ್ಯಕ್ಕೆ, ಮತ್ತು ಗ್ರಾಮ

ಪಂಚಾಯತ್‌ಗಳಿಗೆ ಕಾನೂನಿನ ಸ್ವರೂಪವನ್ನು ಕೊಟ್ಟು, ಕಾನೂನಿನ ಚೌಕಟ್ಟಿನಲ್ಲಿ ತರುವಂಥ ಪ್ರಯತ್ನ ಬಂತು. ಈ ಪ್ರಯತ್ನ ಜೊತೆಗೆ, ಈ ರಾಷ್ಟ್ರದಲ್ಲಿ ಎರಡು ಭಾರತಗಳನ್ನು ಕಂಡಂಥ ದಾರ್ಶನಿಕರು, ಚಿಂತಕರು, ಆಡಳಿತಗಾರರು ತಮ್ಮದೇ ಆದ ಗ್ರಾಮಸ್ವರಾಜ್ಯದ, ಪಂಚಾಯತ್ ರಾಜ್ಯ ವ್ಯವಸ್ಥೆಯ ಕಲ್ಪನೆ ಮಾಡಲು ಶುರು ಮಾಡಿದರು. ಈ ಒಂದು ಚಿಂತನೆಯನ್ನು ಮಾಡಿದವರಲ್ಲಿ ಪಂಡಿತ್ ಜವಾಹರ್‌ಲಾಲ್ ನೆಹರೂ, ಗಾಂಧೀಜಿಯವರು, ವಿನೋಬಾಜೀಯವರು ಮತ್ತು ಜಯಪ್ರಕಾಶ್ ನಾರಾಯಣರವರಂಥ ಹಿರಿಯ ಚಿಂತಕರು ಅವರ ಜೊತೆಗೆ ಇನ್ನೂ ಅನೇಕ ಜನರು, ಎಸ್.ಕೆ. ಜೈನ್ ಮುಂತಾದವರು ಯಾರೇ ಇರಬಹುದು. ಹೀಗೆ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ನಾವು ಎರಡು ಭಾರತಗಳನ್ನು ಸ್ಪಷ್ಟವಾಗಿ ಕಾಣುತ್ತೇವೆ. ಒಂದು ಎಲ್ಲಾ ಸವಲತ್ತುಗಳ ಸರದಾರರಾಗಿರುವಂಥದ್ದು, ಪಟ್ಟಣಗಳು, ನಗರಗಳು ಮತ್ತೊಂದು ನಮ್ಮ ಗ್ರಾಮ ಭಾರತ. ಗ್ರಾಮೀಣ ಪ್ರದೇಶದಲ್ಲಿರುವಂಥ ಭಾರತ. ಈ ಗ್ರಾಮೀಣ ಭಾರತದ ಅಭಿವೃದ್ಧಿ ಮತ್ತು ಅದರ ಸರ್ವತೋಮುಖವಾದ ಪ್ರಗತಿಯನ್ನು ತರುವುದಕ್ಕೆ ನಾನು ಈಗಾಗಲೇ ಹೇಳಿದ ಹಾಗೆ, ೧೯೫೭ನೇ ಇಸವಿಯಲ್ಲಿ ಮತ್ತೆ ಈಚೆಗೆ ಗ್ರಾಮಾಂತರ ಪ್ರದೇಶದ ಅಭಿವೃದ್ಧಿಯನ್ನು ಸಾಧಿಸುವ ಪ್ರಯತ್ನವನ್ನು ನಾವು ಮಾಡಿದ್ದೇವೆ. ಅವೊತ್ತಿನಿಂದ ಇವೊತ್ತಿನವರೆಗೆ ನಾವೇನು ಗ್ರಾಮ ಪಂಚಾಯತಿಗಳು ಮತ್ತು ತಾಲ್ಲೂಕು ಅಭಿವೃದ್ಧಿ ಸಮಿತಿಗಳಲ್ಲಿ ಕೆಲಸ ಮಾಡಿಕೊಂಡು ಬಂದಿದ್ದೇವೋ ಇವೆಲ್ಲವಕ್ಕೂ ಕೂಡ ಕಾನೂನಿನ ಚೌಕಟ್ಟು ಇತ್ತೇ ಹೊರತು, ಸಂವಿಧಾನದ ಸ್ವರೂಪ ಬಂದಿರಲಿಲ್ಲ. ಸಂವಿಧಾನವನ್ನು ಬರೆದಂಥ, ರೂಪಿಸಿದಂಥ ಶಿಲ್ಪಿಗಳು ಯಾರಿದ್ದಾರೋ, ಆ ಶಿಲ್ಪಿಗಳು ಸಂವಿಧಾನದಲ್ಲಿ ಪ್ರಮುಖವಾಗಿ ಎರಡು ಅಧ್ಯಾಯಗಳನ್ನು ಜೋಡಿಸಿದ್ದಾರೆ. ಒಂದು ಈ ರಾಷ್ಟ್ರದ ಜನರಿಗೆ ಇರಬೇಕಾದಂಥ ಹಕ್ಕಿನ ಬಗ್ಗೆ. ಪ್ರಜೆಗೆ ಇರಬೇಕಾದಂಥ ಹಕ್ಕಿನ ಬಗ್ಗೆ. ಇದನ್ನು ನಾವು ಮೂಲಭೂತ ಹಕ್ಕುಗಳು ಅಥವಾ ಫಂಡಮೆಂಟಲ್ ರೈಟ್ಸ್ ಎಂದು ಕರೆಯುತ್ತೇವೆ. ಇದಕ್ಕಿಂತಲೂ ಪ್ರಮುಖವಾದಂಥ ಇನ್ನೊಂದು ಅಧ್ಯಾಯವೆಂದರೆ Diretive Principles of the State Policyt ಆದರೆ ಈ ದೇಶದಲ್ಲಿ ಆಡಳಿತ ಮಾಡಿದಂಥ ನಮಗೆಲ್ಲರಿಗೂ ಅರಿವು ಇದೆ. ಈ ದೇಶದ ಪ್ರಜೆಗೆ ತನ್ನ ಮೂಲಭೂತ ಹಕ್ಕುಗಳು ಯಾವುವು ಇವೆ, ಅವುಗಳ ಬಗ್ಗೆ ಇದ್ದಂಥ ಆಸಕ್ತಿ ಈ ರಾಷ್ಟ್ರದ ಅಭಿವೃದ್ಧಿಗಾಗಿ ಏನು ಕೆಲಸವನ್ನು ಮಾಡಬೇಕಾಗಿತ್ತು, ಅದರ ಬಗ್ಗೆ ಆಸಕ್ತಿ ನಮಗೆ ಬರಲಿಲ್ಲ ಎಂದು ನನ್ನ ಭಾವನೆ.

ಆರ್ಟಿಕಲ್ ೪೦ರಲ್ಲಿ ಗ್ರಾಮ ರಾಜ್ಯಗಳನ್ನು, ಪಂಚಾಯತ್ ರಾಜ್ಯವನ್ನು ರೂಪಿಸಬೇಕೆನ್ನುವ ನಿರ್ದೇಶನವನ್ನು ನಮ್ಮ ಸಂವಿಧಾನದ ಶಿಲ್ಪಿಗಳು ಕೊಟ್ಟರೂ ಅದನ್ನು ಕಾರ್ಯರೂಪಕ್ಕೆ ತರಲಿಕ್ಕೆ ೧೯೯೨ನೇ ಇಸವಿಯವರೆಗೂ ನಾವು ಕಾಯಬೇಕಾಗಿ ಬಂತು. ನಮ್ಮ ಮೂಲಭೂತ ಹಕ್ಕುಗಳ ಬಗ್ಗೆ ನಾವು ನಾಕಷ್ಟು ಕಾರ್ಯಕ್ರಮಗಳನ್ನು ಹಾಕಿಕೊಂಡರೂ ಕೂಡ ನಿರ್ದೇಶನ ತತ್ವಗಳನ್ನು ಕಾರ್ಯರೂಪಕ್ಕೆ ತರುವಂತಹ ಕಾರ್ಯಕ್ರಮಗಳನ್ನು ರೂಪಿಸುವುದರಲ್ಲಿ ನಿಧಾನವಾಗಿರುವುದು. ಅಷ್ಟೆ ಅಲ್ಲ, ನನ್ನ ಪ್ರಕಾರ ಪ್ರಯತ್ನ ಕೂಡ ಆಗಿದೆ. ಆರ್ಟಿಕಲ್ ೪೦ Organisation of Village panchayts: The State whall ಈ ನಿರ್ದೇಶನವನ್ನು ನಮ್ಮ ಸಂವಿಧಾನದ ಶಿಲ್ಪಿಗಳು ಆಡಳಿತಗಾರರಿಗೆ ಕೊಟ್ಟಿದ್ದರೂ, ಈ ಸಂವಿಧಾನದ ನಿರ್ದೇಶನವನ್ನು ನಮ್ಮ ಸಂವಿಧಾನದ ಶಿಲ್ಪಿಗಳು ಆಡಳಿತಗಾರರಿಗೆ ಕೊಟ್ಟಿದ್ದರೂ, ಈ ಸಂವಿಧಾನದ ನಿರ್ದೇಶನವನ್ನು ಕಾರ್ಯರೂಪಕ್ಕೆ ತರಬೇಕಾದರೆ ಮಾನ್ಯ ದಿವಂಗತ ರಾಜೀವ್‌ಗಾಂಧಿಯವರು ಪ್ರಧಾನಿಯಾಗುವವರೆಗೂ ಸಾಧ್ಯವಾಗಲಿಲ್ಲ. ಸತ್ತಮೇಲೆ ಅವರನ್ನು ಹೊಗಳುತ್ತಿದ್ದಾರೆ ಅನ್ನುವುದು ಬೇಡ. ಇಷ್ಟು ದಿವಸವಾದ

ಮೇಲಾದರೂ ದಿವಂಗತ ರಾಜೀವ್‌ಗಾಂಧಿಯವರು ಈ ಸಂವಿಧಾನದಲ್ಲಿ ಅಳವಡಿಸಿದಂತಹ ಡೈರೆಕ್ಟಿವ್ ಪ್ರಿನ್ಸಿಪಾಲ್ ಆಫ್ ಸ್ಟೇಟ್ ಪಾಲಿಸಿಯನ್ನು ಅಂದರೆ ಗ್ರಾಮ ರಾಜ್ಯ, ಗ್ರಾಮ ಸ್ವರಾಜ್ಯ, ಪಂಚಾಯತ್ ವ್ಯವಸ್ಥೆಯನ್ನು ಸಂವಿಧಾನ ಚೌಕಟ್ಟಿನಲ್ಲಿ ತರುವಂತಹ ಪ್ರಯತ್ನವನ್ನು ಮಾಡಿದ್ದಾರೆ. ಅದಕ್ಕಾಗಿ ನಾನು ಅವರಿಗೆ ಅಭಿನಂದಿಸುತ್ತೇನೆ. ನನ್ನ ಮೂಲ ಉದ್ದೇಶ ಇಷ್ಟೆ. ಯಾವ ಉದ್ದೇಶ ಸಾಧನೆಗಾಗಿ ಗ್ರಾಮ ಸ್ವರಾಜ್ಯಕ್ಕೆ, ಸ್ವರಾಜ್ಯ ಪದ್ಧತಿಗೆ, ಪಂಚಾಯತ್ ಪದ್ಧತಿಗೆ ಸಂವಿಧಾನದ ಸ್ವರೂಪವನ್ನು ದಿವಂಗತ ರಾಜೀವ್ ಗಾಂಧಿಯವರು ಕೊಟ್ಟರೋ ಆ ಉದ್ದೇಶ ಈ ವಿಧೇಯಕವನ್ನು ತರುವಲ್ಲಿ ಸಫಲವಾಗಿಲ್ಲ. ಯಾವ ಆಸೆಯನ್ನು ಇಟ್ಟುಕೊಂಡು ಸಂವಿಧಾನದ ಚೌಕಟ್ಟಿನಲ್ಲಿ ತರುವಂತಹ ಪ್ರಯತ್ನ ಮಾಡಿದರೂ ಅದು ಸಫಲವಾಗಿಲ್ಲ. ಇದನ್ನು ಕಾರ್ಯರೂಪಕ್ಕೆ ತಂದಿಲ್ಲ. ಈ ವಿಧೇಯಕ ಒಂದು ವ್ಯರ್ಥ ಕಸರತ್ತು. It is a fultile exercise ನೀವೇನು ಹೊಸದಾಗಿ ಏನನ್ನೂ ಮಾಡಿಲ್ಲ. ರಾಜಕೀಯ ಲಾಭಕ್ಕಾಗಿ, ನಾವೇನೋ ಒಂದನ್ನು ಹೊಸದಾಗಿ ಮಾಡಿದ್ದೇವೆ ಅಂತ ಹೇಳುವುದಕ್ಕೆ ಈ ವಿಧೇಯಕವನ್ನು ತಂದಿದ್ದಾರೆ ಹೊರತು, ಈ ವಿಧೇಯಕವನ್ನು ನಾವು ನಮ್ಮ ಸರ್ಕಾರ ಇದ್ದಾಗ ತಂದಂತಹ ವಿಧೇಯಕ. ಇದು ಯಾವುದು ಈ ದೇಶಕ್ಕೆ ಹೊಸದಲ್ಲ.

ಇದೊಂದು ವ್ಯರ್ಥ ಕಸರತ್ತು ಅಂತ ಇದನ್ನು ನಾನು ಏತಕ್ಕೆ ಹೇಳುತ್ತಿದ್ದೇನೆ ಅಂದರೆ, ಸ್ವಾತಂತ್ರ್ಯಪೂರ್ವದಲ್ಲಿ ಪಂಚಾಯತ್ ರಾಜ್ಯ ವ್ಯವಸ್ಥೆಯ ಕಲ್ಪನೆ ಅಷ್ಟೇ ಇರಲಿಲ್ಲ. ಅದನ್ನು ಕಾರ್ಯರೂಪಕ್ಕೆ ತರುತ್ತಿದ್ದುದನ್ನು ಕಣ್ಣಾರೆ ನೋಡಿಲ್ಲ. ಸ್ವಾತಂತ್ರ್ಯ ಬಂದ ಮೇಲೆ ಗಾಂಧೀಜಿಯವರು ಸರ್ವರಿಗೆ ಸಮಪಾಲು, ಅಂತ ಹೇಳಿದರು, ಸರ್ವರಿಗೆ ಸಮಬಾಳು, ನೀವು ಸೋತಿರುವುದು ಅಲ್ಲಿಯೇ. ಕೇವಲ ಸರ್ವಸಮ್ಮತವಾದಂತಹ ಪಾಲನ್ನು ಕೊಟ್ಟರೆ ಸಾಲುವುದಿಲ್ಲ. ಸಮಬಾಳನ್ನು ಕೊಡಬೇಕೆಂದು ಗಾಂಧೀಜಿಯವರು ಹೇಳಿದರು. ಅದನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಏನು ಸಂವಿಧಾನದ ತಿದ್ದುಪಡಿಯಾಯಿತ್ತೋ ಆ ಸಂವಿಧಾನದ ತಿದ್ದುಪಡಿಗೆ ನೀವು ಅಪಚಾರವನ್ನು ಬಗೆದಿದ್ದೀರಿ ಅಂತ ನಾನು ಹೇಳಬೇಕಾಗುತ್ತದೆ. ಏಕೆ ಅಪವಾದವನ್ನು ಬಗೆದಿದ್ದಾರೆ ಅನ್ನುವುದಕ್ಕೆ ನಾನು ಕಾರಣವನ್ನು ಕೊಡುತ್ತಿದ್ದೇನೆ. ಸಂವಿಧಾನ ತಿದ್ದುಪಡಿಯನ್ನು ತರುವಂತಹ ಸಮಯದಲ್ಲಿ ಅದಕ್ಕೆ ಲಗತ್ತಿಸಿರುವಂತಹ ಒಂದು ಟಿಪ್ಪಣಿ ಇದೆ. ಆ ಟಿಪ್ಪಣಿಯಲ್ಲಿ ಅವರು ಪಂಚಾಯತ್ ರಾಜ್ ವ್ಯವಸ್ಥೆ ಈ ರಾಷ್ಟ್ರದಲ್ಲಿ ಸಫಲವಾಗ ಬೇಕಾಗಿತ್ತೋ ಅಷ್ಟು ಸಫಲವಾಗಲಿಲ್ಲ ಅನ್ನುವ ಮಾತನ್ನು ಹೇಳುತ್ತಾರೆ. ಆ ಮಾತನ್ನು ಅಲ್ಲಿಗೆ ನಿಲ್ಲಿಸಲಿಲ್ಲ, ಈ ವಿಫಲತೆಗೆ ಕಾರಣವನ್ನು ಕಂಡುಹಿಡಿಯುವಂತಹ ಪ್ರಯತ್ನವನ್ನು ಅವರು ಮಾಡಿದ್ದಾರೆ. Though the Panchath Raj institution has been in existence for a very long time, it has been observed that these institutions have not been able to acquire the status or dignity of a respectable people's bodies due to a number of reasons including absence sof regular eletions." ಈ ಟಿಪ್ಪಣಿಯ ಈ ರಾಷ್ಟ್ರದ ಗ್ರಾಮೀಣ ಬದುಕನ್ನು ಹಸನು ಮಾಡಲಿಕ್ಕೆ ತಂದಂತಹ ವ್ಯವಸ್ಥೆಯ ವಿಫಲತೆಗೆ ಪ್ರಥಮ ಕಾರಣ. "Absence of the regular electins. prologned suspension and inadequate devolution of the powers." Absence of regular elections. ೧೯೮೦ರ ದಶಕದಲ್ಲಿ ಈ ರಾಜ್ಯದಲ್ಲಿ ಆಡಳಿತವನ್ನು ಮಾಡುತ್ತಿದ್ದಂತಹ ಸರ್ಕಾರ, ಆ ಸರ್ಕಾರ ಕೂಡ ಒಂದು ಕಾನೂನನ್ನು ತಂದಿತ್ತು. ಒಂದು ವಿಧೇಯಕವನ್ನು ತಂದಿತ್ತು. ಆ ವ್ಯವಸ್ಥೆ

ದಿವಗಂತ ನಜೀರ್ ಸಾಹೇಬ್‌ರವರ ಪರಿಪೂರ್ಣ ಅರ್ಪಣ ಮನೋಭಾವದ ಫಲ. ವ್ಯವಸ್ಥೆಯ ಕೆಳಗೆ ಜಿಲ್ಲಾ ಪರಿಷತ್ತು, ಮಂಡಲ ಪಂಚಾಯತ್ ಮತ್ತು ತಾಲ್ಲೂಕ್ ಸಮಿತಿಗಳನ್ನು ವ್ಯವಸ್ಥೆಮಾಡಿ ಗ್ರಾಮೀಣ ಪ್ರದೇಶದ ಅಭಿವೃದ್ಧಿಗೆ ಪ್ರಯತ್ನವನ್ನು ನಾವು ಮಾಡಿದ್ದೇವೆ. ಆದರೆ ೧೮.೧.೧೯೯೧ಕ್ಕೆ ಆರಿಸಿದ ಪ್ರತಿನಿಧಿಗಳ ಅವಧಿ ಮುಗಿಯುತ್ತದೆ. ೮೮೭ ಜಿಲ್ಲಾ ಪರಿಷತ್ತಿನ ಸದಸ್ಯರು ೫೬,೩೭೨ ಮಂಡಲ್ ಪಂಚಾಯತಿಯ ಸದಸ್ಯರು, ೨೫೩೪ ಮಂಡಲ್ ಪಂಚಾಯತಿಯ ಅಧ್ಯಕ್ಷರು, ೧೯೪ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದಂತಹ ಸದಸ್ಯರು, ೧೯೬೮ ಪರಿಶಿಷ್ಟ ಜಾತಿಗೆ ಸೇರಿದಂತಹ ಸದಸ್ಯರು, ಅಂದರೆ ಸುಮಾರು ೫೭,೨೯೫ ಜನಪ್ರತಿನಿಧಿಗಳ ಅಧಿಕಾರವನ್ನು ಮೊಟಕು ಮಾಡಿದಂತಹ ಪಾಪದ ಕೆಲಸವನ್ನು ಈ ಸರ್ಕಾರ ಮಾಡಿದೆ. ಅದನ್ನೆ ಮಾನ್ಯ ದಿವಂಗತ ರಾಜೀವ್ ಗಾಂಧಿಯವರು ಹೇಳುತ್ತಿರುವುದು. That is the reason for the failure of all the systems for the better upliftment of the rural folk in this country.

ನಾನು ಈ ವಿಧೇಯಕದ ಮೇಲೆ ಚರ್ಚೆ ಪ್ರಾರಂಭವಾದ ದಿವದಿಂದ ಕಾಯುತ್ತಾ ಇಲ್ಲಿ ಕುಳಿತಿದ್ದೇವೆ. ಒಂದೇ ಸಮನಾಗಿ ಮಾನ್ಯ ಮಂತ್ರಿಗಳು ಕಾನೂನಿನ ತೊಡಕಿತ್ತು ಅಂತ ಹೇಳುತ್ತಿದ್ದಾರೆ. ೧೩.೧.೧೯೯೧ರಲ್ಲಿ ಸ್ಥಗಿತಗೊಂಡಂತಹ ಜಿಲ್ಲಾಪರಿಷತ್ತು ಮತ್ತು ಮಂಡಲ್ ಪಂಚಾಯತಿಗಳಿಗೆ ಚುನಾವಣೆಯನ್ನು ಮಾಡಲಿಕ್ಕೆ ಕಾನೂನಿನ ತೊಡಕಿತ್ತೆಂದು ಹೇಳುತ್ತಿದ್ದಾರೆ. ಅದನ್ನು ನಾನು ಹೇಳಿದ್ದು, ಇವರು ಸಂವಿಧಾನ ತಿದ್ದುಪಡಿಗೆ ಅಪಚಾರವನ್ನು ಮಾಡಿದ್ದಾರೆ.

ಇದೇ ಟಿಪ್ಪಣಿಯಲ್ಲಿ ಸಂವಿಧಾನ ತಿದ್ದುಪಡಿ ತಂದಿರುವ, ನಿಮ್ಮದೇ ಟಿಪ್ಪಣಿಯಲ್ಲಿ ಇರುವಂತ ವಿಷಯಕ್ಕೆ ಸಂಬಂಧಪಟ್ಟ ಮತ್ತೊಂದು ವಾಕ್ಯವನ್ನು ನಾನು ಓದಲಿಕ್ಕೆ ಇಷ್ಟಪಡುತ್ತೇನೆ. One of the characterstics, one of the important aspects of this amendment is the continuation of the existing laws. Not only existing laws. but Panchayats also, until one year from the commencement of the proposed amendement.

ಸನ್ಮಾನ್ಯ ಅಧ್ಯಕ್ಷರೇ, continuation of existing law ಅಂದರೆ ಈ ಹೊಸ ಸಂವಿಧಾನ ತಿದ್ದುಪಡಿ ಆಧಾರದ ಮೇಳೆ ಬರುವಂತ ವ್ಯವಸ್ಥೆ ಕಾರ್ಯರೂಪಕ್ಕೆ ಬಂದ ಒಂದು ವರ್ಷದವರೆಗೆ ಅದು ಮುಂದುವರೆಯಬಹುದು. I think Iam right in my understanding.

ಅವರು ತಂದಿರುವ ಸಂವಿಧಾನ ತಿದ್ದುಪಡಿಯನ್ನು ಅನುಸರಿಸಿ ನಾವು ತರುವಂತಹ ವಿಧೇಯಕದ ಆಧಾರದ ಮೇಲೆ, ನಾವು ತರುವಂತ ಆಡಳಿತ ವ್ಯವಸ್ಥೆ ಅಥವಾ ಗ್ರಾಮಪಂಚಾಯ್ತಿ ವ್ಯವಸ್ಥೆ ಬಂದ ಒಂದು ವರ್ಷದವರೆಗೆ ಕೂಡ ಹಳೆಯ ಕಾನೂನು ಆಧಾರದ ಮೇಲೆ ಇರುವಂತಹ ವ್ಯವಸ್ಥೆ ಮುಂದುವರಿಯಲಿಕ್ಕೆ ಅವಕಾಶ ಇದೆ. ಸನ್ಮಾನ್ಯ ಅಧ್ಯಕ್ಷರೆ, ನಾನು ಈಗ ತಾನೆ ಗುರುತು ಹಾಕಿಕೊಂಡ, ಅಂದರೆ ೨ ವರ್ಷ ೪ ತಿಂಗಳಾಯಿತು. ಈಗ ಇದು ಪರಿಪೂರ್ಣವಾಗಬೇಕಾದರೆ ಬಹುಶಃ ಇನ್ನೂ ಒಂದು ವರ್ಷ ತೆಗೆದುಕೊಳ್ಳುತ್ತದೋ ೬ ತಿಂಗಳು ತೆಗೆದುಕೊಳ್ಳುತ್ತದೋ. ಆದುದರಿಂದ ನನ್ನ ಲೆಕ್ಕದ ಪ್ರಕಾರ ಸುಮಾರು ೩ ವರ್ಷಗಳ ಕಾಲ ಈ ರಾಜ್ಯದ ೫೭ ಸಾವಿರ ಜನಪ್ರತಿನಿಧಿಗಳ ಅಧಿಕಾರವನ್ನು ಕಿತ್ತುಕೊಂಡಂಥ ಪಾಪದ ಕೆಲಸವನ್ನು ಈ ಸರ್ಕಾರ ಮಾಡಿದೆ. And there was no legal bar to hold elections.

ನಾನು ವಿಧಿ ಇಲ್ಲದೆ ಹೇಳಬೇಕಾಗುತ್ತದೆ, ಬಹುಶಃ ಈ ಸರ್ಕಾರಕ್ಕೆ ಚುನಾವಣೆ ಎದುರಿಸಲಿಕ್ಕೆ ಶಕ್ತಿ ಇರಲಿಲ್ಲವೋ, ಆಸಕ್ತಿಯಿರಲಿಲ್ಲವೋ ಅದು ನನಗೆ ಗೊತ್ತಿಲ್ಲ. ಅದು ಅವರಿಗೆ ಬಿಟ್ಟಿದ್ದು.

ಆದರೆ ನಾನು ಮಾತ್ರ ಇಷ್ಟು ಹೇಳುವುದಕ್ಕೆ ಇಷ್ಟಪಡುತ್ತೇನೆ. ಈ ೫೭ ಸಾವಿರ ಜನರಿಗೆ ಅಧಿಕಾರವನ್ನು ಕೊಡುವಂತಹ ಕೆಲಸವನ್ನು ಮಾಡಲಿಕ್ಕೆ ಕಾನೂನು ತೊಡಕು ಇರಲಿಲ್ಲ. ಬಹುಶಃ ಇಚ್ಛಾಶಕ್ತಿ ಇರಲಿಲ್ಲ. ಸನ್ಮಾನ್ಯ ಅಧ್ಯಕ್ಷರೆ, ಅದಕ್ಕಾಗಿ ನಾನು ಹೇಳಿದ್ದು ಈ ಸಂವಿಧಾನದಲ್ಲಿ ಕೊಟ್ಟಿರುವಂತ ಟಿಪ್ಪಣಿಯಲ್ಲಿ ಹಿಂದೆ ನಿಮ್ಮ ಗ್ರಾಮ ಸ್ವರಾಜ್ಯ ವಿಫಲವಾಗಲಿಕ್ಕೆ ಪ್ರಥಮವಾದಂಥ ಕಾರಣ ಯಾವುದೆಂದರೆ, ಕಾಲಕಾಲಕ್ಕೆ ಚುನಾವಣೆ ನಡೆಯದೇ ಇದ್ದುದು. ಯಾವುದನ್ನು ಮಾಡಿ ಎಂದು ರಾಜೀವ್‌ಗಾಂಧಿ ಹೇಳಿದರು ಅದನ್ನು ನೀವು ಮಾಡಲಿಲ್ಲ. ಅದಕ್ಕೆ ತದ್‌ವಿರುದ್ಧವಾಗಿ ನಡೆದುಕೊಂಡು ಸತ್ತು ಸ್ವರ್ಗದಲ್ಲಿರುವಂತಹ ಅವರ ಆತ್ಮಕ್ಕೆ ಅಪಚಾರ ಮಾಡಿದ್ದೀರೆಂದು ನಾನು ವಿಧಿ ಇಲ್ಲದೆ ಹೇಳಬೇಕಾಗುತ್ತದೆ.

ಚುನಾವಣೆಗಳನ್ನು ನಿಯರೆಸ್ಟ್ ಅಪ್ಲೈಬಲ್ ಸೆನ್ಸಸ್ ಮೇಲೆ ಮಾಡಬೇಕು ಎಂಬ ಕಾನೂನು ಇದೆ. Right message should go to the people from this House. I fully agree with you.

ನಾನು ಇಲ್ಲಿ ಮಾತನಾಡುವಾಗ, ಇಲ್ಲಿ ಇರತಕ್ಕ ನನ್ನ ಸ್ನೇಹಿತರು ಇಷ್ಟು ಜನ ಮಾತ್ರ ಇದ್ದಾರೆ ಎಂದು ಭಾವಿಸಿಕೊಳ್ಳುವುದಿಲ್ಲ. ನನ್ನ ನಡತೆಯನ್ನು, ನನ್ನ ಮಾತನ್ನು ಲಕ್ಷಾಂತರ ಜನ ಹೊರಗಡೆ ಕೇಳುತ್ತಿದ್ದಾರೆ ಎನ್ನತಕ್ಕ ಸಂಪೂರ್ಣ ಪ್ರಜ್ಞೆಯನ್ನು ಇಟ್ಟುಕೊಂಡು ನಾನು ಮಾತನಾಡುತ್ತಿದ್ದೇನೆ. ೧೫.೧.೧೯೯೧ರಲ್ಲಿ ಹಿಂದೆ ಇದ್ದಂಥ ಕಾನೂನು ವ್ಯವಸ್ಥೆಯ ಮೇಲೆ ಚುನಾವಣೆ ಮಾಡಬೇಕಾಗಿತ್ತು. ಅದರ ಕಾಲಾವಧಿ ಆಗ ಮುಗಿದುಹೋಗಿ ಈಗಾಗಲೇ ಎರಡು ವರ್ಷ ಆಗಿದೆ ಅಂದರೆ, ನೀವು ಆಗ ಚುನಾವಣೆ ಮಾಡಿದ್ದರೆ ಆಗ ಕೊಶ್ಚನ್ ಮಾಡಲು ಅಡ್ಡಿ ಇರಲಿಲ್ಲ. ಸೆನ್ಸಸ್ ಯಾವುದು ಲಭ್ಯ ಇದೆ, ಆ ಲಭ್ಯ ಇರತಕ್ಕ ಸೆನ್ಸಸ್ ಆಧಾರದ ಮೇಲೆ ಚುನಾವಣೆ ಮಾಡಬೇಕು ಎನ್ನತಕ್ಕ ಕಾನೂನು ಇದೆ. ಅದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ೧೫.೧.೧೯೯೧ರಲ್ಲಿ ಯಾವ ಸೆನ್ಸಸ್ ಇತ್ತು ಏನು ಜನಸಂಖ್ಯೆ ಆಧಾರ ಇತ್ತೋ ಅದನ್ನು ಇಟ್ಟುಕೊಂಡು ಚುನಾವಣೆ ಮಾಡಲಿಕ್ಕೆ ಅಡ್ಡಿ ಇರಲಿಲ್ಲ. ಚುನಾವಣೆ ಮಾಡಿದರೆ ಒಂದು ವರ್ಷದಲ್ಲಿ ಮೂರು ಚುನಾವಣೆ ಮಾಡಬೇಕಾಗುತ್ತದೆ ಎನ್ನತಕ್ಕ ವಾದ ಇದೆ ಇದನ್ನು ಒಪ್ಪಲಿಕ್ಕೆ ಸಾಧ್ಯವಿಲ್ಲ. ತಾವು ಚುನಾವಣೆ ಮಾಡಿದರೆ ಗ್ರಾಮೀಣ ಜನತೆ ಅಧಿಕಾರ ಮಾಡುವಂಥ ಅಥವಾ ಕರ್ತವ್ಯ ನಿರ್ವಹಣೆ ಮಾಡುವಂಥ ಒಂದು ಅವಕಾಶ will all my coinscious at my command, Iam arguing that this government has failed to conduct the elections for political reasons. ನಾನು ೯೧ ಎಂದು ತಿಳಿದುಕೊಂಡಿದ್ದೆ, ಅದು subjet to correction. Am I right? ಇನ್ನು ಮುಂದಿನ ವಿಷಯಕ್ಕೆ ಹೋಗಲು ನಾನು ಇಷ್ಟಪಡುತ್ತೇನೆ.

ಗ್ರಾಮೀಣ ಜನತೆಯ ಬದುಕನ್ನು ಹಸನಾಗಿ ಮಾಡಲು ಈ ತಿದ್ದುಪಡಿಯನ್ನು ತರಲಾಗಿದೆ ಎಂಬ ಮಾತನ್ನು ಹೇಳಿದ್ದೀರಿ. ಗ್ರಾಮೀಣ ಜನತೆಯೇ ಅಧಿಕಾರವನ್ನು ಹಂಚಿಕೊಳ್ಳತಕ್ಕಂತಹ ಈ ಸಂದರ್ಭದಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗದವರಿಗೆ ಹಾಗೂ ಹಿಂದುಳಿದವರಿಗೆ ಸಾಕಷ್ಟು ಅವಕಾಶ ಸಿಗದೆ ಇದ್ದದ್ದು ಒಂದು ಕಾರಣ ಎಂಬುದನ್ನು ಅವರು ಪ್ರಸ್ತಾಪ ಮಾಡಿದ್ದಾರೆ. ನಾನು ಎಲ್ಲವನ್ನೂ ವಿರೋಧ ಮಾಡಲು ಸಿದ್ಧವಿಲ್ಲ. ನಾವು ತಂದಂಥ ವ್ಯವಸ್ಥೆಯಲ್ಲಿ ಹಿಂದುಳಿದ ವರ್ಗದವರಿಗೆ ಮೀಸಲಾತಿ ಇರಲಿಲ್ಲ. ನೀವು ಈಗ ಮೀಸಲಾತಿಯನ್ನು ತಂದಿದ್ದೀರಿ. ಅದನ್ನು ನಾನು ಸ್ವಾಗತ ಮಾಡುತ್ತೇನೆ. ಅದರ ಗೊಂದಲ ಬೇರೆ ಇದೆ. ಅದಕ್ಕೆ ಆಮೇಲೆ ಬರುತ್ತೇನೆ. ಈ ವಿಧೇಯಕವನ್ನು ತಂದಿರತಕ್ಕಂಥ ಮಂತ್ರಿಗಳು ರಾಜಮನೆತನದವರು. ಆದುದರಿಂದ ಅವರಿಗೆ

ಗ್ರಾಮೀಣ ಪ್ರದೇಶದ ಅಭಿವೃದ್ಧಿಗಾಗಿ ತರುವಂಥ ಕಾನೂನಾಗಲೀ, ವಿಧೇಯಕವಾಗಲೀ ಅವರಲ್ಲಿ ಏನಾದರೂ ರಿಸರ್ವೇಷನ್ಸ್ ಇವತ್ತು ಇದೆ ಎಂದು ನಾನು ಭಾವಿಸಿಕೊಳ್ಳುವುದಿಲ್ಲ.

ಸಂಪತ್ತಿನ ಮಧ್ಯದಲ್ಲಿ ಬೆಳೆದಂಥ ಅನೇಕ ಜನರು ಬಡವರ ಮಧ್ಯದಲ್ಲಿ, ಗುಡಿಸಲಿನಲ್ಲಿ, ಸ್ಲಮ್‌ಗಳಲ್ಲಿ ಕೆಲಸ ಮಾಡಿದಂಥ ನಿದರ್ಶನಗಳನ್ನು ನಾನು ನೋಡಿದ್ದೇನೆ. ಆದರೆ ಒಂದು ಮಾತು ನಿಜ. ನಾವು ಬೆಳೆದಂಥ ಪರಿಸರ, ಬದುಕಿನಲ್ಲಿ ಅನುಭವ ಬಹುಶಃ ನೀವು ಒಪ್ಪುತ್ತೀರಿ ಎಂದು ನಾನು ಭಾವಿಸುತ್ತೇನೆ. ಸಾರ್ವಜನಿಕ ಜೀವನದಲ್ಲಿ ಅಷ್ಟೇ ಅಲ್ಲ, ನಮ್ಮ ಸ್ವಂತ ಜೀವನದಲ್ಲಿ ನಮ್ಮ ಕಾರ್ಯವೈಖರಿಯ ಮೇಲೆ ಅದು ಹೆಚ್ಚಿನ ಪ್ರಭಾವವನ್ನು ಬೀರುತ್ತದೆ ಎಂದು ನಂಬಿಕೊಂಡಿರುವವನು ನಾನು. ಸನ್ಮಾನ್ಯ ಮಂತ್ರಿಗಳು ಇದಕ್ಕೆ ಒಂದು ಎಕ್ಸೆಪ್‌ಷ್ನಲ್ ಎಂದು ನಾನು ಭಾವಿಸಿಕೊಂಡಿರುವವನು. ಸನ್ಮಾನ್ಯ ಮಂತ್ರಿಗಳು ಇದಕ್ಕೆ ಒಂದು ಎಕ್ಸೆಪ್‌ಷ್ನಲ್ ಎಂದು ನಾನು ಭಾವಿಸಿಕೊಂಡಿದ್ದೀನೆ. ನಮ್ಮ ಹಿರಿಯರಾದ ಚಂದ್ರೇಗೌಡರು ಹೇಳಿದರು ಕೇಂದ್ರೀಕೃತ ಅಧಿಕಾರವನ್ನು ತೆಗೆದು ವಿಕೇಂದ್ರೀಕೃತ ಅಧಿಕಾರವನ್ನು ತರುವಂಥ ಮನೋದಯನ್ನು ತಂದಿರುವವರು ಆಗಿದ್ದಾರೆ ಎಂದು ಹೇಳಿದರು. ಅದನ್ನು ನಾನು ಅಲ್ಲಗಳೆಯುವುದಿಲ್ಲ. ಆದರೆ ಗ್ರಾಮಾಂತರ ಜನರಿಗೆ ಅವರದೇ ಆದಂತಹ ನಿಲುವೂ ಕೂಡ ಇದೆ. ಈ ಬದುಕುವ, ನೋವುನಲಿವನ್ನು ಅನುಭವಿಸುವುದರಲ್ಲೂ ಇವರಿಗೆ ಅವಕಾಶ ಸಿಗಲಿಲ್ಲವಲ್ಲಾ ಎಂಬುದಷ್ಟೇ ತಕರಾರು. ನಾವು ಅದೃಷ್ಟವಂತರು. ನನಗೆ ಹಸಿದ ಹೊಟ್ಟೆ ಗೊತ್ತು. ಅಪಾರವಾದ ಅನ್ನದ ರಾಶಿ ಬಿದ್ದಿರುವುದೂ ನನಗೆ ಗೊತ್ತು. ಅವೆರಡನ್ನೂ ನಾನು ನೋಡಿದ್ದೇನೆ. ಆದರೆ ಗ್ರಾಮೀಣ ಬದುಕನ್ನು ಸಂಪೂರ್ಣವಾಗಿ ತಾವೇ ಅನುಭವಿಸುವಂಥ ಒಂದು ಸಂದರ್ಭ ಅವರಿಗೆ ಸಿಗಲಿಲ್ಲವೇನೋ ಎಂದು ನನಗೆ ವ್ಯಥೆ. ಬಹುಶಃ ನಿನ್ನೆದಿನ್ನದ ಹಿನ್ನೆ ಅವರು ಒಂದು ಮಾತನ್ನು ಹೇಳಿದರು. My commitment for the decentralisation is total and complete.

ಆದರೆ, ಆ ಹಿರಿಯರಿಗೆ ತಮ್ಮ ಸಮಾನಾಂತರ ಒಂದು ಮಾತನ್ನು ನಾನು ಹೇಳುವುದಕ್ಕೆ ಇಷ್ಟಪಡುತ್ತೇನೆ. ಒಬ್ಬ ವ್ಯಕ್ತಿಗೆ ತನ್ನೆಲ್ಲ ಅಭಿಲಾಷೆಗಳನ್ನು ಕಾರ್ಯರೂಪಕ್ಕೆ ತರುವುದಕ್ಕೆ ಸಾಧ್ಯವಾಗುವುದಿಲ್ಲ. Iam not questioning your commitment. Iam just complaining that you are unable to bring all your commitments to the practical field.

ಇದು ನನ್ನ ತಕರಾರು. ನಿಮ್ಮ ಅಭಿಲಾಷೆಯ ಬಗ್ಗೆ, ನಿಮ್ಮ ಕಮಿಟ್‌ಮೆಂಟಿನ ಬಗ್ಗೆ, ನಿಮ್ಮ ಆಸಕ್ತಿಯ ಬಗ್ಗೆ ನಾನು ಪ್ರಶ್ನೆ ಮಾಡುತ್ತಿಲ್ಲ. ಆದರೆ ನಿಮ್ಮೆಲ್ಲ ಅಭಿಲಾಷೆಗಳನ್ನು ಕಾರ್ಯರೂಪಕ್ಕೆ ತರುವಂಥ ಅವಕಾಶ ನಿಮಗೆ ಸಿಗುತ್ತಿಲ್ಲ. ಅದಕ್ಕೆ ಕಾರಣ ನೀವೊಬ್ಬರು ವ್ಯಕ್ತಿಯಲ್ಲ. ಅದಕ್ಕೆ ಕಾರಣ ಇಡೀ ವ್ಯವಸ್ಥೆ. ಅದನ್ನೇ ನಾನು ಮೊದಲೇ ಪ್ರಸ್ತಾಪ ಮಾಡಿದ್ದು. ಈ ಒಂದು ವಿಧೇಯಕ ಏನಿದೆ, ಇವತ್ತು ನೀವು ತಂದಿರುವುದು ಹೊಸದಲ್ಲ. It is a futile exercise. ವ್ಯರ್ಥ ಸಾಧನೆ. ಕಾರಣವಿಷ್ಟೆ, ಜನತಾ ಪಕ್ಷದವರು ನಾವು ಅಧಿಕಾರಕ್ಕೆ ಬಂದಾಗ ಒಂದು ವ್ಯವಸ್ಥೆಯನ್ನು ತಂದೆವು. ಅದರ ಮೇಲೆ ಚುನಾವಣೆ ಮಾಡಿಬಿಟ್ಟರು, ನಾವು ಹೊಸದಾಗಿ ಏನೂ ಮಾಡಲಿಲ್ಲವಲ್ಲ ಎಂದು ಹೇಳಿಕೊಳ್ಳುವುದಕ್ಕೆ ಏನೋ ಒಂದು ಹೊಸ ದೊಡ್ಡ ಸಾಧನೆ. ನಮ್ಮ ಶ್ರೀಮಾನ್ ಚಂದ್ರೇಗೌಡರು ಹೇಳಿದ ಹಾಗೆ. ಒಂದು ಹೊಸ ಪ್ರಯೋಗವನ್ನೇ ಮಾಡಿಬಿಟ್ಟಿದ್ದೇವೆ ಎಂದು ಹೇಳಿ ನಮ್ಮನ್ನು ಭ್ರಮಾಲೋಕಕ್ಕೆ ತೆಗೆದುಕೊಂಡು ಹೋಗುವುದಕ್ಕೆ ಈ ಒಂದು ವ್ಯರ್ಥ ಸಾಧನೆಯನ್ನು ನೀವು ಮಾಡುತ್ತಿದ್ದೀರಿ. ಸನ್ಮಾನ್ಯ ಮಂತ್ರಿಗಳ ಹೇಳಿಕೆ ಏನಿದೆ, My commitment is toal and complet. ಎನ್ನುವುದಕ್ಕೆ ನಾನು ಒಪ್ಪಲಿಕ್ಕೆ ಸಿದ್ಧನಿಲ್ಲ. ಅದಕ್ಕೆ ಕಾರಣ ಏನು ಎಂದರೆ, ೧೯೮೦ರ ದಶಕದಲ್ಲಿ ಈ ರಾಜ್ಯದಲ್ಲಿ

ಕಾರ್ಯರೂಪಕ್ಕೆ ತಂದಂಥ ಗ್ರಾಮೀಣ ಭಾರತದ ಆಡಳಿತ ವ್ಯವಸ್ಥೆಗೂ ಇದಕ್ಕೂ ಇರುವಂಥ ವ್ಯತ್ಯಾಸ ಮೂಲಭೂತವಾಗಿ ಎಂದರೆ, ನಾನು ಕಣ್ಣಿಗೆ ಎಣ್ಣೆಬಿಟ್ಟುಕೊಂಡು ಓದಿದೆ. ಎಲ್ಲವನ್ನೂ ಹೇಳುವುದಕ್ಕೆ ನಾನು ಸಿದ್ಧನಿಲ್ಲ. ನಾನೇ ಆಗಲೇ ಹೇಳಿದ್ದೇನೆ. ದಿವಂಗತ ನಜೀರ್ ಸಾಹೇಬರು ನೂರಕ್ಕೆ ನೂರು ಅರ್ಪಣಾ ಮನೋಭಾವದ ಫಲವಾಗಿ ಈ ವ್ಯವಸ್ಥೆ ಕಾರ್ಯರೂಪಕ್ಕೆ ಬರುವವರೆಗೆ ಅವರ ಜೊತೆಯಲ್ಲಿ ಇರುವಂಥ ಅವಕಾಶ ನಮಗೆ ಒದಗಿತ್ತು. ಈ ವ್ಯವಸ್ಥೆಯಲ್ಲಿ ಚುನಾಯಿತ ಪ್ರತಿನಿಧಿ ಸಂಪೂರ್ಣ ಅಧಿಕಾರವನ್ನು ಚಲಾಯಿಸುವಂಥ ಅವಕಾಶವನ್ನು ನಾವು ಕೊಟ್ಟಿದ್ದೆವು. The people representiave was an executive head ಕಾರ್ಯ ನಿರ್ವಾಹಕ ಮುಖ್ಯಸ್ಥ ಆಗಿದ್ದ.

ನಾನು ಇವತ್ತು ವಿಧಿ ಇಲ್ಲದೆ ಹೇಳಬೇಕಾಗುತ್ತದೆ. ಯಾವ ಜನಪ್ರತಿನಿಧಿಗಳಿಗೆ ನಾವು ಪರಿಪೂರ್ಣವಾದಂಥ ಸ್ವಾತಂತ್ರ್ಯವನ್ನು, ಆಡಳಿತಾತ್ಮಕವಾದಂಥ ಅಧಿಕಾರವನ್ನು ಕೊಟ್ಟಿದ್ದೆವೋ, ಈ ನಿಮ್ಮ ಸಂವಿಧಾನದಲ್ಲಿ ಆ ಅಧಿಕಾರವನ್ನು ನೀವು ಕಿತ್ತುಹಾಕಿದ್ದೀರಿ. ಸನ್ಮಾನ್ಯ ಅಧ್ಯಕ್ಷರೇ, What is the strength of the political power or what is the source of the political power? I think you will not disagree, if I say that it is only the people who is the source of all our power and strenght ಒಪ್ಪಿಕೊಳ್ಳುವುದಾದರೆ ಯಾರಿಂದ ನಿಮಗೆ ಅಧಿಕಾರ ಬಂದಿದೆಯೋ, ಯಾರಿಂದ ಅಧಿಕಾರವನ್ನು ಪಡೆದುಕೊಂಡಿದ್ದೀರೋ ಆ ಜನಗಳಿಗೆ ಅಧಿಕಾರವನ್ನು ಕೊಡುವುದರ ಬಗ್ಗೆ ನಿಮಗೆ ಚೌಕಾಸಿ ಏಕೆ ಹೇಳಿ ಸ್ವಾಮಿ. ಯಾರಿಂದ ನಮಗೆ ಅಧಿಕಾರ ಬಂದಿದೆಯೋ, ಆ ೫೭ ಸಾವಿರ ಜನಗಳ ಅಧಿಕಾರವನ್ನು ಮೊಟಕು ಮಾಡಿದ್ದು ಅಲ್ಲದೆ ಮುಂದೆ ಈ ವಿಧೇಯಕದಲ್ಲಿ ಅವರ ಅಧಿಕಾರವನ್ನು ಕಿತ್ತುಕೊಳ್ಳುವಂಥ ಪ್ರಯತ್ನವನ್ನು ನೀವು ಏತಕ್ಕೆ ಮಾಡುತ್ತೀರಾ?

ಜನತಾ ಪಕ್ಷ ಸರ್ಕಾರ ತಂದಂತಹ ವ್ಯವಸ್ಥೆ ಇತ್ತೋ, ಅದಕ್ಕಿಂತಲೂ ಹೆಚ್ಚಿನ ಅಧಿಕಾರವನ್ನು ಗ್ರಾಮ ಪಂಚಾಯಿತಿಗಳಿಗೆ ಈ ಕಾನೂನಿನಲ್ಲಿ ಕೊಟ್ಟಿದ್ದೀರಾ? ಅದಕ್ಕಾಗಿ ಆ ಜನಗಳ ಪರವಾಗಿ ನಿಮ್ಮನ್ನು ಅಭಿನಂದಿಸುತ್ತೇನೆ. ಆದರೆ ಅದೇ ಔದಾರ್ಯ ಜಿಲ್ಲಾ ಪರಿಷತ್ತು ಮತ್ತು ತಾಲ್ಲೂಕು ಅಭಿವೃದ್ಧಿ ಸಮಿತಿಗಳಿಗೆ ಏಕೆ ತೋರಲಿಲ್ಲ ನಾನು ಅದನ್ನು ಓದಲಿಕ್ಕೆ ಸಿದ್ಧನಿಲ್ಲ. ನನ್ನ ವಾದ ಇಷ್ಟೇನೇ, ಮಂಡಲ್ ಪಂಚಾಯಿತಿಯಲ್ಲಿ ಜನ ಪ್ರತಿನಿಧಿಗಳಿಗೆ ಕೊಟ್ಟಿರುವಂಥ ಅಧಿಕಾರವನ್ನು ತಾಲ್ಲೂಕು ಅಭಿವೃದ್ಧಿ ಮಂಡಳಿಗಳಿಗೆ, ಜಿಲ್ಲಾ ಪಂಚಾಯಿತಿಗಳಿಗೆ ನೀವು ಕೊಟ್ಟಿಲ್ಲ. ಜನ ಪ್ರತಿನಿಧಿಗಳ ಅಧಿಕಾರವನ್ನು ಮೊಟಕು ಮಾಡಿದ್ದೀರಿ.

## ರಾಜ್ಯದಲ್ಲಿ ರೈತರು ಬೆಳೆದಿರುವ ಮೆಕ್ಕೆಜೋಳ, ಭತ್ತ, ಆಲೂಗಡ್ಡೆ, ಎಣ್ಣೆಕಾಳುಗಳು, ತೊಗರಿ ಹಾಗೂ ತೆಂಗಿನ ಬೆಲೆಗಳು ಕುಸಿದಿರುವ ಬಗ್ಗೆ

+ **ಶ್ರೀ ವೈ.ಕೆ. ರಾಮಯ್ಯ (ಹುಲಿಯೂರು ದುರ್ಗ)** ಮಾನ್ಯ ಉಪಾಧ್ಯಕ್ಷರೆ, ಇದರ ಬಗ್ಗೆ ಇಂದು ಚರ್ಚೆಯನ್ನು ಪ್ರಾರಂಭ ಮಾಡಿ ನಾಳೆಗೆ ಮುಂದುವರೆಸುತ್ತೇನೆ. ಕೃಷಿ ಉತ್ಪನ್ನಗಳ ಬೆಲೆ ಕುಸಿದಂಥ ವಿಚಾರದ ಬಗ್ಗೆ ಎಲ್ಲಾ ಸದಸ್ಯರು ಇಷ್ಟೊಂದು ನಿಶ್ಶೇಷ್ಟವಾಗಿರುವ ಸಂದರ್ಭದಲ್ಲಿ ಚರ್ಚೆಗೆ ತೆಗೆದುಕೊಳ್ಳುವುದು ಸೂಕ್ತವಲ್ಲ. ಆದ್ದರಿಂದ ದಯಮಾಡಿ ನಾಳೆ ಬೆಳಿಗ್ಗೆ ಎಲ್ಲರ ಮನಸ್ಸು ಸ್ವಚ್ಛವಾಗಿದ್ದಾಗ ಚರ್ಚೆಗೆ ತೆಗೆದುಕೊಳ್ಳಬೇಕೆಂದು ತಮ್ಮಲ್ಲಿ ಕೇಳಿಕೊಳ್ಳುತ್ತೇನೆ.

**ಉಪಾಧ್ಯಕ್ಷರು :** ಅದಕ್ಕೆ ನನ್ನ ಅಭ್ಯಂತರವೇನಿಲ್ಲ. ಆದರೆ ಇವರ ಬಗ್ಗೆ ಮಾತನಾಡುವವರು ಬಹಳ ಜನರು ಇರುವುದರಿಂದ ಅವರು ಮಾತನಾಡಲಿ. ತಾವು ಬೇಕಾದರೆ ನಾಳೆ ಬೆಳಿಗ್ಗೆ ಮಾತನಾಡಿ.

**ಶ್ರೀ ವೈ.ಕೆ. ರಾಮಯ್ಯ :** ತಾವು ಈಗ ಮಾತನಾಡಲೇ ಬೇಕು ಎಂದು ಅಪ್ಪಣೆ ಮಾಡುವುದಾಗಿದ್ದರೆ ನಾನೇ ಪ್ರಾರಂಭ ಮಾಡುತ್ತೇನೆ.

**ಉಪಾಧ್ಯಕ್ಷರು :** ಚರ್ಚೆ ಮಾಡಲೇ ಬೇಕು ಎಂದು ಒತ್ತಾಯವೇನಿಲ್ಲ. ಇವರ ಬಗ್ಗೆ ಬಹಳ ಜನರು ಮಾತನಾಡಬೇಕಾಗಿದೆ. ತಾವುಗಳೆಲ್ಲರೂ ಸಹನೆಯಿಂದ ಕುಳಿತುಕೊಂಡು ಇವರಲ್ಲಿ ಭಾಗವಹಿಸುತ್ತೇನೆ ಎಂದರೆ ಮುಂದುವರೆಸುತ್ತೇನೆ. ಬೇಡ ಎಂದರೆ ನಾಳೆಗೆ ತೆಗೆದುಕೊಳ್ಳೋಣ. ತಾವು ಪ್ರಾರಂಭ ಮಾಡಿ ಸ್ವಲ್ಪ ಮಾತನಾಡಿ.

**ಶ್ರೀ ವೈ.ಕೆ. ರಾಮಯ್ಯ :** ಮಾನ್ಯ ಉಪಾಧ್ಯಕ್ಷರೆ, ರಾಜ್ಯದಲ್ಲಿ ಕೃಷಿ ಉತ್ಪನ್ನಗಳ ಬೆಲೆ ಕುಸಿದಿರುವುದರ ಬಗ್ಗೆ ಪರಿಹಾರವನ್ನು ಕಂಡುಕೊಳ್ಳುವುದಕ್ಕೆ ನಮ್ಮ ವಿರೋಧ ಪಕ್ಷದ ನಾಯಕರು ಈ ವಿಚಾರವನ್ನು ಚರ್ಚೆಗೆ ತಂದು ಅತ್ಯಂತ ಒಳ್ಳೆಯ ಕೆಲಸವನ್ನು ಮಾಡಿದ್ದಾರೆ. ಅದಕ್ಕಾಗಿ ಅವರನ್ನು ಅಭಿನಂದಿಸುತ್ತೇನೆ. ಈ ವಿಚಾರದಲ್ಲಿ ಸಾಕಷ್ಟು ಚರ್ಚೆ ಈ ಹಿಂದೆ ಆಗಿದೆ. ಇತ್ತೀಚೆಗೆ ಕೃಷಿ ಉತ್ಪನ್ನಗಳ ಬೆಲೆ ಕುಸಿತಕ್ಕೆ ಕಾರಣಗಳನ್ನು, ಪರಿಹಾರವನ್ನು ಕಂಡುಹಿಡಿಯುವ ಪ್ರಯತ್ನ ನಡೆಯದೆಯೇ ಕೃಷಿ ಉದ್ಯಮಕ್ಕೆ ಹೊಂದಿಕೊಂಡಂತೆ ಇರುವ ಎಲ್ಲಾ ಮಜಲುಗಳನ್ನು ಜಾಲಿಸಿ ಆಡುವಂಥ ಪ್ರಯತ್ನ ಸದನದಲ್ಲಿ ನಡೆದಿದೆ. ಇದು ತಪ್ಪೇನಲ್ಲ. ಕೃಷಿ ಉತ್ಪನ್ನಗಳ ಉತ್ಪತ್ತಿಗೆ ಸಂಬಂಧಪಟ್ಟ ಸಮಸ್ಯೆಗಳನ್ನು ಹೊರತುಪಡಿಸಿ, ಕೃಷಿ ಉತ್ಪನ್ನಗಳು ಉತ್ಪಾದನೆಯಾದ ಮೇಲೆ ಮಾರುಕಟ್ಟೆ ಸಮಸ್ಯೆಗಳು, ಅಥವಾ ಆಡಳಿತ ವ್ಯವಸ್ಥೆಯಿಂದಾಗಿ ಕೃಷಿ ಉತ್ಪನ್ನಗಳ ಬೆಲೆ ಏಕೆ ಕಡಿಮೆಯಾಗುತ್ತಿದೆ, ಅದಕ್ಕೆ ಏನು ಪರಿಹಾರವನ್ನು ಕಂಡುಕೊಳ್ಳಬಹುದು ಎಂಬ ಬಗ್ಗೆ ಮಾತ್ರ ನಾನು ವಿಷಯವನ್ನು ಪ್ರಸ್ತಾಪ ಮಾಡುವ ಪ್ರಯತ್ನ ಮಾಡುತ್ತೇನೆ. ಈ ರೀತಿ ಬೆಲೆ ಕುಸಿತಕ್ಕೆ ನನ್ನ ಪ್ರಕಾರ ಮೊದಲನೆಯ ಕಾರಣ ಸಮೃದ್ಧಿಯಾದಂಥ ಬೆಳೆ. ಇದಕ್ಕೆ ತಕ್ಷಣ ಪರಿಹಾರ ಸಮೃದ್ಧಿಯಾಗಿ ಬೆಳೆಯುವುದನ್ನು ನಿಲ್ಲಿಸುವುದೇ ಏಕೆಂದರೆ ಯಾವುದೇ ವಸ್ತುವಿನ ಬೆಲೆ ಯಾವಾಗಲೂ ಪೂರೈಕೆ ಮತ್ತು ಬೇಡಿಕೆಯ ಮೇಲೆ ಅವಲಂಬಿಸಿರುತ್ತದೆ. ಈಗ ನಮ್ಮಲ್ಲಿ ಸಮೃದ್ಧಿಯಾಗಿ ಮಳೆಯಾಗಿರುವುದರಿಂದ ಉತ್ಪತ್ತಿ ಜಾಸ್ತಿಯಾಗಿದೆ. ಐದುನೂರು ರೂಪಾಯಿ ಇದ್ದಂಥದ್ದಾಗಿ ಏಕಾಏಕಿ ೩೦೦ ರೂಪಾಯಿಗಳಿಗೆ ಇಳಿದಿದೆಯೆಂದರೆ ಇದರ ಬಗ್ಗೆ ನಾವು ಆರ್ಥಿಕ ತಜ್ಞರ ಹತ್ತಿರ ಹೋಗುವ ಅವಶ್ಯಕತೆ ಇಲ್ಲ. ಉತ್ಪತ್ತಿ ಜಾಸ್ತಿಯಾಗಿದೆ ಆದ್ದರಿಂದ ಬೆಲೆ ಕಡಿಮೆಯಾಗಿದೆ. ಆದ್ದರಿಂದ ಉತ್ಪತ್ತಿಯನ್ನೇ ಕಡಿಮೆ ಮಾಡುವುದು ಸರಿಯೇ? ಅದೂ ಆಗುವುದಿಲ್ಲ. ಏಕೆಂದರೆ ಈ ದೇಶದಲ್ಲಿ ಸಂಪತ್ತಿನ ಸೃಷ್ಟಿಯಾಗಿದೆ. ಕೃಷಿ ಉತ್ಪನ್ನಗಳ ಉತ್ಪತ್ತಿ ಈ ರಾಷ್ಟ್ರಕ್ಕೆ ಎಷ್ಟು ಬೇಕೋ ಅಷ್ಟು ಆಗಿದೆ. ಅದಕ್ಕಾಗಿ ರಾಷ್ಟ್ರದ ತಜ್ಞರನ್ನು, ಕೃಷಿ ವಿಜ್ಞಾನಿಗಳನ್ನು ನಾನು ಅಭಿನಂದಿಸುತ್ತೇನೆ. ಬೆಲೆಯನ್ನು ಜಾಸ್ತಿಮಾಡಲು ನಾವು ಮಾಡಬೇಕಾಗಿರುವ ಸಣ್ಣ ಕೆಲಸವೇನೆಂದರೆ ಉತ್ಪತ್ತಿಯನ್ನು ಕಡಿಮೆ ಮಾಡುವುದು. ಆದರೆ ಇದು ಸಾಧ್ಯವಿಲ್ಲ. ಏಕೆಂದರೆ ಆರ್ಥಿಕ ತಜ್ಞರಾದ ಶ್ರೀ ಎಸ್. ಶೇಷಾದ್ರಿಯವರ ಪ್ರಕಾರ ಈ ದೇಶದಲ್ಲಿ ಸಂಪತ್ತಿನ ಉತ್ಪತ್ತಿಯಾಗಿದೆ. ಆದರೆ ಅದರ ವಿತರಣೆ ಸಮವಾಗಿ ಆಗಿಲ್ಲ. ಪಂಜಾಬ್‌ನಲ್ಲಿ ಗೋಧಿಯನ್ನು ಯಥೇಚ್ಛವಾಗಿ ಬೆಳೆದು ತುಂಬಲು ಸಾಧ್ಯವಾಗದೆ ರಾಶಿ ರಾಶಿಯಾಗಿ ಬಿದ್ದಿದೆ. ಆದರೆ ಬೆಂಗಳೂರಿನ ಬಸ್ ಸ್ಟ್ಯಾಂಡ್‌ನಲ್ಲಿ ತಿನ್ನಲು ಅನ್ನವಿಲ್ಲದೆ ಮಲಗಿಕೊಂಡಿರುವವರು ನೂರಾರು ಜನರು ಇದ್ದಾರೆ. ಅದರ ಅರ್ಥವೇನೆಂದರೆ

ತೆಂಗಿನಕಾಯಿಯ ಬೆಲೆ ಒಂದು ಸಲ ಹತ್ತು ರೂಪಾಯಿಗಳಾದರೆ ಮತ್ತೊಂದು ಸಲ ಎರಡು ರೂಪಾಯಿಗಳಿಗೆ ಬರುತ್ತದೆ. ಆಲೂಗಡ್ಡೆಯ ಬೆಲೆಯೂ ಹಾಗೆಯೇ ಆಗುತ್ತದೆ. ಕೃಷಿ ಉತ್ಪನ್ನಗಳ ಬೆಲೆಯ ಕುಸಿತವಾಗುವುದರ ಜೊತೆಗೆ ಇದರ ಬೆಲೆಯಲ್ಲಿ ಆಗುವಂಥ ಅನಿಶ್ಚಿತತೆ ಸಹ ಬಹಳ ಮುಖ್ಯವಾದ ಸಮಸ್ಯೆಯೆಂದು ನಾನು ಭಾವಿಸಿದ್ದೇನೆ. ಈ ಅನಿಶ್ಚಿತತೆ ಹಾಗೂ ಬೆಲೆ ಕುಸಿತದ ಪರಿಣಾಮವನ್ನು ನಿಭಾಯಿಸುವುದಕ್ಕೆ ಏನು ಮಾಡಬೇಕೆಂಬ ವಿಶ್ಲೇಷಣೆಯನ್ನು ನಾನು ಮಾಡಬಯಸುತ್ತೇನೆ. ಕೃಷಿ ಕ್ಷೇತ್ರದಲ್ಲಿ ಬೆಳೆ ಮತ್ತು ಬೆಲೆ ಎರಡೂ ಬಹಳ ಪ್ರಾಮುಖ್ಯವಾದುದು. ನಮ್ಮ ಬೆಳೆಗಳಿಗೆ ಉತ್ತಮವಾದಂಥ ಬೆಲೆ ಸಿಗಬೇಕು ಹಾಗೂ ನಮಗೆ ಉತ್ತಮವಾದಂಥ ಬೆಳೆಯೂ ಆಗಬೇಕು. ಉತ್ತಮವಾದಂಥ ಬೆಳೆ ಬೆಳೆಯಲು ಗೊಬ್ಬರ ಕೊಡುವುದು, ಔಷಧಿಗಳನ್ನು ಕೊಡುವುದು ಮುಂತಾದ ವಿಷಯಗಳನ್ನು ನಾನು ಬೇಸಾಯ ಇಲಾಖೆಗೆ ಸೀಮಿತವಾಗಿ ಬಿಟ್ಟು ಬಿಡುತ್ತೇನೆ. ಇವತ್ತಿನ ಸಮಸ್ಯೆ ಇರುವುದು ಬೇಸಾಯ ಇಲಾಖೆಯಲ್ಲಲ್ಲ, ಮಾರುಕಟ್ಟೆ ಇಲಾಖೆಯಲ್ಲಿದೆ. ಮಾರುಕಟ್ಟೆಯ ವಿಚಾರದಲ್ಲಿರುವ ಸಮಸ್ಯೆಗಳನ್ನು ತಮ್ಮ ಮೂಲಕ ಸದನಕ್ಕೆ, ಸದನದ ಮೂಲಕ ರಾಜ್ಯದ ಜನತೆಗೆ ನನ್ನ ಅಭಿಪ್ರಾಯಗಳನ್ನು ನಿವೇದನೆ ಮಾಡಿಕೊಳ್ಳಲು ಮಾನ್ಯ ಅಧ್ಯಕ್ಷರು ದಯವಿಟ್ಟು ನಾಳೆಗೆ ಅವಕಾಶ ಮಾಡಿಕೊಡಬೇಕೆಂದು ಅರಿಕೆ ಮಾಡಿಕೊಳ್ಳುತ್ತೇನೆ.

**ಅಧ್ಯಕ್ಷರು :** ಸಭೆಯ ದಿನದ ಕಾರ್ಯಕಲಾಪಗಳನ್ನು ಇಲ್ಲಿಗೆ ಮುಕ್ತಾಯಗೊಳಿಸುತ್ತದೆ. ಮುಂದುವರಿದ ಸಭೆಯು ನಾಳೆ ಬೆಳಿಗ್ಗೆ ೧೦-೩೦ ಗಂಟೆಗೆ ಸಮಾವೇಶಗೊಳ್ಳುತ್ತದೆ.

**ಚರ್ಚೆ ಮುಂದುವರಿದಿದೆ ದಿನಾಂಕ ೧೬.೧೧.೨೦೦೦**

+ **ಶ್ರೀ ವೈ.ಕೆ. ರಾಮಯ್ಯ (ಹುಲಿಯೂರು ದುರ್ಗ)** ಮಾನ್ಯ ಅಧ್ಯಕ್ಷರೆ, ಹಿಂದಿನ ದಿವಸದಲ್ಲಿ ಈ ವಿಷಯದ ಮೇಲ್ಲಿನ ಚರ್ಚೆಯನ್ನು ನಾನು ಪ್ರಾರಂಭ ಮಾಡಿದ್ದೆ. ಆದರೆ ಇನ್ನೂ ಮುಗಿಸಿರಲಿಲ್ಲ. ಆದ್ದರಿಂದ, ಅದೇ ವಿಷಯವನ್ನು ಇವತ್ತಿನ ದಿವಸ ಮುಂದುವರಿಸಿಕೊಂಡು ಹೋಗುತ್ತನೆ. ಇವತ್ತಿನ ದಿವಸ ರೈತರು ಬೆಳೆದಂಥ ಬೆಳೆಗೆ ಕೇವಲ ಬೆಲೆ ಕುಸಿತ ಅಷ್ಟೇ ಅಲ್ಲ, ಬೆಲೆಯ ಏಳಿತ ಬಹಳ ಪ್ರಮುಖವಾದಂಥ ಸಮಸ್ಯೆಯಾಗಿದೆ. ಬೆಲೆ ಹೆಚ್ಚು ಇರುವಂಥ ವರ್ಷದಲ್ಲಿ ಬೆಳೆಯನ್ನು ಹೆಚ್ಚಾಗಿ ಬೆಳೆಯುತ್ತಾರೆ. ಆದರೆ ಈ ಬೆಳೆ ಬರುವಷ್ಟರಲ್ಲಿ ಬೆಲೆ ಕಡಿಮೆಯಾಗುತ್ತದೆ. ಆ ಸಂದರ್ಭದಲ್ಲಿ ಇದನ್ನು ತೆಗೆದುಕೊಂಡು ಹೋಗಿ ಬೀದಿಗೆ ಸುರಿಯುತ್ತಾರೆ. ನಾನು ಈಗಾಗಲೇ ಹೇಳಿದಂತೆ, ಬೆಲೆ ಕಡಿಮೆಯಾಗುವುದರ ಜೊತೆಗೆ ಬೆಲೆಯ ಏಳಿತ ಕೂಡ ರೈತನಿಗೆ ದೊಡ್ಡ ಸಮಸ್ಯೆಯಾಗಿದೆ. ಅನೇಕ ವಸ್ತುಗಳ ಬೆಲೆ ಹೆಚ್ಚಾಗುವುದಕ್ಕೆ ಮತ್ತು ಕಡಿಮೆ ಆಗುವುದಕ್ಕೆ ನಾನಾ ಕಾರಣಗಳಿವೆ. ಬಹಳ ಪ್ರಮುಖವಾದಂಥ ಕಾರಣ ಯಾವುದೆಂದರೆ, ಯಾವ ವಸ್ತುವಿನ ಉತ್ಪತ್ತಿ ಜಾಸ್ತಿ ಯಾಗುತ್ತದೆಯೋ, ಆ ವಸ್ತುವಿನ ಉತ್ಪತ್ತಿಗೆ ಬೇಡಿಕೆ ಕಡಿಮೆಯಾಗುತ್ತದೆ. ಈ ಸಂದರ್ಭದಲ್ಲಿ ಸ್ವಾಭಾವಿಕವಾಗಿ ಬೆಲೆ ಕಡಿಮೆಯಾಗುತಕ್ಕಂಥ ಪರಿಸ್ಥಿತಿಯನ್ನು ನಾವು ಎಲ್ಲಾ ಕಾಲದಲ್ಲಿಯೂ ಸಹ ಕಾಣುತ್ತೇವೆ. ಇದರ ಜೊತೆಗೆ ಬೆಲೆಗಳು ಕಡಿಮೆ ಆಗುವುದಕ್ಕೆ ಇನ್ನು ಅನೇಕ ಕಾರಣಗಳಿವೆ. ನಮ್ಮ ಸ್ನೇಹಿತರು ಬೆಲೆ ಕುಸಿಯಲಿಕ್ಕೆ ಆಗಿರತಕ್ಕಂಥ ಕಾರಣಗಳನ್ನು ಪತ್ತೆ ಹಚ್ಚುವುದಕ್ಕೆ ಮಾಡಿದಂಥ ಪ್ರಯತ್ನವನ್ನು ನಾನು ನೋಡಿದೆ. ಇವತ್ತಿನ ದಿವಸ ನಮ್ಮಲ್ಲಿ ಸಾಕಷ್ಟು ಕೃಷಿ ಉತ್ಪನ್ನಗಳು ಉತ್ಪತ್ತಿಯಾಗುತ್ತಿದ್ದರೂ ಕೂಡ ಹೊರ ದೇಶಗಳಿಂದ ಕೃಷಿ ಉತ್ಪನ್ನಗಳನ್ನು ಆಮದು ಮಾಡಿಕೊಳ್ಳುತ್ತಿರುವ ಒಂದು ಅನಿಷ್ಟ ಪದ್ಧತಿಯಿಂದ ಬೆಲೆ ಕುಸಿತಕ್ಕೆ ಮುಖ್ಯ ಕಾರಣವಾಗಿದೆ. ನಾನು ಈ ಪದವನ್ನು ಸುಮಾರು ೨೫ ವರ್ಷಗಳಿಂದ ಉಪಯೋಗ

ಮಾಡುತ್ತಿದ್ದೇನೆ. ಇವತ್ತಿನ ದಿವಸ ಕೃಷಿ ಉತ್ಪನ್ನಗಳನ್ನು ಹೊರದೇಶದಿಂದ ಆಮದು ಮಾಡಿಕೊಳ್ಳುತ್ತಿರುವ ಅನಿಷ್ಟ ಪದ್ಧತಿಯಿಂದ ಈ ನಾಡಿನಲ್ಲಿ ಮತ್ತು ರಾಷ್ಟ್ರದಲ್ಲಿ ಕೃಷಿ ಉತ್ಪನ್ನಗಳ ಬೆಲೆ ಕುಸಿತಕ್ಕೆ ಮತ್ತು ಇದರಿಂದ ಈ ನಾಡಿನ ಕೃಷಿಕರ ಕಣ್ಣೀರಿಗೆ ಕಾರಣ ಎನ್ನತಕ್ಕಂಥ ಒಂದೇ ಒಂದು ಕಾರಣವನ್ನು ನಾನು ಹೇಳುವುದಕ್ಕೆ ಇಷ್ಟಪಡುತ್ತೇನೆ. ಸ್ವತಂತ್ರ, ಸ್ವಾಭಾವಿಕ ಮತ್ತು ಸ್ನೇಹಮಯವಾಗಿ ಈ ವಿಷಯಗಳ ಬಗ್ಗೆ ಚರ್ಚೆ ನಡೆಯಲಿ. ಇದಕ್ಕೆ ಪಕ್ಷ ಭೇದಗಳು ಬೇಡವೆಂದು ಮಾನ್ಯ ವಿರೋಧಪಕ್ಷದ ನಾಯಕರಾದಂಥ ಸನ್ಮಾನ್ಯ ಜಗದೀಶ್ ಶೆಟ್ಟರ್‌ರವರು ಅತ್ಯಂತ ಉತ್ತಮವಾದಂಥ ವಿಷಯಗಳನ್ನು ಪ್ರಸ್ತಾಪ ಮಾಡಿದ್ದಾರೆ. ಉದಾರೀಕರಣ, ಆಮದು ಮತ್ತು ಮುಕ್ತ ಮಾರುಕಟ್ಟೆ ಮಾಡುವುದಕ್ಕಾಗಿ ಏನೇನು ಕಾರಣಗಳಿವೆ ಎಂಬುದನ್ನು ನಾವು ನೋಡಬೇಕಾಗುತ್ತದೆ. ನನ್ನ ಸ್ನೇಹಿತರಾದ ಸನ್ಮಾನ್ಯ ಸಿಂಧ್ಯಾರವರು ಸಹ ಒಂದು ವಿಷಯವನ್ನು ಪ್ರಸ್ತಾಪ ಮಾಡುತ್ತಾ, 'You have to come our from the World Trade Organisation'(W.T.O) ಎಂದು ಹೇಳಿದರು. ಒಟ್ಟಾರೆ ಇದರ ಸಾರಾಂಶ ಏನೆಂದರೆ, ಬ್ರಿಟೀಷರ್ ಕಾಲದಿಂದ ಚರಿತ್ರೆಯನ್ನು ನಾವು ನೋಡಿಕೊಂಡು ಬರುತ್ತಿದ್ದೇವೆ ನಮ್ಮಲ್ಲಿ ಸಾಕಷ್ಟು ಉತ್ಪತ್ತಿ ಇದ್ದರೂ ಸಹ. I say this 'a pretext'; ಈ ಕುಂಟು ನೆಪವನ್ನು ಕೊಟ್ಟು ಹೊರದೇಶಗಳಿಂದ ಕೃಷಿ ಉತ್ಪನ್ನಗಳನ್ನು ಆಮದು ಮಾಡಿಕೊಳ್ಳುತಕ್ಕಂಥ ಕೆಟ್ಟ ಪದ್ಧತಿ ಅಥವಾ ಅನಿಷ್ಟ ಪದ್ಧತಿ ಈ ದೇಶದಲ್ಲಿ ಕೇವಲ ಬೆಲೆ ಕಡಿಮೆ ಆಗುವುದಕ್ಕೆ ಕಾರಣವಾಗುವುದಿಲ್ಲ. ಕಾಲಾಂತರದಲ್ಲಿ ಇಡೀ ಕೃಷಿ ಉದ್ಯಮ ನಾಶ ಆಗುವಂತಹ ಅಪಾಯ ನಮ್ಮ ಮುಂದೆ ಇದೆ. ಕೃಷಿ ಉತ್ಪನ್ನಗಳ ಬೆಲೆ ಜಾಸ್ತಿ ಮಾಡುವುದಕ್ಕೋಸ್ಕರ ಉತ್ಪತ್ತಿಯನ್ನು ಕಡಿಮೆ ಮಾಡತಕ್ಕಂಥದ್ದು ದಡ್ಡತನ ಆಗುತ್ತದೆ. ನಮ್ಮ ದೇಶದಲ್ಲಿ ಬೆಳೆಯುತಕ್ಕಂಥ ಕೃಷಿ ಉತ್ಪನ್ನಗಳಾದ ರೇಷ್ಮೆ, ಟೊಮೆಟೋ ಮತ್ತು ಹೂ, ಹಣ್ಣುಗಳು ಹಾಗೂ ಇನ್ನು ಅನೇಕ ವಸ್ತುಗಳ ಗುಣಮಟ್ಟ ಸರಿಯಿಲ್ಲ. ಅದ್ದರಿಂದ ನಮಗೆ ಉತ್ತಮ ಗುಣಮಟ್ಟದ ವಸ್ತುಗಳು ಬೇಕಾಗಿರುವುದಕ್ಕೋಸ್ಕರ ನಾವು ಆಮದು ಮಾಡಿಕೊಳ್ಳುತ್ತೇವೆ ಎನ್ನತಕ್ಕಂಥ ಒಂದು ಕುಂಟು ನೆಪವನ್ನೊಡ್ಡಿ ಆಮದು ಮಾಡಿಕೊಳ್ಳುವ ಅನಿಷ್ಟ ಪದ್ಧತಿಯನ್ನು ಅನುಸರಿಸತಕ್ಕಂಥ ಜನರು ಹೇಳುತ್ತಾರೆ. ನಾನೊಂದು ಮಾತನ್ನು ಈ ಸಂದರ್ಭದಲ್ಲಿ ಹೇಳುವುದಕ್ಕೆ ಇಷ್ಟಪಡುತ್ತೇನೆ. ಏಕೆಂದರೆ, ಈ ನಾಡಿನಲ್ಲಿ ಕೃಷಿ ಉತ್ಪನ್ನಗಳ ಗುಣಮಟ್ಟ ಕಡಿಮೆ ಆಗಿದ್ದರೆ, ಆ ಗುಣಮಟ್ಟವನ್ನು ಹೆಚ್ಚಿಗೆ ಮಾಡಲಿಕ್ಕೆ ಮತ್ತು ಸುಧಾರಣೆ ಮಾಡಲಿಕ್ಕೆ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕೇ ಹೊರತು ಗುಣಮಟ್ಟ ಸರಿಯಾಗಿಲ್ಲ. ಆ ಕಾರಣದಿಂದ ಹೊರದೇಶಗಳಿಂದ ಗುಣಮಟ್ಟ ಇರತಕ್ಕಂಥ ವಸ್ತುಗಳನ್ನು ಆಮದು ಮಾಡಿಕೊಳ್ಳುತ್ತೇನೆಂದು ಹೇಳತಕ್ಕಂಥದ್ದು ಅತ್ಯಂತ ದಡ್ಡತನದ ಪರಮಾವಧಿ ಆಗುತ್ತದೆ. ನಮ್ಮ ಕೃಷಿ ಉತ್ಪನ್ನಗಳಿಗೆ ಗುಣಮಟ್ಟ ಇಲ್ಲ ಎನ್ನತಕ್ಕಂಥ ಕಾರಣದಿಂದಾಗಿ ವಸ್ತುಗಳನ್ನು ಆಮದು ಮಾಡಿಕೊಳ್ಳುವಂಥದ್ದು ಸರಿಯಾದ ಕಾರಣವಲ್ಲ ಎಂದು ಈ ಸಂದರ್ಭದಲ್ಲಿ ಹೇಳುವುದಕ್ಕೆ ಇಷ್ಟಪಡುತ್ತೇನೆ. ನಮ್ಮ ದೇಶದಲ್ಲಿ ಯಾವುದಕ್ಕೋ ಕೊರತೆ ಇದೆ. ಆದರೆ ನನ್ನ ಪ್ರಕಾರ ಅತ್ಯಂತ ಹೆಚ್ಚಿನ ಕೊರತೆ ಇರತಕ್ಕಂಥದ್ದು ಎಂದರೆ ಪ್ರಾಮಾಣಿಕ ವ್ಯಕ್ತಿಗಳ ಕೊರತೆ. ಇಂಥ ಪ್ರಾಮಾಣಿಕ ವ್ಯಕ್ತಿಗಳನ್ನು ಆಮದು ಮಾಡಿಕೊಳ್ಳುವುದಕ್ಕೆ ಆಗುತ್ತದೆಯೇ ಎಂಬುದನ್ನು ನಾನು ಕೇಳುವುದಕ್ಕೆ ಇಷ್ಟಪಡುತ್ತೇನೆ. ನಮ್ಮ ದೇಶಕ್ಕೆ ಇವತ್ತಿನ ದಿವಸ ಗುಣಮಟ್ಟದ ವಸ್ತುಗಳು ಬೇಕಾಗಿಲ್ಲ, ಗುಣಮಟ್ಟದ ಜನರು ಬೇಕಾಗಿದ್ದಾರೆ. ಮೊನ್ನೆ ದಿವಸ ಇವರೆಲ್ಲರೂ ಎನ್.ಡಿ.ಡಿ.ಬಿ.ಗೆ ಹೋಗಿದ್ದರು. ಆ ಸಂದರ್ಭದಲ್ಲಿ ನಾನು ಕೂಡ ಹೋಗಿದ್ದೆ. ಈ ಸಂದರ್ಭದಲ್ಲಿ

ಅಲ್ಲಿನ ಕಾರ್ಯದರ್ಶಿಯವರು ಏನು ಕೇಳಿದರೆಂದರೆ, can you give me a list of honest officers who can implement the projects promptly? ಎಂದು ಕೇಳಿದರು. ಗುಣಮಟ್ಟದ ಕೃಷಿ ವಸ್ತುಗಳು ನಮ್ಮಲ್ಲಿ ಇಲ್ಲವೆಂದು ನೀವು ಟೊಮೆಟೋ ಮತ್ತು ರೇಷ್ಮೆ ಆಮದು ಮಾಡಿಕೊಳ್ಳುವುದಕ್ಕೆ ಆಗುತ್ತದೆಯೇ ಇದು ಸಾಧ್ಯವಾಗುವುದಿಲ್ಲ. ಆದ್ದರಿಂದಲೇ ಇದಕ್ಕೆ ನ್ಯಾಯಯುತವಾದ ಬೇಸ್ ಇಲ್ಲವೆಂದು ನಾನು ಹೇಳುತ್ತಿದ್ದೆ. ಈ ನಾಡಿನಲ್ಲಿ ಇರತಕ್ಕಂಥ ಕೃಷಿ ಉತ್ಪನ್ನಗಳ ಬೆಲೆಯನ್ನು ಸ್ಥಿರೀಕರಣಗೊಳಿಸುವುದಕ್ಕಾಗಿ ಮತ್ತು ಆಕಾಶಕ್ಕೆ ಹೋಗುತ್ತಿರತಕ್ಕಂಥ ಬೆಲೆಯನ್ನು ಇಳಿಸಲಿಕ್ಕೆ ನಾವು ಆಮದು ಮಾಡಿಕೊಳ್ಳುತ್ತೇವೆ ಎನ್ನುತಕ್ಕಂಥ ಇನ್ನೊಂದು ಕುಂಟು ನೆಪವನ್ನು ನಮ್ಮ ಮುಂದೆ ಇಟ್ಟು ಆಮದನ್ನು ಮಾಡಿಕೊಳ್ಳತಕ್ಕಂಥ ಪರಿಸ್ಥಿತಿಯನ್ನು ಸೃಷ್ಟಿ ಮಾಡಿದ್ದಾರೆ. ನನಗೆ ಅರ್ಥವಾಗದೇ ಇರತಕ್ಕಂಥ ವಿಷಯ ಏನೆಂದರೆ ೧೯೭೬ನೇ ಇಸವಿಯಲ್ಲಿ ನಾನು ಕೇವಲ ೨೬ ಸಾವಿರ ರೂಪಾಯಿಗಳನ್ನು ಕೊಟ್ಟು ಒಂದು ಅಂಬಾಸಿಡರ್ ಕಾರನ್ನು ಖರೀದಿ ಮಾಡಿದ್ದೆ. ಇವತ್ತು ಅದೆ ಅಂಬಾಸಿಡರ್ ಕಾರಿನ ಬೆಲೆ ೫ ಲಕ್ಷ ರೂಪಾಯಿಗಳಾಗಿದೆ. Can you afford to import cars. Because they will attend to your needs during elections. ಆವತ್ತಿನ ದಿವಸ ೨೬ ಸಾವಿರ ರೂಪಾಯಿಗಳಿದ್ದ ಅಂಬಾಸಿಡರ್ ಕಾರಿನ ಬೆಲೆ ಇವತ್ತು ೫ ಲಕ್ಷ ರೂಪಾಯಿಗಳಾಗಿರುವ ಪ್ರಕಾರ ಇವತ್ತಿನ ದಿವಸ ಯಾವ ಕೃಷಿ ಉತ್ಪನ್ನ ವಸ್ತುಗಳ ಬೆಲೆ ಇಷ್ಟು ಪ್ರಮಾಣದಲ್ಲಿ ಜಾಸ್ತಿಯಾಗಿಲ್ಲ. ಅದ್ದರಿಂದ ಕೈಗಾರಿಕಾ ವಸ್ತುಗಳನ್ನು ನೀವೇಕೆ ಆಮದು ಮಾಡಿಕೊಳ್ಳುತ್ತಿಲ್ಲ? I make this allegation irrespective of the parties which are in power. ಈ ರಾಷ್ಟ್ರದ ಕೈಗಾರಿಕೋದ್ಯಮಿಗಳು ಮತ್ತು ವ್ಯಾಪಾರಸ್ಥರು ಚುನಾವಣೆ ಸಂದರ್ಭದಲ್ಲಿ ನಿಮ್ಮನ್ನು ಚೆನ್ನಾಗಿ ನೋಡಿಕೊಳ್ಳುತ್ತಾರೆ ಎಂಬ ಕಾರಣಕ್ಕಾಗಿ ಕೈಗಾರಿಕಾ ವಸ್ತುಗಳನ್ನು ಈ ದೇಶಕ್ಕೆ ಆಮದು ಮಾಡಿಕೊಳ್ಳುವಂಥ ಪದ್ಧತಿಯನ್ನು ಮಾಡುತ್ತಿಲ್ಲ. ಆದರೆ, ಕೃಷಿ ಉತ್ಪನ್ನಗಳ ಬೆಲೆ ಜಾಸ್ತಿ ಆಯಿತು, ಅದ್ದರಿಂದ ಇದನ್ನು ಸ್ಟೆಬಿಲೈಜ್ ಮಾಡಬೇಕು ಎನ್ನತಕ್ಕಂಥ ಕಾರಣಕ್ಕಾಗಿ ಈ ದೇಶಕ್ಕೆ ನೀವು ಹೊರಗಡೆಯಿಂದ ಅವುಗಳನ್ನು ಆಮದು ಮಾಡಿಕೊಂಡರೆ, ಅದು ಅತ್ಯಂತ ಕೆಟ್ಟ ಪದ್ಧತಿಯಾಗುತ್ತದೆ. ಹಾಗೆಯೇ ಅದು ಕೃಷಿ ಉದ್ಯಮವನ್ನು ನಾಶ ಮಾಡುತ್ತದೆ. ತೆಂಗಿನಕಾಯಿ, ಭತ್ತ ಮತ್ತು ರಾಗಿಗಿಂತ ಹೆಚ್ಚಾಗಿ ಉಪ್ಪು ಖಾರಕ್ಕೆ ಗತಿ ಇರತಕ್ಕಂಥದ್ದು ರೇಷ್ಮೆ ಬೆಳೆ ಮಾತ್ರ. ನಮ್ಮಲ್ಲಿ ಗುಣಮಟ್ಟದ ರೇಷ್ಮೆ ಇಲ್ಲ, ಹೊರದೇಶಗಳಿಗೆ ರಫ್ತು ಮಾಡುವ ಗುಣಮಟ್ಟದ ಬಟ್ಟೆಗಳನ್ನು ತಯಾರು ಮಾಡಬೇಕಾದರೆ ಒಳ್ಳೆಯ ಗುಣಮಟ್ಟದ ರೇಷ್ಮೆ ಬೇಕು. ಅದ್ದರಿಂದ, ಆಮದು ಮಾಡಿಕೊಳ್ಳುತ್ತೇವೆಂದು ಹೇಳುತ್ತಾರೆ. ಅದರ ಗುಣಮಟ್ಟವನ್ನು ಉತ್ತಮ ಪಡಿಸುವುದಕ್ಕೆ ಪ್ರಯತ್ನ ಮಾಡಬೇಕೇ ಹೊರತು ಗುಣಮಟ್ಟದ ವಸ್ತುಗಳನ್ನು ಹೊರಗಡೆಯಿಂದ ಆಮದು ಮಾಡಿಕೊಳ್ಳತಕ್ಕಂಥದ್ದು ಬುದ್ಧಿವಂತಿಕೆಯ ಲಕ್ಷಣವಲ್ಲ. ಬೈವೋಲ್ಟಿನ ಸಿಲ್ಕ್ ಇಲ್ಲಿ ಬೆಳೆಯುವುದಿಲ್ಲ; ಅದ್ದರಿಂದ ಹೊರಗಡೆಯಿಂದ ಆಮದು ಮಾಡಿಕೊಳ್ಳುತ್ತೇವೆಂದು ಹೇಳುತ್ತಾರೆ. ಸನ್ಮಾನ್ಯ ಭೈರೇಗೌಡರು ಈ ಸಂದರ್ಭದಲ್ಲಿ ಸದನದಲ್ಲಿ ಇಲ್ಲ. ಇವರು ಅನೇಕ ಸಂದರ್ಭದಲ್ಲಿ ಇಸ್ರೇಲ್‌ನಲ್ಲಿರತಕ್ಕಂಥ ವ್ಯವಸಾಯ ಪದ್ಧತಿಗೂ ಮತ್ತು ನಮ್ಮ ವ್ಯವಸಾಯ ಪದ್ಧತಿಗೂ ಹೋಲಿಕೆ ಇಲ್ಲ ಎಂದು ಹೇಳುತ್ತಿದ್ದರು. What is relevant there is not relevant here. ಹಿಂದೆ ಒಂದು ಸಂದರ್ಭದಲ್ಲಿ ನಾನು ಒಂದು ಮಾತನ್ನು ಹೇಳಿದ್ದೆ. ಅದೇ ಮಾತನ್ನು ಈಗಲೂ ಹೇಳುವುದಕ್ಕೆ ಇಷ್ಟಪಡುತ್ತೇನೆ. ಏನೆಂದರೆ, ಅಮೇರಿಕಾ ಮತ್ತು ಜಪಾನ್ ಹಾಗೂ ಇನ್ನಿತರ ವೆಸ್ಟರ್ನ್

ಕಂಟ್ರಿಗಳಲ್ಲಿರತಕ್ಕಂಥ ಹೆಣ್ಣು ಮಕ್ಕಳು ಬಹಳ ಕಷ್ಟಪಟ್ಟು, ಪರಂಗಿ ಹಣ್ಣು ಇರುವ ರೀತಿಯಲ್ಲಿ ಅಂದರೆ, ಕೆಂಪಾದ ಮಕ್ಕಳನ್ನು ಹೆರುತ್ತಾರೆ. Can we afford to beat up our wives for having delivered babies in black colour. ಈ ದಡ್ಡತನದ ಉದಾಹರಣೆ ಇದೊಂದು ಪರಮಾವಧಿಗೆ ಅಲ್ಲವೆ? ಅಲ್ಲಿ ಹೆಣ್ಣುಮಗಳು ಬಿಳಿ ಮಗುವನ್ನು ಹೆರುತ್ತಾಳೆಂದು, ಭಾರತದೇಶದಲ್ಲಿ ನೀನೇಕೆ ಬಿಳಿ ಮಗುವನ್ನು ಹೆರಲಿಲ್ಲವೆಂದು ಹೆಂಡತಿಯನ್ನು ಹಿಡಿದುಕೊಂಡು ಹೊಡೆದರೆ ಎಷ್ಟು ದಡ್ಡತನದ ಪರಮಾವಧಿ ಆಗುತ್ತದೆಯೋ, ಅದೇ ರೀತಿಯಲ್ಲಿ ಬೈವೋಲ್ಟಿನ್ ರೇಷ್ಮೆಯನ್ನು ಇಲ್ಲಿ ಬೆಳೆಯಬೇಕು ಎನ್ನತಕ್ಕಂಥಾದ್ದು ದಡ್ಡತನದ ಪರಮಾವಧಿ ಆಗುತ್ತದೆ. ಈ ಒಂದು ಕಾರಣಕ್ಕಾಗಿ ನಾನು ಪ್ರಾರ್ಥನೆ ಮಾಡಿಕೊಳ್ಳುವುದೇನೆಂದರೆ, ಯಾವುದೇ ದೃಷ್ಟಿಯಿಂದ ವಿಷಯವನ್ನು ನಾವು ವಿಶ್ಲೇಷಣೆ ಮಾಡಿದರೆ, ಈ ದೇಶಕ್ಕೆ ಹೊರ ದೇಶಗಳಿಂದ ಕೃಷಿ ಉತ್ಪನ್ನ ವಸ್ತುಗಳನ್ನು ಆಮದು ಮಾಡಿಕೊಳ್ಳುವುದರಿಂದ ಕೇವಲ ಉತ್ಪನ್ನದ ಬೆಲೆಗಳು ಕಡಿಮೆಯಾಗುವುದಿಲ್ಲ. ಕೃಷಿ ಬೆಳೆ ಸಂಪೂರ್ಣವಾಗಿ ನಾಶವಾಗುತ್ತದೆ. ನಮ್ಮ ದೇಶದಲ್ಲಿರತಕ್ಕಂಥ ರೇಷ್ಮೆ ಬೆಲೆಗಿಂತ ಕಡಿಮೆ ದರದಲ್ಲಿ ಚೈನಾದವರು ರೇಷ್ಮೆ ಬೆಳೆಯನ್ನು ನಮ್ಮ ದೇಶಕ್ಕೆ ಮಾರಾಟ ಮಾಡಲು ಸಿದ್ಧರಿದ್ದಾರೆ. ನಮ್ಮ ದೇಶವನ್ನು ಉದ್ಧಾರ ಮಾಡಬೇಕೆಂದಾಗಲಿ ಅಥವಾ ರೈತರಿಗೆ ಸಹಾಯ ಅಥವಾ ನಮ್ಮ ದೇಶದ ರೇಷ್ಮೆ ಉದ್ಯಮವನ್ನು ಉನ್ನತಮಟ್ಟಕ್ಕೆ ತೆಗೆದುಕೊಂಡು ಹೋಗಬೇಕೆಂಬುದು ಅವರ ಉದ್ದೇಶ ಅಲ್ಲ. ರೇಷ್ಮೆಯನ್ನು ಕಡಿಮೆ ಬೆಲೆಗೆ ಮಾರಾಟ ಮಾಡುವುದರ ಮುಖಾಂತರ ನಮ್ಮ ನಾಡಿನ ರೇಷ್ಮೆ ಬೆಲೆ ಕಡಿಮೆ ಆಗಿ ರೈತರು ರೇಷ್ಮೆ ಹುಳುವಿಗೆ ಬೇಕಾಗಿರತಕ್ಕಂಥ ಉಪ್ಪನೇರಳೆ ಕಡ್ಡಿಯನ್ನು ಕಿತ್ತು ಹಾಕಿ ಇಡೀ ಉದ್ಯಮ ನಾಶವಾದರೆ, India can't compete with China in the international market.ನಮ್ಮ ರೈತರನ್ನು ನಾಶ ಮಾಡುವುದಕ್ಕಾಗಿ ಈ ರೀತಿಯಾದ ಕುತಂತ್ರಗಳನ್ನು ಹೊರದೇಶದವರು ಮಾಡುತ್ತಿದ್ದಾರೆ. ಆದ್ದರಿಂದ ಈ ಆಮದು ಮಾಡಿಕೊಳ್ಳುತಕ್ಕಂಥ ಪದ್ಧತಿಯನ್ನು ಸಂಪೂರ್ಣವಾಗಿ ನಿಲ್ಲಿಸಬೇಕೆಂದು ಕೇಂದ್ರ ಸರ್ಕಾರಕ್ಕೆ ನಾನು ಮನಃಪೂರ್ವಕವಾಗಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಕೃಷಿಕರ ಹಿತದೃಷ್ಟಿಯಿಂದ ಯಾವ ಪಕ್ಷದ ಸರ್ಕಾರದವರು ಇವತ್ತಿನ ದಿವಸ ಅಧಿಕಾರದಲ್ಲಿ ಇದ್ದಾರೆಯೋ ಅವರ ಮೇಲೆ ಒತ್ತಾಯ ತರಬೇಕೆಂದು ನನ್ನ ಸ್ನೇಹಿತರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಈ ಉದಾರೀಕರಣ, ಡಬ್ಲ್ಯೂಟಿಓ ಬಗ್ಗೆ ಎಲ್ಲರೂ ಮಾತನಾಡುವಾಗ ನಾನು ಸುಮ್ಮನೆ ಕುಳಿತು ಅವರ ವಾದವನ್ನು ಕೇಳಿದೆ. ೧೯೯೧ನೇ ಸಾಲಿನಲ್ಲಿ ಮಾನ್ಯ ಶ್ರೀ ಪಿ.ವಿ. ನರಸಿಂಹರಾಯರು ಪ್ರಧಾನಮಂತ್ರಿಯಾಗಿದ್ದ ಕಾಲದಲ್ಲಿ ಶ್ರೀ ಮನಮೋಹನಸಿಂಗ್ ರವರು ಆರ್ಥಿಕ ಸಚಿವರಾಗಿದ್ದಾಗ ಈ ಉದಾರೀಕರಣದ ನೀತಿಯನ್ನು ಜಾರಿಗೆ ತಂದರು. ಅವತ್ತಿನಿಂದ ಈ ಉದಾರೀಕರಣದ ನೀತಿಯ ಫಲವಾಗಿ ನಮ್ಮ ಮಾನ್ಯ ವಿರೋಧ ಪಕ್ಷದ ನಾಯಕರು ಹೇಳಿದ ಕಾರಣಕ್ಕಾಗಿ ನಾನು ಇಲ್ಲಿ ಹೇಳಬೇಕಾಗಿ ಬಂದಿರುತ್ತದೆ; ಅದರಿಂದ ಕೃಷಿ ಉತ್ಪನ್ನಗಳ ಬೆಲೆ ಕಡಿಮೆಯಾಗುತ್ತಿದೆ ಎನ್ನುವ ಮಾತನ್ನು ಅವರು ಇಲ್ಲಿ ಹೇಳಿದರು. ನಾನು ಇದನ್ನು ಸತ್ಯವೆಂದು ಒಪ್ಪಿಕೊಂಡರು ಕೂಡ At the time of introducing this system, there was a list called "Negative List". ಆದರೆ ಆ ನೆಗೆಟಿವ್ ಲಿಸ್ಟ್‌ನ್ನು ಇವತ್ತು ಸ್ಕ್ರಾಪ್ ಮಾಡಿದ್ದಾರೆ.

**ಶ್ರೀ ವೈ.ಕೆ. ರಾಮಯ್ಯ :** ಈ ಒಂದು ವಿಷಯ ಬಹಳ ಗಹನವಾದ ಮತ್ತು ಆಳವಾದ ಒಂದು ಚರ್ಚೆಗೆ ಅವಕಾಶ ಮಾಡಿಕೊಡುತ್ತದೆಂದು ಹೇಳುವುದಕ್ಕೆ ನಾನು ಇಷ್ಟಪಡುತ್ತೇನೆ. ಡಬ್ಲ್ಯೂಟಿಓ

ಎಂದು ಹೇಳತಕ್ಕಂಥ ವಿಷಯ ಬಹಳ ಸುಲಭವಾದದ್ದು, ಪ್ರಪಂಚದಲ್ಲಿ ಸ್ಪರ್ಧೆಗೆ ಹಿಂಜರಿಯುವುದಾದರೆ ಭಾರತದೇಶ ಮುಂದುವರೆಯುವುದಕ್ಕಾಗುವುದಿಲ್ಲ. ಆ ದೃಷ್ಟಿಯಿಂದ ಹೇಳುವುದಾದರೆ ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿ ಭಾಗವಹಿಸುವುದು ನಮಗೆ ಅನಿವಾರ್ಯ. ಸ್ಪರ್ಧಾತ್ಮಕವಾದಂತಹ ಕೃಷಿ ಮಾರುಕಟ್ಟೆಯಲ್ಲಿ ಬಾಗವಹಿಸುವುದು ನಮಗೆ ಅನಿವಾರ್ಯ. ಸ್ಪರ್ಧಾತ್ಮಕವಾದಂತಹ ಕೃಷಿ ಮಾರುಕಟ್ಟೆಯಲ್ಲಿ ರಾಷ್ಟ್ರಮಟ್ಟವಲ್ಲೆಲ್ಲ, ವಿಶ್ವಮಟ್ಟದಲ್ಲಿ ನಾವು ಭಾಗವಹಿಸಬೇಕಾದರೆ ನಮ್ಮ ಕೃಷಿ ಉತ್ಪನ್ನಗಳ ಗುಣಮಟ್ಟವನ್ನು ಸುಧಾರಣೆ ಮಾಡುವುದು ಅಷ್ಟೇ ಅನಿವಾರ್ಯವಾಗಿದೆ. ಅದಕ್ಕಾಗಿ ನಾನು ತಮ್ಮಲ್ಲಿ ಪ್ರಾರ್ಥಿಸುತ್ತೇನೆ. ಗುಣಮಟ್ಟವನ್ನು ಹೆಚ್ಚಿಸುವ ದಿಸೆಯಲ್ಲಿ ಉತ್ತಮವಾದಂತಹ ತಳಿಗಳನ್ನು ಕಂಡುಹಿಡಿಯುವಂತಹ ದೃಷ್ಟಿಯಲ್ಲಿ ಕಾರ್ಯಕ್ರಮಗಳನ್ನು ಹಾಕಿಕೊಂಡು ರಾಷ್ಟ್ರದಲ್ಲಿ ಕೃಷಿ ಉತ್ಪನ್ನಗಳ ಗುಣಮಟ್ಟವನ್ನು ಹೆಚ್ಚಿಸುವ ಕಡೆಗೆ ಗಮನವನ್ನು ಕೊಡಬೇಕಾದುದು ಅತ್ಯಂತ ಜರೂರು ಕ್ರಮವಾಗಬೇಕಾಗುತ್ತದೆ. ಅದನ್ನು ಬಿಟ್ಟು ವರ್ಲ್ಡ್ Trade ಆರ್ಗನೈಜೇಷನ್‌ನಿಂದ ಈಚೆಗೆ ಬನ್ನಿ ಎಂದು ಹೇಳುವುದು ತಾತ್ಕಾಲಿಕವಾಗಿ ಸರಿ ಎಂದು ಕಾಣಬಹುದು. It will not be a long term remedy. ಆ ಒಂದು ದೃಷ್ಟಿಯಿಂದ ನಾನು ಹೇಳುತ್ತಿದ್ದೇನೆ. It is the only remedy ಎಂದು ನಮ್ಮ ಸ್ನೇಹಿತರು ಹೇಳುತ್ತಿದ್ದಾರೆ. ನನ್ನ ದೃಷ್ಟಿಯಿಂದ ಹೇಳುವುದಾದರೆ, ವಿಶ್ವ ಮಾರುಕಟ್ಟೆಯಲ್ಲಿ ಭಾರತದೇಶ ತಲೆಯನ್ನು ಎತ್ತಿ ನಿಲ್ಲಬೇಕಾದರೆ ತನ್ನ ಗುಣಮಟ್ಟವನ್ನು ಸುಧಾರಿಸಿಕೊಳ್ಳಲೇ ಬೇಕಾಗುತ್ತದೆ. ಇದು ನಿರ್ವಿವಾದವಾಗಿದೆ. ಆದರೆ ಇದಕ್ಕೆ ಚಿಕ್ಕದಾರಿಗಳು, ಅಡ್ಡದಾರಿಗಳನ್ನು ಹಿಡಿಯುವುದು ಬೇಡ ಈ ಅನುದಾನದ ಬಗ್ಗೆ ಬಹಳ ವರ್ಷಗಳಿಂದ ೧೯೮೫ನೇ ಇಸವಿಯಲ್ಲಿ ನಮ್ಮ ನಾಡಿನ ಇಂಗ್ಲಿಷ್ ಪತ್ರಿಕೆಯೊಂದು ಒಂದು ಮಾತನ್ನು ಹೇಳುತ್ತದೆ. ಆ ಮಾತನ್ನು ತಮ್ಮ ಗಮನಕ್ಕೆ ತರುವುದಕ್ಕಾಗಿ ನಾನು ಓದುತ್ತೇನೆ.

"In the short the policy of the Union Government, no doubt,
ensure that the prices paid for commodity may come down,
but this strategy cound have disastrous long term
consequences for the country's agriculture sector."

ಆದ್ದರಿಂದ ಬೆಲೆಯು ಜಾಸ್ತಿಯಾಯಿತೆಂದು ದಿಢೀರನೆ ಹೊರದೇಶದಿಂದ ತರಿಸುವುದು ಸರಿಯಲ್ಲ. ಈರುಳ್ಳಿಯ ಬೆಲೆ ೫೦ ರೂಪಾಯಿಗಳು ಆಗಲಿ ಅಂಬಾಸಿಡರ್ ಕಾರಿನ ಬೆಲೆ ೨೬ ಸಾವಿರ ರೂಪಾಯಿಗಳು ಇದ್ದದ್ದು ೫ ಲಕ್ಷ ರೂಪಾಯಿಗಳಾದರೆ, ಈರುಳ್ಳಿಯ ಬೆಲೆ ಏತಕ್ಕಾಗಿ ಹೆಚ್ಚು ಆಗಬಾರದು? ರಾಗಿ, ಸಿಲ್ಕ್, ಟೊಮೆಟೋ ಬೆಲೆ ಏತಕ್ಕಾಗಿ ಹೆಚ್ಚಾಗಬಾರದು? ೨ ರೂಪಾಯಿಗಳಿಗೆ ಒಂದು ಗಜ ಬಟ್ಟೆ ಇದ್ದದ್ದು ೨೦೦ ರೂಪಾಯಿಳಿಗೆ ಒಂದು ಗಜ ಬಟ್ಟೆಯ ಧಾರಣೆಯಾಗಿದೆ. ಈ ದೇಶದಲ್ಲಿ ಇದರ ಬಗ್ಗೆ ಯಾರೂ ಕೇಳದವರಿಲ್ಲವೇ? ಅದಕ್ಕಾಗಿ ನಾನು ಹೇಳುತ್ತಿರುವುದು, ಬೆಲೆಯನ್ನು ಕಡಿಮೆ ಮಾಡಬೇಕೆಂಬ ದೃಷ್ಟಿಯಿಂದ ಹೊರಗಡೆಯಿಂದ ಆಮದು ಮಾಡಿಕೊಳ್ಳುವಂತಹದ್ದು ಕುಂಟು ನೆಪವಾಗಿದೆ; ಅದು ಸರಿಯಾದ ನೆಪವಲ್ಲ. ಆದುದರಿಂದ ಸಂಪೂರ್ಣವಾಗಿ ಉದಾರೀಕರಣ ಅಥವಾ ಈ ಒಂದು ಆಮದು ನೀತಿಯನ್ನು ವಿರೋಧ ಮಾಡುವುದಕ್ಕೆ ಸಾಧ್ಯತೆ ಇಲ್ಲದೇ ಇದ್ದರೂ ಕೂಡ ನನ್ನ ಪ್ರಾರ್ಥನೆ ಏನೆಂದರೆ, ಇದರ ಬಗ್ಗೆ ನಾನು ಇಡೀ ವಾದವನ್ನು ಕೇಳಿದ್ದೇನೆ. ೧೯೯೧ರ ಈಚೆಗೆ ತಂದಂತಹ ಉದಾರೀಕರಣದ ಪದ್ಧತಿಯಿಂದಾಗಿ ಕೃಷಿ ಉತ್ಪನ್ನಗಳ ಬೆಲೆ ಕಡಿಮೆಯಾಗುತ್ತಿದೆ. ಅವತ್ತಿನ ಪರಿಸ್ಥಿತಿ, ಅವತ್ತಿನ ಆರ್ಥಿಕ ದುಸ್ಥಿತಿ ಬಹುಶಃ ಆ ತೀರ್ಮಾನವನ್ನು ತೆಗೆದುಕೊಳ್ಳುವುದಕ್ಕೆ

ಅವರಿಗೆ ಪ್ರೇರಣೆಯಾಗಿರಬಹುದು. ನಾನು ಅದರ ಬಗ್ಗೆ ಅನಲೈಸ್ ಮಾಡುವುದಕ್ಕೆ ಹೋಗುವುದಿಲ್ಲ. ಇದಾದನಂತರ ೧೯೯೧ನೇ ಇಸವಿಯಿಂದ ಒಂದಲ್ಲ ನಾಲ್ಕಾರು ಸರ್ಕಾರಗಳು ಅಧಿಕಾರಕ್ಕೆ ಬಂದು ಹೋಗಿವೆ. ನಾಲ್ಕಾರು ಜನ ಪ್ರಧಾನಮಂತ್ರಿಗಳಾಗಿ ಬಂದು ಹೋಗಿದ್ದಾರೆ. ಇವತ್ತು ಅಮದನ್ನು ವಿರೋಧಿಸುವುದಕ್ಕೆ ಹಡಗನ್ನು ವಿರೋಧಿಸುವುದಕ್ಕೆ ಹೋಗಿದ್ದಂತಹ ಸನ್ಮಾನ್ಯರು ಅವತ್ತು ಈ ರಾಷ್ಟ್ರಕ್ಕೆ ಪ್ರಧಾನಿಮಂತ್ರಿಯಾಗಿ ಕುಳಿತಿದ್ದರು. ಮಾನ್ಯ ಸಿಂಧ್ಯಾರವರೆ, ಇವತ್ತು ಆಮದು ಅನಿಷ್ಟವ ಹೆಚ್ಚಳವನ್ನು ಹೊಂದಿದಂತಹ ಹಡಗನ್ನು ಮಂಗಳೂರಿನಲ್ಲಿ ತಡೆಯುವುದಕ್ಕೆ ಹೋಗಿದ್ದಾರೆ, ಅವರು ಈ ರಾಷ್ಟ್ರದ ಪ್ರಧಾನಮಂತ್ರಿಯಾಗಿದ್ದರು. ನಾನು ಅವರ ಹೆಸರನ್ನು ಪ್ರಸ್ತಾಪ ಮಾಡುತ್ತಿಲ್ಲ. ನಾನು ಉದಾಹರಣೆಯನ್ನು ಕೊಡುತ್ತಿದ್ದೇನೆ.

**ಶ್ರೀ ಪಿ.ಜಿ.ಆರ್. ಸಿಂಧ್ಯ :** ಮಾನ್ಯ ವೈ.ಕೆ. ರಾಮಯ್ಯನವರೆ, ನಿಮ್ಮ ಸಿಟ್ಟನ್ನು ಸೇಡನ್ನು ತೀರಿಸಿಕೊಳ್ಳುವುದರಿಂದ ನಿಮಗೇನು ಉಪಯೋಗವಾಗುವುದಿಲ್ಲ. ಇದು ಚರಿತ್ರೆಯಲ್ಲಿ ಬರೆದಿರುವಂತಹ ಅಂಶವಾಗಿದೆ. ನಮಗೆ ಅದು ಲಘುವಾಗಿ ಕಾಣಬಹುದು, ಆದರೆ ಚರಿತ್ರೆಯಲ್ಲಿ ಕರ್ನಾಟಕದವರು ಒಬ್ಬರು ಪ್ರದಾನ ಮಂತ್ರಿಗಳಾಗಿದ್ದರು ಎಂಬುದನ್ನು ಯಾರೂ ಅಲ್ಲಗಳೆಯುವದಕ್ಕಾಗುವುದಿಲ್ಲ, ಅದನ್ನು ಯಾರೂ ತೆಗೆದು ಹಾಕುವುದಕ್ಕಾಗುವುದಿಲ್ಲ. ಅದರಿಂದಾಗಿ ಇದರ ಮೂಲಕವಾಗಿ ತಮ್ಮ ಸಿಟ್ಟು ಶಮನವಾಗುತ್ತದೆ ಎನ್ನುವುದಾದರೆ ನಾನೇನು ಅಡ್ಡಿಪಡಿಸುವುದಿಲ್ಲ.

**ಶ್ರೀ ವೈ.ಕೆ. ರಾಮಯ್ಯ :** ನಾನು ಉದಾಹರಣೆಯನ್ನು ಕೊಡುತ್ತಿದ್ದೇನೆ.

**ಶ್ರೀ ಪಿ.ಜಿ.ಆರ್. ಸಿಂಧ್ಯ :** ತಾವು ಬೇಕಾದರೆ ಬೇರೆ ಉದಾಹರಣೆಯನ್ನು ತೆಗೆದುಕೊಳ್ಳಬಹುದು. ತಾವು ಮಾಜಿ ಪ್ರಧಾನಮಂತ್ರಿಗಳಾದ ಶ್ರೀ ಪಿ.ವಿ. ನರಸಿಂಹರಾವ್‌ರವರು ಈಗೆಲ್ಲಿದ್ದಾರೆಂಬುದನ್ನು ಉದಾಹರಣೆಯಾಗಿ ತೆಗೆದುಕೊಳ್ಳುವುದಕ್ಕೆ ತಯಾರಿಲ್ಲ. ಆದರೆ ಸರ್ಕಾರದವರು ಒಬ್ಬರು ಮಾಜೀ ಪ್ರಧಾನಮಂತ್ರಿಯಾಗಿರುವುದನ್ನು ಮಾತ್ರ ಉದಾಹರಣೆಯಾಗಿ ತೆಗೆದು ಕೊಳ್ಳುತ್ತೀರಿ ಇವರಲ್ಲಿ ನನ್ನದೇನೂ ತಕರಾರಿಲ್ಲ.

**ಶ್ರೀ ವೈ.ಕೆ. ರಾಮಯ್ಯ :** ೧೯೯೧ನೇ ಇಸವಿಯಿಂದ ಅನೇಕ ಸರ್ಕಾರಗಳು ಅಧಿಕಾರಕ್ಕೆ ಬಂದಿವೆ. ಇದರ ಬಗ್ಗೆ ನಾನು ಕೇಳುವುದೇನೆಂದರೆ, ೧೯೯೧ರಲ್ಲಿ ತಂದಂತಹ ಉದಾರೀಕರಣ ಒಂದನ್ನೇ ಕೃಷಿ ಉತ್ಪನ್ನಗಳ ಬೆಲೆ ಇಳಿದು ಹೋಗುವುದಕ್ಕೆ ಕಾರಣವೆಂದು ಅವರಿಗೆ ಅನಿಸಿದರೆ ಈ ಉದಾರೀಕರಣದ ನೀತಿಗೆ ವಿತಕ್ಕಾಗಿ ಫುಲಸ್ಟಾಪ್‌ನ್ನು ಹಾಕಬಾರದಾಗಿತ್ತು? ಇದಕ್ಕೆ ಯಾರು ಅಡ್ಡಿ ತಂದಿದ್ದರು? ಇದು ನಮ್ಮೆಲ್ಲರಿಗೂ ಗೊತ್ತಿರುವಂತಹ ವಿಷಯವಾಗಿದೆ. ನಾನು ಇಲ್ಲಿ ಯಾರ ಬಗ್ಗೆ ಕೂಡ ಅಪವಾದ ಮಾಡಬೇಕೆಂದಾಗಲಿ, ಯಾರನ್ನೋ ದೂರಬೇಕೆಂಬುದಾಗಲೀ ನನ್ನ ದೃಷ್ಟಿಯಲ್ಲ. ೧೯೯೧ ರಿಂದೀಚೆಗೆ ಬಹುತೇಕ ಕಾಂಗ್ರೆಸೇತರ ಸರ್ಕಾರಗಳೇ ಅಧಿಕಾರಕ್ಕೆ ಬಂದಿವೆ ವಿತಕ್ಕಾಗಿ ಈ ಉದಾರೀಕರಣದ ನೀತಿಯನ್ನು ಇವರು ತೆಗೆಯಲಿಲ್ಲ? ಇದನ್ನು ವಿತಕ್ಕಾಗಿ ನಿಲ್ಲಿಸಲಿಲ್ಲ? "ಎಂದೋ **ಮನು ಬರೆದಿಟ್ಟಿದ್ದು ನಮಗೆ ಕಟ್ಟೇನು, ಎಂದೋ ಮನು ಬರೆಸಿಟ್ಟಿದ್ದು ಮಗನೆ ಕಟ್ಟೇನು, ಪಂಚಮರ ಶಿಶುವೊಂದು ಕೆರೆಯಲ್ಲಿ ಮುಳುಗುತ್ತದೆ, ದಡದಲ್ಲಿ ಮೀಯುತ್ತಿರುವ ನಾನು ಬ್ರಹ್ಮಹತ್ಯೆ ಆಗಿ ಹೋಗುವುದೆಂದು ಸುಮ್ಮನಿದ್ದರೆ ಅದು ಧರ್ಮ ಸಮ್ಮತವೇನೋ, ಮನು ಇದನ್ನು ಹೇಳಲಾರನು ಅಯ್ಯೋಯ್ಯೋ, ಹೇಳಿದ್ದರೆ ಆ ಶಾಸ್ತ್ರವನ್ನು ಸುತ್ತಿ ಎದೆಯ ಧೈರ್ಯವನ್ನು ಮಾಡಿ ಬಿಸುಟು ಹಾಕಿ"** ಮನ್‌ಮೋಹನ್‌ಸಿಂಗ್ ತಂದಿದ್ದರೆ, ನರಸಿಂಹರಾಯರು ತಂದಿದ್ದರೆ, ಕಾಂಗ್ರೆಸ್‌ನವರು, ಕಮ್ಯುನಿಸ್ಟ್‌ನವರು ತಂದಿದ್ದಾರೆಂದು ಹೇಳಿಕೊಂಡು ಉಪಖ್ಯಾನ ಉಪ್ಯಾಸ

ಮಾಡುವುದರ ಬದಲು ನೀವು ಈ "ಶಾಸ್ತ್ರವನ್ನು ಸೇರಿ ಎದೆಯ ಛೈರವ ಮಾಡಿ ಬಿಸುಟು ಹಾಕಿ" ಏಕೆ ಹಾಗೆ ಮಾಡಲಿಲ್ಲ? ಅದಕ್ಕಾಗಿ ನಾನು ಹೇಳುತ್ತಿರುವುದು, ಯಾವುದೇ ಒಂದು ಪರಿಸ್ಥಿತಿಯನ್ನು ಆಡಳಿತದಲ್ಲಿ ಸೃಷ್ಟಿ ಮಾಡುವುದು ಅತೀ ಸುಲಭ. ಯಾವುದೇ ಒಂದು ಸವಲತ್ತುಗಳನ್ನು ಸಾಮಾನ್ಯ ಜನರಿಗೆ, ಆಡಳಿತದಲ್ಲಿ ಕೊಡುವುದು ಸುಲಭ, ಅದನ್ನು ಬದಲಾವಣೆ ಮಾಡುವುದು ಬಹಳ ಕಷ್ಟ. ಅದನ್ನು ನಾನು ನಮ್ಮ ಸ್ನೇಹಿತರಿಗೆ ಹೇಳುವುದಕ್ಕೆ ಇಷ್ಟಪಡುತ್ತೇನೆ. ಆದರಿಂದ ಇದು ೧೯೯೧ನೇ ಇಸವಿಯಲ್ಲಿ ಮಾಡಿರುವುದೆಂದು ಹೇಳಿಕೊಂಡು ಹೋಗುವುದು ಸರಿಯಲ್ಲ. ಮಾನ್ಯ ವಿರೋಧ ಪಕ್ಷದ ನಾಯಕರಾದ ಶ್ರೀ ಜಗದೀಶ್ ಶೆಟ್ಟರ್‌ರವರು ಹೇಳಿದ ಪ್ರಕಾರ ವಸ್ತುಸ್ಥಿತಿ ಏನಿದೆ, ಪಕ್ಷಾತೀತವಾಗಿ ಯಾವುದರಿಂದ ಬೆಳೆಗಳಿಗೆ ಉತ್ಪನ್ನ ಕಡಿಮೆಯಾಗಿದೆ, ಇದನ್ನು ನಿವಾರಣೆ ಮಾಡುವುದಕ್ಕೆ ಏನು ಮಾಡಬೇಕೆನ್ನುವುದರ ಬಗ್ಗೆ ನಾವು ಚಿಂತನೆ ಮಾಡಬೇಕೆಂಬುದನ್ನು, ನಾನು ಹೇಳುವದಕ್ಕೋಸ್ಕರ ಹೇಳಿರುವುದು. ನಾನು ಯಾರನ್ನೊ ದೂರುವುದುಕ್ಕೋಸ್ಕರ ಹೇಳಲಿಲ್ಲ. ಅದನ್ನು ಉದಾಹರಣೆಗಾಗಿ ತೆಗೆದುಕೊಂಡು ಪ್ರಸ್ತಾಪ ಮಾಡಿದ್ದೇನೆಯೇ ಹೊರತು, ಯಾರನ್ನೊ ದೂರವುದಕ್ಕೋಸ್ಕರವಲ್ಲ.

**ಶ್ರೀ ಪಿ.ಜಿ.ಆರ್.ಸಿಂಧ್ಯ** : ತಾವು ಬೇರೆ ಉದಾಹರಣೆಯನ್ನು ತೆಗೆದುಕೊಳ್ಳಬಹುದಾಗಿತ್ತು.

**ಶ್ರೀ ವೈ.ಕೆ. ರಾಮಯ್ಯ** : ತಾವು ಹೇಳಿರುವುದನ್ನು ತೆಗೆದುಕೊಳ್ಳುವುದಕ್ಕಾಗುತ್ತದೆಯೇ? ನನಗೆ ಬೇಕಾಗಿರುವುದನ್ನು ನಾನು ತೆಗೆದುಕೊಳ್ಳುತ್ತೇನೆ. ಈ ಬೆಲೆಯ ಏರಿಳಿತಕ್ಕೆ ಮತ್ತೊಂದು ಕಾರಣವೇನೆಂದರೆ, ಹಣದುಬ್ಬರ ಕೂಡ ಕಾರಣವಾಗಿದೆ. ಇದರಿಂದಲೂ ಕೂಡ ಬೆಲೆ ಕಡಿಮೆಯಾಗುವುದು, ಜಾಸ್ತಿಯಾಗುವಂತಹ ಪರಿಸ್ಥಿತಿ ನಮಗೆ ಗೋಚರಿಸುತ್ತದೆ.

**ಶ್ರೀ ಪಿ.ಜಿ.ಆರ್. ಸಿಂಧ್ಯ** : ಮಾನ್ಯ ವೈ.ಕೆ. ರಾಮಯ್ಯನವರೆ, ನಾನು ಏತಕ್ಕಾಗಿ ಬೇರೆ ಉದಾಹರಣೆಯನ್ನು ತೆಗೆದುಕೊಳ್ಳಿ ಎಂದು ಹೇಳಿದನೆಂದರೆ, ನಿಮಗೆ ಗೊತ್ತಿರುವ ಹಾಗೆ, ಪಾಲಿಟಿಕ್ಸ್‌ನಲ್ಲಿ ಈ ತರಹ There are no permanent enemies and permanent friends. ಅದಕ್ಕೇ ನಾನು ಹೇಳಿದ್ದು.

**ಶ್ರೀ ವೈ.ಕೆ. ರಾಮಯ್ಯ** : ನಾನು ಮಾನ್ಯ ಸಿಂಧ್ಯರವರ ಸಲಹೆಯನ್ನು ಒಂದು ಸಲಕ್ಕಿಂತ ಹಲವಾರು ಸಲ ಒಪ್ಪಿಕೊಂಡಿದ್ದೇನೆ. ನೀನು ರಾಜಕೀಯದಲ್ಲಿ ಬಹಳ ದಡ್ಡ, ಬುದ್ಧಿವಂತ ಅಲ್ಲ ಎಂದು ಅವರು ಒಂದು ಮಾತನ್ನು ಹೇಳುತ್ತಾರೆ. ಅದನ್ನು ನಾನು ಒಪ್ಪಿಕೊಂಡಿದ್ದೇನೆ. ಅವರು ಒಂದು ಸಾರಿಯಲ್ಲ, ಹತ್ತಾರುಬಾರಿ ಬುದ್ಧಿವಾದವನ್ನು ಹೇಳಿದ್ದಾರೆ. ಆ ವಿಷಯ ಚರ್ಚೆಗೆ ಬೇಡ. ನಾನು ನಿನ್ನೆಯ ದಿವಸ ಹೇಳಿದಾಗ ಮಾನ್ಯ ಎಸ್.ಎಸ್. ಪಾಟೀಲ್‌ರವರು ಸಿಟ್ಟು ಮಾಡಿಕೊಂಡರು, ಒಬ್ಬೊಬ್ಬರಿಗೆ ಒಂದೊಂದು ಗುಣವಿರುತ್ತದೆ. ಮಾನವೀಯ ದೃಷ್ಟಿಯಿಂದ ತೆಗೆದುಕೊಂಡರೆ ಮಾನ್ಯ ಜೆ.ಹೆಚ್.ಪಟೇಲರು ಅಲ್ಲಿ ಬಹಳ ಎತ್ತರದಲ್ಲಿ ಕಾಣುತ್ತಾರೆ. ಸಂಯಮದ ದೃಷ್ಟಿಯನ್ನು ತೆಗೆದುಕೊಂಡಾಗ ಅವರು ಸೊನ್ನೆಗೆ ಬರುತ್ತಾರೆ. ಅದಕ್ಕಾಗಿ ನಾನು ಹೇಳುವುದಕ್ಕೆ ಹೊರಟ್ಟಿದ್ದೇನೆ. ನನ್ನ ಗುಣ ಈ ರೀತಿ ಇದೆ. ಅದಕ್ಕೇನು ಮಾಡುವುದಕ್ಕಾಗುತ್ತದೆ?

**ಶ್ರೀ ಎಸ್.ಎಸ್. ಪಾಟೀಲ್** : ಮಾನ್ಯ ವೈ.ಕೆ. ರಾಮಯ್ಯನವರೆ, ನಿನ್ನೆ ದಿವಸ ತಾವು ಜೆ.ಹೆಚ್. ಪಟೇಲ್‌ರವರ ಬಗ್ಗೆ ಒಂದು ಮಾತನ್ನು ಹೇಳಿದ್ದೀರಲ್ಲಾ, ಆಗ ಛೇರ್ಮನ್‌ರವರು ಸದನದಲ್ಲಿ ಇರಲಿಲ್ಲ. ಆ ಕಂಪನ್ನು ತಾವು ಊಹಿಸಲಿಲ್ಲ, ಆಗ ಮಾನ್ಯ ಅರಗ ಜ್ಞಾನೇಂದ್ರರವರು ಸದನದಲ್ಲಿದ್ದರು. ಅವರನ್ನು ಬೇಕಾದರೆ ತಾವು ಕೇಳಬಹುದು. ಅವರು ಕೇಳಿದ ಒಂದು ಪ್ರಶ್ನೆಗೆ ಉತ್ತರವನ್ನು

ಕೊಡುತ್ತಾ ರಸ್ತೆ ಸರಿಯಿಲ್ಲದಿದ್ದರೆ ಕುದುರೆಯನ್ನು ಹತ್ತಿಕೊಂಡು ಹೋಗಿ. ಲೈಟ್ ಇಲ್ಲ ಅಂದರೆ ಲಾಟೀನು ಹಿಡಿದುಕೊಂಡು ಹೋಗಿ, ಎಂದು ಹಾಸ್ಯವಾಗಿ ಮಾನ್ಯ ದಿ. ಜೆ.ಹೆಚ್. ಪಟೇಲರು ಹೇಳುತ್ತಿದ್ದರು ಎಂದು ನಿನ್ನೆ ಹೇಳಿದ್ದರು. ಆದರೆ ಅವರ ಮಾತು ಏನಿತ್ತು ಎಂಬುದರ ಬಗ್ಗೆ ಹೇಳಬೇಕಾಗುತ್ತದೆ. ಸರ್ವಜ್ಞನ ವಚನವನ್ನು ನಾವು ನೋಡಿದರೆ ಅದು ಬಹಳ ಕೆಟ್ಟದಾಗಿ ಕಾಣುತ್ತದೆ. ಮಾನ್ಯ ಎಸ್.ಎಸ್. ಪಟೇಲರು ಏನಪ್ಪ ಕೆಟ್ಟ ಶಬ್ದವನ್ನು ಈ ಸದನದಲ್ಲಿ ಹೇಳಿದರು, ಅದನ್ನು ಕಡತದಿಂದ ತೆಗೆಯಬೇಕೆನಿಸುತ್ತದೆ. **"ಬರೆಯದನೆ ಓದುವವನ, ಬರಿಗಾಲಲ್ಲಿ ನಡೆಯುವವನ, ಕರೆಯದೆ ಹೋಗುವವನ ಕರೆದು ಕೆರವನ್ನು ತೆಗೆದುಕೊಂಡು ಹೊಡಿ ಎಂದ ಸರ್ವಜ್ಞ"** ಎಂದು ಹೇಳಿದ್ದ. ಆದರೆ ಹಿಂದಿನ ಭಾವನೆ ಏನಿದೆ, ಅದನ್ನು ನೋಡಬೇಕೇ ವಿನಃ ಮುಂದಿನ ಶಬ್ದವನ್ನು ನೋಡಬಾರದು. ಹಾಗೆ ಆ ದಿವಸ ಲಾಟೀನು ಹಿಡಿದುಕೊಂಡು ಹೋಗು, ಕುದರೆಯನ್ನು ಹಿಡಿದುಕೊಂಡು ಹೋಗು ಎಂದು ಮಾನ್ಯ ದಿ. ಪಟೇಲರು ಹೇಳಿದಾಗ ಅವತ್ತು ತಾವು ಸದನದಲ್ಲಿ ಆ ಸವಿಯನ್ನು ಉಣಲಿಕ್ಕೆ ತಾವು ಇರಲಿಲ್ಲ. ಆ ಆನಂದ, ಸಂತೋಷ, ಆ ದಿನ ಇಡೀ ಸದನವೇ ನಗೆಗಡಲಿನಲ್ಲಿ ಮುಳುಗಿತ್ತು. ಆಮೇಲೆ ಅಧ್ಯಕ್ಷರಿಗೆ ಒಂದು ಕತೆಯನ್ನು ಹೇಳಿದ್ದರು, ಆ ಕತೆಯನ್ನು ಹೇಳಿದರೆ ಬಹಳ ನಗು ಬರುತ್ತದೆ. ಅದನ್ನು ಹೇಳುವುದು ಬೇಡ.

**ಶ್ರೀ ಬಿ.ಎನ್. ಬಚ್ಚೇಗೌಡ :** ಮಾನ್ಯ ಅಧ್ಯಕ್ಷರೆ, ಮಾನ್ಯ ರಾಮಯ್ಯನವರು ಆ ಅಕೇಷನ್‌ನಲ್ಲಿ ಅದನ್ನು ಕ್ಲಾರಿಫೈ ಮಾಡೋಣವೆಂದು ತಮ್ಮ ಗಮನಕ್ಕೆ ತರುತ್ತಿದ್ದೇನೆ.

**ಶ್ರೀ ವೈ.ಕೆ. ರಾಮಯ್ಯ :** ಥ್ಯಾಂಕ್ಸ್.

**ಶ್ರೀ ಬಿ.ಎನ್. ಬಚ್ಚೇಗೌಡ :** ಡೌಟ್ ಕ್ಲಾರಿಫೈ ಆಗಬೇಕು. ಅದರ ಬಗ್ಗೆ ಒಂದು ಸ್ಟ್ಯಾಂಡ್ ಇರಬೇಕು.

**ಶ್ರೀ ವೈ.ಕೆ. ರಾಮಯ್ಯ :** ನಾನು ಹೇಳಿದ್ದೇನೆ. ಈ ಕೃಷಿ ಉತ್ಪನ್ನಗಳ ಬೆಲೆ ಕುಸಿತಕ್ಕೆ ಮತ್ತೊಂದು ಪ್ರಮುಖವಾದ ಕಾರಣ, ಹಣದುಬ್ಬರ. ಎಲ್ಲಿಯವರೆಗೆ ನಾವು ಸಾಮಾನ್ಯ ಜನರ ಕೊಂಡುಕೊಳ್ಳುವ ಶಕ್ತಿಯನ್ನು ವರ್ಧನೆ ಮಾಡುವ ಕಡೆಗೆ ಗಮನವನ್ನು ಹರಿಸುವುದಿಲ್ಲವೋ ಅಲ್ಲಿಯವರೆಗೆ ಇದು ಇದ್ದೇ ಇರುತ್ತದೆ. ಇವತ್ತು ಈ ದೇಶದಲ್ಲಿ ಕೃಷಿ ಉತ್ಪನ್ನ ಸಾಕಷ್ಟು ಆಗಿದೆ ಅಂದರೆ ಅದರ ಅರ್ಥ ಎಲ್ಲರೂ ಸಾಕಷ್ಟು ಹೊಟ್ಟೆತುಂಬ ಊಟ ಮಾಡುತ್ತಿದ್ದಾರೆಂದು ಅಲ್ಲ. ಒಂದು ಕಡೆ ಪಂಜಾಬಿನಲ್ಲಿ ಗೋಧಿ ರಾಶಿ ರಾಶಿ ಬಿದ್ದಿದ್ದರೆ, ಬೆಂಗಳೂರು ಬಸ್ ಸ್ಟ್ಯಾಂಡಿನಲ್ಲಿ ಹೊಟ್ಟೆಗಿಲ್ಲದೆ ಬರಿಹೊಟ್ಟೆಯಲ್ಲಿ ಮಲಗಿರುವವರು ಇದ್ದಾರೆ. ಸಂಪತ್ತಿನ ಸೃಷ್ಟಿ ಒಂದು ಕಡೆಯಾದರೆ ಅದು ಸಮಾನವಾಗಿ ಹಂಚಿಕೆಯಾಗದಿರುವ ದುಸ್ಥಿತಿಯನ್ನು ಈ ದೇಶದಲ್ಲಿ ನಾವು ಕಾಣುತ್ತಿದ್ದೇವೆ. ಇಂಫ್ಲೇಷನ್ ಬಗ್ಗೆ ಒಂದು ಸಣ್ಣ ಉದಾಹರಣೆಯನ್ನು ಕೊಡುತ್ತೇನೆ. ಇಬ್ಬರು ಅಣ್ಣತಮ್ಮಂದಿರು ಇದ್ದರಂತೆ. ಒಬ್ಬ ಮಹಾ ಕುಡುಕ, ಕುಡಿದು ಕುಡಿದೂ ಆಸ್ತಿಯನ್ನೆಲ್ಲ ಕಳೆದು ಬಿಟ್ಟನಂತೆ. ಕುಡಿದ ಖಾಲಿ ಬಾಟಲ್‌ಗಳನ್ನು ಒಂದು ಕಡೆ ರಾಶಿ ಹಾಕಿಬಿಟ್ಟ. ಇನ್ನೊಬ್ಬ ಅಪ್ಪ ಕೊಟ್ಟ ಅರ್ಧ ಎಕರೆ ಭೂಮಿಯನ್ನು ಇಟ್ಟುಕೊಂಡು ನಾನು ಏನೂ ಆಸ್ತಿಯನ್ನು ಮಾರಿಲ್ಲ ಎಲ್ಲ ಉಳಿಸಿಕೊಂಡಿದ್ದೇನೆಂದು ಹೇಳುತ್ತಿದ್ದ. ಇಂಫ್ಲೇಷನ್ ಬಂದಾಗ ಖಾಲಿ ಬಾಟಲಿಗಳ ಧಾರಣೆ ಅಪ್ಪ ಕೊಟ್ಟ ಆಸ್ತಿಗಿಂತ ಜಾಸ್ತಿಯಾಯಿತು. ಅದೇ ರೀತಿಯಾ ಈ ಕೃಷಿ ಉತ್ಪನ್ನಗಳ ಬೆಲೆ ಕುಸಿಯುವುದಕ್ಕೆ ಏರಿಳಿತಗಳಿಗೆ ಇಂಫ್ಲೇಷನ್ ಕೂಡ ಒಂದು ಕಾರಣ. ಈ ದೇಶದಲ್ಲಿ ಸಾಮಾನ್ಯ ಜನರು ಕೊಂಡುಕೊಳ್ಳುವ ಶಕ್ತಿಯನ್ನು ಹೆಚ್ಚು ಮಾಡದಿರುವುದರಿಂದ ಬೆಳೆಗಳ ಉತ್ಪನ್ನದ ಬೆಲೆ ಕಡಿಮೆಯಾಗುತ್ತಿದೆಯೆಂದು ಹೇಳುವುದಕ್ಕೆ ನಾನು ಇಚ್ಛೆಪಡುತ್ತೇನೆ. ಕೃಷಿ ಉತ್ಪನ್ನಗಳ ಬೆಲೆ ಕಡಿಮೆಯಾಗುವುದಕ್ಕೆ

ಸಂವೃದ್ಧಿಯಾದ ಉತ್ಪಾದನೆ, ಕಡಿಮೆಯಾದ ಬೇಡಿಕೆ, ಕೊಂಡುಕೊಳ್ಳುವುದಕ್ಕೆ ಶಕ್ತಿಯಿಲ್ಲದ ಜನ, ಅನಾವಶ್ಯಕವಾದ ಆಮದು. ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಪರ್ಧೆ ಮಾಡುವುದಕ್ಕೆ ಸಾಧ್ಯತೆ ಇಲ್ಲದಿರುವ ಗುಣಮಟ್ಟದ ವಸ್ತುಗಳ ಉತ್ಪಾದನೆ, ಇದು ಎಲ್ಲದಕ್ಕಿಂತ ಹೆಚ್ಚಾಗಿ ಅವಶ್ಯಕತೆ ಇಲ್ಲದಿದ್ದರೂ ಕೂಡ ಆಮದನ್ನು ಮಾಡುವಂತಹ ಕೆಟ್ಟ ನೀತಿ. ಇವು ನಾಡಿನಲ್ಲಿ ಕೃಷಿ ಉತ್ಪನ್ನಗಳ ಬೆಲೆ ಕುಸಿತಕ್ಕೆ ಸ್ಪಷ್ಟವಾದಂತಹ ನಿರ್ದಿಷ್ಟವಾದಂತಹ ಕಾರಣಗಳು. ಈ ಕಾರಣಗಳನ್ನು ಹೇಳುವುದರ ಜೊತೆಗೆ ಪರಿಹಾರವನ್ನು ಏನು ಮಾಡಬೇಕೆಂಬುದರ ಬಗ್ಗೆ ಎರಡು ಮಾತುಗಳನ್ನು ಕೆಲುವುದಕ್ಕೆ ನಾನು ತಮ್ಮ ಅಪ್ಪಣೆಯನ್ನು ಕೋರುತ್ತೇನೆ. ಡಬ್ಲ್ಯೂಟಿಒಯಿಂದ ಹೊರಗಡೆ ಬರುವುದಕ್ಕೆ ಆಗುತ್ತದೆಯೋ, ಆಗುವುದಿಲ್ಲವೋ ಎನ್ನುವಂತಹ ವಿಚಾರವನ್ನು ಚರ್ಚೆಗೆ ಬಿಡುತ್ತೇನೆ. ಕೊನೆಯ ಪಕ್ಷ Delink this agricultural products from the import. ಇಷ್ಟನ್ನಾದರೂ ಮಾಡಬಹುದು. ಹಿಂದೆ ನೆಗಟಿವ್ ಲಿಸ್ಟ್ ಒಂದು ಇತ್ತು. ಸುಮ್ಮನೆ ಅವರ ಮೇಲೆ ದೂರಿಕೊಂಡು ಭಾಷಣ ಮಾಡುವುದಕ್ಕೆ ನನಗೆ ಇಷ್ಟವಿಲ್ಲ. ಅಲ್ಲಿ ರಾಷ್ಟ್ರಮಟ್ಟದಲ್ಲಿ ಸಹ ಸಮಸ್ಯೆಗಳು ಇರುತ್ತವೆ. ನಾನು ಇಷ್ಟು ಮಾತ್ರ ಪ್ರಾರ್ಥನೆ ಮಾಡಿಕೊಳ್ಳುವುದಕ್ಕೆ ಇಷ್ಟಪಡುತ್ತೇನೆ. ಕೃಷಿ ಉತ್ಪನ್ನಗಳನ್ನು ಆಮದು ಲಿಸ್ಟ್‌ನಿಂದ ಹೊರತುಪಡಿಸುವ ಮೂಲಕ ರಾಷ್ಟ್ರದಲ್ಲಿ ಕೃಷಿ ಉತ್ಪನ್ನಗಳ ಪ್ರಗತಿಗೆ ಅವರು ನಾಂದಿಯನ್ನು ಹಾಡಲಿಯೆಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಇನ್ನು ಎರಡನೆಯದಾಗಿ, ನಮ್ಮಲ್ಲಿ ಸಾಕಷ್ಟು ಭತ್ತ, ರಾಗಿ ಇದ್ದರೂ, ಎಷ್ಟೇ ಆಹಾರ ಪದಾರ್ಥಗಳು ಇದ್ದರೂ ಕೂಡ ಯಾವ ಜನರು ಹಸಿವಿನಿಂದ ಇದ್ದಾರೆ ಅಂತಹ ಜನಗಳಿಗೆ ಆಹಾರ ವಸ್ತುಗಳನ್ನು ಕೊಂಡುಕೊಳ್ಳುವ ಶಕ್ತಿಯನ್ನು ವೃದ್ಧಿ ಮಾಡುವ ಕಾರ್ಯಕ್ರಮವನ್ನು ನಾವು ಆಳುವ ಪಕ್ಷದವರು, ಆಳುವಂತಹ ಸರ್ಕಾರದವರು ಹಮ್ಮಿಕೊಳ್ಳಬೇಕಾಗುತ್ತದೆಂದು ಎರಡನೆಯ ಪರಿಹಾರವನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ಇದರ ಜೊತೆಗೆ ಸಹಜವಾಗಿ ಪ್ರತಿ ವರ್ಷ ಮಾನ್ಯ ಭೈರೇಗೌಡರು ರೈತರಿಗೆ ಒಂದು ಕಿಲುಬು ಕಾಸು ಕೊಟ್ಟಿಲ್ಲವೆಂದು ಹೇಳುತ್ತಾರೆ. ನಮಗೆಲ್ಲಾ ಪೂರಕ ಬಜೆಟ್ ಪ್ರತಿಯನ್ನು ಕೊಟ್ಟಿದ್ದಾರೆ. ನಾನು ರಾತ್ರಿ ಆ ಬಜೆಟ್ ಪ್ರತಿಯನ್ನು ಓದಿದೆ. ತಾವು ಓದಿದ್ದೀರೋ ಅಥವಾ ಇಲ್ಲವೋ ಅದು ನನಗೆ ಗೊತ್ತಿಲ್ಲ. ಸಪ್ಲಿಮೆಂಟರಿ ಬಜೆಟ್ ಇದು ಯಾವ ಕೊಡುಗೆಯೆಂದು ಹೇಳಿದರೆ ಅದು ಕಾಂಟ್ರವರ್ಸಿಯಾಗುತ್ತದೆ. ಆದ್ದರಿಂದ ನಾನು ಹೇಳುವುದಿಲ್ಲ. ಈ ಪೂರಕ ಬಜೆಟ್‌ನಲ್ಲಿ ಕೊಟ್ಟಿರುವ ಕೋಟ್ಯಾಂತರ ರೂಪಾಯಿಗಳನ್ನು ಹಣವನ್ನು ರೈತರ ಏಳಿಗೆಗೆ ಕೊಟ್ಟಿದ್ದಾರೆ. ಆದರೆ ನನ್ನ ಪ್ರಕಾರ ಅದು ಏನೇನೂ ಅಲ್ಲ. ಅದು ನೆಗ್ಲಿಜಬಲ್, ನನ್ನ ಸ್ನೇಹಿತರ ಜೊತೆ ಸೇರಿಕೊಳ್ಳುವುದಕ್ಕೆ ಪ್ರಯತ್ನ ಮಾಡಿ, ಬೇರೆ ಕ್ಷೇತ್ರಗಳಿಗೆ ಕೊಡುವ ತರಹ ಸಾಕಷ್ಟು ಹಣವನ್ನು ಈ ಕೃಷಿ ಕ್ಷೇತ್ರಕ್ಕೂ ಕೊಟ್ಟು ಅವರಿಗೆ ಸಹಾಯವನ್ನು ಮಾಡಬೇಕು.

**ಶ್ರೀ ಎಸ್.ಎಸ್. ಪಾಟೀಲ್ :** ಮಾನ್ಯ ರಾಮಯ್ಯನವರೇ, ಒಂದು ನಿಮಿಷ ತಾವು ಈಲ್ಡ್ ಆಗಬೇಕು. ತಾವೇನು ಪೂರಕ ಬಜೆಟ್‌ನಲ್ಲಿ ಕೊಟ್ಟಿರುವ ಬಗ್ಗೆ ಹೇಳಿದ್ದೀರಿ, ಇವರು ರೈತರಿಗೆ ಏನೂ ಕೊಟ್ಟಿಲ್ಲ. ರೈತರಿಗೆ ಕೊಟ್ಟಿರುವ ಇನ್ಸುರೆನ್ಸ್ ಹಣವನ್ನು ಕೇಂದ್ರ ಸರ್ಕಾರದಿಂದ ಬಂದಿರುವ ಹಣವನ್ನು ಇವತ್ತಿನವರೆಗೆ ಬ್ಯಾಂಕುಗಳಿಗೆ ತುಂಬಿಲ್ಲ. ನಾನು ಹತ್ತು ಸಲ ಹೇಳಿದ್ದೇನೆ. ಇವತ್ತು ತುಂಬಿಸಿದ್ದಾರೋ ಏನೋ ಮಾನ್ಯ ಕೃಷಿ ಮಂತ್ರಿಗಳನ್ನು ಕೇಳಿ.

**ಶ್ರೀ ಟಿ.ಬಿ. ಜಯಚಂದ್ರ (ಕೃಷಿ ಸಚಿವರು) :** ನಮ್ಮ ಪಾಲಿನ ಹಣ ಮೂರನೆಯ ಒಂದು ಭಾಗ ಏನಿದೆ ಅದನ್ನು ಬಿಡುಗಡೆ ಮಾಡಿದ್ದೇನೆ. ಕೇಂದ್ರ ಸರ್ಕಾರದಿಂದ ಹಣ ಬಿಡುಗಡೆಯಾಗಿದೆ. ನಾಳೆ ಅದರ ಬಗ್ಗೆ ವಿವರ ಕೊಡುತ್ತೇನೆ. ತಮಗೆ ಯಾವ್ಯಾವ ಜಿಲ್ಲೆಯವರು ಬೇಕು ಕೇಳಿ.

ಶ್ರೀ ವೈ.ಕೆ. ರಾಮಯ್ಯ : ಮಾನ್ಯ ಅಧ್ಯಕ್ಷರೆ, ಬೆಂಬಲ ಬೆಲೆಯನ್ನು ಕೊಡುವುದರ ಜೊತೆಗೆ ಈ ದೇಶದಲ್ಲಿ ಬೆಲೆ ಏರಿಳಿತಕ್ಕೆ ಕಾರಣ ಏನೆಂಬುದನ್ನು ವಿಚಾರ ಮಾಡಬೇಕು. ಒಂದು ಸಾರಿ ಉತ್ಪಾದನೆ ಜಾಸ್ತಿಯಾಗುತ್ತದೆ, ಒಂದು ಸಾರಿ ಉತ್ಪಾದನೆ ಕಡಿಮೆಯಾಗುತ್ತದೆ. ಅದಕ್ಕಾಗಿ ನೀವು ಜಾರಿಗೆ ತಂದಿರುವ ಉಗ್ರಾಣ ಪದ್ಧತಿ ಅದನ್ನು ಬಲಪಡಿಸಬೇಕು. ಸಹಾಯಧನದ ಬಗ್ಗೆ ಇಲ್ಲಿ ಚರ್ಚೆ ನಡೆಯುತ್ತಿತ್ತು. ಮಹಾ ಮಂಡಳಿಯವರಿಗೆ ಕೃಷಿ ಮಂತ್ರಿಗಳು ೧೮ ಲಕ್ಷ ರೂಪಾಯಿಗಳನ್ನು ನಾಳೆ ಕೊಡುತ್ತೇವೆಂದು ಹೇಳುತ್ತಿದ್ದರು. ಇಲ್ಲಿ ವಾದ ವಿವಾದಗಳಿಂದ ರೈತರ ಹೊಟ್ಟೆ ತುಂಬುವುದಿಲ್ಲ. ಅದಕ್ಕೋಸ್ಕರ ನಾನು ಪ್ರಾರ್ಥನೆ ಮಾಡಿಕೊಳ್ಳುತ್ತಿದ್ದೇನೆ. ಉಗ್ರಾಣ ಪದ್ಧತಿಯನ್ನು ಬಲಪಡಿಸಿದರೆ, ಬೆಲೆ ಕುಸಿತವಾದಾಗ ಅದನ್ನು ಕೊಂಡುಕೊಂಡು ಉಗ್ರಾಣದಲ್ಲಿ ಸಂಗ್ರಹಿಸುವುದಕ್ಕೆ ವ್ಯವಸ್ಥೆ ಮಾಡಬೇಕು. ಮಾನ್ಯ ಶ್ರೀನಿವಾಸಗೌಡರು ನೂರು ಕೋಟಿಯೆಂದು ಹೇಳಿದರು, ಅದಕ್ಕಿಂತ ಹೆಚ್ಚು ಹಣವನ್ನು ಒದಗಿಸಿ ಬೆಲೆ ಸ್ಥಿರೀಕರಣ ನಿಧಿಯನ್ನು ಸ್ಥಾಪನೆ ಮಾಡುವ ಮೂಲಕ ಅದು ತಕ್ಷಣ ಆಗಬೇಕು. ಅಟೋಮೆಟಿಕ್ ಆಗಿ ಕೆಲಸವಾಗಬೇಕು. ಅದು ಫೈನಾನ್ಸ್‌ಗೆ ಹೋಗಿ ಫೈನಾನ್ಸ್ ಸೆಕ್ರೆಟರಿ ಗೋಪಾಲರೆಡ್ಡಿಯವರು ರುಜು ಮಾಡುವುದು ಅದಕ್ಕೆ ಪುನಃ ಎಲ್‌ಐಸಿ ಕೊಡುವುದು ಈ ತರಹ ಆಗುವುದು ಬೇಕಾಗಿಲ್ಲ. ಅದು ಯಾವಾಗಲೂ ರೆಡಿ ಇರಬೇಕು. ಬೆಲೆ ಕುಸಿದಾಗ ತಕ್ಷಣ ಇಂಟರ್‌ವಿನ್ ಮಾಡಿ ಪರ್ಚೆಸ್ ಮಾಡುವುದಕ್ಕೆ ಸರ್ಕಾರದವರು ವ್ಯವಸ್ಥೆ ಮಾಡಬೇಕು. ಉಗ್ರಾಣಗಳನ್ನು ಬಲಪಡಿಸಬೇಕು.

ಇದರ ಜೊತೆಗೆ ನಮಗೆಲ್ಲರಿಗೂ ನೋವು ಉಂಟುಮಾಡತಕ್ಕ ಸಂಗತಿ ಏನೆಂದರೆ ಹಣ್ಣು ಮತ್ತು ತರಕಾರಿ, ಪೆರಿಸಬಲ್ ಗೂಡ್ಸ್ ಅದನ್ನು ನೋಡುತ್ತಿದ್ದರೆ ಕಣ್ಣಿನಲ್ಲಿ ರಕ್ತ ಬರುತ್ತದೆ. ಟೋಮೆಟೋವನ್ನು ತಂದು ರಸ್ತೆಯಲ್ಲಿ ಚೆಲ್ಲುತ್ತಾರೆ. ಅದಕ್ಕಾಗಿ ನಾನು ಪ್ರಾರ್ಥನೆ ಮಾಡುತ್ತಿದ್ದೇನೆ, You have made come attempt for establishing cold-starage. but you have not succeded so far inspite of best efforts. ಯಾವ ಹಣ್ಣು ತರಕಾರಿ ಕೊಳೆತು ಹೋಗುತ್ತವೆ, ಕೆಡುವಂತಹ ವಸ್ತುಗಳು, ಕೃಷಿ ಉತ್ಪನ್ನಗಳಿಗೆ ಅವುಗಳನ್ನು ಶೇಖರಿಸುವಂತಹ, ಅದಕ್ಕೆ ಬೇಕಾದ ಶೀಥಲ ಕಟ್ಟಡಗಳು ಇರುವಂತಹ ಕಡೆಗಳಲ್ಲಿ ಅದನ್ನು ಬಲಪಡಿಸುವುದು, ಇಲ್ಲದಿರುವ ಕಡೆಗಳಲ್ಲಿ ಎಸ್ಟಾಬ್ಲಿಶ್ ಮಾಡುವುದಕ್ಕೆ ಕ್ರಮವನ್ನು ತೆಗೆದುಕೊಳ್ಳಬೇಕೆಂದು ನಾನು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಇದು ಎಲ್ಲಕ್ಕಿಂತ ಹೆಚ್ಚಾಗಿ, ಅದು ಯಾವುದೇ ದೇಶದಲ್ಲಿ ಏನೇನೋ ಇದೆಯೆಂದು ಮಾನ್ಯ ಭೈರೇಗೌಡರು ಹೇಳಿರು. ಬೇರೆ ದೇಶಗಳಲ್ಲಿ ಕೃಷಿ ಉತ್ಪನ್ನಗಳಿಗೆ They have not fixed the ceiling price. They have fixed floor price. ಬಹುಶಃ ನನಗೆ ಗೊತ್ತಿರುವ ಹಾಗೆ ಹಿಮಾಚಲ ಪ್ರದೇಶದಲ್ಲಿ ಹಣ್ಣುಗಳಿಗೆ ಮಾಡಿರುವ ಒಂದೇ ಒಂದು ಪ್ರಯತ್ನವನ್ನು ಬಿಟ್ಟರೆ ಇಡೀ ಭಾರತದೇಶದಲ್ಲಿ ಯಾವ ರಾಜ್ಯ ಸರ್ಕಾರಗಳು ಯಾವ ಕೇಂದ್ರ ಸರ್ಕಾರದವರು ಇವತ್ತಿನವರೆಗೆ ಕೃಷಿ ಉತ್ಪನ್ನಗಳಿಗೆ ಕನಿಷ್ಟ ಬೆಲೆಯನ್ನು ನಿಗದಿ ಮಾಡಿಲ್ಲ. ಶ್ರೀ ಮಲ್ಲಿಕಾರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಮಾಡಿದರು. ಅವರೊಂದು ವರದಿಯನ್ನು ಕೊಟ್ಟರು. ಆ ವರದಿ ವರದಿಯಾಗಿಯೇ ಉಳಿಯಿತು. ಇವತ್ತಿನವರೆಗೆ ಭಾರತದೇಶದಲ್ಲಿ ಕೃಷಿ ಉತ್ಪನ್ನಗಳಿಗೆ ಕನಿಷ್ಟ ಬೆಲೆಯನ್ನು ನಿಗದಿ ಮಾಡುವಂತಹ ಯಾವುದೇ ಪ್ರಾಮಾಣಿಕ ಪ್ರಯತ್ನವನ್ನು ಯಾವ ಸರ್ಕಾರವು ಮಾಡಲಿಲ್ಲ. Let alone ceiling price. you have not made an attempt to fix the floor price. ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳವರೆಗೆ ನಾನು ಈ ಸದನದ ಮೂಲಕ ಪ್ರಾರ್ಥನೆ

ಮಾಡುತ್ತಿದ್ದೇನೆ. ಯಾವುದಾದರೂ ಒಂದು ಹಂತದಲ್ಲಿ ಈ ಕೆಲಸವನ್ನು ಮಾಡಬೇಕಾಗುತ್ತದೆ, ಬೆಲೆ ಕುಸಿತಕ್ಕೆ ಮತ್ತು ಏರಿಳಿತವನ್ನು ತಡೆಹಿಡಿಯಬೇಕಾದರೆ ಕನಿಷ್ಠ ಬೆಲೆಯನ್ನು ನಿಗದಿ ಮಾಡುವಂತಹ ಒಂದು ವ್ಯವಸ್ಥೆಯನ್ನು ಈ ದೇಶದಲ್ಲಿ ತರಬೇಕೆಂದು ಹೇಳುತ್ತೇನೆ. ಇದಕ್ಕೆ ಮತ್ತೊಂದು ಪ್ರಮುಖವಾದ ಕಾರಣವಿದೆ. ಅದು ಮಧ್ಯವರ್ತಿಗಳು. ಮಾನ್ಯ ಶ್ರೀನಿವಾಸಗೌಡರು ಹೇಳುತ್ತಿದ್ದರು ಟವಲ್ ಮರೆಯಲ್ಲಿ ಕೈ ಹಿಸುಕುತ್ತಾರೆಂದು, ಆ ಪದ್ಧತಿ ಇದೆ. ಆದ್ದರಿಂದ ಬೆಲೆ ಸ್ಥಿರೀಕರಣಗೊಳಿಸಬೇಕಾದರೆ ಅದನ್ನು ಉತ್ತಮಗೊಳಿಸಬೇಕಾದರೆ, ನಾವು ಮಾಡಬೇಕಾಗಿರುವ ಕೆಲಸವೆಂದರೆ, ಮಾರ್ಕೆಟ್‌ಗಳಲ್ಲಿರುವಂತಹ ಮಧ್ಯವರ್ತಿಗಳನ್ನು ಕಿತ್ತುಹಾಕುವುದು. ಈ ಕೆಲಸವನ್ನು ಮಾಡಿದರೆ ಕೃಷಿ ಉತ್ಪನ್ನಗಳ ಬೆಲೆಯಲ್ಲಿ ಏರಿಳಿತವನ್ನು ತಡೆಗಟ್ಟುವುದಕ್ಕೆ ಸಾಧ್ಯವಾಗುತ್ತದೆ. ಸನ್ಮಾನ್ಯ ಅಧ್ಯಕ್ಷರೇ, ನಮ್ಮ ಈ ಬೆಲೆಯೇರಿಕೆ ಇಳಿಕೆಗೆ ನಮ್ಮ ಅಭಿವೃದ್ಧಿ ಅನಾವೃಷ್ಟಿ ಕೂಡ ಕಾರಣ. ಅತಿವೃಷ್ಟಿ ಬಂದಾಗಲೂ ಕೂಡ ಬೆಳೆ ನಾಶವಾಗುತ್ತದೆ, ಅನಾವೃಷ್ಟಿ ಬಂದಾಗಲೂ ಕೂಡ ನಮ್ಮ ಬೆಳೆ ನಾಶವಾಗುತ್ತದೆ. ಆದ್ದರಿಂದ ಈ ಅತಿವೃಷ್ಟಿ ಅನಾವೃಷ್ಟಿಯನ್ನು ತಡೆದು ಈ ಒಂದು ಸಂದರ್ಭದಲ್ಲಿ ಕೃಷಿ ಬೆಳೆಯ ಬೆಳವಣಿಗೆ ಮತ್ತು ಕೃಷಿ ಬೆಲೆಯ ಸ್ಥಿರೀಕರಣ-ಇವೆರಡನ್ನು ಮಾಡುವುದಕ್ಕೆ ಸರ್ಕಾರ ಇದನ್ನು ಗಮನಕ್ಕೆ ತೆಗೆದುಕೊಳ್ಳಬೇಕೆಂದು ನಾನು ಪ್ರಾರ್ಥನೆ ಮಾಡುತ್ತೇನೆ. ಸನ್ಮಾನ್ಯ ಅಧ್ಯಕ್ಷರೇ, ಇತ್ತೀಚೆಗೆ ಕೇಂದ್ರ ಸರ್ಕಾರದಲ್ಲಿ ಒಂದು ಆಜ್ಞೆ ಹೊರಟಿದೆ. They have benned the export of spun silk, I don't know why? ಆಮದು ಮಾಡಿಕೊಳ್ಳುವುದಕ್ಕೆ ಬಹಳ ಸಲೀಸು. ಇದು ಗುಣಮಟ್ಟ ಏನೂ ಇಲ್ಲ, ಎಲ್ಲರೂ ಲಬಲಬ ಹೊಡೆದುಕೊಂಡರು. ನೀವು ತಲೆಗೆ ಹಚ್ಚುವ ಬಣ್ಣದ ರೇಟನ್ನು ಅಂಗಡಿಯಲ್ಲಿ ಯಾರಾದರೂ ಕೇಳುತ್ತೀರಾ. ಅದೇ ನೀವು ಪಕ್ಕದ ತರಕಾರಿ ಅಂಗಡಿಗೆ ಹೋದರೆ ಚೌಕಾಸಿ. ಆ ಚೌಕಾಸಿ ಮಾಡುವುದನ್ನು ನೋಡುವುದಕ್ಕೆ ಆಗುವುದಿಲ್ಲ. ಟೂತ್ ಪೇಸ್ಟ್‌ಗೆ ಎಷ್ಟು ಬೆಲೆ ಎಂದು ಕೇಳುವುದಿಲ್ಲ, ತಲೆಗೆ ಹಾಕುವ ಬಣ್ಣಕ್ಕೆ ಬೆಲೆಯೆಷ್ಟು, ಹೇರ್ ರಿಮೂವರ್‌ಗೆ ಎಷ್ಟು ಬೆಲೆಯೆಂದು ಯಾರೂ ತಲೆಕೆಡಿಸಿಕೊಳ್ಳದೆ ಸುಮ್ಮನೆ ಖರೀದಿ ಮಾಡಿ ಬ್ಯಾಗಿನಲ್ಲಿ ಹಾಕಿಕೊಂಡು ಬರುತ್ತಾರೆ. ಆದ್ದರಿಂದ ಈ ದೇಶದಲ್ಲಿ ಆಮದಿಗೆ ಎಷ್ಟು ಆದ್ಯತೆ ಕೊಡುತ್ತೇವೆ. ರಫ್ತಿಗೆ ಅಷ್ಟು ಆದ್ಯತೆಯನ್ನು ಕೊಡುತ್ತಿಲ್ಲ. ಸ್ಪನ್‌ಸ್ಕಿಲ್‌ನ್ನು ಇವತ್ತು ರಫ್ತು ಮಾಡುವುದುನ್ನು ನಿಲ್ಲಿಸಿದ್ದಾರೆ. ಅದನ್ನು ಸೇರಿಸುವ ಹಾಗೆ, ಇದನ್ನು ರಫ್ತುಮಾಡಿ ನಮ್ಮ ಕೃಷಿ ಉತ್ಪನ್ನಗಳಿಗೆ ಹೊರರಾಷ್ಟ್ರಗಳಲ್ಲಿ ಬೇಡಿಕೆ ಬರುವಂಥ ಪರಿಸ್ಥಿತಿಯನ್ನು, ಸನ್ನಿವೇಶವನ್ನು ಸೃಷ್ಟಿಮಾಡಿ ರಫ್ತನ್ನು ಹೆಚ್ಚು ಮಾಡುವುದರ ಜೊತೆಗೆ ಕೃಷಿ ಉತ್ಪನ್ನಗಳ ಬೆಲೆ ಹೆಚ್ಚು ಮಾಡುವುದಕ್ಕೆ ಅವಕಾಶ ಮಾಡಿಕೊಡಬೇಕೆಂದು ನಾನು ಪ್ರಾರ್ಥಿಸಿಕೊಳ್ಳುತ್ತೇನೆ.

ಸನ್ಮಾನ್ಯ ಅಧ್ಯಕ್ಷರೇ, ನಾನು ಆಗಲೇ ಹೇಳಿದೆ. ನಮ್ಮ ಉತ್ಪನ್ನಗಳಿಗೆ ಹೆಚ್ಚು ಬೆಲೆ ಬರಬೇಕಾದರೆ ನಮ್ಮ ಕನ್ಸರ್‌ವೇಟಿವ್ ಯುಟಿಲಿಟಿ ಏನಿದೆ, ಈಗೇನು ಬೆಳಿಗ್ಗೆ ಎದ್ದರೆ ರಾಗಿ ಮುದ್ದೆ ಮಾಡಿಕೊಂಡು ತಿನ್ನುತ್ತೇವೆ, ಭತ್ತದಿಂದ ಅನ್ನ ಮಾಡಿಕೊಂಡು ತಿನ್ನುತ್ತೇವೆ, ತರಕಾರಿಯಾದರೆ ಬರೀ ಸಾರು ಮಾಡಿಕೊಂಡು ತಿನ್ನುತ್ತೇವೆ. ನಾನು ಇಸ್ರೇಲ್‌ಗೆ ಹೋಗಿಲ್ಲ. ಮಾನ್ಯ ಬೈರೇಗೌಡರ ಕಾಟವನ್ನು ತಡೆಯುವುದಕ್ಕಾದರೂ ಈಗ ನಾನು ಅಲ್ಲಿಗೆ ಹೋಗಿಬರಬೇಕೆಂದು ಆಲೋಚನೆ ಮಾಡಿದ್ದೇನೆ. ಏನಾದರೂ ಬೆಳಗಾದರೆ ಅವರು ಇಸ್ರೇಲ್ ಬಗ್ಗೆ ಹೇಳುತ್ತಿರುವುದು, ನಾವು ಅದನ್ನು ಸುಮ್ಮನೆ ಕೇಳುವುದು ಸಾಧ್ಯವಿಲ್ಲ. ಯಾರಾದ್ದಾದರೂ ಕೈಕಾಲು ಇಡಿದು ಒಂದು ಸಾರಿ ಇಸ್ರೇಲ್‌ಗೆ

ಹೋಗಿಬರೋಣವೆಂದು ತೀರ್ಮಾನ ಮಾಡಿದ್ದೇನೆ. ನಾನು ಓದಿಕೊಂಡಿರುವ ಪ್ರಕಾರ ಈ ಕೃಷಿ ಉತ್ಪನ್ನಗಳು ಏನಿವೆ, ಅವುಗಳನ್ನು ನಮ್ಮ ಸ್ವಾಭಾವಿಕ ಉಪಯೋಗದ ಜತೆಗೆ ಅಗ್ರೋಬೇಸ್ಡ್ ಇಂಡಸ್ಟ್ರೀಸ್ ತರಹ ಮಾಡಿ ಬೇರೆ ಬೇರೆ ರೀತಿಯಲ್ಲಿ ಉಪಯೋಗ ಮಾಡುವಂಥ ವ್ಯವಸ್ಥೆ ಮಾಡಬೇಕು. ಟೊಮೆಟೊ ಹಣ್ಣನ್ನು ಬರೀ ಸಾರಿಗೆ ಉಪಯೋಗ ಮಾಡಿಕೊಂಡರೆ ಆಗುವುದಿಲ್ಲ. ಈಗ ಪ್ರಯತ್ನ ನಡೆಯುತ್ತಿದೆ. ಆದ್ದರಿಂದ ನನ್ನ ಒಂದು ಆಲೋಚನೆ, ಚಿಂತನೆ ಏನಪ್ಪ ಎಂದರೆ To establish agro-based industires for better utilisation of agricultural products. ಅದನ್ನು ಕೂಡ ಸರ್ಕಾರದವರು ಮಾಡಬೇಕಾಗುತ್ತದೆ ಎಂದು ನಾನು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಮಾನ್ಯ ಅಧ್ಯಕ್ಷರೇ, ಈ ಕೆ.ಎಸ್.ಎಂ.ಬಿ. (ಕರ್ನಾಟಕ ಸಿಲ್ಕ್ ಮಾರ್ಕೆಟಿಂಗ್ ಬೋರ್ಡ್) ಅಂತ ಮಾಡಿದ್ದಾರೆ. ಅದರ ಒಂದು ತತ್ವವನ್ನು ಬಹುಶಃ ಎಲ್ಲ ಕೃಷಿ ಮಾರುಕಟ್ಟೆ ಉತ್ಪನ್ನಗಳಿಗೂ ಕೂಡ ಲಭಿಸಬಹುದೇನೋ, ವಿಸ್ತರಿಸಬಹುದೇನೋ. I congruatulate the officer who is responsible for establishment of those things. ಇವತ್ತು ಏನಾದರೂ ಆ ಒಂದು ಪರಿಸ್ಥಿತಿ ಸುಧಾರಣೆಯಾಗಿದ್ದರೆ ಅದೇ ಕಾರಣ. ಅದೊಂದೇ ಹಿಡಿತದಲ್ಲಿಟ್ಟುಕೊಳ್ಳುವುದಕ್ಕೆ ಬೆಲೆ ಸ್ಥಿರೀಕರಣ ನಿಧಿಯನ್ನು ಸ್ಥಾಪನೆ ಮಾಡಿ ಅದರ ಮೂಲಕ ಇದನ್ನು ಸಾಧಿಸುವುದಕ್ಕೆ ಸಾಧ್ಯ. ಈ ಕೆಲಸವನ್ನು ಸರ್ಕಾರ ಮಾಡಲಿ ಎಂದು ಪ್ರಾರ್ಥನೆ ಮಾಡಿಕೊಂಡು ಇದೆಲ್ಲದರ ಜೊತೆಗೆ ಹಣ ಖರ್ಚಾಗದೆ ಯಾವುದೇ ಒಂದು ವಿವಾದಾಸ್ಪದವಾಗುವಂಥಾದ್ದು ಇಲ್ಲದೆ, ನಮ್ಮ ರೈತರಿಗೆ ಮಾಡುವಂಥ ಕೆಲವು ಉಪಯೋಗಗಳಿವೆ. ಮಾನ್ಯ ಮುಖ್ಯಮಂತ್ರಿಗಳು ಸದನದಲ್ಲಿ ಇಲ್ಲ. ಸಂಬಂಧಪಟ್ಟ ಮಂತ್ರಿಗಳು, ಮಾನ್ಯ ಚಂದ್ರೇಗೌಡರು ದಯವಿಟ್ಟು ಗಮನಿಸಬೇಕು. ಹಣ ಖರ್ಚಾಗೇನೆ ರೈತರಿಗೆ ಸಹಾಯ ಮಾಡುವಂಥ ಕೆಲವು ಸಂದರ್ಭಗಳು ಇವೆ. ಒಂದು, ಅನಾವಶ್ಯಕವಾಗಿ ರೈತರ ಮೇಲೆ ಅನೇಕ ಮೊಕದ್ದಮೆಗಳನ್ನು ಹೂಡಿದ್ದಾರೆ. ಇದಕ್ಕೆ ಏನೂ ಖರ್ಚಾಗುವುದಿಲ್ಲ. ಇವೆಲ್ಲವೂ ಯಾವ್ಯಾವುದೋ ಪ್ರತಿಭಟನೆ ಮಾಡುವಾಗ ಕೇಸು ಹಾಕಿರುವಂಥಾದ್ದು. ಇಲ್ಲಿ ಹೀನಾಯ ಕೃತ್ಯಗಳು ಯಾವುದೂ ಇಲ್ಲ. ಎಲ್ಲ ರಸ್ತೆ ತಡೆ ಮಾಡಿದ್ದು, ಧಿಕ್ಕಾರ ಕೂಗಿದ್ದೇ ಇರುವುದು. ಆದ್ದರಿಂದ ಕರ್ನಾಟಕ ರಾಜ್ಯದಲ್ಲಿ ರೈತರ ಮೇಲೆ ಹಾಕಿರತಕ್ಕಂಥ ಎಲ್ಲ ಕೇಸುಗಳನ್ನು ವಾಪಸ್ಸು ತೆಗೆದುಕೊಳ್ಳುವುದಕ್ಕೆ ಮಾನ್ಯ ಮುಖ್ಯಮಂತ್ರಿಗಳು ಸಾರ್ವಜನಿಕವಾಗಿ ಒಂದು ಸಾರಿ ಹೇಳಿದ್ದಾರೆ. ಅದನ್ನು ದಯವಿಟ್ಟು ಆದಷ್ಟು ಬೇಗ ಕಾರ್ಯರೂಪಕ್ಕೆ ತರುವುದಕ್ಕೆ ಪ್ರಯತ್ನ ಮಾಡಬೇಕೆಂದು ನಾನು ಅನನ್ಯವಾಗಿ ಸರ್ಕಾರಕ್ಕೆ ಕೇಳಿಕೊಳ್ಳುತ್ತೇನೆ. ಇದು ಸಂದರ್ಭ ಅಲ್ಲದೇ ಇದ್ದರೂ ಕೂಡ ನಾನು ಈ ಅವಕಾಶವನ್ನು ಉಪಯೋಗಿಸಿಕೊಳ್ಳುತ್ತೇನೆ. ಎರಡನೇಯದು, ನಮ್ಮ ಅದೃಷ್ಟಕ್ಕೋ, ದುರಾದೃಷ್ಟಕ್ಕೋ ನಮ್ಮ ಈ ಕೃಷಿ ಉತ್ಪನ್ನಗಳ ಬೆಲೆ ಬಿದ್ದು ಹೋಗಿದೆ, ಗ್ರಾಮೀಣ ಕೃಪಾಂಕವನ್ನು ಸಹ ಕಿತ್ತು ಹಾಕಿದ್ದಾರೆ. ಅದೇನು ಸೀಮೆ ಜಡ್ಜ್‌ಗಳೋ, ಯಾವ ಸೀಮೆ ನ್ಯಾಯಾಲಯಗಳೋ, ನಾವೇ ಕಾನೂನು ಓದಿಲ್ಲವೋ ನನಗೆ ಗೊತ್ತಾಗುತ್ತಿಲ್ಲ.

**ಅಧ್ಯಕ್ಷರು :** ನ್ಯಾಯಾಲಯದ ಬಗ್ಗೆ ಮಾತನಾಡುವುದು ಬೇಡ.

**ಶ್ರೀ ವೈ.ಕೆ. ರಾಮಯ್ಯ :** ನನಗೆ ಕೋರ್ಟಿನ ಬಗ್ಗೆ, ನ್ಯಾಯಾಧೀಶರ ಬಗ್ಗೆ ಅತ್ಯಂತ ಹೆಚ್ಚಿನ ಗೌರವ ಇದೆ. ನನಗೆ ಹೇಳಿಕೊಟ್ಟಿದಾರೆ- "You respect the seat, not the person" ಎಂದು. ಆದ್ದರಿಂದ ನ್ಯಾಯಾಲಯ ಪೀಠದ ಬಗ್ಗೆ ನಾನು ಹೇಳುತ್ತಿಲ್ಲ. ನ್ಯಾಯಾಧೀಸರ ಬಗ್ಗೆ ಹೇಳುತ್ತಿದ್ದೇನೆ.....

**Sri P.G.R. Sindhya :** Sir, How can he discuss the conduct of a judge here? You cann't discuss. ಜಡ್ಜ್‌ಗಳ ಬಗ್ಗೆ ನೀವು ಇಷ್ಟು ಲಘುವಾಗಿ ಮಾತನಾಡಿದರೆ ಅದು ಹೇಗೆ ಆಗುತ್ತದೆ? You are a lawyer. Mr. Chandergowda is also a lawyer. ನೀವೆಲ್ಲ ಲಾಯರ್ ಆಗಿ ಇದ್ದವರು.

**Sri Y.K. Ramaiah :** ನಾನು ಹೇಳುವವರೆಗೆ ನೀವು ಕೇಳುತ್ತಿಲ್ಲ. ನಾನು ಮುಂದೆ ಹೇಳಿದರೆ ಅದು ನಿಮಗೇ ಅರ್ಥವಾಗುತ್ತದೆ.

**ಶ್ರೀ ಪಿ.ಜಿ.ಆರ್. ಸಿಂಧ್ಯ :** ಅಲ್ಲ ಸ್ವಾಮಿ, ಕೃಷಿ ಉತ್ಪನ್ನಗಳ ಬೆಲೆ ಕಡಿಮೆ ಆಗಿರುವುದಕ್ಕೂ, ಗ್ರಾಮೀಣ ಕೃಪಾಂಕಕ್ಕೂ ಏನು ಸಂಬಂಧ?

**ಶ್ರೀ ವೈ.ಕೆ. ರಾಮಯ್ಯ :** ನೂರಕ್ಕೆ ನೂರು ಸಂಬಂಧ ಇದೆ. ನಾನು ಏಕೆ ಹೇಳಿದೆನೆಂದರೆ, ರೈತರ ಕಷ್ಟ ಜಾಸ್ತಿಯಾಗುವುದಕ್ಕೆ ಕೃಷಿ ಉತ್ಪನ್ನಗಳ ಬೆಲೆ ಕಡಿಮೆಯಾಗಿರುವುದು ಕಾರಣವಾಗಿದೆ. ಅದರ ಜೊತೆಗೆ ಕೃಪಾಂಕವನ್ನು ಬೇರೆ ಕಿತ್ತುಹಾಕಿದ್ದಾರೆ. ನಿಮ್ಮ ಕಾನೂನು ಕಟ್ಟಲೆಗಳು ಕೋರ್ಟು ನಿರ್ಲಕ್ಷ್ಯವಾಗಿ ತೀರ್ಮಾನಿಸಲಿಕ್ಕೆ ಹೊಣೆಯಾಗಿವೆ. ಅದನ್ನು ಕೂಡ ಬಗೆಹರಿಸುವ ಮುಖಾಂತರ ಕೃಷಿಕರ ಕಣ್ಣೀರನ್ನು ಒರೆಸಿ ಸ್ವಾಮಿ ಎಂದು ಹೇಳುವುದಕ್ಕೆ ನಾನು ಹೇಳಿದ್ದೇನೆ. ಹೌದಾ? ಸುಮ್ಮನೆ ನೀವು ಎದ್ದು ನಿಂತುಬಿಟ್ಟರೆ ಹೇಗೆ? ಸ್ವಲ್ಪ ಸಮಾಧಾನ ತೆಗೆದುಕೊಳ್ಳಬೇಕು ಸ್ವಾಮಿ. ನೀವು ಹೇಳಿದ್ದೀರಿ. ನಾವು ಇನ್ನೂ ಹನಿಮೂನ್ ಪೀರಿಯಡ್‌ನಲ್ಲೇ ಇದ್ದೇವೆ. ಇನ್ನು ಹೆರಿಗೆ ನೋವು ಬರುವುದು ಎರಡು-ಮೂರು ವರ್ಷಗಳಾಗುತ್ತದೆ. ಸ್ವಲ್ಪ ತಡೆದುಕೊಳ್ಳಿ ಸ್ವಾಮಿ. Still we are in honeymoon period. Allow us to enjoy.

**ಶ್ರೀ ಪಿ.ಜಿ.ಆರ್. ಸಿಂಧ್ಯ :** ಮಾನ್ಯ ಅಧ್ಯಕ್ಷರೆ, ಇವರ ಹನಿಮೂನ್ ಪೀರಿಯಡ್‌ನಲ್ಲಿ ಮಾನ್ಯ ವೈ.ಕೆ. ರಾಮಯ್ಯನವರಂಥ ಅನುಭವಸ್ಥರು ಸರ್ಕಾರದಲ್ಲಿ ಇದ್ದಿದ್ದರೆ- I would have been the first man to enjoy. Unfortunately, he is not. That is the problem.

**ಅಧ್ಯಕ್ಷರು :** ಮುಂದುವರೆಸಿ.

**ಶ್ರೀ ವೈ.ಕೆ. ರಾಮಯ್ಯ :** ನನ್ನ ಮಾತನ್ನು ಮುಗಿಸುವುದಕ್ಕೆ ಮೊದಲು ಸ್ಪಷ್ಟವಾಗಿ ಒಂದು ಅಭಿಪ್ರಾಯವನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ಎಂದಿನವರೆಗೆ ಈ ದೇಶದಲ್ಲಿ ಅನಾವಶ್ಯಕವಾಗಿ ಕುಂಟು ನೆಪಗಳನ್ನು ಒಡ್ಡಿ ಕೃಷಿ ಉತ್ಪನ್ನಗಳನ್ನು ಆಮದು ಮಾಡಿಕೊಳ್ಳುವಂಥ ಅನಿಷ್ಟ ಪದ್ಧತಿ ಮುಂದುವರೆಯುತ್ತದೋ ಅಂದಿನವರೆಗೆ ಈ ನಾಡಿನಲ್ಲಿ ಕೃಷಿ ಉದ್ಧಾರವಾಗುವುದಿಲ್ಲ. ಅದಕ್ಕೆ ಬದಲಾಗಿ ಕೃಷಿ ನಾಶವಾಗುತ್ತದೆ. ಆದ್ದರಿಂದ ನಾನು ಕೇಂದ್ರ ಸರ್ಕಾರದಲ್ಲಿ ಎಲ್ಲ ಸ್ನೇಹಿತರ ಜೊತೆಯಲ್ಲಿ ಸೇರಿಕೊಂಡು ಈ ಆಮದು ಪದ್ಧತಿಯನ್ನು ಆದಷ್ಟು ಬೇಗ ನಿಲ್ಲಿಸಿ ಕೃಷಿ ಉದ್ಯಮ ಈ ರಾಷ್ಟ್ರದಲ್ಲಿ ಬೆಳೆಯುವುದಕ್ಕೆ ಅವಕಾಶ ಮಾಡಿಕೊಡಬೇಕು ಎಂದು ಪ್ರಾರ್ಥನೆ ಮಾಡಿಕೊಂಡು ಇಷ್ಟು ಮಾತನಾಡುವುದಕ್ಕೆ ನನಗೆ ಅವಕಾಸ ಕೊಟ್ಟಂಥ ತಮಗೆ ವಂದನೆಗಳನ್ನು ಸಲ್ಲಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

ಜಿಲ್ಲೆಯ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲೆಯ ಪೋಲೀಸ್ ವರಿಷ್ಠಾಧಿಕಾರಿಗಳು ಬೆಳಕು ಹರಿಯುವುದರೊಳಗೆ ರಾತ್ರಿ ಮೂರು ಗಂಟೆಯ ಹೊತ್ತಿಗೆ ಸ್ಥಳವನ್ನು ತಲುಪಿದ್ದಾರೆ. ರಾಜ್ಯದ ನಾಲ್ಕು ಜನ ಮುಖ್ಯ ಇಂಜಿನಿಯರ್‌ಗಳು ಸ್ಥಳವನ್ನು ತಲುಪಿ ಮಾರ್ಕೋನಹಳ್ಳಿ ಅಣೆಕಟ್ಟನ್ನು ಉಳಿಸಿಕೊಳ್ಳುವುದಕ್ಕೆ ಏನೇನು ಕೆಲಸಗಳನ್ನು ಮಾಡಬೇಕಾಗಿತ್ತೋ ಆ ಎಲ್ಲಾ ಕೆಲಸಗಳನ್ನು ಮಾಡಿದ್ದಾರೆ. ಅಷ್ಟೇ ಅಲ್ಲ, ನಮ್ಮ ಕಂದಾಯ ಮಂತ್ರಿಗಳು ತಾಕೀತಾಗಿ ಸ್ಥಳಕ್ಕೆ ಬಂದು ಮಾಡಬೇಕಾದ ಕೆಲಸದ ಬಗಗೆ ಎಲ್ಲಾ ಎಚ್ಚರಿಕೆಯನ್ನು ಮಾರ್ಗದರ್ಶನವನ್ನು ಕೊಟ್ಟು ಹೋಗಿದ್ದಾರೆ. ಎಲ್ಲೋ ಒಂದು ಕಡೆ ಹೋಗದಿರಬಹುದು. ಎಲ್ಲಾ ಕಡೆ ಕೆಲಸ ಮಾಡಿದ್ದಾರೆಂದು ಹೇಳುವ ಭ್ರಮೆ ನನಗೆ ಇಲ್ಲ. ಯಾರೂ ಹೋಗಿಲ್ಲ, ಯಾರೂ ಕೆಲಸ ಮಾಡಿಲ್ಲವೆಂದು ಸಾರ್ವತ್ರಿಕವಾದ ಆಪಾದನೆ ಸಲ್ಲದು ಎನ್ನುವುದಕ್ಕೆ ಈ ಉದಾಹರಣೆ ಹೇಳಿದ್ದೇನೆ. ಪ್ರಕೃತಿ ವಿಕೋಪಕ್ಕೆ ಇಂತಹ ಹಾನಿಗೆ ಕಾರಣ ಏನೆಂದರೆ ಅವಕ್ಕೆ ಉದಾಹರಣೆ ಹೇಳಬೇಕಾದರೆ ಮಾರ್ಕೋನಹಳ್ಳಿ ಅಣೆಕಟ್ಟನ್ನು ಕಟ್ಟಿ ೬೦ ವರ್ಷಗಳಾಗಿವೆ. ಕಳೆದ ೨೦ ವರ್ಷಗಳಿಂದ ಅಣೆಕಟ್ಟೆಯ ಗೇಟುಗಳನ್ನು ಬದಲಾವಣೆ ಮಾಡಲಿಲ್ಲ. ಗೇಟುಗಳನ್ನು ತುಕ್ಕು ಹಿಡಿದು ಹೋಗಿವೆ. ಇದು ೩೬೦ ದಿವಸಗಳಲ್ಲಿ ಬಂದಂತಹ ಅನಾಹುತಗಳು ಅಲ್ಲ. ಅಂತಹ ಒಂದು ಪರಿಸ್ಥಿತಿ ನಿರ್ಮಾಣವಾಗಿದೆ. ನನ್ನ ಸ್ನೇಹಿತರಲ್ಲಿ ಪ್ರಾರ್ಥನೆ ಏನೆಂದರೆ ಒಳ್ಳೆಯ ಕೆಲಸವನ್ನು ಮಾಡಿದಂತಹ ಅಧಿಕಾರಿಗಳನ್ನು ದೂಷಿಸುವುದು ಬೇಡ. ರಾತ್ರಿ ಅನ್ನ, ನೀರು ಇಲ್ಲದೆ, ಸ್ನಾನ ಮಾಡದೆ, ಗಡ್ಡ ಬೋಳಿಸದೆ ನಾಲ್ಕಾರು ದಿವಸಗಳ ಕಾಲ ಸ್ಥಳದಲ್ಲಿಯೇ ಇದ್ದು ಯಂತ್ರಗಳನ್ನು ಉಪಯೋಗಿಸಿ ಅಣೆಕಟ್ಟನ್ನು ರಕ್ಷಿಸುವಲ್ಲಿ ಸರ್ಕಾರದ ಅಧಿಕಾರಿಗಳು ಸಾಕಷ್ಟು ಶ್ರಮವನ್ನು ಪಟ್ಟಿದ್ದಾರೆ. ಈ ಸದನದ ಮೂಲಕ ಎಲ್ಲ ಅಧಿಕಾರಿಗಳಿಗೆ ಮತ್ತು ಸರ್ಕಾರಕ್ಕೆ ನಾನು ಅಭಿನಂದಿಸುತ್ತೇನೆ. ಅಮೇಲೆ ನನ್ನ ಸ್ನೇಹಿತರು ಒಂದು ಮಾತನ್ನು ಹೇಳಿದರು. ಈ ಅಧಿಕಾರಿಗಳ ಮೇಲೆ ನಿಮ್ಮ ಹಿಡಿತವಿಲ್ಲ, ಅಧಿಕಾರಿಗಳು ಈ ಕಡೆ ಗಮನಹರಿಸುತ್ತಿಲ್ಲವೆಂದು ಹೇಳುವುದು ಸತ್ಯಕ್ಕೆ ದೂರವಾದುದು. ಈ ಎಲ್ಲ ಅಧಿಕಾರಿಗಳು ೩೬೦ ದಿವಸದೊಳಗೆ ಈ ರಾಜ್ಯಕ್ಕೆ ಬಂದವರಲ್ಲ. ಅವರ ಕಾರ್ಯದಕ್ಷತೆ ಮತ್ತು ಕಾರ್ಯತತ್ಪರತೆ ಕೇವಲ ೩೬೦ ದಿವಸದಲ್ಲಿ ಹುಟ್ಟಿ ಬಂದದ್ದು ಅಲ್ಲ. ಅಧಿಕಾರಿಗಳ ಮೇಲೆ ಸರ್ಕಾರದ ಹಿಡಿತವಿಲ್ಲ. ಈ ಸರ್ಕಾರದಲ್ಲಿ ಅಧಿಕಾರಿಗಳು ಕೆಲಸ ಮಾಡುತ್ತಿಲ್ಲವೆನ್ನುವ ಮಾತು ಸಲ್ಲದ ನಡೆ, ಸಲ್ಲದ ನುಡಿಯಾಗುತ್ತದೆ. ಈ ವಿಚಾರವನ್ನು ತಮ್ಮ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ೧೯೯೭-೯೮ರಲ್ಲಿ ೯ ಕೋಟಿ ರೂಪಾಯಿಗಳ ಔಷಧಿ, ೧೯೯೮-೯೯ರಲ್ಲಿ ೧೬ ಕೋಟಿ ರೂಪಾಯಿಗಳ ಔಷಧಿ, ೧೯೯೯-೨೦೦೦ದಲ್ಲಿ ೫ ಕೋಟಿ ರೂಪಾಯಿಗಳ ಔಷಧಿಯನ್ನು ದೂರದ ಹಳ್ಳಿಗಾಡಿನಲ್ಲಿರತಕ್ಕ ಆಸ್ಪತ್ರೆಗಳಿಗೆ ಕಳುಹಿಸಬೇಕಾಗಿತ್ತು. ಅದನ್ನು ಮಾಡಲಿಲ್ಲ. ಆ ಮೂರು ವರ್ಷಗಳಲ್ಲಿ ೩೦ ಕೋಟಿ ರೂಪಾಯಿಗಳ ಔಷಧಿಯನ್ನು ಖರೀದಿ ಮಾಡಿ ಹಳ್ಳಿಗಾಡಿನ ಆಸ್ಪತ್ರೆಗಳಿಗೆ ಕಳುಹಿಸಬೇಕಾಗಿದ್ದಂತಹ ಔಷಧಿಯನ್ನು ಕಳುಹಿಸದೆ ದೊಡ್ಡ ದ್ರೋಹವನ್ನು ಮಾಡಿದ್ದಾರೆ. ಏಕೆ, ಅಧಿಕಾರಿಗಳ ಮೇಲೆ ನಿಮ್ಮ ಹಿಡಿತ ಇರಲಿಲ್ಲವೇ ಅದೇ ಕಾಲದಲ್ಲಿ ಕೊಂಡಂತಹ ಔಷಧಿ ಸರ್ಕಾರಿ ಗೋದಾಮಿನಲ್ಲಿ ಕೊಳೆಯುತ್ತಿದೆ. ಈ ಮಾತನ್ನು ಏಕೆ ಹೇಳುತ್ತಿಲ್ಲವೆನ್ನುವ ನಿಮ್ಮ ವಾದಕ್ಕೆ ನಾನು ಹೇಳುತ್ತಿದ್ದೇನೆ. ಇಂತಹ ಹತ್ತಾರು ಉದಾಹರಣೆಗಳನ್ನು ನಾನು ಕೊಡಬಲ್ಲೆ. ನಾನು ನನ್ನ ವಾದವನ್ನು ಏಕೆ ಹೇಳಿದೆ ಅಂದರೆ, ಅಧಿಕಾರಿಗಳು ಕೆಲಸ ಮಾಡುವುದು, ಕೆಲಸ ಮಾಡದಿರುವುದು, ಅವರ ಕಾರ್ಯದಕ್ಷತೆ, ಅವರ ನಿಷ್ಕ್ರಿಯತೆ ದುಷ್ಟತನ, ಅವರ ಭ್ರಷ್ಟತನ, ನಿರ್ದೋಷ ಇವೆಲ್ಲವೂ ೩೬೦ ದಿವಸಗಳಲ್ಲಿ

ಮೂಡಿ ಬಂದಂತವುಗಳಲ್ಲ, ನಮ್ಮ ಜೊತೆ ಜೊತೆಯಲ್ಲಿಯೇ ಬಂದಂತಹ ವಿದ್ಯಮಾನಗಳು. ೧೯೯೭ ರಿಂದ ೨೦೦೦ದ ಇಸವಿಯಲ್ಲಿ ೩೦ ಕೋಟಿ ರೂಪಾಯಿಗ ಔಷಧಿಗಳನ್ನು ಕೊಂಡು ಗ್ರಾಮಾಂತರ ಪ್ರದೇಶಗಳ ಆಸ್ಪತ್ರೆಗಳಿಗೆ ಕಳುಹಿಸಬೇಕಾಗಿತ್ತು. ಅಲ್ಲಿ ಹಾವು ಕಡಿದರೆ ಔಷಧಿಯಿಲ್ಲ. ಗಾಯಕ್ಕೆ ಹಾಕುವ ಟಿಂಚರ್ ಇಲ್ಲ.

**ಶ್ರೀ ಕೆ. ಶ್ರೀನಿವಾಸಗೌಡ :** ಮಾನ್ಯ ಅಧ್ಯಕ್ಷರೆ......

**ಅಧ್ಯಕ್ಷರು :** ದಯವಿಟ್ಟು ಮಾತನಾಡುವುದು ಬೇಡ, ತಾವು ಕುಳಿತುಕೊಳ್ಳಿ.

**ಶ್ರೀ ವೈ.ಕೆ. ರಾಯಮಯ್ಯ :** ೩೦ ಕೋಟಿ ರೂಪಾಯಿಗಳ ಔಷಧಿಯನ್ನು ಕೊಂಡು ಲೋಪವನ್ನು ಮಾಡಿದಂತಹ ಅಧಿಕಾರಿಗಳು ನಿಮ್ಮ ಹಿತದಲ್ಲಿ ಇರಲಿಲ್ಲವೆ?

**ಶ್ರೀ ಸಿ. ಭೈರೇಗೌಡ :** ಮಾನ್ಯ ಅಧ್ಯಕ್ಷರೆ, ಹಿಂದೆ ಆಗಿರತಕ್ಕ ಲೋಪದ ಬಗ್ಗೆ ಮಾನ್ಯ ರಾಮಯ್ಯನವರ ಮಾತನಾಡುತ್ತಿದ್ದಾರೆ, ಅದಕ್ಕೆ ಆಧಾರವೇನು? ೩೦ ಕೋಟಿ ರೂಪಾಯಿಗಳ ಔಷದಿಯನ್ನು ಕೊಂಡು ಆಸ್ಪತ್ರೆಗಳಿಗೆ ಕಳುಹಿಸದೆ ದ್ರೋಹ ಮಾಡಿದರು ಅಂದರೆ ಅದು ಹಿಂದಿನ ಸರ್ಕಾರದ ವಿಫಲತೆಯನ್ನು ತೋರಿಸುತ್ತದೆ. ಅದಕ್ಕೆ ಆಧಾರ ಏನಿದೆ ಎಂಬುದನ್ನು ಮಾನ್ಯಸದಸ್ಯರು ಜವಾಬ್ದಾರಿಯಿಂದ ಹೇಳಬೇಕಾಗುತ್ತದೆ. ನೀವು ಯಾವ ಆಧಾರದ ಮೇಲೆ ಹೇಳುತ್ತಿದ್ದೀರಿ ಎಂಬುದನ್ನು ತಿಳಿಸಿ ನೋಡೋಣ. ಅದರಲ್ಲಿ ಲೋಪವಾಗಿದ್ದರೆ, ಅದು ಯಾರದೇ ಆಗಿದ್ದರೂ ಅದು ಲೋಪವೇ.

**ಶ್ರೀ ಕೆ. ಶ್ರೀನಿವಾಸಗೌಡ :** ಔಷಧಿಯನ್ನು ಕೊಂಡು ಆಸ್ಪತ್ರೆಗಳಿಗೆ ಕಳುಹಿಸದಿದ್ದರೆ...

**ಅಧ್ಯಕ್ಷರು :** ಮಾನ್ಯ ಸದಸ್ಯರು ಈಲ್ಡ್ ಆಗಿಲ್ಲ. ಅವರು ನಿಂತಿದ್ದಾರೆ. ತಾವು ಕುಳಿತುಕೊಳ್ಳಿ.

**ಶ್ರೀ ಕೆ. ಶ್ರೀನಿವಾಸಗೌಡ :** ಅವರು ಈಲ್ಡ್ ಆಗಿದ್ದಾರೆ. ನೀವೇ ಈಲ್ಡ್ ಆಗಿಲ್ಲವೆಂದರೆ ಹೇಗೆ?

**ಅಧ್ಯಕ್ಷರು :** ನೋಡಿ ಅವರು ನಿಂತಿದ್ದಾರೆ. ಅವರು ಈಲ್ಡ್ ಆಗಿಲ್ಲ.

**ಶ್ರೀ ವೈ.ಕೆ. ರಾಯಮಯ್ಯ :** ಮಾನ್ಯ ಅಧ್ಯಕ್ಷರೇ, ನಾನು ಅವರಿಗೆ ಉತ್ತರ ಕೊಡುತ್ತೇನೆ. I am capable of answering to the question of my friends. ಮಾನ್ಯ ಭೈರೇಗೌಡರು ಕೇಳುತ್ತಿದ್ದಾರೆ, ತಮ್ಮ ಮುಖಾಂತರ ನಾನು ಅವರಿಗೆ ಹೇಳುತ್ತಿದ್ದೇನೆ. ಆಧಾರವಿಲ್ಲದಂತಹ ಆಪಾದನೆ ಮಾಡುವಂತಹ ದಡ್ಡನಲ್ಲ, ಆಯೋಗ್ಯನೂ ಅಲ್ಲ. ಅದಕ್ಕೆ ಆಧಾರವಿದೆ.

**ಶ್ರೀ ಸಿ. ಭೈರೇಗೌಡ :** ಮಾನ್ಯ ಅಧ್ಯಕ್ಷರೆ, ನಾನು ಅವರನ್ನು ದಡ್ಡರೆಂದು ಕರೆಯಲಿಲ್ಲ, ಆಯೋಗ್ಯರೆಂದು ಕರೆಯಲಿಲ್ಲ. ಆ ಗುಣವಾಚಕಗಳನ್ನು ಅವರೆ ಕರೆದುಕೊಂಡರೆ ನಾನೇನು ಮಾಡಲಿ? ತಮಗೆ ತೃಪ್ತಿಯಾಗುವುದಾದರೆ ತಮ್ಮನ್ನು ತಾವೇ ಹಾಗೆ ಕರೆದುಕೊಳ್ಳಿ.

**ಅಧ್ಯಕ್ಷರು :** ಮಾನ್ಯ ರಾಮಯ್ಯನವರೇ ನೀವು ಮಳೆ ಹಾವಳಿಯಿಂದ ಆದ ಅನಾಹುತದ ಬಗ್ಗೆ ಮಾತನಾಡಿ.

**ಶ್ರೀ ವೈ.ಕೆ. ರಾಯಮಯ್ಯ :** ಮಾನ್ಯ ಅಧ್ಯಕ್ಷರೆ, ತಾವು ಸ್ವಲ್ಪ ಕೇಳಬೇಕು. ಅವರು ಮಳೆ ಹಾನಿಯ ಬಗ್ಗೆ ಮಾತನಾಡಲಿಲ್ಲ. ಆಡಳಿತದ ಬಗ್ಗೆ ಮಾತನಾಡಿದ್ದಾರೆ.

**ಅಧ್ಯಕ್ಷರು :** ನಾನೇನು ಮಾಡಲಿ? ಸೀನಿಯರ್ ಮೆಂಬರ್ಸ್ ಹೀಗೆ ಮಾತನಾಡಿದರೆ ಹೇಗೆ? ಒಬ್ಬರಿಗೊಬ್ಬರಿಗೆ ಮಾತು ಬೆಳೆದು ಕಾಲ ವ್ಯಯವಾಗುತ್ತದೆ.

**ಶ್ರೀ ವೈ.ಕೆ. ರಾಮಯ್ಯ :** ಕಾಲ ವ್ಯಯವಾಗುತ್ತೆಂದರೆ ನಾನು ನಿಲ್ಲಿಸುತ್ತೇನೆ.

**ಅಧ್ಯಕ್ಷರು :** ನಾನು ನಿಮಗಲ್ಲ ಹೇಳಿದ್ದು, ತಾವು ಮುಂದುವರಿಸಿ.

**ಶ್ರೀ ವೈ.ಕೆ. ರಾಮಯ್ಯ :** ಯಾರಾದರೂ ಸವಾಲನ್ನು ಎಸೆದರೆ ಅದನ್ನು ಸ್ವೀಕರಿಸುವಂತಹ ಮನೋಭಾವ ಇರಬೇಕಾಗುತ್ತದೆ. ಕೇವಲ ಸವಾಲು ಎಸೆದರೆ ಸಾಲದು. ಅವರು ಹೇಳಿದ್ದಾರೆ ಅಧಿಕಾರಿಗಳು ನಿಮ್ಮ ಹಿಡಿತದಲ್ಲಿ ಇಲ್ಲ. ನೀವು ಪ್ರವಾಹದ ನಿಯಂತ್ರಣ ಮಾಡುವ ಕಾರ್ಯಕ್ರಮಗಳನ್ನು ನಿಭಾಯಿಸುವಲ್ಲಿ ವಿಫಲರಾಗಿದ್ದೀರಿ, ನಿಮ್ಮ ಆಡಳಿತ ವಿಫಲವಾಗಿದೆ. ನಿಮ್ಮ ಅಧಿಕಾರಿಗಳು ಸರಿಯಾಗಿ ಕೆಲಸ ಮಾಡುತ್ತಿಲ್ಲವೆಂದು ಹೇಳಿದ್ದಾರೆ. ನೀವು ನನಗೆ ಮಾತನಾಡುವುದಕ್ಕೆ ಅವಕಾಶ ಕೊಟ್ಟಿದ್ದೀರಿ. ನಾನು ಮಾತನಾಡಬೇಕೋ ಬೇಡವೋ?

**ಅಧ್ಯಕ್ಷರು :** ಮಾತನಾಡಿ.

**ಶ್ರೀ ವೈ.ಕೆ. ರಾಮಯ್ಯ :** ಮತ್ತೆ ತಾವು ಬರೀ ಮಳೆ ಹಾನಿಯ ಬಗ್ಗೆ ಮಾತನಾಡಿಯೆಂದು ಏಕೆ ಹೇಳುತ್ತೀರಿ? ಅವರು ಆಡಳಿತದ ಬಗ್ಗೆ ಮಾತನಾಡಿದ್ದಾರೆ. ನಾನು ಕೂಡ ಆಡಳಿತದ ಬಗ್ಗೆ ಮಾತನಾಡಬೇಕಾಗುತ್ತದೆ.

**ಅಧ್ಯಕ್ಷರು :** ನೀವು ಕಂಟಿನ್ಯೂ ಮಾಡಿ.

**ಶ್ರೀ ವೈ.ಕೆ. ರಾಮಯ್ಯ :** ಮಾನ್ಯ ಅಧ್ಯಕ್ಷರಲ್ಲಿ ನಾನು ಪ್ರಾರ್ಥನೆ ಮಾಡಿಕೊಳ್ಳುವುದಕ್ಕೆ ಇಷ್ಟಪಡುತ್ತೇನೆ. ಮೊಟ್ಟಮೊದಲನೆಯದಾಗಿ ನಾನು ಈ ಸದನದ ಸದಸ್ಯ. ಎರಡನೆಯದಾಗಿ ಒಂದು ಪಕ್ಷದ ಸದಸ್ಯ. ಅದನ್ನು ತಾವು ಗಮನದಲ್ಲಿಟ್ಟುಕೊಂಡು ಬೇರೆ ಪಕ್ಷದವರಿಗೆ ನೀವು ಎಷ್ಟು ಕಾಲವನ್ನು ಕೊಡುತ್ತಿರೋ, ಎಷ್ಟು ಗಂಭೀರವಾಗಿ ಕಾಣುತ್ತೀರೋ ಅಷ್ಟೇ ಗಂಭೀರವಾಗಿ ಮತ್ತು ಅಷ್ಟೇ ಕಾಲವನ್ನು ನನಗೆ ಕೊಡಬೇಕಾಗುತ್ತದೆ.

ನಾನು ಮಾತನಾಡುವುದರಿಂದ ಸದನದ ಕಾಲ ಹಾಳಾಗುವುದಾದರೆ ನಾನು ಕುಳಿತುಕೊಳ್ಳುತ್ತೇನೆ.

**ಅಧ್ಯಕ್ಷರು :** ನಾನು ನಿಮಗೆ ಹೇಳಲಿಲ್ಲ. ಅವರು ಮಧ್ಯೆ ಎದ್ದಿದ್ದರಿಂದ ಅವರ ಬಗ್ಗೆ ಹೇಳಿದ್ದುದು.

**ಶ್ರೀ ವೈ.ಕೆ. ರಾಮಯ್ಯ :** ಹಾಗಿದ್ದ ಮೇಲೆ ನನ್ನ ಪ್ರಶ್ನೆ ಇಷ್ಟೆ, ನಿಮ್ಮ ಅಧಿಕಾರಗಳು ನಿಮ್ಮ ಹಿಡಿತದಲ್ಲಿ ಇಲ್ಲ. ನಿಮ್ಮ ಅಧಿಕಾರಿಗಳು ಆಡಳಿತವನ್ನು ಸರಿಯಾಗಿ ಮಾಡುತ್ತಿಲ್ಲ. ನಿಮ್ಮ ಮಾತು ಕೇಳುತ್ತಿಲ್ಲ ಎನ್ನುವಂಥ ಅಪಾದನೆ ಆ ಕಡೆಯಿಂದ ಬಂದಿದೆ. ತಾವು ಕಡತ ತೆಗೆದು ನೋಡಿ. ಅದಕ್ಕಾಗಿ ನಾನು ಹೇಳುವುದೇನೆಂದರೆ, ಮೂರು ವರ್ಷಗಳಲ್ಲಿ ೩೦ ಕೋಟಿ ರೂಪಾಯಿಗಳ ಔಷಧಿ ಖರೀದಿ ಮಾಡಿದ್ದಾರೆ. ಇಂಥಾದ್ದು ಇನ್ನೂ ಎಷ್ಟೋ ಇವೆ. ಅವುಗಳ ಬಗಗೆ ಕಾಲ ಬಂದಾಗ ನಾನು ಹೇಳುತ್ತೇನೆ. ಇದು ಒಂದು ಉದಾಹರಣೆಯನ್ನು ಮಾತ್ರ ನಾನು ಕೊಡುತ್ತಿದ್ದೇನೆ. ೩೦ ಕೋಟಿ ರೂಪಾಯಿಗಳ ಔಷಧಿಯನ್ನು ಖರೀದಿ ಮಾಡಿ ಹಳ್ಳಿಗಳ ಆಸ್ಪತ್ರೆಗಳಿಗೆ ಕಳಿಸದೇ ಇದ್ದಂತ ಅಧಿಕಾರಿಗಳ ಮೇಲೆ ಕ್ರಮ ತೆಗೆದುಕೊಳ್ಳುವುದಕ್ಕೆ ನಿಮಗೆ ಅವಕಾಸ ಇರಲಿಲ್ಲವೇನು ನಿಮಗೆ ಅವರ ಮೇಲೆ ಹಿಡಿತ ಇರಲಿಲ್ಲವೇನು? ನನ್ನ ಸ್ನೇಹಿತರು ಆಧಾರ ಕೇಳುತ್ತಿದ್ದಾರೆ. ಅದಕ್ಕೆ ಆಧಾರ ಇದೆ. ನಾವು ಸಮಿತಿಯಲ್ಲಿ ಕೂಡ ವಿವರಗಳನ್ನು ತರಿಸಿದ್ದೇವೆ. ೧೯೯೭-೯೮ರಲ್ಲಿ ೪ ಕೋಟಿ, ೧೯೯೮-೯೯ರಲ್ಲಿ ೧೬ ಕೋಟಿ ಮತ್ತು ೧೯೯೯-೨೦೦೦ದಲ್ಲಿ ೪ ಕೋಟಿಯಷ್ಟು ಔಷಧಿಗಳನ್ನು ಖರೀದಿ ಮಾಡಿದ್ದಾರೆ. ತಾವು ಬೇಕಾದರೆ ಇದನ್ನು ಪರಿಶೈ ಮಾಡಿ.' ಇಷ್ಟೇ ಅಲ್ಲ, ನಾನು ಮಾನ್ಯ ಸದಸ್ಯರ

1758-14

ಗಮನಕ್ಕೆ ತರುವುದಕ್ಕೆ ಇಷ್ಟಪಡುವುದೇನೆಂದರೆ, ೭ ಕೋಟಿ ರೂಪಾಯಿಗಳಷ್ಟು ಔಷಧಿಗಳು ಇವತ್ತು ಗೋದಾಮಿನಲ್ಲಿ ಕೊಳೆಯುತ್ತಿವೆ. ಏಕೆ ಸ್ವಾಮಿ ನಿಮಗೆ ಅಧಿಕಾರಿಗಳ ಮೇಲೆ ಹಿಡಿತ ಇರಲಿಲ್ಲ? ನಾನು ಒಂದು ಉದಾಹರಣೆಯನ್ನು ಕೊಟ್ಟಿದ್ದೇನೆ. ಈ ಮಾತನ್ನು ಏಕೆ ಹೇಳಿದೆ ಎಂದರೆ ಇದು ಇವತ್ತು ಮಾತ್ರ ಬಂದಿಲ್ಲ. ಸನ್ಮಾನ್ಯ ಅಧ್ಯಕ್ಷರೇ, 'ಕೃಷಿಕನ ಕಣ್ಣೀರಿನ ಕತೆ' ಎನ್ನುವ ಪದವನ್ನು ಆ ಕಡೆ ಕುಳಿತಿರುವ ನನ್ನ ಸ್ನೇಹಿತರು ಉಪಯೋಗಿಸಿದ್ದರಿಂದ ನಾನು ಅದನ್ನು ಕ್ಯಾಪ್‌ಶನ್ ಮಾಡಿಕೊಳ್ಳುತ್ತೇನೆ. ಕೃಷಿಕನ ಕಣ್ಣೀರಿನ ಕತೆಯ ಮೊದಲನೇ ಅಧ್ಯಾಯವನ್ನು......... ಸಾರಿಗೆ ನಾವು ಬರೆಯುವುದಕ್ಕೆ ಪ್ರಾರಂಭ ಮಾಡಿಲ್ಲ.

ಕೃಷಿಕನ ಕಣ್ಣೀರಿನ ಕತೆ ಸಮಾಜದ ಜತೆಜತೆಯಲ್ಲೇ ಬಂದಿರುವಂಥಾದ್ದು. ಇದು ಎಲ್ಲಿಂದ ಬಂತು ಎಂದರೆ ನಾವು ಬೆಳೆದ ವಸ್ತುಗಳನ್ನು ನೀವು ತಿನ್ನಬೇಡಿ ಎಂದು ಕೃಷಿಕರಿಗೆ ಹೇಳಿದಿರಲ್ಲ, ಅವತ್ತು ಶುರುವಾಯಿತು ಅವನ ಕಣ್ಣೀರಿನ ಕತೆ. ನೀವು ಸಾಕಿದ ಹಸು, ಎಮ್ಮೆ ಹಾಲು, ತುಪ್ಪವನ್ನು ನೀವು ಹೋಮಕ್ಕೆ ಸುರಿದು ಬರೀ ಮಜ್ಜಿಗೆ ಕುಡಿಯಿರಿ ಎಂದು ಹೇಳಿದಿರಲ್ಲ ಅಲ್ಲಿಂದ ಶುರುವಾಯಿತು ಈ ಕೃಷಿಕನ ಸಮಾಜದ ಕಣ್ಣೀರಿನ ಕತೆ. ಇವತ್ತು ೩೬೦ ದಿವಸಗಳಲ್ಲಿ ಕೃಷಿಕನ ಕಣ್ಣೀರಿನ ಕತೆಯನ್ನು ಬರೆಯುವುದಕ್ಕೆ ನಾವು ಶುರು ಮಾಡಿಲ್ಲ. ನಾನು ಉತ್ತಿದ ಜಮೀನನ್ನು ನನಗೆ ಕೊಡಿ ಎಂದು ಹೇಳಿದ ಕಾಗೋಡು ತಿಮ್ಮಪ್ಪನವರು ಇಲ್ಲಿ ಜೀವಂತವಾಗಿ ಕುಳಿತಿದ್ದಾರೆ. ತಾವು ಕೃಷಿ ಮಾಡಿದಂಥ ಜಮೀನನ್ನು ತಮಗೇ ಪಡೆದುಕೊಳ್ಳುವುದಕ್ಕೆ ಕಾಗೋಡಿನಲ್ಲಿ ಸತ್ಯಾಗ್ರಹ ನಡೆಯಿತಲ್ಲ, ಅವತ್ತು ಶುರುವಾಯಿತು ಕೃಷಿಕನ ಕಣ್ಣೀರಿನ ಕತೆ. ಇವತ್ತು ಹೊಸದಾಗಿ ಕಣ್ಣೀರ ಕತೆ ಪ್ರಾರಂಭವಾಗಿಲ್ಲ. ಅಥವಾ ನಾವು ಪ್ರಾರಂಭ ಮಾಡಿಲ್ಲ. ನವಲಗುಂದದಲ್ಲಿ ನಡೆದ ರೈತರ ಸಮರ, ಮದ್ದೂರು ತಾಲ್ಲೂಕಿನಲ್ಲಿರುವ ಗೆಜ್ಜಲಗೆರೆಯಲ್ಲಿನ ರೈತರ ಸಮರ, ರಾಜ್ಯದ ರೈತರ ಕಣ್ಣೀರ ಕತೆಯನ್ನು ಹೇಳುತ್ತವೆ. ರೇಷ್ಮೆ ಬೆಳೆದ ರೈತನಿಗೆ ಬೆಲೆ ಕಡಿಮೆಯಾಗಿದೆ ಎಂದು ಹೇಳಿದಾಗ ಆತ ಕಣ್ಣೀರು ಹಾಕಿದಾಗ ಏನಾಯಿತು ಸ್ವಾಮಿ? ವಿಜಯಪುರದ ರೈತನಿಗೆ ಬೆನ್ನಮೇಲೆ ಪೋಲೀಸರಿಂದ ಬಾರಿಸಿದಿರಲ್ಲ ಅವತ್ತು ಶುರವಾಯಿತು ರೇಷ್ಮೆ ಬೆಳೆಗಾರನ ಕಣ್ಣೀರಿನ ಕತೆ. ಯಾವುದೋ ಕತ್ತಲಿನ ಕೋಣೆಯಲ್ಲಿ ಶ್ರೀ ಸಿ. ನಾರಾಯಣಸ್ವಾಮಿ, ನನ್ನನ್ನು ಮತ್ತು ಶ್ರೀ ಆತ್ಮಾನಂದ ಅವರನ್ನು ಹಿಡಿದುಕೊಂಡು ಹೋಗಿ ಪೋಲೀಸ್ ಸ್ಟೇಷನಲ್ಲಿ ಹಾಕಿಸಿದಿರಲ್ಲ ಅವತ್ತು ಶುರುವಾಯಿತು. ಕೃಷಿಕನ ಕಣ್ಣೀರಿನ ಕತೆ. ಅದು ಇವತ್ತು ಶುರುವಾಗಿಲ್ಲ. ತಾವು ಅದಕ್ಕೆ ಜೀವಂತ ಸಾಕ್ಷಿ. ನಾವು ಯಾರ ಮನೆಯನ್ನೂ ಹಾಳು ಮಾಡುವುದಕ್ಕೆ ಹೋಗಲಿಲ್ಲ. ಕಲ್ಲು ಹೊಡೆಯುವುದಕ್ಕೆ ಹೋಗಿರಲಿಲ್ಲ ಅಥವಾ ಧಿಕ್ಕಾರ ಕೂಡ ಕೂಗಿರಲಿಲ್ಲ. ಈ ರಾಜ್ಯದಲ್ಲಿರುವ ಲಕ್ಷಾಂತರ ಕುಟುಂಬಗಳ ಅನ್ನ ಮಣ್ಣಾಗುತ್ತಿದೆ. ಇವತ್ತು ರೇಷ್ಮೆ ಬೆಲೆ ಏನು ಕಡಿಮೆಯಾಗುತ್ತಿದೆ ಅದು ಹೊರದೇಶದಿಂದ ಬರುತ್ತಿದೆ. ಹೊರ ದೇಶದಿಂದ ಕೃಷಿ ವಸ್ತುಗಳನ್ನು ಆಮದು ಮಾಡಿಕೊಳ್ಳುತ್ತಾ ಇರುವುದರಿಂದ ಆಗುವ ಹಾನಿ ಬಗ್ಗೆ ಮಾತನಾಡಲು ಅವಕಾಶ ಕೊಡಬೇಕು. ಅವತ್ತು ನನ್ನ ಬೆನ್ನಿಗೆ ಬಾರಿಸಿದ್ದೀರಲ್ಲ, ಅವತ್ತು ನಮ್ಮ ಕಣ್ಣೀರಿನ ಕತೆ ಶುರುವಾಯಿತು. ಸನ್ಮಾನ್ಯ ಅಧ್ಯಕ್ಷರೇ, ಶಿರಾದಲ್ಲಿ ರೈತರು ಯಾರೂ ಯಾರ ಮನೆಯನ್ನೂ ಹಾಳು ಮಾಡುವುದಕ್ಕೆ ಹೋಗಲಿಲ್ಲ. ತಮ್ಮ ಕಡಲೆಕಾಯಿಗೆ ಬೆಲೆ ಕಡಿಮೆಯಾಗಿದೆ, ಎರಡು ದಿವಸ ಹರಾಜನ್ನು ಮುಂದಕ್ಕೆ ಹಾಕಿ ಎಂದು ಹೇಳಿದರು. ನೀವು ಏನು ಮಾಡಿದಿರಿ? ಅವರ ಎದೆಗೆ ಗುಂಡು ಹೊಡೆದಿರಿ. ಇವತ್ತು ಶುರುವಾಯಿತೇನು ಕಣ್ಣೀರಿನ ಕತೆ? ಅದಕ್ಕೇ ನಾನು ಹೇಳಿದ್ದು, ಕೃಷಿಕನ ಕಣ್ಣೀರ ಕತೆಯ ಅಧ್ಯಾಯ ಕೃಷ್ಣಾ ಅವರ ಸಂಪಾದಕತ್ವದಲ್ಲಿ

೩೮೦ ದಿವಸಗಳಿಂದ ಮಾತ್ರ ಬರೆಯುತ್ತಿಲ್ಲ. ಈ ಕಣ್ಣೀರಿನ ಕತೆ ಪ್ರಾರಂಭವಾದದ್ದು ಯಾವತ್ತು ಈ ದರಿದ್ರ ಸಮಾಜವನ್ನು ಅವನು ಮಾಡುವಂಥ ವೃತ್ತಿಯ ಆಧಾರದ ಮೇಲೆ ವಿಂಗಡಣೆ ಮಾಡಿ ಅಸಮಾನತೆಯನ್ನು ತಂದರೋ ಅವತ್ತಿನಿಂದ ಈ ಕಣ್ಣೀರಿನ ಕತೆ ಶುರುವಾಯಿತು. ಈ ಕಣ್ಣೀರನ್ನು ಒರೆಸತಕ್ಕಂಥ ಪ್ರಾಮಾಣಿಕ ಪ್ರಯತ್ನವನ್ನು ನಾವು ಮಾಡದೆ ಆಡಳಿತವನ್ನು ಮಾಡಿದಂಥ ನೀವು, ನಾನು, ನಾವು ಅವರು ಎಂದು ಯಾರಿಗೂ ಹೇಳುವುದಿಲ್ಲ. ಮೊಸಳೆ ಕಣ್ಣೀರನ್ನು ನಾವು ಸುರಿಸುತ್ತಿದ್ದೇವೆ. ನಿಜವಾದ ಕಣ್ಣೀರನ್ನು ಅವರು ಸುರಿಸುತ್ತಿದ್ದಾರೆ. ಮೊಸಳೆ ಕಣ್ಣೀರನ್ನು ನಾವು ಸುರಿಸುತ್ತಿದ್ದೇವೆ. ಈ ಹಾನಿ ಬಗ್ಗೆ ಅಷ್ಟೇ ಅವರು ಮಾತನಾಡಿದ್ದರೆ ನಾನು ಅಷ್ಟಕ್ಕೆ ನಿಲ್ಲಿಸುತ್ತಿದ್ದೆ. ಈ ಕಣ್ಣೀರಿನ ಕತೆ ಕೇವಲ ಈ ಸರ್ಕಾರದಿಂದಲೇ ಶುರುವಾಯಿತೇನು? ೧೩ ಲಕ್ಷ ಎಕರೆಗೆ ಆಗುವಂಥ ನೀರು ಇವತ್ತು ಕರ್ನಾಟಕ ರಾಜ್ಯದ ನಮ್ಮ ಅಣೆಕಟ್ಟುಗಳಲ್ಲಿ ತುಂಬಿ ತುಳುಕುತ್ತಿದೆ. ಈ ೧೩ ಲಕ್ಷ ಎಕರೆ ನೀರನ್ನು ಭೂಮಿಗೆ ಬಿಟ್ಟುಕೊಳ್ಳಲಿಕ್ಕೆ ಸಾಧ್ಯತೆ ಇಲ್ಲದೆ ಇರುವ ಪರಿಸ್ಥಿತಿಯನ್ನು ನಾವೆಲ್ಲರೂ ಸೃಷ್ಟಿ ಮಾಡಿದ್ದೇವೆ. ಅವತ್ತು ಶುರುವಾಯಿತು ಈ ಕಣ್ಣೀರಿನ ಕತೆ. ಇದು ಒಂದಾ ಎರಡಾ? ಮೊನ್ನೆ ನಮ್ಮ ಸಚಿವರು ಒಂದು ಮಾತನ್ನು ಹೇಳಿದ್ದಾರೆ. ಈ ದೇಶದಲ್ಲಿ ಬೆಳೆದಂಥ ಕಬ್ಬು ಬೆಳೆಗಾರರಿಂದ ಬಂದಂಥ ಸಕ್ಕರೆಯನ್ನು ತುಂಬುವುದಕ್ಕೆ ಗೋದಾಮು ಇಲ್ಲದೆ ಅದು ಗೊಬ್ಬರವಾಗುತ್ತಿದೆ ಎಂದು ಅವರು ಹೇಳಿದ್ದಾರೆ. ಅವತ್ತಿನಿಂದ ಶುರವಾಗಿದೆ ಈ ಕಣ್ಣೀರು ಕತೆ. ಕೋಲಾರದಲ್ಲಿ ಬೆಳೆದಂಥ ಆಲೂಗಡ್ಡೆಯನ್ನು ಬೀದಿಯಲ್ಲಿ ಸುರಿಯುತ್ತಾರೆ, ಹಾಸನದಲ್ಲಿ ಅಲ್ಲಿ ಬೆಳೆದಂಥ ಆಲೂಗಡ್ಡೆಯನ್ನು ಅಲ್ಲಿ ಸುರಿಯುತ್ತಿದ್ದಾರೆ. ಇಲ್ಲಿಂದ ಶುರುವಾಗುತ್ತದೆ ಕಣ್ಣೀರಿನ ಕತೆ. ನಾನು ಇಷ್ಟೆಲ್ಲ ವಾದ ಮಾಡುವಂಥಾದದ್ದು ಕಾಲ ಅಪವ್ಯಯ ಮಾಡಬೇಕೆಂಬ ಆಸೆಯಿಂದ ಅಲ್ಲ. ನನ್ನ ಒಂದೇ ಒಂದು ಅನಿಸಿಕೆ ಇಷ್ಟೇ, ಈ ಕೃಷಿಕನ ಕಣ್ಣೀರಿನ ಕತೆ ಅಂದಿನಿಂದ ನಮ್ಮ ಸಮಾಜದಲ್ಲಿ ಹಾಸುಹೊಕ್ಕಾಗಿ ಬೆಳೆದುಕೊಂಡು ಬಂದಿದೆ. ನಾವೆಲ್ಲರೂ ಕೂಡ ಇದನ್ನು ಪ್ರಾಮಾಣಿಕವಾಗಿ ಬಗೆಹರಿಸುವುದಕ್ಕೆ ಪ್ರಯತ್ನ ಮಾಡಬೇಕೆಂಬ ಉದ್ದೇಶದಿಂದ ಮಾತ್ರ ಹೇಳಿ, ನಾವು ಕಾಲ ವ್ಯಯ ಮಾಡುತ್ತಿದ್ದೇವೆ ಎಂದು ಹೇಳಿದರೂ ಕೂಡ ನನಗೆ ವಿಧಿಯಿಲ್ಲದೆ ಈ ಮಾತನ್ನುನನ್ನ ಸ್ನೇಹಿತರ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತಿದ್ದೇನೆ. ಸನ್ಮಾನ್ಯ ಅಧ್ಯಕ್ಷರೇ, ಅವರು ತುಂಬ ಹಳೆಯ ಸ್ನೇಹಿತರು, ಬಹಳ ಸ್ವರಾಸ್ಯಕರವಾದ ಅವರ ಭಾಷಣವನ್ನು ನಾನು ಕೇಳಿದೆ. ಈ ರೀತಿ ಮಾನ್ಯ ಮುಖ್ಯಮಂತ್ರಿಗಳ ಮನೆ ಮುಂದೆ ಹೋಗಿ ಇದೇ ರೈತನ ಕಣ್ಣೀರನ್ನು ಒರೆಸಿ ಎಂದು ಹೇಳಿ ಕುಳಿತುಕೊಂಡೆ. ನನಗೆ ಸಿಕ್ಕಿದ್ದು ಏನು ಹದಿಮೂರು ದಿವಸಗಳ ಜೈಲುವಾಸ. ಇದು ಯಾವುದೂ ಮಾನವ ನಿರ್ಮಿತವಾದಂಥ ಆಕ್ರೋಶದಿಂದ ಅಲ್ಲ. ಅವತ್ತು ಯಾರು ಈ ರಾಜ್ಯದ ......

ಶ್ರೀ ಪಿ. ಭೈರೇಗೌಡ : ಮಾನ್ಯ ಅಧ್ಯಕ್ಷರೇ, ಮಳೆ ಹಾನಿಗೂ ಇದಕ್ಕೂ ಏನು ಸಂಬಂಧ?, ಇವತ್ತಿನ ದಿವಸ ಮಳೆಹಾನಿ ಬಗ್ಗೆ, ಪ್ರಕೃತಿ ವಿಕೋಪದ ಬಗ್ಗೆ ನಾವು ಇಲ್ಲಿ ಚರ್ಚೆ ಮಾಡುತ್ತಿದ್ದೇವೆ.

(ಗೊಂದಲ)

ಅಧ್ಯಕ್ಷರು : ಮಾನ್ಯ ಭೈರೇಗೌಡರೇ......

ಶ್ರೀ ಪಿ. ಭೈರೇಗೌಡ : ಇದು `ಎಲ್ಲೋ ಹೋದೆ, ಎಲ್ಲೋ ಬಂದೆ` ಎಂದು ಹೇಳಿದರೆ ಅದರ ಬಗ್ಗೆ ಚರ್ಚೆ ಆಗತಕ್ಕಂಥ ಸಂದರ್ಭದಲ್ಲಿ ಚರ್ಚೆಯಾಗಲಿ. ಆದರೆ ಇದು ಕಣ್ಣೀರಿನ ಕತೆ ಅಲ್ಲ, ಮಳೆ ನೀರಿನ ಕತೆ.

**ಅಧ್ಯಕ್ಷರು :** ಮಾನ್ಯ ರಾಮಯ್ಯನವರೇ, ನೀವು ಮುಂದುವರೆಸಿ.

**ಶ್ರೀ ಸಿ. ಭೈರೇಗೌಡ :** ಇದು ಮಳೆಯ ನೀರಿನ ಕಥೆ, ಕಣ್ಣೀರಿನ ಕಥೆಯಲ್ಲ. ಮಳೆ ನೀರಿನಿಂದ ಆಗಿರತಕ್ಕಂಥ ಹಾನಿ ಬಗ್ಗೆ ಮಾನ್ಯ ಸದಸ್ಯರು ಮಾತನಾಡಿದರೆ ಕುಳಿತುಕೊಂಡು ಕೇಳೋಣ.

**ಶ್ರೀ ಎಚ್.ಸಿ. ಶ್ರೀಕಂಠಯ್ಯ :** ಮಾನ್ಯ ಸಿಂಧ್ಯಾರವರು ಮಾತನಾಡುವಾಗ ಹೈಟೆಕ್, ಕಂಪ್ಯೂಟರ್ ಎಲ್ಲದರ ಬಗ್ಗೆ ಮಾತನಾಡಿದರು. ಅವರೇನು ಬರೀ ಮಳೆ ಹಾನಿ ಬಗ್ಗೆ ಮಾತನಾಡಿದರೇ?

**ಶ್ರೀ ಸಿ. ಭೈರೇಗೌಡ :** ಆ ಮಾಹಿತಿಯನ್ನು ಬೇಗನೆ ಏಕೆ ತರಿಸಲಿಲ್ಲ ಎಂದು ಅವರು ಕೇಳಿದರು. ಅದನ್ನು ಬೇಕಾದರೆ ಹೇಳಲಿ. ಅದು ಬಿಟ್ಟು 'ಎಲ್ಲೋ ಹೋದೆ, ಎಲ್ಲೋ ಬಂದೆ' ಎಂದು ಹೇಳಿದರೆ ಇದೇನಿದು?

**ಶ್ರೀ ಬಿ.ಹೆಚ್. ಬನ್ನಿಕೋಡ್ :** ಮಾನ್ಯ ಭೈರೇಗೌಡರೇ, ಅವರು ಹಾನಿ ಬಗ್ಗೆ ಮಾತನಾಡುತ್ತಿದ್ದಾರೆ, ಮಾತನಾಡಲಿ ಬಿಡಿ.

**ಅಧ್ಯಕ್ಷರು :** ತಾವೆಲ್ಲರೂ ಸರಿಯಾಗಿ ಮಾತನಾಡಿದ್ದರೆ ಅವರೂ ಸರಿಯಾಗಿ ಮಾತನಾಡುತ್ತಿದ್ದರು.

**ಶ್ರೀ ವೈ.ಕೆ. ರಾಮಯ್ಯ :** ಈಗ ತಾವು ಸರಿಯಾಗಿ ಹೇಳಿದಿರಿ.

**ಶ್ರೀ ಸಿ. ಭೈರೇಗೌಡ :** ನಾನು ಸರಿಯಾಗಿ ಮಾತನಾಡಿಲ್ಲ ಎಂದು ತಾವು ಹೇಳಿದರೆ ನನ್ನ ಗತಿ ಏನು?

**ಶ್ರೀ ಕೆ. ಶ್ರೀನಿವಾಸಗೌಡ :** ಮಾತನಾಡಿದವರೆಲ್ಲರೂ ಸರಿಯಾಗಿ ಮಾತನಾಡಿಲ್ಲ ಎಂದು ತಮ್ಮ ಅಭಿಪ್ರಾಯವೇನು?

**ಅಧ್ಯಕ್ಷರು :** ಅಲ್ಲಲ್ಲ, ಸರ್ ಕ್ಯಾಸ್ಟಿಕ್ ಆಗಿ ನೀವು ಮಾತನಾಡಿದರೆ ಅವರಿಗೂ ಮಾತನಾಡುವುದಕ್ಕೆ ಶಕ್ತಿ ಇದೆ. ಶ್ರೀ ರಾಮಯ್ಯನವರೇ, ನೀವು ಮುಂದುವರೆಸಿ.

**ಶ್ರೀ ವೈ.ಕೆ. ರಾಮಯ್ಯ :** ಸನ್ಮಾನ್ಯ ಅಧ್ಯಕ್ಷರೇ, ಆ ಕಡೆ ಈ ಕಡೆ ಎರಡೂ ಕಡೆಯಲ್ಲಿ ಕುಳಿತಂಥ ಅನುಭವ ಇಲ್ಲಿ ಬಹಳ ಜನರಿಗೆ ಆಗಿದೆ. ಆದರೆ ಒಂದು ವಿಷಯದಲ್ಲಿ ನಾವು ಒಂದು ತೀರ್ಮಾನಕ್ಕೆ ಬರಬೇಕಾಗುತ್ತದೆ. ಅದು ಯಾವುದು ಎಂದರೆ ವಿರೋಧ ಪಕ್ಷದಲ್ಲಿ ಕುಳಿತಿದ್ದಾಗ ಎಲ್ಲವನ್ನೂ ವಿರೋಧ ಮಾಡುವಂಥಾದ್ದು, ಆಡಳಿತ ಪಕ್ಷದಲ್ಲಿ ಕುಳಿತಿದ್ದಾಗ ಮಾಡಿದ್ದೆಲ್ಲ ಸರಿಯೆಂದು ಹೇಳುವಂಥ ಪ್ರವೃತ್ತಿ. ಅದು ಏಕೋ ಏನೋ ನಮಗೆ ಬೇಕೋ ಬೇಡವೋ ನಾವೆಲ್ಲರೂ ಅದನ್ನು ಅಳವಡಿಸಿಕೊಳ್ಳಬೇಕಾಗಿದೆ. ಉತ್ತರ ಕರ್ನಾಟಕದಲ್ಲಿ ಎರಡು-ಮೂರು ವರ್ಷಗಳ ಹಿಂದೆ ಸರ್ಕಾರ ಕೊಟ್ಟಂಥ ಔಷಧಿ ಉತ್ತಮ ಆಗಿಲ್ಲವೆಂಬ ಕಾರಣಕ್ಕೆ ಬೆಳೆಯನ್ನು ಕಳೆದುಕೊಂಡ ಅಲ್ಲಿಯ ಅನೇಕ ಜನ ರೈತರು ಪ್ರಾಣಹತ್ಯೆ ಮಾಡಿಕೊಂಡರು. ಅವರನ್ನು ಯಾರೂ ಗುಂಡಿಕ್ಕಲಿಲ್ಲ, ಅವರೆಲ್ಲ ವಿಷ ತೆಗೆದುಕೊಂಡರು. ಬಹುಶಃ ಕರ್ನಾಟಕ ರಾಜ್ಯದ ಚರಿತ್ರೆಯಲ್ಲಿ ರೈತ ತನ್ನ ಬೆಳೆಯನ್ನು ಕಳೆದುಕೊಂಡ ನೋವನ್ನು ತಡೆಯಲಾರದೆ ಆತ್ಮಹತ್ಯೆ ಮಾಡಿಕೊಂಡಂಥ ನಿದರ್ಶನ ಮತ್ತೊಂದು ಇರಲಿಕ್ಕೆ ಸಾಧ್ಯವಿಲ್ಲ.

ಅದಕ್ಕಾಗಿಯೇ ನಾನು ಹೇಳಿದ್ದು, ರೈತರ ಕಣ್ಣೀರಿನ ಕತೆಯ ಅಧ್ಯಾಯ ಈಗ ಪ್ರಾರಂಭವಾದುದಲ್ಲ, ಇದು ಅನವರತವೂ ನಡೆದುಕೊಂಡು ಬಂದಿದೆ. ನನ್ನ ಸ್ನೇಹಿತರು ಬರೀ ಹಾನಿ ಬಗ್ಗೆ ಮಾತನಾಡಿದ್ದರೆ, ನಾನು ಕೂಡ ಹಾನಿ ಬಗ್ಗೆ ಮಾತನಾಡಿ, ಸರ್ಕಾರಕ್ಕೆ ಒಂದೆರಡು ಕೋಟಿ ಬಿಡುಗಡೆ ಮಾಡಬೇಕೆಂಬ ಸವಿನಯವಾದಂಥ ಪ್ರಾರ್ಥನೆಯನ್ನು ಸಲ್ಲಿಸಿ ಕೆಳಗೆ ಕುಳಿತುಕೊಳ್ಳುತ್ತಿದ್ದೆ. ಮಾನ್ಯ

ಸದಸ್ಯರು ಮಾತನಾಡುತ್ತಾ ಈ ವರ್ಷ ಕೃಷಿ ಇಲಾಖೆಯಲ್ಲಿ ಬೆಳೆ ಬಹಳ ಹುಲುಸಾಗಿ ಬೆಳೆದಿದೆ ಎಂಬ ಮಾತನ್ನು ಹೇಳಿದರು. ಸ್ವಾಮಿ, ಹಾನಿಗೂ ಇದಕ್ಕೂ ಸಂಬಂಧ ಇದೆಯೇ ಹೇಳಿ. ನಾನು ಹೇಳುತ್ತೇನೆ, ಇಡೀ ಇಲಾಖೆಯ ವಿಷಯ ಆಮೇಲೆ ಮಾತನಾಡೋಣ. ಆಗ್ರೋ ಇಂಡಸ್ಟ್ರೀಸ್ ಕಾರ್ಪೊರೇಷನ್ ಒಂದರಲ್ಲೇ ೯೫ ಕೋಟಿ ರೂಪಾಯಿಗಳ ಅವ್ಯವಹಾರದ ಬೆಳೆ ಬೆಳೆದಿದೆ. ನಾನು ಸರ್ಕಾರಕ್ಕೆ ಕಾಗದ ಬರೆದಿದ್ದೇನೆ. ಬೆಳೆ ಎಲ್ಲಾ ಸರ್ಕಾರದಲ್ಲೂ, ಯಾರೇ ಮಂತ್ರಿಗಳಾಗಿದ್ದಾಗಲೂ ಬೆಳೆಯುತ್ತವೆ. ಆದರೆ, ಫಸಲು ಭೂಮಿಯ ಮಾಲೀಕನಿಗೆ ಸಿಗುತ್ತಾ ಇಲ್ಲ. ಯಾರೂ ಯಾರೋ ತಿಂದುಕೊಳ್ಳುತ್ತಾರೆ. ನೀವು ಒಡೆಯರಾಗಿದ್ದಾಗಲೂ ಅವ್ಯವಹಾರದ ಬೆಳೆ ಬೆಳೆಯಿತು.

**ಶ್ರೀ ಸಿ. ಭೈರೇಗೌಡ :** ಮಾನ್ಯ ಅಧ್ಯಕ್ಷರೇ, ಮಾನ್ಯ ರಾಮಯ್ಯನವರು ನಮ್ಮ ವಾದವನ್ನು ಪುಷ್ಟೀಕರಿಸುತ್ತಿದ್ದಾರೆ, ಯಾವುದೋ ಕಾಲದಲ್ಲಿ ಏನೋ ಆಯಿತು ಎಂದು. ಈ ತೋಳ ಕುರಿಮರಿ ಗಾದೆ ಇದೆಯಲ್ಲ ಹಾಗೆ ಅವರು ಆ ತೋಳ ಕುರಿಮರಿ ಕತೆಯನ್ನು ಹೇಳುತ್ತಿದ್ದಾರೆ. ಅವತ್ತು, ಇತ್ತು, ನೀನೋ, ನಿಮ್ಮ ತಾತನೋ, ನಿಮ್ಮ ಅಪ್ಪನೋ, ಮುತ್ತಾತನೋ ಯಾರೋ ಮಾಡಿದರು, ಆದರಿಂದ ನಾನು ಹೀಗೆ ಮಾಡುತ್ತಿದ್ದೇನೆ ಎನ್ನತಕ್ಕಂಥಾದ್ದು. ಆದ್ದರಿಂದ ನಾವು ಏನು ಹೇಳಿದ್ದೇವೆ ಅದನ್ನು ಅವರು ಪುಷ್ಟೀಕರಿಸುತ್ತಿದ್ದಾರೆ. ಅಧಿಕಾರಿಗಳು ನಿಮ್ಮ ಮಾತು ಕೇಳುತ್ತಾ ಇಲ್ಲ, ಅವರ ಮೇಲೆ ನಿಮ್ಮ ಹಿಡಿತವಿಲ್ಲವೆನ್ನುವುದನ್ನು ಒಪ್ಪುತ್ತಾ ಇದ್ದಾರೆ, ಮತ್ತೆ ಕೃಷಿ ಇಲಾಖೆಯಲ್ಲಿ ಬಂಪರ್ ಕ್ರಾಪ್ ಆಗಿದೆ ಎನ್ನುವುದನ್ನು ಒಪ್ಪುತ್ತಿದ್ದಾರೆ. ಸಂತೋಷ, ನೀವು ಅದನ್ನೆಲ್ಲಾ ಒಪ್ಪಿಕೊಂಡು ಮಾತನಾಡಿ.

**ಶ್ರೀ ವೈ.ಕೆ. ರಾಮಯ್ಯ :** ಈ ಸರ್ಕಾರದಲ್ಲಿ ಆಡಳಿತ ಹೇಗೆ ನಡೆಯುತ್ತಾ ಇದೆ ಎನ್ನುವಂಥ ವಿಷಯಕ್ಕೆ ಉತ್ತರ ಕೊಡಲಿಕ್ಕೆ ೪೦ ಜನ ಸಮರ್ಥ ಮಂತ್ರಿಗಳನ್ನು ನಮ್ಮ ಮುಖ್ಯಮಂತ್ರಿಗಳು ನೇಮಿಸಿಕೊಂಡಿದ್ದಾರೆ. ಅವರು ಅದಕ್ಕೆ ಉತ್ತರ ಕೊಡುತ್ತಾರೆ. ನಮ್ಮ ಸರ್ಕಾರದಲ್ಲಿ ಏನು ನಡೆಯುತ್ತಿದೆ ಎಂಬುದಕ್ಕೆ ಉತ್ತರ ಕೊಡಲು ನಾನು ಸಂಬಂದಪಟ್ಟವನಲ್ಲ. ಈ ಒಂದು ಪ್ರಾಥಮಿಕ (ಪ್ರೈಮರಿ) ಅರಿವು ನಮ್ಮ ಸ್ನೇಹಿತರಿಗೆ ಇರಲಿ ಎಂದು ನನ್ನ ಪ್ರಾರ್ಥನೆ. ನನ್ನ ಪ್ರಾರ್ಥನೆ ಅಂದರೆ ವಾದಕ್ಕೆ ವಾದ. ಕೇವಲ ನೀವು ಹೇಳಿದ್ದನ್ನು ಕೇಳಿಕೊಂಡು ಆಚೆ ಹೋಗುವುದಕ್ಕೆ ನಾನು ಸಿದ್ಧನಿಲ್ಲ. ತಾವು ಅವತ್ತು ಹೇಳಿದ್ದಿರಿ. ಅದಕ್ಕಾಗಿ ನಾನು ಹೇಳುತ್ತಿದ್ದೇನೆಯೆ ಹೊರತು ಇಲ್ಲದೇ ಹೋಗಿದ್ದರೆ ನಾನು ಸುಮ್ಮನೆ ಕುಳಿತುಕೊಳ್ಳುತ್ತಿದ್ದೆ. ತಾವು ಅವತ್ತು ವ್ಯವಸಾಯ ಇಲಾಖೆಯಲ್ಲಿ ಬಹಳ ಹುಲುಸಾಗಿ ಬೆಳೆ ಬೆಳೆದಿದೆ ಎಂದು ಹೇಳಿದ್ದಿರಿ. ಸನ್ಮಾನ್ಯ ಸ್ನೇಹಿತರೇ, ಆಗ್ರೋ ಇಂಡಸ್ಟ್ರಿಸ್ ಕಾರ್ಪೊರೇಷನ್ ಒಂದರಲ್ಲೇ ೯೫ ಕೋಟಿ ರೂಪಾಯಿಗಳ ಅವ್ಯವಹಾರದ ಬೆಳೆ ಬೆಳೆದಿದೆ. ಆ ಬೆಳೆ ಬಗ್ಗೆ ತನಿಖೆ ಮಾಡುವುದಕ್ಕೆ ಸಿ.ಓ.ಡಿ. ಆರ್ಡರ್ ಮಾಡಿ, ಈಚೆಗೆ ಬಂದಿದ್ದೀರಿ. ಇದು ಹೌದೋ ಇಲ್ಲವೋ ಹೇಳಿ ನೀವು ನಾನು ಅದಕ್ಕೆ ಹೇಳಿದ್ದು, ಸವಾಲುಗಳನ್ನು ಎಸೆದರೆ ಸಾಲದು, ಅವುಗಳನ್ನು ಸ್ವೀಕರಿಸಲೂ ಬೇಕು ಎಂದು.

**ಶ್ರೀ ಸಿ. ಭೈರೇಗೌಡ :** ನಾನು ಆ ಇಲಾಖೆಯನ್ನು ೫ ವರ್ಷಗಳ ಕಾಲ ನಿರ್ವಹಿಸಿದ್ದೇನೆ. ಅಲ್ಲಿ ಏನೇನು ದುರ್ವ್ಯವಹಾರ ನಡೆಯಿತೋ ಅದರ ಬಗ್ಗೆ ಕ್ರಮವನ್ನೂ ಕೂಡ ತೆಗೆದುಕೊಂಡಿದ್ದೇನೆ. ಅದನ್ನು ಮಾನ್ಯ ರಾಮಯ್ಯನವರೂ ಒಪ್ಪುತ್ತಿದ್ದಾರೆ. ಇದಕ್ಕೆಲ್ಲಾ ವಿಚಾರಣೆ ಮಾಡಲು ಆಜ್ಞೆ ಮಾಡಿ ಹೊರಗಡೆ ಬಂದಿದ್ದೀರಿ ಎಂಬ ಮಾತನ್ನು ಕೂಡ ಅವರು ಹೇಳುತ್ತಿದ್ದಾರೆ. ನಾನು ಆ ಇಲಾಖೆಯನ್ನು ನಿರ್ವಹಿಸಿದಂತಹ ಸಂದರ್ಭದಲ್ಲಿ ಏನು ನನ್ನ ಗಮನಕ್ಕೆ ಬಂತೋ ಅದರ ಬಗ್ಗೆ

ತಕ್ಷಣ ಸ್ಥಳದಲ್ಲೇ ಕ್ರಮ ತೆಗೆದುಕೊಂಡಿರುವುದೂ ಉಂಟು. ಆದರೆ, ಈಗ ಅದರ ಮುಂದೆ ಏನಾಯಿತು? ನಾನು ಮಾಡಿದ್ದಂಥ ಆಜ್ಞೆ ವಿಚಾರದಲ್ಲಿ ಮುಂದೆ ಏನಾಯಿತು? ಎಂಬುದನ್ನು ತಾವು ಹೇಳಿದರೆ, ನಿಮ್ಮ ವಾದವನ್ನು ಒಪ್ಪುತ್ತೇನೆ. ಹಾಗಾದರೆ ಮುಂದೆ ಏನಾಗಿದೆ ಎಂಬುದನ್ನು ಹೇಳಿ. ನೋಡೋಣ, ನೀವು ಬಹಳ ಪುಷ್ಟೀಕರಿಸುತ್ತಿದ್ದೀರಲ್ಲ, ನಾನು ಮಾಡಿದಂಥ ಆಜ್ಞೆ ಅದು ಜಾರಿಯಾಯಿತೇ, ಅದು ಏನಾಗಿದೆ ಹೇಳಿ, ಅದನ್ನು ಮುಚ್ಚಿ ಹಾಕಿದ್ದಾರೆ. ಅದಕ್ಕೋಸ್ಕರ ನಾನು ಹೇಳುತ್ತಿರತಕ್ಕಂಥಾದ್ದು ವಿಚಾರಣೆ ನಡೆಯುತ್ತಿಲ್ಲ, ನಡೆದಿಲ್ಲ. ಅದನ್ನು ನೀವು ಹೇಳಿ. ಅದು ೯೫ ಕೋಟಿ ರೂಪಾಯಿಗಳ ಅವ್ಯವಹಾರ ಆಗಿದೆಯೋ ೯೫೦ ಕೋಟಿ ರೂಪಾಯಿಗಳ ಅವ್ಯವಹಾರ ಆಗಿದೆಯೋ ಗೊತ್ತಿಲ್ಲ. ಆದರೆ ಅದರ ಬಗ್ಗೆ ವಿಚಾರಣೆ ಆಗಬೇಕೆಂದು ನಾನು ಆಜ್ಞೆ ಮಾಡಿದ್ದೆ. ಆ ಆಜ್ಞೆಯನ್ನು ಕಾರ್ಯಗತ ಮಾಡಲಿಲ್ಲ: ಅದರ ಬಗ್ಗೆ ಮಂತ್ರಿಗಳು ಉತ್ತರ ಕೊಡುತ್ತಾರೆಂದು ಹೇಳುತ್ತಾರೆ.

**ಶ್ರೀ ವೈ.ಕೆ. ರಾಮಯ್ಯ :** ಸನ್ಮಾನ್ಯ ಅಧ್ಯಕ್ಷರೇ, ನಾನು ವೃತ್ತಿಯಲ್ಲಿ ವಕೀಲ. ದಯಮಾಡಿ ಒಂದು ನಿಮಿಷ ಕೇಳಿ. ಸರ್ಕಾರದಲ್ಲಿ ಯಾವುದು ಆಗುತ್ತಾ ಇದೆ, ಯಾವುದು ಆಗುತ್ತಾ ಇಲ್ಲ ಎಂಬುದಕ್ಕೆ ಉತ್ತರವನ್ನು ಕೊಡಲು ನಿರ್ದಿಷ್ಟವಾದ ಜವಾಬ್ದಾರಿಯನ್ನು ಹೊತ್ತು ४೦ ಜನ ಸಮರ್ಥರಾದ ಮಂತ್ರಿಗಳು ಇದ್ದಾರೆ. ಅವರನ್ನು ಕೇಳಿ, ಉತ್ತರ ತೆಗೆದುಕೊಳ್ಳಿ ಆದರೆ, ನನ್ನ ಕೆಲಸ ಅದಲ್ಲ. ಈ ಶಾಸನ ಸಭೆಯ ಸದಸ್ಯನಾಗಿ ನನ್ನ ಕೆಲಸ ಇಷ್ಟೆ, ನನ್ನ ಸ್ನೇಹಿತರು ಏನು ಹೇಳಿದರೋ, ಅದು ಆ ರೀತಿಯಲ್ಲ ಸ್ವಾಮಿ, ಈ ರೀತಿ ಇದೆ, ಎಂದು ಹೇಳುವುದಕ್ಕೆ ನನಗೆ ಅವಕಾಶ ಇದೆ, ಅದನ್ನು ಮಾತ್ರ ನಾನು ಹೇಳುತ್ತೇನೆ. ಕೃಷಿ ಇಲಾಖೆಯಲ್ಲಿ ಹುಲುಸಾದಂಥ ಬೆಳೆ ಇವತ್ತು ಮಾತ್ರ ಬೆಳೆದದ್ದು ಎಂದು ಅವರಿಗೆ ಗೊತ್ತಿತ್ತೋ, ನೀವು ಹೇಳಿದಿರಿ ಈಗ ಬೆಳೆದಿದೆ ಎಂದು. ಕಳೆದ ವರ್ಷವೂ ೯೫ ಕೋಟಿ ರೂಪಾಯಿಗಳ ಅವ್ಯವಹಾರದ ಬೆಳೆ ಬೆಳೆದಿದೆ ಎಂಬುದನ್ನು ಅವರ ಗಮನಕ್ಕೆ ತರುವಂಥ ಪ್ರಯತ್ನವನ್ನು ಮಾತ್ರ ನಾನು ಮಾಡಿದ್ದೇನೆ.

**ಶ್ರೀ ಸಿ.ಭೈರೇಗೌಡ :** ಮಾನ್ಯ ಅಧ್ಯಕ್ಷರೇ, ನಾವು ಇಲ್ಲಿ ಕುಳಿತು ಕೇಳಬೇಕಾದರೆ ಕಷ್ಟವಾಗುತ್ತದೆ. ಯಾವ ವಿಚಾರ ಇಲ್ಲಿ ಚರ್ಚೆಗೆ ಬಂದಿದೆಯೋ ಆ ವಿಚಾರಕ್ಕೆ ತಕ್ಕಂಥ ವಿಷಯ ಪ್ರಸ್ತಾಪ ಮಾಡಿದರೆ ಕೇಳೋಣ. ಅವರಿಗೂ ಕೂಡ ಬಹಳ ಅನುಭವ ಇದೆ. ಆ ಅನುಭವದ ಪ್ರತಿಫಲ ನಮಗೂ ಕೂಡ ಬೇಕು ಎಂದು ಇಲ್ಲಿ ಕುಳಿತಿದ್ದೇವೆ. ಅವರು ಎಲ್ಲೆಲ್ಲೋ ಹೋದರೆ ನಾವೇನು ಹೇಳುವುದು ನಾವು ಯಾವ ರೀತಿ ಇಲ್ಲಿ ಕುಳಿತುಕೊಳ್ಳುವುದು.

**ಶ್ರೀ ವೈ.ಕೆ. ರಾಮಯ್ಯ :** ಸನ್ಮಾನ್ಯ ಅಧ್ಯಕ್ಷರೇ, ತಮ್ಮ ಸ್ಥಾನಕ್ಕೆ ಅತ್ಯಂತ ಗೌರವ ಇರುವುದರಿಂದ, ಕೆಲವು ವಿಷಯಗಳನ್ನು ಹೇಳುವುದಕ್ಕೆ ಆಗುವುದಿಲ್ಲ. ತಾವು ಮಳೆ ಹಾನಿ ವಿಷಯಕ್ಕೆ ಮಾತ್ರ ಚರ್ಚೆ ಮಾಡಲು ಅವಕಾಶ ಕೊಟ್ಟಿದ್ದಿದ್ದರೆ, ನಾನು ಅದನ್ನು ಬಿಟ್ಟು ಬೇರೆ ಯಾವುದೇ ವಿಷಯ ಮಾತನಾಡಲೂ ಹೋಗುತ್ತಿರಲಿಲ್ಲ. ಮಳೆಹಾನಿಯ ವಿಷಯದ ಮಧ್ಯದಲ್ಲಿ, ಸಂಬಂಧಪಡದ ವಿಷಯಗಳನ್ನು ಎತ್ತತಕ್ಕ ಅವಶ್ಯಕತೆ ನಮಗೆ ಬಂದಿದೆ. ತಾವು ಬರೀ ಮಳೆ ಹಾನಿಗೆ ಸೀಮಿತಗೊಳಿಸಿದ್ದರೆ, ನಾನೂ ಹಾಗೆ ಮಾತನಾಡಲಿಕ್ಕೆ ಆಗುತ್ತಿರಲಿಲ್ಲ. ಅವರು ಅದನ್ನು ಹೇಳಿದುದರಿಂದ, ನಾನೂ ಹೇಳಬೇಕಾಯಿತು. ಮತ್ತೆ ನಾಳೆ ಅಥವಾ ನಾಡಿದ್ದೋ ಈ ರಾಷ್ಟ್ರದ, ಈ ರಾಜ್ಯದ, ಈ ಊರಿನ, ಈ ನಾಡಿನ ರೈತರ ಕಣ್ಣೀರಿನ ಕತೆಯ ಬಗ್ಗೆ ಎರಡು ದಿನಗಳ ಕಾಲ ಚರ್ಚೆ ಮಾಡಲು ಅವಕಾಶ ಕೊಡತ್ತಿದ್ದೀರಿ. ಅವತ್ತು, ದಯಮಾಡಿ ನಾನು ಒಬ್ಬ ರೈತನಾಗಿ, ಅಷ್ಟೋ

ಇಷ್ಟೋ ಆ ಸಮಸ್ಯೆ ಬಗ್ಗೆ ಅರಿವುಳ್ಳವನಾಗಿ, ಸ್ವಲ್ಪಮಟ್ಟಿಗೆ ಹೋರಾಡಿರುವಂಥ ನನಗೂ ಅವಕಾಶ ಕೊಡುವಂಥ ಒಂದು ವೇದಿಕೆಯನ್ನು ಈಗಲೇ ತಮ್ಮ ಮುಂದಿಡುತ್ತೇನೆ. ಕೊನೆಯದಾಗಿ ನಾನು ಒಂದು ಮಾತನ್ನು ಹೇಳುವುದಕ್ಕೆ ಇಚ್ಛೆ ಪಡುತ್ತೇನೆ. ಡಾ. ರಾಜಕುಮಾರ್‌ರವರ ಅಪಹರಣದ ವಿಷಯವನ್ನು ನಿರ್ವಹಣೆ ಮಾಡಿದಂಥ ರೀತಿ ನೀತಿಯ ಬಗ್ಗೆ ಒಂದೇ ಒಂದು ವಾಕ್ಯದಲ್ಲಿ ಹೇಳುತ್ತೇನೆ. ರಾಜ್ಯ ಸರ್ಕಾರದ ನಿರ್ವಹಣೆ ಬಗ್ಗೆ ನನ್ನ ಸ್ನೇಹಿತರು ವಿವಿಧವಾದ ವ್ಯಾಖ್ಯಾನವನ್ನು ಹೇಳಿದ್ದಾರೆ.

(ಗೊಂದಲ)

**ಅಧ್ಯಕ್ಷರು :** ಸಬ್ಜೆಕ್ಟ್ ಮ್ಯಾಚ್ ಎಲ್ಲೆಲ್ಲೋ ಹೋಗುತ್ತಾ ಇದೆ. ಇಲ್ಲಿ ನಮ್ಮ ಮುಂದೆ ಯಾವ ವಿಷಯ ಇದೆಯೋ ಅದರ ಬಗ್ಗೆ ಮಾತನಾಡಿ, ನಾನು ಬೇಡ ಎಂದು ಹೇಳುವುದಿಲ್ಲ.

**ಶ್ರೀ ಕೆ. ಶ್ರೀನಿವಾಸಗೌಡ :** ಸಚಿವ ಸಂಪುಟದ ಪುನರ್ ರಚನೆ ಏನಾದರೂ ಇದೆಯೇ.....

**ಶ್ರೀ ವೈ.ಕೆ. ರಾಮಯ್ಯ :** ಸನ್ಮಾನ್ಯ ಸದಸ್ಯರೊಬ್ಬರು ಮಂತ್ರಿಮಂಡಲದ ಪುನರ್‌ರಚನೆ ಇದೆಯೇ ಎಂದು ಕೇಳುತ್ತಿದ್ದಾರೆ. ಬಹುಶಃ ಆ ಸದಸ್ಯರಿಗೆ ನನ್ನ ಹಿನ್ನೆಲೆಯ ಅರಿವು ಇಲ್ಲವೆಂದು ನಾನು ಸ್ಪಷ್ಟವಾಗಿ ಹೇಳಬೇಕಾಗುತ್ತದೆ. ಸನ್ಮಾನ್ಯ ಅಧ್ಯಕ್ಷರೇ, ಆ ನನ್ನ ಮಿತ್ರರಿಗೆ ಹೇಳುವುದಕ್ಕೆ ಇಚ್ಛೆಪಡುತ್ತೇನೆ. ಅಂತಹ ಸ್ಥಾನಮಾನಗಳಿಗೆ, ಕ್ಷುಲಕ ಸ್ಥಾನಮಾನಗಳಿಗೆ ಆಸೆಪಡುವವನಾಗಿ ರಾಜಕೀಯದಲ್ಲಿ ಹೊಂದಿಕೊಂಡಿದ್ದರೆ, ನಾನು ಅಂತಹ ಸ್ಥಾನಮಾನಗಳನ್ನು ಹತ್ತೆಂಟು ಪಡೆಯುತ್ತಿದ್ದೆ. ಅವರು ಇವತ್ತಿಗಾದರೂ ಅರ್ಥಮಾಡಿಕೊಳ್ಳಲಿ. ದಯಮಾಡಿ ಅಂತಹ ಮಾತನ್ನು ನನಗೆ ಹೇಳುವುದು ಬೇಡ. ನಾನು ಈ ವಿಷಯವನ್ನು ಅತ್ಯಂತ ಸೀರಿಯಸ್ಸಾಗಿ ತೆಗೆದುಕೊಳ್ಳುತ್ತೇನೆ.

**ಶ್ರೀ ಕೆ. ಶ್ರೀನಿವಾಸಗೌಡ :** ಯಾರೂ ಕ್ಷುಲ್ಲಕ ಎಂದು ಹೇಳುವುದಿಲ್ಲ. ಆಗಬೇಕು ಎಂದು ಹೇಳುವುದರಲ್ಲಿ ತಪ್ಪೇನಿದೆ. ಅದರಲ್ಲಿ ನೀವು ಇರುವುದೂ ತಪ್ಪೇನಿಲ್ಲ. ಹಾಗಾದರೆ ನಿಮ್ಮ ಪ್ರಕಾರ ಮಂತ್ರಿಗಳಾಗಿರುವವರೂ ಕ್ಷುಲ್ಲಕವಾಗುತ್ತಾರೆ.

**ಶ್ರೀ ವೈ.ಕೆ. ರಾಮಯ್ಯ :** ನಾನು ಆ ಎಲ್ಲ ವಿಷಯಗಳನ್ನೂ ಇಲ್ಲಿ ರೆಫರ್ ಮಾಡುವುದಕ್ಕೆ ಬಯಸುವುದಿಲ್ಲ. ನನ್ನ ವೈಯಕ್ತಿಕವಾದಂಥ ನಡತೆಯನ್ನು, ನನ್ನ ಕಾರ್ಯಶೈಲಿಯನ್ನು, ನನ್ನ ಬದುಕನ್ನು ಟಚ್ ಮಾಡುವ ಯಾವುದೇ ವಿಷಯವನ್ನು ಯಾರೂ ಮಾತನಾಡುವುದಿಲ್ಲ. ಯಾರ ಹತ್ತಿರವೋ ಮಾತನಾಡಿದಂತೆ ನನ್ನ ಹತ್ತಿರ ಮಾತನಾಡುವುದು ಬೇಡ. ಮಾನ್ಯ ಮುಖ್ಯಮಂತ್ರಿಗಳನ್ನು ಪ್ಲೀಜ್ ಮಾಡುವುದಕ್ಕೆ ನಾನು ಇಲ್ಲಿ ಭಾಷಣ ಮಾಡುತ್ತಿಲ್ಲ.

**ಶ್ರೀ ಪಿ.ಜಿ.ಆರ್. ಸಿಂಧ್ಯಾ:** ಮಾನ್ಯ ಅಧ್ಯಕ್ಷರೇ, ಮಾನ್ಯ ವೈ.ಕೆ. ರಾಮಯ್ಯನವರು ನಮ್ಮ ಪಕ್ಷದಲ್ಲಿದ್ದರು. ಅವರು ನಮಗೆ ತುಂಬಾ ಬೇಕಾದವರು. ಎರಡು ಸಾರಿ ಗೆದ್ದಿದ್ದರು. ನಮ್ಮ ಪಕ್ಷದಲ್ಲಿದ್ದಾಗ ಅವರು ಮಂತ್ರಿಗಳಾಗಿದ್ದರು. ನಿಜವಾಗಿಯೂ ಪ್ರಾಮಾಣಿಕವಾಗಿ ನಾವು ಅವರ ಹಿತಚಿಂತಕರು. ಸಾಮಾನ್ಯವಾಗಿ ನಮ್ಮ ಸಂಸದೀಯ ನಡವಳಿಕೆಗಳೆಲ್ಲ ಏನಾಗಿದೆ ಅಂದರೆ ಮಾತನಾಡುವಾಗ ಅವರ ಪಕ್ಷದವರು ಈ ಕಡೆ ಕುಳಿತಾಗ, ಮಾನ್ಯ ವೈ.ಕೆ. ರಾಮಯಯನವರು ಅ ಕಡೆ ಕುಳಿತಾಗ, ಓಹೋ, ಏನು ಹೆಗಡೆವರೆ, ಯಾವಾಗ ಸಚಿವ ಸಂಪುಟವನ್ನು ವಿಸ್ತರಣೆ ಮಾಡುತ್ತೀರಿ? ಅಂತ ಹೇಳಿ ಆ ಕಡೆಯವರೆಲ್ಲಾ ಹೇಳಿದ್ದುಂಟು. ಅವರು ಮಹಾಪರಾಧವೇನೂ ಮಾಡಿಲ್ಲ. ಅವರು ತಮ್ಮ ಮನಸ್ಸು ನೋಯಿಸಬೇಕೆಂದು ಏನೂ ಹೇಳಿಲ್ಲ ಅದ್ದರಿಂದ ಕ್ಷಮೆ ಕೇಳತಕ್ಕಂಥದ್ದು ಆಗಲಿ ಅಥವಾ ಮನಸ್ಸು ತೆಗೆದುಕೊಳ್ಳಬೇಕೆಂದಾಗಲಿ ಏನೂ ಅವಶ್ಯಕತೆ ಇಲ್ಲ.

ಇಂಥಾದ್ದೆಲ್ಲಾ ಬಹಳ ಸೀರಿಯಸ್ ಆಗಿ ಚರ್ಚೆ ಆಗುತ್ತದೆ. ಅವರು ಲೈಟರ್-ವೇ-ನಲ್ಲಿ ಹೇಳಿದ್ದಾರೆ. ತಾವು ಸಹ ಲೈಟರ್-ವೈ-ನಲ್ಲಿ ದಯವಿಟ್ಟು ತೆಗೆದುಕೊಳ್ಳಬೇಕು.

**ಶ್ರೀ ವೈ.ಕೆ. ರಾಮಯ್ಯ :** ಮಾನ್ಯ ಅಧ್ಯಕ್ಷರೇ, ನಾನೇ ಆಗಲೇ ಹೇಳಿದೆ. ಸಂಸದೀಯ ವ್ಯವಸ್ಥೆಯಲ್ಲಿ ಕೇವಲ ಸವಾಲುಗಳನ್ನು ಎಸೆದರೆ ಸಾಲದು, ಸವಾಲುಗಳನ್ನು ಸ್ವೀಕರಿಸಬೇಕಾಗುತ್ತದೆ. ಅಷ್ಟೇ ಅಲ್ಲ ಕೊಡುವಾಗ ತೆಗೆದುಕೊಳ್ಳುವುದು ಸಹ ಇರಬೇಕಾಗುತ್ತದೆ, ಕೊಡುವಾಗ ಸ್ವಲ್ಪ ಎಚ್ಚರಿಕೆಯಿಂದ ಕೊಡಬೇಕಾಗುತ್ತದೆ. ಈಗ ಗಾಜಿನ ಮನೆಯಲ್ಲಿ ಕುಳಿತುಕೊಂಡು ಕಲ್ಲು ಎಸೆದರೆ ಅದೇ ಕಲ್ಲು ವಾಪಸ್ಸು ಬರುತ್ತದೆ ಎನ್ನುವ ಎಚ್ಚರಿಕೆ ಇರಬೇಕಾಗುತ್ತದೆ. ಅದಕ್ಕೆ ನಾನು ಹೇಳುವುದು ನಮ್ಮ ವೈಯಕ್ತಿಕವಾದಂತಹ ವಿಷಯಗಳನ್ನು ತಂದು ಬೀದಿಗೆ ಎಳೆಯಬೇಡಿ ಅಂತ. ನಾನು ಮಂತ್ರಿಯಾಗಿದ್ದಾಗ ಮಾಡಿದ್ದನ್ನು ಹೇಳಿ, ನಾನು ಎಷ್ಟು ಕೋಟಿ ಹೊಡೆದಿದ್ದೀನಿ ಅಂತ ಹೇಳಿ, ಆಗ ನಾನು ಒಪ್ಪಿಕೊಳ್ಳುತ್ತೇನೆ. ಅದನ್ನು ಬಿಟ್ಟು, ನೀವು ಮಂತ್ರಿಮಂಡಲ ಯಾವಾಗ ವಿಸ್ತರಣೆಯಾಗುತ್ತದೆ, ಅದಕ್ಕಾಗಿ ನೀವು ಈ ರೀತಿ ಮಾತನಾಡುತ್ತಿದ್ದೀರಿ ಎನ್ನುವಂತಹ ಮಾತನ್ನು ಹೇಳಿದರೆ, ಅದನ್ನು ಕೇಳಿಕೊಂಡು ನಾನು ಸುಮ್ಮನೆ ಕೂರುವುದಕ್ಕೆ ಆಗುವುದಿಲ್ಲ. ದಯಮಾಡಿ ಅದನ್ನು ಮಾಡಬೇಡಿ. ನೀವು ಕ್ಷಮೆ ಕೇಳಬೇಡಿ, ಹಿಂದಕ್ಕೆ ತೆಗೆದುಕೊಳ್ಳಬೇಡಿ. ಮತ್ತೆ ಮುಂದುವರಿಸಬೇಡಿ. ಇಷ್ಟನ್ನು ಹೇಳಿ ಪ್ರಕೃತಿ ವಿಕೋಪದಿಂದ ಆದಂತಹ ಚರ್ಚೆಗೆ ಹೊರತಾದಂತಹ ಕೆಲವು ಮಾತುಗಳನ್ನು ಅವರೇ ನನ್ನಿಂದ ಹೇಳಿಸಿದರು. ಅದಕ್ಕಾಗಿ ಕಾಲದ ವ್ಯಯ ಆಗಿದ್ದರೆ ತಮ್ಮ ಕ್ಷಮೆ ಕೋರುತ್ತೇನೆ. ಹಾನಿಯಿಂದ ಆಗಿರುವಂತಹ ನಷ್ಟವನ್ನು ಭರಿಸುವುದಕ್ಕೆ ಆಗುವುದಿಲ್ಲ. ಕೇಂದ್ರ ಸರ್ಕಾರದಿಂದ ನನ್ನ ಸ್ನೇಹಿತರು ನೂರು ಕೋಟಿ ರೂಪಾಯಿಗಳನ್ನು ತಂದೆ ಅಂತ ಹೇಳಿದರು. ಇವತ್ತು ಹೋಗಿ ನಾಳೆ ತರುವುದಕ್ಕೆ ಆಗುವುದಿಲ್ಲ. ನಮ್ಮ ಸರ್ಕಾರದ ಕಂದಾಯ ಸಚಿವರು ಸಹ ಅದನ್ನು ಹೇಳುತ್ತಾರೆ. ಎಲ್ಲಾ ಜಿಲ್ಲೆಗಳಿಂದ ಮಾಹಿತಿಯನ್ನು ತರಿಸಿಕೊಂಡಿದ್ದಾರೆ. ಕೇಂದ್ರ ಸರ್ಕಾರಕ್ಕೂ ಕಳುಹಿಸಿಕೊಡುತ್ತಾರೆ. ಅವರು ಕೊಟ್ಟಂತಹ ಹಣವನ್ನು ತಂದು ಹಂಚುತ್ತಾರೆ. ನಾಳೆ ಬ್ರೀಫ್‌ಕೇಸನ್ನು ತೆಗೆದುಕೊಂಡು ಹೋಗಿ ಹಣ ತರುವುದಕ್ಕೆ ಆಗುವುದಿಲ್ಲ. ಅತ್ಯಂತ ಸಮರ್ಪಕವಾಗಿ ಈ ವಿಕೋಪದಿಂದ ಆದಂತಹ ಹಾನಿಯನ್ನು ನಿಭಾಯಿಸುವುದರಲ್ಲಿ ನಾನು ಸಹ ನನ್ನ ಸ್ನೇಹಿತರ ಜೊತೆಯಲ್ಲಿ ಪ್ರಾರ್ಥನೆ ಮಾಡಿಕೊಂಡು ಇಷ್ಟು ಮಾತನಾಡುವುದಕ್ಕೆ ನನಗೆ ಅವಕಾಶ ಕೊಟ್ಟ ತಮಗೆ ವಂದಿಸಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.

## ರೈತರಿಗೆ ಶಾಶ್ವತ ಪರಿಹಾರ

೧ನೇ ಜುಲೈ ೨೦೦೧

ಬೆಲೆ ಕಡಿಯಾಗುವುದಕ್ಕೆ ಏನು ಕಾರಣ ಕರ್ನಾಟಕ ರಾಜ್ಯದಲ್ಲಿ ರೈತರ ದುಸ್ಥಿತಿಗೆ, ಅವನು ವಿಷ ಕುಡಿದು ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ. ರೈತ ಬೆಳೆದ ಕೃಷಿ ಉತ್ಪನ್ನದ ಬೆಲೆ ಕುಸಿದಿರುವುದು ಒಂದು ಕಾರಣ. ಈ ಬೆಲೆ ಕುಸಿತಕ್ಕೆ ಏನು ಕಾರಣ ಈ ಬಗ್ಗೆ ಬೇಕಾದರೆ ಗಂಟೆಗಟ್ಟಲೆ ಚರ್ಚೆ ಮಾಡೋಣ. ಕೇಂದ್ರ ಸರ್ಕಾರಗಳು ಕೃಷಿ ಉತ್ಪನ್ನವನ್ನು ಆಮದು ಮಾಡಿಕೊಂಡಿದ್ದು, ಈ ದೇಶದ ಕೃಷಿ ಉತ್ಪನ್ನಗಳ ಬೆಲೆ ಕುಸಿಯಲು ಪ್ರಮುಖ ಕಾರಣವೆಂದು ನಾನು ಹೇಳುತ್ತೇನೆ. ಇದನ್ನು ಇವತ್ತು ಅಥವಾ ನೆನ್ನೆ ಮಾಡಿದರೆ ಎನ್ನುವ ಬಗ್ಗೆ ಇವತ್ತೆಲ್ಲಾ ಬೇಕಾದರೆ ಚರ್ಚೆ ಮಾಡಿ ಎಂದರೆ

ಮಾತನಾಡುತ್ತೇನೆ ಆದರೆ ಸಮಯವಿಲ್ಲ. ನ್ಯಾಷನಲೈಸೇಷನ್, ಗ್ಲೋಬಲೈಸೇಷನ್, ಲಿಬರಲೈಸೇಷನ್, ಡಬ್ಲ್ಯು.ಟಿ.ಓ., ಗ್ಯಾಟ್ ಇವೆಲ್ಲವು ವಾಜಪೇಯಿಯವರು ಅಧಿಕಾರಕ್ಕೆ ಬಂದ ತಕ್ಷಣ ಬಂದವುಗಳೆಂದು ಹೇಳುವಷ್ಟು ದಡ್ಡನಲ್ಲ ಅಥವಾ ಅವಿವೇಕಿಯೂ ಅಲ್ಲ. Yes. ssit was introuduced in 1970, seriously coinsidered in 1990 and started implementing in 1991 -- ಆದರೆ ಕಾಂಗ್ರೇಸ್ ಸರ್ಕಾರ ೧೯೯೧ರಲ್ಲಿ ಏನು ಮಾಡಿದರೆಂದರೆ. ಕೆಲವು ವಸ್ತುಗಳನ್ನು ಈ ರಾಷ್ಟ್ರಕ್ಕೆ ತರಿಸಲಿಕ್ಕೆ ಒಂದು ಅವಕಾಶವನ್ನು ಮಾಡಿಕೊಟ್ಟರು. ಅದರೊಳಗೆ ಏನು ಮಾಡಿದರು ಎಂದರೆ major agricultural produce except silk were included in the negative list.

ಲಿಬರಲೈಸೇಷನ್, ಗ್ಲೋಬಲೈಸೇಷನ್ ಇವೆಲ್ಲ ಆದ ಮೇಲೆ ಸಂಪೂರ್ಣವಾಗಿ ಯಾವ ವಸ್ತುವನ್ನಾದರೂ ಎಷ್ಟು ಬೇಕಾದರೂ ಈ ದೇಶಕ್ಕೆ ತರುವಂಥ ಸ್ವಾತಂತ್ರ್ಯ ಯಾರಿಗೂ ಇರಲಿಲ್ಲ. ಆದರೆ ಆ ನೆಗಟೀವ್ ಲಿಸ್ಟನ್ನು ತೆಗೆದು ೭೪೦ ವಸ್ತುಗಳ ಪಟ್ಟಿಯನ್ನು ಲಿಬರಲೈಸ್ ಮಾಡಿ, ಆಮದು ಮಾಡುವುದಕ್ಕೆ ಸ್ವಾತಂತ್ರ್ಯವನ್ನು ಕೊಟ್ಟು ಅಲ್ಪ ಸ್ವಲ್ಪ ಜೀವ ಇದ್ದಂಥ ರೈತರ ಜೀವನವನ್ನು ನಾಶ ಮಾಡಿದ್ದು ಈ ವಾಜಪೇಯಿಯವರ ಸರ್ಕಾರವಾಗಿದೆ. ನಮ್ಮ ದೇಶದಲ್ಲಿ ಉತ್ಪಾದನೆಯಾಗುವ ಸಾವಿರ ಕೋಟಿ ರೂಪಾಯಿಗಳ ವೆಚ್ಚದ ಸಕ್ಕರೆ ಇಲ್ಲಿ ಕೊಳೆಯುತ್ತಾ ಇದೆ. ಆದರೂ ಹೊರದೇಶದಿಂದ ಸಕ್ಕರೆಯನ್ನು ಆಮದು ಮಾಡಿಕೊಳ್ಳುತ್ತಾರೆ. ನಾವು ಬೆಳೆಯುತ್ತಿರುವ ರೇಷ್ಮೆಗೆ ಸರಿಯಾದ ಮಾರುಕಟ್ಟೆ ವ್ಯವಸ್ಥೆಯಿಲ್ಲ. ಆದರೂ ಚೈನಾ ದೇಶದಿಂದ ರೇಷ್ಮೆಯನ್ನು ಆಮದು ಮಾಡಿಕೊಳ್ಳುತ್ತಾರೆ. ನಮ್ಮಲ್ಲಿ ಬೆಳೆಯುವಂಥ ಟಮಟೊ ಹಣ್ಣಿಗೆ ಕೆ.ಜಿ. ಒಂದಕ್ಕೆ ೨೫ ರೂಪಾಯಿಗಳ ಖರ್ಚು. ಆದರೆ ಅದನ್ನು ೨೫ ಪೈಸೆಗೆ ಮಾರುವಂಥ ಪರಿಸ್ಥಿತಿ ಇರುವಾಗ ಇದನ್ನು ಸಹ ಹೊರದೇಶದಿಂದ ಆಮದು ಮಾಡಿಕೊಳ್ಳುತ್ತಾರೆ. ಆದ್ದರಿಂದ ಇವತ್ತು ಬೆಳೆ ಕೆಡುವುದಕ್ಕೆ ಮತ್ತು ಬೆಲೆ ಇಳಿಯುವುದಕ್ಕೆ ಎರಡು ಕಾರಣಗಳನ್ನು ವಿಶ್ಲೇಷಣೆ ಮಾಡಿದಾಗ, ಆಗುವಂಥ ಬೆಳೆಗೆ ಬೆಲೆ ಕಡಿಮೆಯಾಗಿ ರೈತರು ಈ ದುಸ್ಥಿತಿಗೆ ಬರಲಿಕ್ಕೆ ಮುಖ್ಯ ಕಾರಣ ಕೇಂದ್ರ ಸರ್ಕಾರದ ಆಮದು ನೀತಿಯೇ ಮುಖ್ಯ ಕಾರಣ ಎನ್ನುವಂಥ ಮಾತನ್ನು ನಾನು ಬಹಳ ಹಿಂದಿನಿಂದಲೇ ಹೇಳಿದ್ದೇನೆ. ಶ್ರೀ ಜಾರ್ಜ್ ಫರ್ನಾಂಡಿಸ್ ಅವರು ಕೇಂದ್ರದಲ್ಲಿ ವಾಣಿಜ್ಯ ಸಚಿವರಾಗಿದ್ದಾಗ ಅವತ್ತೇ ನಾನು ಭಾರತ ವ್ಯವಸಾಯ ಕ್ಷೇತ್ರವನ್ನು ನೀವು ನಾಶ ಮಾಡುತ್ತಿದ್ದೀರಿ ಎಂದು ಕಾಗದ ಬರೆದಿದ್ದೆ. ಆದ್ದರಿಂದ ಇವತ್ತು ರಾಮಯ್ಯನವರು ಪಕ್ಷಾಂತರ ಮಾಡಿ ಮಂತ್ರಿ ಆಗಲಿಕ್ಕೆ ಆ ಮಾತು ಹೇಳುತ್ತಾ ಇಲ್ಲ. ಮಾನ್ಯ ಅಧ್ಯಕ್ಷರೇ, ಈ ಮಾತನ್ನು ತಮಗೆ ಮತ್ತು ತಮ್ಮ ಮುಖಾಂತರ ನಮ್ಮ ಸ್ನೇಹಿತರಿಗೆ ಹೇಳುತ್ತಿದ್ದೇನೆ. ಈ ಅನುದಾನ ಕೊಡುವುದು, ಬಡ್ಡಿ ಮನ್ನಾ ಮಾಡುವುದು ಇವು ತಾತ್ಕಾಲಿಕ ಪರಿಹಾರವಷ್ಟೇ. ಈ ಬಡ್ಡಿ ಮನ್ನಾ ಮಾಡುವ ವಿಷಯದಲ್ಲಿ ನಮ್ಮ ಹಿರಿಯ ಸದಸ್ಯರಾದಂಥ ಶ್ರೀ ಎಸ್.ಎಸ್. ಪಾಟೀಲರು ಬಹಳ ಪ್ರತಿಪಾದನೆ ಮಾಡುತ್ತಾರೆ. ಅದನ್ನು ನಾನು ತಪ್ಪು ಎಂದು ಹೇಳುವುದಿಲ್ಲ. ಆದರೆ ಅದಕ್ಕೆ ತಾತ್ವಿಕವಾಗಿ ನಾನು ವಿರೋಧಿ. ನಾನು ಹೇಳುವುದೇನೆಂದರೆ, ನೀವು ಬಡ್ಡಿ ಮನ್ನಾ ಮಾಡಬೇಡಿ, ನಿಮ್ಮ ಅನುದಾನ ಬೇಡ, ನಿಮ ಅನುಕಂಪ ಬೇಡ, ನಮ್ಮ ರೈತರಿಗೆ ನಿಮ್ಮ ಭಿಕ್ಷೆ ಕೂಡ ಬೇಡ. ಆದರೆ ರೈತ ಬೆಳೆಯುವ ಬೆಳೆಗೆ ಸರಿಯಾದ ಬೆಲೆಯನ್ನು ನೀವು ಕೊಡಿ, ಸಾಕು. ಈ ವಿಚಾರದಲ್ಲಿ ಹಲವಾರು ಸಲ ಈ ಸದನದಲ್ಲಿ ನಾನು ಮಾತನಾಡಿದ್ದೇನೆ.

Fix floor price and also ceiling price. if necessary. ಆದರೆ ನೀವು ಮಾಡಲಿಲ್ಲ.

ಮಾಲಿಕ್ ಅವರ ಅಧ್ಯಕ್ಷತೆಯಲ್ಲಿ ರಾಷ್ಟ್ರಮಟ್ಟದಲ್ಲಿ ಕಮಿಟಿಯನ್ನು ಮಾಡಿದರು. ರಾಜ್ಯಮಟ್ಟದಲ್ಲಿ ಚರ್ಚೆಯಾಯಿತು. ಕೃಷಿ ಉತ್ಪನ್ನಗಳಿಗೆ ಕನಿಷ್ಠ ಬೆಲೆಯನ್ನು ನಿಗದಿ ಮಾಡುವಂಥ ಪ್ರಾಮಾಣಿಕವಾದ ಪ್ರಯತ್ನ ಈ ರಾಷ್ಟ್ರದಲ್ಲಿ ಎಲ್ಲೂ ನಡೆಯಲಿಲ್ಲ. ಕೇಂದ್ರದಲ್ಲಿ ಬಿ.ಜೆ.ಪಿ. ಸರ್ಕಾರ ಇದ್ದಾಗಲೂ ನಡೆಯಲಿಲ್ಲ, ಕಾಂಗ್ರೆಸ್ ಸರ್ಕಾರ ಇದ್ದಾಗಲೂ ನಡೆಯಲಿಲ್ಲ, ಪಶ್ಚಿಮ ಬಂಗಾಳದಲ್ಲಿ ಕಮ್ಯುನಿಸ್ಟ್ ಸರ್ಕಾರ ಇದ್ದಾಗಲೂ ಕನಿಷ್ಠ ಬೆಲೆಯನ್ನು ನಿಗದಿ ಮಾಡುವಂಥ ಪ್ರಯತ್ನ ನಡೆಯಲಿಲ್ಲ.

ಸುಮ್ಮನೆ ಏನೋ ಲಘುವಾಗಿ ಮಾತನಾಡುವುದರಿಂದ ಈ ಸಮಸ್ಯೆ ಪರಿಹಾರವಾಗುವುದಿಲ್ಲ. You fix the floor price. You establish a mechanism which can automatically take care of market forces.

ಈ ದೇಶದಲ್ಲಿ ಯಾವ ಯಾವುದಕ್ಕೋ ಸಾವಿರ ಕೋಟಿ ರೂಪಾಯಿಗಳ ಲೆಕ್ಕ ಹೇಳುವುದಾದರೆ, ಆವರ್ತ ನಿಧಿ ಎಂದು ಕೇವಲ ೨೫ ಕೋಟಿ ರೂಪಾಯಿ ಇದಕ್ಕೆ ಏಕೆ ಬೇಡವೇ ಬೇಡ. ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರ ಹೀಗೆ ಎಲ್ಲರೂ ಸೇರಿ ಭಾರತ ದೇಶದಲ್ಲಿ ಸಾವಿರಾರು ಕೋಟಿ ರೂಪಾಯಿಗಳ ಒಂದು ನಿಧಿಯನ್ನು ಸ್ಥಾಪನೆ ಮಾಡಲಿ.

ರೈತರ ಕಷ್ಟಕಾರ್ಪಣ್ಯಗಳ ಬಗ್ಗೆ ಮತ್ತು ಗ್ರಾಮೀಣ ಜನರ ಬದುಕಿನ ಬಗ್ಗೆ ಮತ್ತು ಅವರ ದುಃಖ ದುಮ್ಮಾನಗಳ ಬಗ್ಗೆ ಅಲ್ಲಿಂದ ಬಂದ ನಮಗೆ ಗೊತ್ತಿರುತ್ತದೆ. ಆದರೆ ಇದು ಮುಂದಿನ ಜನಾಂಗದವರಿಗೆ ಗೊತ್ತಿಲ್ಲ. ಇದು ನಿಜವಾಗಿಯೂ ನಮ್ಮ ನಡವಳಿಕೆಗಳ ಮೇಲೆ ಪರಿಣಾಮ ಬೀರುತ್ತದೆ. ಇವತ್ತಿನ ದಿವಸ ಯಾವುದೊಂದು ಆಡಳಿತ ಪಕ್ಷದಲ್ಲಿದ್ದೇವೆ ಎನ್ನತಕ್ಕಂಥ ಕಾರಣಗಳಿಂದ ರೈತರು ಆತ್ಮಹತ್ಯೆ ಮಾಡಿಕೊಳ್ಳುವ ಒಂದು ಪರಿಸ್ಥಿತಿಯನ್ನು ನಾವು ಮೆಚ್ಚಿಕೊಳ್ಳುವುದಾಗಲಿ ಅಥವಾ ಪ್ರತಿಪಾದನೆ ಮಾಡುವುದಾಗಲಿ ಅಥವಾ ಇದರಿಂದ ಖುಷಿ ಪಡುವ ಕೆಟ್ಟ ಮನಸ್ಥಿತಿ ನಮ್ಮದಲ್ಲ. ಆತ್ಮಹತ್ಯೆ ಸಂದರ್ಭದಲ್ಲಿ ಜನರ ನಾನಾ ವಿಧವಾದ, ವಿಚಿತ್ರ ಸ್ವಭಾವಗಳನ್ನು ಕಂಡಂಥ ನನಗೆ ಒಂದು ಅನುಮಾನ ಬರುತ್ತದೆ. ಅದೇನೆಂದರೆ, ಮನುಷ್ಯ ಎಷ್ಟು ಕೆಡಬಾರದಾಗಿತ್ತೋ ಅದಕ್ಕಿಂತ ಹೆಚ್ಚಿಗೆ ಕೆಟ್ಟಿದ್ದಾನೆ ಎಂಬುದು ನನ್ನ ಅಭಿಪ್ರಾಯವಾಗಿದೆ. ಇನ್ನು ಏನು ಮಾಡುವುದಕ್ಕೆ ಆಗುವುದಿಲ್ಲ. ರೈತ ಸತ್ತೆ ಸಾಯುತ್ತಾನೆ ಎನ್ನುವ ಪರಿಸ್ಥಿತಿ ಇದ್ದಾಗ ಆತನ ಬಾಯಿಗೆ ವಿಷ ತುರಿಕಿ, ವಿಷ ಕುಡಿದು ಸತ್ತನೆಂದು ಸರ್ಟಿಫಿಕೇಟ್ ಪಡೆದುಕೊಂಡು, ಹಣ ಪಡೆದುಕೊಂಡಿರುವ ಸ್ನೇಹಿತರು ನಮ್ಮಲ್ಲಿ ಇದ್ದಾರೆ. ಇವತ್ತಿನ ದಿವಸ ಹಣಕ್ಕಾಗಿ ಮತ್ತು ಬದುಕಿಗಾಗಿ ಜನರು ಅನುಸರಿಸುವ ವಿಧಿವಿಧಾನಗಳನ್ನು ನೋಡಿದಾಗ ಈ ರೀತಿಯ ಘಟನೆಗಳು ಆಗುವುದಿಲ್ಲವೆಂದು ನಾವು ತಿಳಿದುಕೊಳ್ಳುವುದಕ್ಕೆ ಸಾಧ್ಯವಿಲ್ಲ. ಸರ್ಕಾರ ಇದರ ಬಗ್ಗೆ ಒಂದು ನಿಲುವನ್ನು ತೆಗೆದುಕೊಂಡಿದೆ. ಯಾರೋ ಒಬ್ಬ ವಿಷ ಕುಡಿದು ಸತ್ತಾಗ, ವಿಚಾರಣೆ ಮಾಡದೇ ಅಥವಾ ಆತ ನಿಜವಾಗಿಯೂ ಬೆಲೆ ಕಡಿಮೆ ಆಗಿರುವುದರಿಂದಲೇ ಸತ್ತನೆಂದು ಪುರಾವೆ ಇಲ್ಲದೆ ಆತನಿಗೆ ಪರಿಹಾರ ಕೊಡುವಂಥ ಪದ್ಧತಿ ಸರಿಯಲ್ಲ. ಆತನಿಗೆ ಪರಿಹಾರ ಕೊಡುವುದಕ್ಕಿಂತ ಮೊದಲು ವಿಚಾರಣೆ ಮಾಡಿ ಕೊಡಬೇಕೆಂದು ಸರ್ಕಾರ ನಿಲುವನ್ನು ತೆಗೆದುಕೊಂಡಿದೆ. ನಾನು ಈಗಾಗಲೇ ಹೇಳಿದ ಪ್ರಕಾರ ರೈತರ ದುಸ್ಥಿತಿ ಮತ್ತು ಕೆಟ್ಟ ಪರಿಸ್ಥಿತಿಗೆ ಬೆಲೆ ಇಳಿಕೆಯೇ ಮುಖ್ಯ ಕಾರಣ. ಇದಕ್ಕೆ ಬೇರೆ ಯಾವ ಅನುಮಾನವೇ ಇಲ್ಲ. ಇವತ್ತಿನ ದಿವಸ ೫ ಸಾವಿರ ತೆಂಗಿನಕಾಯಿ ಮಾರಿದರೆ ಕೇವಲ ೨.೫ ಸಾವಿರ ರೂಪಾಯಿ ಮಾತ್ರ ಕೈಗೆ ಸಿಗತಕ್ಕಂಥ ಪರಿಸ್ಥಿತಿ ಬಂದಿದೆ.

ಒಂದೇ ಸಾರಿ ಫ್ರೀ ಟ್ರೇಡ್ ನಮ್ಮ ದೇಶದಲ್ಲಿ ಪ್ರಾರಂಭವಾಗಲಿಲ್ಲ. ಲಿಬರಲೈಸೇಷನ್, ಗ್ಲೋಬಲೈಸೇಷನ್ ಮತ್ತು ಗ್ಯಾಟ್ ಇವೆಲ್ಲವೂ ಇದ್ದರೂ ಯಾವುದೇ ಒಂದು ದೇಶದಿಂದ ಯಾವ ವಸ್ತುವನ್ನು ಎಷ್ಟು ಬೇಕಾದರೂ ನಮ್ಮ ದೇಶಕ್ಕೆ ತರಿಸಿಕೊಳ್ಳುವುದಕ್ಕೆ ಸ್ವಾತಂತ್ರ್ಯ ಇರಲಿಲ್ಲ. I agree for the sake of arguments, it is true that the Coingress Government has taken decision to liberalise trade in 1991. ಆದರೆ, ಈಗ ಬಂದಂಥ ಕೇಂದ್ರ ಸರ್ಕಾರ ಇದನ್ನು ಸಂಪೂರ್ಣವಾಗಿ ತೆಗೆದು ಹಾಕಿ, ಯಾವ ವಸ್ತುವನ್ನಾದರೂ ಯಾವುದೇ ರಾಷ್ಟ್ರದಿಂದ ತರಿಸಿಕೊಳ್ಳುವಂಥ ನೀತಿಯಿಂದ ಭಾರತ ದೇಶದ ಕೃಷಿ ಉದ್ಯಮಗಳು ಮತ್ತು ಕೈಗಾರಿಕೆಗಳ ಮೇಲೆ ಅತ್ಯಂತ ಕೆಟ್ಟಪರಿಣಾಮ ಬೀರಿದೆ. ಕೃಷಿ ಉದ್ಯಮದಲ್ಲಿ ತೊಡಗಿರುವ ರೈತರಿಗೆ ನಷ್ಟವಾಗುತ್ತಿದೆ. ನಿಮ್ಮ ಸರ್ಕಾರ ಇದ್ದ ಸಂದರ್ಭದಲ್ಲಿ ಇದು ಆಗಿರುವುದರಿಂದ ಇಷ್ಟೆಲ್ಲಾ ತೊಂದರೆಗಳಾಗಿವೆ ಎಂದು ಸದನದಲ್ಲಿ ಸುಮಾರು ೯೯ ಬಾರಿ ಅನೇಕ ಸದಸ್ಯರು ಪ್ರಸ್ತಾಪ ಮಾಡಿರಬಹುದು. But all the successive governments since 1991, are non-coingress Governments headed by different individuals. ನಾನು ಹೇಳಿರುವ ವಾಕ್ಯದಲ್ಲಿ ಏನಾದರು ತಪ್ಪು ಇದ್ದರೆ, ಅದರ ಬಗ್ಗೆ ಯಾರು ಬೇಕಾದರೂ ಪ್ರಶ್ನೆ ಮಾಡಬಹುದು. ೧೯೯೧ರಿಂದ ಇಲ್ಲಿಯವರೆಗೆ ಅಂದರೆ ಒಂದು ದಶಕದವರೆಗೆ ಈ ರಾಷ್ಟ್ರದಲ್ಲಿ ಅಧಿಕಾರ ಮಾಡಿದವರು ಯಾರು ಕಾಂಗ್ರೆಸ್ ಸರ್ಕಾರದವರು ಅಧಿಕಾರ ಮಾಡಿದ್ದಾರೆಯೆ ಇದರಿಂದ ಏನು ಪ್ರಯೋಜನವಾಗುವುದಿಲ್ಲವೆಂದು ನಾನು ಪ್ರಾರಂಭದಲ್ಲಿಯೇ ಪ್ರಸ್ತಾಪ ಮಾಡಿದ್ದೇನು. -Who prevented you people removing the bad decisions that had been taken by the Congress Government?

ಇದಕ್ಕೆ ಕುವೆಂಪುರವರ ಹೇಳುತ್ತಾರೆ, **ಪಂಚಮರ ಶಿಶು ಒಂದು ನೀರಿನಲ್ಲಿ ಮುಳುಗುತಿರೆ ಅದನ್ನು ಮುಟ್ಟಿದರೆ ಧರ್ಮಕ್ಕೆ ವಿರೋಧ ಎನ್ನುವುದಾದರೆ, ಅವರು ಮುಂದಕ್ಕೆ ಹೇಳುತ್ತಾರೆ. ಮನು ಇದನ್ನು ಹೇಳಿರಲಾರನೂ ಅಯ್ಯಯ್ಯೋ. ಅಕಸ್ಮಾತ್ ಇದನ್ನು ಹೇಳಿದ್ದರೆ, ಆ ಮನುಧರ್ಮ ಶಾಸನ ಸುಟ್ಟು ಬಿಸಾಡಿ.** ಡಾ. ಮನಮೋಹನ್ ಸಿಂಗ್‌ರವರು ಕೆಟ್ಟ ಪದ್ಧತಿಯನ್ನು ಅನುಸರಿಸಿದ್ದರೆ, ಅವರು ಕೆಟ್ಟ ತೀರ್ಮಾನವನ್ನು ತೆಗೆದುಕೊಂಡಿದ್ದರೆ, ಈ ವರ್ಷ ೧೦ ವರ್ಷ ಆಡಳಿತವನ್ನು ಮಾಡಿದಂಥ ಕಾಂಗ್ರೆಸ್ಸೇತರ ಸರ್ಕಾರಗಳು ಆ ತೀರ್ಮಾನವನ್ನು ಸುಟ್ಟು ಯಮುನಾ ನದಿಗೆ ಬಿಸಾಕಲು ಯಾರು ಅಡ್ಡಿ ಬಂದಿದ್ದರು ನಿಮ್ಮ ಸರ್ಕಾರವೆ ಹೊಣೆ, ರೈತರು ಆತ್ಮಹತ್ಯೆ ಮಾಡಿಕೊಳ್ಳಲು ಡಾ. ಮನಮೋಹನ್ ಸಿಂಗ್‌ರವರು ತೆಗೆದುಕತೊಂಡಿರುವ ತೀರ್ಮಾನದಿಂದ ಎನ್ನುವ ಆರೋಪವನ್ನು ಮಾಡುವುದನ್ನು ಬಿಟ್ಟು, ಇದಕ್ಕೆ ಏನು ಪರಿಹಾರವನ್ನು ಕಂಡುಕೊಳ್ಳಬೇಕು ಎನ್ನುವುದರ ಬಗ್ಗೆ ಚರ್ಚೆ ಮಾಡುವುದು ಉತ್ತಮವೆಂದು ನಮ್ಮ ಸ್ನೇಹಿತರಲ್ಲಿ ಹೇಳುವುದಕ್ಕೆ ನಾನು ಇಚ್ಛೆ ಪಡುತ್ತೇನೆ. ಬೆಳಿಗ್ಗೆ ಒಂದು ಮಾತನ್ನು ಹೇಳಿದರು, ಇದು ರಾಜಕೀಯದ ಒಂದು ಚದುರಂಗದಾಟ, ಯಾವುದು ರಾಜಕೀಯದ ಚದುರಂಗದಾಟ ನಾನು ಒತ್ತಿ ಒತ್ತಿ ಹೇಳಬೇಕಾಗುತ್ತದೆ. ರೈತರಿಗೆ ಬಡ್ಡಿ ಮನ್ನಾ ಮಾಡುವುದು ಬೇಡ, ನಿಮ್ಮ ಅನುದಾನ ಬೇಡ, ಮಾನ್ಯ ಎಸ್.ಎಸ್. ಪಾಟೀಲರೊಬ್ಬರಾದರು ಇದನ್ನು ಒಪ್ಪಿಕೊಳ್ಳುತ್ತಾರೆ. ನಿಮ್ಮ ಭಿಕ್ಷೆ ನಮ್ಮ ರೈತರಿಗೆ ಬೇಡ, ನಾವು ನಿಮ್ಮನ್ನು ಏನೂ ಕೇಳುವುದಿಲ್ಲ. ನಾವು ಬೆಳೆದಂಥ ರೇಷ್ಮೆಗೆ ಒಳ್ಳೆಯ ಬೆಲೆಯನ್ನು ಕೊಡಿ, ನಮ್ಮ ಟೊಮೊಟೊಗೆ ನ್ಯಾಯವಾದ ಬೆಲೆಯನ್ನು ಕೊಡಿ ಎಂದು ನಾವು ಕೇಳುತ್ತೇವೆ. ಅದನ್ನು ಕೊಟ್ಟರೆ ನಮಗೆ ನೀವು ಇನ್ನು ಏನನ್ನೂ ಕೊಡಬೇಡಿ. ರಾಜಕೀಯದ ಚದುರಂಗದಾಟವನ್ನು ಆಡಬೇಡಿ

ಎಂದು ನಮ್ಮ ಸ್ನೇಹಿತರು ಹೇಳಿದರು. ಆಮದನ್ನು ನಿಲ್ಲಿಸುವುದಕ್ಕೆ ಆಗುತ್ತದೋ ಇಲ್ಲವೋ ಎನ್ನುವುದನ್ನು ಆಮೇಲೆ ನೋಡೋಣ. ಮಾನ್ಯ ವಿರೋಧ ಪಕ್ಷದ ನಾಯಕರಿಗೆ ಹಾಗೂ ಅವರ ಉಪ ನಾಯಕರಿಗೆ ನಾನು ಹೋದ ಸಲ ಮಾತನಾಡುತ್ತ ಇರುವ ಸಂದರ್ಭದಲ್ಲಿ ಅದನ್ನು ಕಳುಹಿಸಿಕೊಟ್ಟಿದ್ದೇನೆ. ಮಾಕ್ಸಿಮಮ್ ಇಂಪೋರ್ಟ್ ಡ್ಯೂಟಿ ಅದನ್ನು ಇವರು ಮಾಡುತ್ತಿಲ್ಲ. ನಾವು ಅನುದಾನವನ್ನು ಕೊಟ್ಟಿದ್ದೇವೆ, ನೀವು ಏನೂ ಕೊಡದೆ, ನಿಮ್ಮ ಅನುದಾನವನ್ನು ನಿಲ್ಲಿಸಿಬಿಡಿ. ೩೦೦ ಪರ್ಸೆಂಟ್ ಆಯಿಲ್ ಸೀಡ್ಸ್ ಮೇಲೆ ತೆರಿಗೆ ಹಾಕುವುದು, ಕೊನೆಯ ಪಕ್ಷ ಇದನ್ನಾದರೂ ಮಾಡಿಸಿ, ನಾನು ಇದನ್ನು ಯಾವ ಪಕ್ಷದ ಮೇಲೆ ದೂಷಣೆ ಮಾಡುವುದಕ್ಕೋ ಅಥವಾ ನಿಮ್ಮ ಮೇಲಿನ ಆಕ್ರೋಶಕ್ಕೊ, ಹೊಟ್ಟೆಕಿಚ್ಚಿಗೋ ಅಥವಾ ಉದ್ವೇಗಕ್ಕೋ ಇಲ್ಲಿ ಹೇಳುತ್ತಿಲ್ಲ. ಪರಿಸ್ಥಿತಿಯನ್ನು ಸುಧಾರಿಸಬೇಕಾದರೆ ಬೇಕಾದ ಮಾರ್ಗಗಳನ್ನು ನಾವು ಕಂಡುಹಿಡಿಯಬೇಕು. ಒಂದು ಉತ್ತಮವಾದ ಮಾರ್ಗ ಯಾವುದೆಂದರೆ, The Central Government can levy maximum import duty to control and to contain import of the agriucultural produce liberally.

ಅಷ್ಟು ಮಾಡಿಸಿ ನೀವು ಪುಣ್ಯವನ್ನು ಕಟ್ಟಿಕೊಳ್ಳಿ. ನೀವು ನಮ್ಮನ್ನು, ನಾವು ನಿಮ್ಮನ್ನು ತೆಗಳುವುದು ಬೇಡ. ನಮ್ಮಿಬ್ಬರ ಕಿತ್ತಾಟದಲ್ಲಿ ಕೂಸು ಬಡವಾಗುವುದು ಬೇಡ. ನಾನು ಅದಕ್ಕಾಗಿ ನಮ್ಮ ಸ್ನೇಹಿತರಲ್ಲಿ ಪ್ರಾರ್ಥನೆಯನ್ನು ಮಾಡಿಕೊಳ್ಳುತ್ತೇನೆ. ನಿಮ್ಮ ಕೇಂದ್ರ ಸರ್ಕಾರದ ವತಿಯಿಂದ ರಾಜ್ಯದ ನಾಡಿನ ರೈತರಿಗೆ ಉತ್ತಮವಾಗಬೇಕೆನ್ನುವ ಅನಿಸಿಕೆ ನಿಮಗೆ ಇದ್ದರೆ, ಮಾಕ್ಸಿಮಮ್ ಇಂಪೋರ್ಟ್ ಡ್ಯೂಟಿ ಏನಿದೆ, ಅದನ್ನು ಹಾಕಿಸುವುದಕ್ಕೆ ಅವರು ಮಾಡಿಕೊಡಬೇಕೆಂದು ನಾನು ಅವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಬರಗಾಲ ಪರಿಸ್ಥಿತಿಯನ್ನು ನಿಭಾಯಿಸಲು ಸರ್ಕಾರ ವಿಫಲವಾಗಿದೆ. ನಾನು ಇದರ ಬಗ್ಗೆ ಆಗಲೇ ಹೇಳಿದ್ದೇನೆ. ಬರದ ಛಾಯೆ ಈಗ ತಾನೆ ಆರಂಭವಾಗಿದೆ. ಜಿಲ್ಲಾಧಿಕಾರಿಗಳು ಸಭೆ ಕರೆದಿಲ್ಲ, ಜಿಲ್ಲಾ ಉಸ್ತುವಾರಿ ಮಂತ್ರಿಗಳು ಜಿಲ್ಲೆಗೆ ಹೋಗಿ ಸಭೆ ಮಾಡಿಲ್ಲ. ನಾವು ಯಾರನ್ನು ದೂಷಿಸುವುದು. **ದೇಶದಲ್ಲಿ ಇವತ್ತು ರೈತ ಕುಟುಂಬಕ್ಕೆ ಕರೆಯುವ ಹಸು, ಸಮಾಜಕ್ಕೆ ದುಡಿಯುವ ಎತ್ತು**, ರೈತನ ಬಗ್ಗೆ ನಾನು ಬೆಳಿಗ್ಗೆ ಹೇಳಿದೆ. ಒಂದು ನಾಟಕವನ್ನು ಬರೆಸಿ, ಸ್ಪರ್ಧೆ ಏರ್ಪಾಡು ಮಾಡಬೇಕಾಗುತ್ತದೆ. ರೈತರ ಹಿತವನ್ನು ಕಾಪಾಡುವುದಕ್ಕೆ ಒಂದು ನಾಟಕವನ್ನು ಬರೆಸಬೇಕು. ದುಡಿಯುವ ಎತ್ತು, ಅವನ ಕುಟುಂಬಕ್ಕೆ ಒಂದು ಕರೆಯುವ ಹಸು ಎಂದಿನವರೆಗೆ ಹಾಲು ಕರೆಯುತ್ತದೆ ಅಲ್ಲಿಯವರೆಗೆ ಅನ್ನವನ್ನು ಹಾಕುತ್ತಾರೆ. ನಂತರ ಆಚೆಗೆ ಓಡಿಸುತ್ತಾರೆ. ಎಲ್ಲಿಯವರೆಗೆ ರೈತನು ಬೆಳೆ ಬೆಳೆದು ದೇಶಕ್ಕೆ ಆಹಾರವನ್ನು ಕೊಡುತ್ತಾನೋ ಅಲ್ಲಿಯವರೆಗೆ ಎತ್ತಿಗೆ ಹುಲ್ಲು ಹಾಕುತ್ತಾರೆ, ನಂತರ ಆಚೆಗೆ ಓಡಿಸುತ್ತಾರೆ. ಎಲ್ಲಿಯವರೆಗೆ ರೈತನು ಬೆಳೆ ಬೆಳೆದು ದೇಶಕ್ಕೆ ಆಹಾರವನ್ನು ಕೊಡುತ್ತಾನೋ ಅಲ್ಲಿಯವರೆಗೆ ಎತ್ತಿಗೆ ಹುಲ್ಲು ಹಾಕುತ್ತಾರೆ, ನಂತರ ಅದನ್ನು ತೆಗೆದುಕೊಂಡು ಹೋಗಿ ಕಸಾಯಿಖಾನೆಗೆ ಕೊಡುತ್ತಾರೆ. ಆದ್ದರಿಂದ ಈ ದುಡಿಯುವ ಎತ್ತನ್ನು, ಕರೆಯುವ ಹಸುವನ್ನು ನಮ್ಮ ರಾಜಕೀಯ ಸ್ನೇಹಿತರ ಭಾಷೆಯಲ್ಲಿಯೇ ನಾನು ಹೇಳಿಬಿಡುತ್ತೇನೆ. ಚದುರಂಗದಾಟ ಕಂಡುಹಿಡಿಯಲಿಕ್ಕೆ ಪ್ರಯತ್ನವನ್ನು ಮಾಡೋಣ. ಕೊನೆಯದಾಗಿ ಒಂದು ಮಾತನ್ನು ಹೇಳುತ್ತೇನೆ. ಈ ಚರ್ಚೆಯಿಂದ, ಈ ಅನುದಾನಗಳಿಂದ ಬಿಟ್ಟಿ ಮನ್ನಾ ಮಾಡುವುದರಿಂದ ಯಾವ ಪರಿಹಾರವನ್ನೂ ನಾವು ಕೊಡುವುದಕ್ಕೆ ಸಾಧ್ಯವಾಗುವುದಿಲ್ಲ. ಶಾಶ್ವತ ಪರಿಹಾರವನ್ನು ನಾವು ಕೊಡಬೇಕಾದರೆ ರೈತರಿಗೆ ಮೂಲಭೂತವಾಗಿ ನೀರು ಬೇಕು. ನೀರು

ಬೇಕಾದರೆ ಮಳೆ ಬರಬೇಕಾಗುತ್ತದೆ. ಕೃಷಿ ಪ್ರಧಾನವಾದಂಥ ಈ ರಾಷ್ಟ್ರದಲ್ಲಿ, ಒಂದೊಂದು ತೊಟ್ಟು ಮಳೆ ನೀರನ್ನು ಶೇಖರಿಸಿ ಇಟ್ಟುಕೊಳ್ಳುವಂಥ ಶಾಶ್ವತವಾದ ಪರಿಹಾರ ಬೇಕಾಗುತ್ತದೆ. ಭೂಮಿಯ ಮೇಲಿರುವ ಒಂದು ಕಣ ಮಣ್ಣನ್ನು ಅಲುಗದಂತೆ, ಒಂದು ಕಾರ್ಯಕ್ರಮವನ್ನು ಹಾಕಿಕೊಂಡು, ಶಾಶ್ವತವಾದ ಪರಿಹಾರವನ್ನು ರೈತನಿಗೆ ಒದಗಿಸಿಕೊಡುವುದಕ್ಕೆ ಕ್ರಮ ಕೈಗೊಳ್ಳುವ ದಿಸೆಯಲ್ಲಿ ನಾವು ಕೆಲಸವನ್ನು ಮಾಡೋಣವೆಂದು ಹೇಳಿ ಮಾನ್ಯ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

## ಕೃಷಿಕನ ಕಣ್ಣೀರಿನ ಕಥೆ

೩೧ನೇ ಅಕ್ಟೋಬರ್ ೨೦೦೨

ಸನ್ಮಾನ್ಯ ಅಧ್ಯಕ್ಷರೇ, ರಾಜ್ಯದಲ್ಲಿ ಮಳೆ ಹೆಚ್ಚಾಗಿ ತುಂಬಾ ಹಾನಿಯಾಗಿದೆ. ಈ ಪ್ರಕೃತಿ ವಿಕೋಪಿಂದ ಬೆಳೆ ನಷ್ಟವಾಗಿ ಪ್ರಾಣಹಾನಿ ಆಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ರೈತನ ಭೂಮಿಗೆ ನೀರು ಒದಗಿಸುವಂತಹ ಕೆರೆಕಟ್ಟೆಗಳು ಕೆಲವು ಒಡೆದು ಹೋಗಿವೆ. ಕೆಲವು ಹಾನಿಗೊಂಡಿವೆ. ತಿರುಗಾಡುವ ರಸ್ತೆಗಳು ಕೂಡ ಸಾಕಷ್ಟು ಕೆಟ್ಟು ಹೋಗಿವೆ. ಎಲ್ಲಾ ಸ್ನೇಹಿತರು ಒಂದು ಒಪ್ಪಂದಕ್ಕೆ ಬರಬೇಕಾಗುತ್ತದೆ. ಇದು ಮಾನವ ನಿರ್ಮಿತವಾದಂಥ ಅಥವಾ ಆಡಳಿತದ ನಿರ್ಲಕ್ಷ್ಯದಿಂದ ಆದಂತಹ ಹಾನಿಯಲ್ಲ. ಇದು ಪ್ರಕೃತಿ ವಿಕೋಪದಿಂದ ಆದಂತಹ ಹಾನಿ ಎನ್ನುವುದನ್ನು ಎಲ್ಲರೂ ಒಪ್ಪಿಕೊಂಡರೂ ಇರುವಂತಹ ತಕರಾರು ಏನೆಂದರೆ, ಈ ಹಾನಿಯನ್ನು ಸರಿ ಮಾಡುವುದರಲ್ಲಿ ಸರ್ಕಾರ ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಣೆ ಮಾಡಿಲ್ಲ. ಬಹಳ ದೊಡ್ಡ ಅಪವಾದ ಎಂದರೆ, ನಮ್ಮ ಕಂದಾಯಮಂತ್ರಿಗಳು ಮಾಹಿತಿಯನ್ನು ಸಕಾಲದಲ್ಲಿ ತರಿಸುವುದರಲ್ಲಿ ವಿಫಲರಾಗಿದ್ದಾರೆನ್ನುವುದು. ನಾನು ಇಲ್ಲಿ ಕುಳಿತುಕೊಂಡು ಎಲ್ಲರೂ ಮಳೆ ಹಾನಿಯ ಬಗ್ಗೆ ಮಾತನಾಡುವಾಗ ನೋಟ್ ಮಾಡಕೊಂಡಿದ್ದೇನೆ. ಎಲ್ಲರ ವಾದ ಏನೆಂದರೆ, ಕಂದಾಯ ಮಂತ್ರಿಗಳು ಮೂರ ದಿವಸಗಳಲ್ಲಿ ಮಾಹಿತಿಯನ್ನು ತರಿಸಿಕೊಳ್ಳಲಿಲ್ಲ. ಇದು ವಿಫಲತೆ ಎನ್ನುವಂತಹ ಅಪವಾದವನ್ನು ಸರ್ಕಾರದ ಮೇಲೆ ಮಾಡಿದ್ದಾರೆ. ಈ ಹಾನಿಗೆ, ಈ ನಷ್ಟಕ್ಕೆ ಪ್ರಕೃತಿಯ ವಿಕೋಪವೇ ಕಾರಣ ಹೊರತು ಮನುಷ್ಯನಿಂದ ಅಲ್ಲ ಅಥವಾ ಸರ್ಕಾರದ ಆಡಳಿತ ಯಂತ್ರದ ಕಾರ್ಯವೈಖರಿಯ ವಿಫಲತೆಯಿಂದ ಅಲ್ಲ ಎನ್ನುವಂತಹ ವಿಷಯವನ್ನು ಎಲ್ಲಾ ನನ್ನ ಸ್ನೇಹಿತರು ಒಪ್ಪಿಕೊಳ್ಳುತ್ತಾರೆ.

ವಿರೋಧಪಕ್ಷದ ನಾಯಕರು ಮತ್ತು ವಿರೋಧಪಕ್ಷದ ನನ್ನ ಸ್ನೇಹಿತರು ಮಾತನಾಡುತ್ತ, ಈ ಒಂದು ಪ್ರಕೃತಿ ವಿಕೋಪ ಆದಮೇಲೆ ಅಧಿಕಾರಿಗಳು ಸ್ಥಳಕ್ಕೆ ಹೋಗಿಲ್ಲ. ಮಂತ್ರಿಗಳು ಯಾರೂ ಸ್ಥಳಕ್ಕೆ ಹೋಗಿಲ್ಲವೆನ್ನುವಂತಹ ಮಾತನ್ನು ಹೇಳಿದ್ದಾರೆ. ಇದನ್ನು ನಾನು ಸಂಪೂರ್ಣವಾಗಿ ಅಲ್ಲಗಳೆಯುವುದಕ್ಕೆ ಇಷ್ಟಪಡುತ್ತೇನೆ. ತಮಗೆ ಒಂದು ಉದಾಹರಣೆಯನ್ನು ಹೇಳಬೇಕಾದರೆ, ನನ್ನ ಕ್ಷೇತ್ರದಲ್ಲಿ ೬೦ ವರ್ಷಗಳ ಹಿಂದೆ ಕಟ್ಟಿದಂತಹ ಮಾರ್ಕೋನಹಳ್ಳಿ ಅಣೆಕಟ್ಟು ಇದೆ. ಈ ಅಣೆಕಟ್ಟಿನ ಗೇಟುಗಳನ್ನು ೬೦ ವರ್ಷಗಳಿಂದ ಬದಲಾವಣೆ ಮಾಡದೆ ಆ ಗೇಟುಗಳು ತುಕ್ಕು ಹಿಡಿದು ನೀರು ಹೊರಗಡೆ ಬಾರದೆ ಇರುವಂತಹ ಪರಿಸ್ಥಿತಿ ಇತ್ತು. ನಮ್ಮ ಮುಂದೆ ಇದ್ದಂತಹ ಪ್ರಶ್ನೆ, ಅಣೆಕಟ್ಟು ಉಳಿಸಿಕೊಳ್ಳಬೇಕೇ ಅಥವಾ ನೀರನ್ನು ಉಳಿಸಿಕೊಳ್ಳಬೇಕೇ ಎನ್ನುವ ಪ್ರಶ್ನೆ ಇದ್ದಾಗ, ರಾತ್ರಿ ಒಂದೂವರೆ ಗಂಟೆಯಲ್ಲಿ ರಾಜ್ಯದ ಮುಖ್ಯಮಂತ್ರಿಗಳು ಆ ಕೆಲಸಕ್ಕೆ ಸ್ಪಂದಿಸಿದ್ದಾರೆ. ನಾನು ಹೋಗಿ ಅವರ ಮನೆಯ ಬಾಗಿಲನ್ನು ತಟ್ಟಿಲ್ಲ. ದೂರವಾಣಿ ಮಾಡಿದ್ದಕ್ಕೆ ರಾತ್ರಿ ಒಂದೂವರೆ

ಗಂಟೆಯಲ್ಲಿ ಎದ್ದು ಅಧಿಕಾರಿಗಳಿಗೆ ನಿರ್ದೇಶನವನ್ನು ಕೊಟ್ಟಿದ್ದಾರೆ. ಮಂಡ್ಯ ಜಿಲ್ಲೆಯ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆಯ ಪೊಲೀಸ್ ವರಿಷ್ಠಾಧಿಕಾರಿಗಳು ರಾತ್ರಿ ೧೨.೩೦ ಗಂಟೆಯಲ್ಲಿ ಸ್ಥಳಕ್ಕೆ ಬಂದಿದ್ದಾರೆ. ತುಮಕೂರು ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲೆಯ ಪೊಲೀಸ್ ವರಿಷ್ಠಾಧಿಕಾರಿಗಳು ರಾತ್ರಿ ಮೂರು ಗಂಟೆಯ ಹೊತ್ತಿಗೆ ಸ್ಥಳವನ್ನು ತಲುಪಿದ್ದಾರೆ. ರಾಜ್ಯದ ನಾಲ್ಕು ಜನ ಮುಖ್ಯ ಇಂಜಿನಿಯರುಗಳು ಸ್ಥಳವನ್ನು ತಲುಪಿ ಮಾರ್ಕೋನಹಳ್ಳಿ ಅಣೆಕಟ್ಟನ್ನು ಉಳಿಸಿಕೊಳ್ಳುವುದಕ್ಕೆ, ಏನೇನು ಕೆಲಸಗಳನ್ನು ಮಾಡಬೇಕಾಗಿತ್ತೋ ಆ ಎಲ್ಲಾ ಕೆಲಸಗಳನ್ನು ಮಾಡಿದ್ದಾರೆ. ನಮ್ಮ ಕಂದಾಯ ಮಂತ್ರಿಗಳು ಸ್ಥಳಕ್ಕೆ ಬಂದು ಮಾಡಬೇಕಾದ ಕೆಲಸ ಮಾಡಿದ್ದಾರೆಂದು ಹೇಳುವ ಭ್ರಮೆ ನನಗೆ ಇಲ್ಲ. ಯಾರೂ ಹೋಗಿಲ್ಲ, ಯಾರೂ ಕೆಲಸ ಮಾಡಿಲ್ಲವೆಂದು ಸಾರ್ವತ್ರಿಕವಾದ ಅಪಾದನೆ ಸಲ್ಲದು ಎನ್ನುವುದಕ್ಕೆ ಈ ಉದಾಹರಣೆ ಹೇಳಿದ್ದೇನೆ.

ಪ್ರಕೃತಿ ವಿಕೋಪಕ್ಕೆ, ಇಂತಹ ಹಾನಿಗೆ ಕಾರಣ ಏನೆಂದರೆ, ಅದಕ್ಕೆ ಉದಾಹರಣೆ ಹೇಳಬೇಕಾದರೆ, ಮಾರ್ಕೋನಹಳ್ಳಿ ಅಣೆಕಟ್ಟನ್ನು ಕಟ್ಟಿ ೬೦ ವರ್ಷಗಳಾಗಿದೆ. ಕಳೆದ ೨೦ ವರ್ಷಗಳಿಂದ ಅಣೆಕಟ್ಟೆಯ ಗೇಟುಗಳನ್ನು ಬದಲಾವಣೆ ಮಾಡಿಲ್ಲ. ಗೇಟುಗಳು ತುಕ್ಕು ಹಿಡಿದು ಹೋಗಿದೆ. ಇದು ೩೬೦ ದಿವಸಗಳಲ್ಲಿ ಆದ ಅನಾಹುತ ಅಲ್ಲ. ನನ್ನ ಸ್ನೇಹಿತರಲ್ಲಿ ಪ್ರಾರ್ಥನೆ ಏನೆಂದರೆ, ಒಳ್ಳೆಯ ಕೆಲಸವನ್ನು ಮಾಡಿದಂತಹ ಅಧಿಕಾರಿಗಳನ್ನು ದೂಷಿಸುವುದು ಬೇಡ. ರಾತ್ರಿ ಅನ್ನನೀರು ಇಲ್ಲದೆ, ಸ್ನಾನ ಮಾಡದೆ, ಗಡ್ಡಾ ಬೋಳಿಸದೆ ನಾಲ್ಕಾರು ದಿವಸ ಸ್ಥಳದಲ್ಲಿಯೇ ಇದ್ದು ಸಾಕಷ್ಟು ಶ್ರಮವನ್ನು ಪಟ್ಟಿದ್ದಾರೆ. ಈ ಸದನದ ಮೂಲಕ ಆ ಎಲ್ಲ ಅಧಿಕಾರಿಗಳಿಗೆ ಮತ್ತು ಸರ್ಕಾರಕ್ಕೆ ನಾನು ಅಭಿನಂದಿಸುತ್ತೇನೆ.

ಆಮೇಲೆ ನನ್ನ ಸ್ನೇಹಿತರು ಒಂದು ಮಾತನ್ನು ಹೇಳಿದರು. ಈ ಅಧಿಕಾರಿಗಳ ಮೇಲೆ ನಿಮ್ಮ ಹಿಡಿತವಿಲ್ಲ. ಅಧಿಕಾರಿಗಳು ಈ ಕಡೆ ಗಮನಹರಿಸುತ್ತಿಲ್ಲವೆಂದು ಹೇಳುವುದು ಸತ್ಯಕ್ಕೆ ದೂರವಾದುದು. ಈ ಎಲ್ಲ ಅಧಿಕಾರಿಗಳು ೩೬೦ ದಿವಸದೊಳಗೆ ಈ ರಾಜ್ಯಕ್ಕೆ ಬಂದವರಲ್ಲ ಅಧಿಕಾರಿಗಳು ಕೆಲಸ ಮಾಡುತ್ತಿಲ್ಲವೆನ್ನುವ ಮಾತು ದಿವಸ ಸುದಿಯಾಗುತ್ತದೆ. ಈ ವಿಚಾರವನ್ನು ತಮ್ಮ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ೧೯೯೭-೯೮ರಲ್ಲಿ ೯ ಕೋಟಿ ರೂಪಾಯಿಗಳ ಔಷಧಿ, ೧೯೯೮-೯೯ರಲ್ಲಿ ೧೬ ಕೋಟಿ ರೂಪಾಯಿಗಳ ಔಷಧಿ, ೧೯೯೯-೨೦೦೦ದಲ್ಲಿ ೪ ಕೋಟಿ ರೂಪಾಯಿಗಳ ಔಷಧಿಯನ್ನು ಕೊಂಡು ಹಳ್ಳಿಗಾಡಿನಲ್ಲಿರತಕ್ಕ ಆಸ್ಪತ್ರೆಗಳಿಗೆ ಕಳುಹಿಸಬೇಕಾಗಿತ್ತು, ಅದನ್ನು ಮಾಡಲಿಲ್ಲ. ಆ ಮೂರು ವರ್ಷಗಳ್ಲಿ ೩೦ ಕೋಟಿ ರೂಪಾಯಿಗಳ ಔಷಧಿಯನ್ನು ಖರೀದಿ ಮಾಡಿ ಹಳಿಗಾಡಿನ ಆಸ್ಪತ್ರೆಗಳಿಗೆ ಕಳುಹಿಸದೆ ದೊಡ್ಡದ್ರೋಹವನ್ನು ಮಾಡಿದ್ದಾರೆ. ಯಾಕೆ ಅಧಿಕಾರಿಗಳ ಮೇಲೆ ನಿಮ್ಮ ಹಿಡಿತ ಇರಲಿಲ್ಲವೇ ಅದೇ ಸಾಲಿನಲ್ಲಿ ಕೊಂಡಂತಹ ಔಷಧಿ ಸರ್ಕಾರಿ ಗೋದಾಮಿನಲ್ಲಿ ಕೊಳೆಯುತ್ತಿದೆ. ಈ ಮಾತನ್ನು ನಿಮ್ಮ ವಾದಕ್ಕೆ ನಾನು ಹೇಳುತ್ತಿದ್ದೇನೆ. ಇಂತಹ ಹತ್ತಾರು ಉದಾಹರಣೆಗಳನ್ನು ನಾನು ಕೊಡಬಲ್ಲೆ. ನಾನು ನನ್ನ ವಾದವನ್ನು ಏಕೆ ಹೇಳಿದೆ, ಅಂದರೆ, ಅಧಿಕಾರಿಗಳು ಕೆಲಸ ಮಾಡುವುದು, ಕೆಲಸ ಮಾಡದಿರುವುದು, ಅವರ ಕಾರ್ಯವೈಖರಿ, ಅವರ ನಿಷ್ಕ್ರೀಯತೆ, ದುಷ್ಟತನ, ಅವರ ಭ್ರಷ್ಟತನ ಇವೆಲ್ಲವೂ ಈ ದಿವಸಗಳಲ್ಲಿ ಮಾತ್ರ ಮೂಡಿ ಬಂದಂತಹವುಗಳಲ್ಲ. ನಮ್ಮ ಜೊತೆ ಜೊತೆಯಲ್ಲಿಯೇ ಬಂದಂತಹ ವಿದ್ಯಮಾನಗಳು. ೧೯೯೭ರಿಂದ ೨೦೦೦ದ ಅವಧಿಯಲ್ಲಿ ೩೦ ಕೋಟಿ ರೂಪಾಯಿ ಔಷಧಿಗಳನ್ನು ಕೊಂಡು ಗ್ರಾಮಾಂತರ ಪ್ರದೇಶಗಳ ಆಸ್ಪತ್ರೆಗಳಿಗೆ ಕಳುಹಿಸಬೇಕಾಗಿತ್ತು. ಅಲ್ಲಿ ಹಾವು ಕಡಿದರೆ ಔಷಧಿಯಿಲ್ಲ. ಗಾಯಕ್ಕೆ ಹಾಕುವ ಟಿಂಚರ್ ಇಲ್ಲ.

ಹಾಗಿದ್ದ ಮೇಲೆ ನನ್ನ ಪ್ರಶ್ನೆ ಇಷ್ಟೇ. ನಿಮ್ಮ ಅಧಿಕಾರಿಗಳು ನಿಮ್ಮ ಹಿಡಿತದಲ್ಲಿ ಇಲ್ಲ. ನಿಮ್ಮ ಅಧಿಕಾರಿಗಳು ನಿಮ್ಮ ಮಾತು ಕೇಳುತ್ತಿಲ್ಲ. ಆಡಳಿತವನ್ನು ಸರಿಯಾಗಿ ಮಾಡುತಿಲ್ಲ ಎನ್ನುವ ಅಪಾದನೆ ಆ ಕಡೆಯಿಂದ ಬಂದಿದೆ. ಅದಕ್ಕಾಗಿ ನಾನು ಹೇಳುವುದೇನೆಂದರೆ, ಮೂರು ವರ್ಷಗಳಲ್ಲಿ ೩೦ ಕೋಟಿ ರೂಪಾಯಿಗಳ ಔಷಧಿ ಖರೀದಿ ಮಾಡಿದ್ದಾರೆ. ತಾವು ಕಡತ ತೆಗೆದು ನೋಡಿ. ಇಂಥಾದ್ದು ಇನ್ನೂ ಎಷ್ಟೋ ಇವೆ. ಅವುಗಳ ಬಗ್ಗೆ ಕಾಲ ಬಂದಾಗ ನಾನು ಹೇಳುತ್ತೇನೆ. ಇದು ಒಂದು ಉದಾಹರಣೆಯನ್ನು ಮಾತ್ರ ನಾನು ಕೊಡುತ್ತಿದ್ದೇನೆ. ೩೦ ಕೋಟಿ ರೂಪಾಯಿಗಳ ಔಷಧಿಯನ್ನು ಖರೀದಿ ಮಾಡಿ ಹಳ್ಳಿಗಳ ಆಸ್ಪತ್ರೆಗಳಿಗೆ ಕಳಿಸದೇ ಇದ್ದಂಥ ಅಧಿಕಾರಿಗಳ ಮೇಲೆ ಕ್ರಮ ತೆಗೆದುಕೊಳ್ಳುವುದಕ್ಕೆ ನಿಮಗೆ ಅವಕಾಶ ಇರಲಿಲ್ಲವೇನು? ನಿಮಗೆ ಅದರ ಮೇಲೆ ಹಿಡಿತ ಇರಲಿಲ್ಲವೇನು, ನನ್ನ ಸ್ನೇಹಿತರು ಆಧಾರ ಕೇಳುತ್ತಿದ್ದಾರೆ. ಅದಕ್ಕೆ ಆಧಾರ ಇದೆ. ನಾವು ಸಮಿತಿಯು ಕೊಟ್ಟ ವಿವರಗಳನ್ನು ತರಿಸಿದ್ದೇವೆ. ೧೯೯೭-೯೮ರಲ್ಲಿ ೪ ಕೋಟಿ, ೧೯೯೮-೯೯ರಲ್ಲಿ ೧೬ ಕೋಟಿ ಮತ್ತು ೧೯೯೯-೨೦೦೦ದಲ್ಲಿ ೪ ಕೋಟಿಯಷ್ಟು ಖರೀದಿ ಮಾಡಿದ್ದಾರೆ. ತಾವು ಬೇಕಾದರೆ ಇದನ್ನು ವೆರಿಫೈ ಮಾಡಿ. ಇಷ್ಟೇ ಅಲ್ಲ, ನಾನು ಮಾನ್ಯ ಸದಸ್ಯರ ಗಮನಕ್ಕೆ ತರುವುದಕ್ಕೆ ಇಷ್ಟಪಡುವುದೇನೆಂದರೆ ೭ ಕೋಟಿ ರೂಪಾಯಿಗಳಷ್ಟು ಔಷಧಿಗಳು ಇವತ್ತು ಗೋದಾಮಿನಲ್ಲಿ ಕೊಳೆಯುತ್ತಿವೆ. ಏಕೆ ಸ್ವಾಮಿ, ಆಗ ನಿಮಗೆ ಅಧಿಕಾರಿಗಳ ಮೇಲೆ ಹಿಡಿತ ಇರಲಿಲ್ಲವೆ.

ಸನ್ಮಾನ್ಯ ಅಧ್ಯಕ್ಷರೇ, **ಕೃಷಿಕನ ಕಣ್ಣೀರಿನ ಕತೆ** ಎನ್ನುವ ಪದವನ್ನು ಆ ಕಡೆ ಕುಳಿತಿರುವ ನನ್ನ ಸ್ನೇಹಿತರು ಉಪಯೋಗಿಸಿದ್ದರಿಂದ ನಾನು ಅದನ್ನು ಕ್ಯಾಪ್‌ಶನ್ ಮಾಡಿಕೊಳ್ಳುತ್ತೇನೆ. ಕೃಷಿಕನ ಕಣ್ಣೀರಿನ ಕತೆಯ ಮೊದಲನೇ ಅಧ್ಯಾಯದಲ್ಲಿ ಈಚಿನ ದಿವಸಗಳಿಂದ ಮಾನ್ಯ ಕೃಷ್ಣರವರ ನೇತೃತ್ವದ ಸಂಪಾದಕತ್ವದಲ್ಲೇ ಮೊದಲನೇ ಸಲ ನಾವು ಬರೆಯುವುದಕ್ಕೆ ಪ್ರಾರಂಭ ಮಾಡಿಲ್ಲ.

ಕೃಷಿಕನ ಕಣ್ಣೀರಿನ ಕತೆ ಸಮಾಜದ ಜತೆಜತೆಯಲ್ಲೇ ಬಂದಿರುವಂಥಾದ್ದು. ಇದು ಎಲ್ಲಿಂದ ಬಂತು ಎಂದರೆ, ನಾವು ಬೆಳೆದ ವಸ್ತುಗಳನ್ನು ನೀವು ತಿನ್ನಬೇಡಿ ಎಂದು ಕೃಷಿಕರಿಗೆ ಹೇಳಿದಿರಲ್ಲ, ಅವತ್ತು ಶುರುವಾಯಿತು ಅವನ ಕಣ್ಣೀರಿನ ಕತೆ. ನೀವು ಸಾಕಿದ ಹಸು, ಎಮ್ಮೆ, ಹಾಲು, ತುಪ್ಪವನ್ನು ನೀವು ಹೋಮಕ್ಕೆ ಸುರಿದು ಬರೀ ಮಜ್ಜಿಗೆ ಕುಡಿಯಿರಿ ಎಂದು ಹೇಳಿದಿರಲ್ಲ ಅಲ್ಲಿಂದ ಶುರುವಾಯಿತು. ಈ ಕೃಷಿಕನ ಕಣ್ಣರೀನ ಕತೆಯನ್ನು ಬರೆಯುವುದಕ್ಕೆ. ನಾವು ಶುರು ಮಾಡಿಲ್ಲ. ನಾವು ಉತ್ತಿದ ಜಮೀನನ್ನು ನಮಗೇ ಕೊಡಿ ಎಂದು ಹೇಳಿದ ಕಾಗೋಡು ತಿಮ್ಮಪ್ಪನವರು ಇಲ್ಲಿ ಜೀವಂತವಾಗಿ ಕುಳಿತಿದ್ದಾರೆ. ತಾವು ಕೃಷಿ ಮಾಡಿದಂಥ ಜಮೀನನ್ನು ತಮಗೇ ಪಡೆದುಕೊಳ್ಳುವುದಕ್ಕೆ ಕಾಗೋಡಿನಲ್ಲಿ ಸತ್ಯಾಗ್ರಹ ನಡೆಯಿತಲ್ಲ, ಅವತ್ತು ಶುರುವಾಯಿತು ಕೃಷಿಕ ಕಣ್ಣೀರಿನ ಕತೆ. ಇವತ್ತು ಹೊಸದಾಗಿ ಕಣ್ಣೀರಿನ ಕತೆ ಪ್ರಾರಂಭವಾಗಿಲ್ಲ, ಅಥವಾ ನಾವು ಪ್ರಾರಂಭ ಮಾಡಿಲ್ಲ. ನವಲಗುಂದದಲ್ಲಿ ನಡೆದ ರೈತರ ಕಣ್ಣೀರ ಕತೆಯನ್ನು ಹೇಳುತ್ತೇವೆ. ರೇಷ್ಮೆ ಬೆಳೆದ ರೈತನಿಗೆ ಬೆಲೆ ಕಡಿಮೆಯಾಗಿದೆ ಎಂದು ಹೇಳಿದಾಗ ಆತ ಕಣ್ಣೀರು ಹಾಕಿದಾಗ ಏನಾಯಿತು ಸ್ವಾಮಿ. ವಿಜಯಪುರದ ರೈತನಿಗೆ ಬೆನ್ನಮೇಲೆ ಪೊಲೀಸರಿಂದ ಬಾರಿಸಿದಿರಲ್ಲ ಅವತ್ತು ಶುರುವಾಯಿತು ರೇಷ್ಮೆ ಬೆಳೆಗಾರನ ಕಣ್ಣೀರಿನ ಕತೆ. ಯಾವುದೋ ಕತ್ತಲಿನ ಕೋಣೆಯಲ್ಲಿ ಸಿ. ನಾರಾಯಣಸ್ವಾಮಿ, ನನ್ನನ್ನು ಮತ್ತು ಆತ್ಮಾನಂದ ಅವರನ್ನು ಹಿಡಿದುಕೊಂಡುಹೋಗಿ ಪೊಲೀಸ್ ಸ್ಟೇಷನ್‌ನಲ್ಲಿ ಹಾಕಿಸಿದಿರಲ್ಲ ಅವತ್ತು ಶುರುವಾಯಿತು ಕೃಷಿಕನ ಕಣ್ಣೀರಿನ ಕತೆ. ಇದು ಇವತ್ತು ಶುರುವಾಗಿಲ್ಲ. ತಾವು ಅದಕ್ಕೆ ಜೀವಂತ

ಹರಿಸುವಲ್ಲಿ ಶ್ರೀ ವೈ.ಕೆ. ರಾಮಯ್ಯನವರ ಪಾತ್ರ ಅತ್ಯಂತ ಮಹತ್ವದ್ದು ಮತ್ತು ಅದು ಹೇಮಾವತಿಯ ಇತಿಹಾಸದ ಒಂದು ಎಕ್ಸಟೆನ್‌ಷನ್. ಕೆಲವೊಂದು ಸಾರಿ ಏಕಾಂಗಿಯಾಗಿ ಹೋರಾಟ ಮಾಡುತ್ತಿದ್ದರು ಮತ್ತು ಕ್ರಿಯಾಶೀಲರಾಗಿರತಕ್ಕಂಥ ವ್ಯಕ್ತಿಯಾಗಿದ್ದರು. ಹಾಗೆಯೇ, ರೇಷ್ಮೆ ಕೃಷಿ ಬಗ್ಗೆ ಅಪಾರವಾದಂಥ ಜ್ಞಾನವನ್ನು ಪಡೆದಿದ್ದರು. ನೀರಾವರಿ ಮತ್ತು ಕೃಷಿ ವಿಚಾರಗಳ ಬಗ್ಗೆ ಅತ್ಯಂತ ಅಧಿಕಾರಯುಕ್ತವಾಗಿ ಮಾತನಾಡಬಲ್ಲ, ಹಲವು ಸದಸ್ಯರುಗಳ ಪೈಕಿ ಶ್ರೀ ವೈ.ಕೆ. ರಾಮಯ್ಯನವರು ಒಬ್ಬರು ಎನ್ನತಕ್ಕಂಥದ್ದು ನಾವೆಲ್ಲರೂ ಸಹ ಒಪ್ಪಿಕೊಳ್ಳಬೇಕಾಗಿರತಕ್ಕಂಥ ಮಾತು. ಕೆಲವು ರಾಜಕಾರಣಿಗಳು ಕೇವಲ ರಾಜಕಾರಣಕ್ಕೆ ಸೀಮಿತಕೊಂಡಿರುತ್ತಾರೆ. ಅವರಿಗೆ ಪರಿಸರದ ಬಗ್ಗೆಯಾಗಲಿ ಅಥವಾ ಸಾಹಿತ್ಯ ಮತ್ತು ಸಂಸ್ಕೃತಿಯ ಬಗ್ಗೆ ಆಗಲಿ ಆಸಕ್ತಿ ಬಹಳ ಕಡಿಮೆ. ಆದರೆ, ಮಾನ್ಯ ವೈ.ಕೆ. ರಾಮಯ್ಯನವರು ಈ ಅಪವಾದಕ್ಕೆ ದೂರವಾಗಿದ್ದರು. ಶ್ರೀಯುತರು ಪರಿಸರದ ಬಗ್ಗೆ ಬಹಳ ವಿಶ್ವಾಸವನ್ನು ಹೊಂದಿದ್ದರು. ಶ್ರೀ ಕುವೆಂಪುರವರ ಚಿಂತನೆಗಳ ಬಗ್ಗೆ ಮತ್ತು ಅವರ ಸಾಹಿತ್ಯದ ಬಗ್ಗೆ ಅಪಾರವಾದಂಥ ಅಧ್ಯಯನ ಮಾಡಿದ್ದರು. ಸುಮಾರು ಎರಡು ವರ್ಷಗಳ ಹಿಂದೆ ಅವರ ತಾಲ್ಲೂಕಿನಲ್ಲಿ ನಡೆದಂಥ ಸಸ್ಯ ಸಂರಕ್ಷಣೆ ಮಾಡತಕ್ಕಂಥ ಒಂದು ಕಾರ್ಯಕ್ರಮಕ್ಕೆ ನನ್ನನ್ನು ಅವರು ಕರೆದುಕೊಂಡು ಹೋಗಿದ್ದರು. ಪರಿಸರದ ಬಗ್ಗೆ ಅವರಿಗಿದ್ದಂಥ ಅಗಾಧವಾದಂತಹ ಆಸಕ್ತಿ ಆ ಸಂದರ್ಭದಲ್ಲಿ ನನಗೆ ಪರಿಚಯವಾಯಿತು. ಕೆಲವೊಂದು ಸಾರಿ ಅವರ ಮಾತಿನಲ್ಲಿ ಮತ್ತು ಧ್ವನಿಯಲ್ಲಿ ಗ್ರಾಮೀಣ ಸೊಗಡು ಮತ್ತು ಸಾತ್ವಿಕ ಸಿಟ್ಟು ಇರುತ್ತಿತ್ತು. ಈ ಸದನ ಹಲವಾರು ಸಾರಿ ಕಂಡಿದೆ. ಆದರೆ, ದ್ವೇಷದ ಕಿಡಿ ಅವರಲ್ಲಿ ಇರಲಿಲ್ಲ. ಬಾಹ್ಯದಲ್ಲಿ ಒರಟರಂತೆ ಕಂಡರೂ ಕೂಡಾ ಅಂತರ್ಯದಲ್ಲಿ ನಯವಂತಿಕೆಯ ಮಾಧುರ್ಯ ಅವರ ಹೃದಯದಲ್ಲಿ ತುಂಬಿಕೊಂಡಿತ್ತು. ಶ್ರೀಮಾನ್ ಲೋಹಿಯ ಅವರು ಮತ್ತು ಜೆ.ಪಿ.ಯವರು ಹಾಗೂ ಇತರರಿಂದ ಅವರು ಪ್ರಭಾವಿತರಾಗಿದ್ದರು. ಯಾವುದೇ ಒಂದು ಸಮಸ್ಯೆಯ ಬಗ್ಗೆ ಆಳವಾದಂಥ ಅಧ್ಯಯನ ಮಾಡುತ್ತಿದ್ದರು. ಮತ್ತು ಅದರ ಬಗ್ಗೆ ತಮ್ಮ ಶಕ್ತಿಯುತವಾದಂತಹ ಧ್ವನಿಯನ್ನು ಅವರು ಈ ಸದನಕ್ಕೆ ಕೊಟ್ಟಿದ್ದರು. ಅಂಥ ಒಬ್ಬ ಚಿಂತನಾಶೀಲ ಸ್ನೇಹಿತನನ್ನು ನಾವೆಲ್ಲರೂ ಕಳೆದುಕೊಂಡಿದ್ದೇವೆ. ಶ್ರೀಯುತರು ನಿಧನ ಹೊಂದಿದ ಹಿಂದಿನ ರಾತ್ರಿ ಬಹಳ ಹೊತ್ತಿನವರೆಗೆ ಅವರ ತಾಲ್ಲೂಕಿನ ಹಲವಾರು ಸಮಾರಂಭಗಳಲ್ಲಿ ನನ್ನ ಜೊತೆ ಭಾಗವಹಿಸಿದ್ದರೆಂದು, ಶ್ರೀಯುತರು ತೀರಿ ಹೋದ ಮೂರನೇ ದಿವಸ ಅವರ ಊರಿಗೆ ಹೋದಾಗ ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿಗಳು ನನಗೆ ಹೇಳಿದರು. ಶ್ರೀ ರಾಮಯ್ಯನವರು ಭಾಗವಹಿಸಿದಂಥ ಸಂದರ್ಭದಲ್ಲಿ ಡ್ರಿಪ್ ಹಾಕಿಸಿಕೊಂಡಿದ್ದಂಥ ನೀಡಲ್ ಅವರ ಕೈಯಲ್ಲಿತ್ತಂತೆ ಡ್ರಿಪ್ ಹಾಕಿಸಿಕೊಂಡ ನಂತರ ನನ್ನ ಜೊತೆಯಲ್ಲಿ ಸಮಾರಂಭದಲ್ಲಿದ್ದರೆಂದು ಜಿಲ್ಲಾಧಿಕಾರಿಗಳು ಹೇಳಿದರು. ಡ್ರಿಪ್ ಹಾಕಿಸಿಕೊಂಡಿರುವ ಬಗ್ಗೆ ಜಿಲ್ಲಾಧಿಕಾರಿಗಳು ಕೇಳಿದಕ್ಕೆ, ಅದರ ಪಾಡಿಗೆ ಅದು ಕೆಲಸ ಮಾಡುತ್ತದೆ. ಆದರೆ, ನಾನು ಶಾಸಕನಾಗಿ ಮತ್ತು ಪ್ರಜಾಪ್ರತಿನಿಧಿಯಾಗಿ ನನ್ನ ಕೆಲಸವನ್ನು ಮಾಡುತ್ತಿದ್ದೇನೆ ಎನ್ನತಕ್ಕಂತಹ ವಿಷಯವನ್ನು ಹಿಂದಿನ ರಾತ್ರಿ ಸುಮಾರು ೧೦.೩೦ ಗಂಟೆಗೆ ಹೇಳಿದರು ಎನ್ನುವ ಮಾಹಿತಿಯನ್ನು ಜಿಲ್ಲಾಧಿಕಾರಿಗಳು ನನಗೆ ಕೊಟ್ಟರು. ಇಚ್ಛಾಶಕ್ತಿ ಮತ್ತು ನೈತಿಕ ಶಕ್ತಿಗಳೆರಡರಲ್ಲಿಯೂ ಪಳಗಿದಂಥ ಶ್ರೀ ವೈ.ಕೆ. ರಾಮಯ್ಯನವರ ನಿಧನ ಈ ಸದನವನ್ನು ಬಡ ಮಾಡಿದೆ. ಅವರ ಸ್ಥಾನವನ್ನು ತುಂಬಲಿಕ್ಕೆ ಇನ್ನೂ ಬಹಳ ಕಾಲ ನಾವು ಕಾಯಬೇಕಾಗುತ್ತದೆ.

+ **ಶ್ರೀ ಜಗದೀಶ್ ಶೆಟ್ಟರ್ (ವಿರೋಧಪಕ್ಷದ ನಾಯಕರು):** ಮಾನ್ಯ ಅಧ್ಯಕ್ಷರೆ, ತಾವು ತಂದಂತಹ ಸಂತಾಪ ಸೂಚನೆಗೆ ಬೆಂಬಲವನ್ನು ಕೊಡುತ್ತಾ, ಇವತ್ತು ನಮ್ಮ ಮಧ್ಯದಲ್ಲಿ ಆಗಲಿ

ಹಾಕಿಕೊಂಡಿದ್ದೇನೆ. ತಾವು ಬರಬೇಕು ಮತ್ತು ನನ್ನ ಜತೆಯಲ್ಲಿ ಇರಬೇಕು ಮತ್ತು ನೀವೇ ಅದನ್ನು ಉದ್ಘಾಟನೆ ಮಾಡಬೇಕು" ಎಂದು ಹೇಳಿದರು. ನಾನು ಆವಾಗ ಇನ್ನೂ ಸ್ವಲ್ಪ ಚಿಕ್ಕ ವಯಸ್ಸಿನವನು. ಸುಮಾರು ಇಪ್ಪತ್ತು ಕಿಲೋಮೀಟರ್‌ನಷ್ಟು ನಾನು ಮತ್ತು ಅವರು ಅವತ್ತು ನಡೆದಿದ್ದೇವೆ. ಆ ದಿನ ನನ್ನ ಕಾಲು ಊದಿಕೊಂಡಿದ್ದನ್ನು ಮರೆಯುವುದಕ್ಕೇ ನನಗೆ ಸಾಧ್ಯವಾಗುವುದಿಲ್ಲ. ಎಣ್ಣೆಸವರಿ, ನಿಂಬೆಹಣ್ಣು ಸವರಿಕೊಳ್ಳುವಷ್ಟು ಕಾಲುಗಳು ಊದಿಕೊಂಡಿದ್ದವು. ಇವತ್ತು ಆ ಮರಗಳೆಲ್ಲಾ ಚೆನ್ನಾಗಿ ಕಾಣಿಸುತ್ತಿವೆ. ಈ ನಾಲ್ಕು ವರ್ಷಗಳಲ್ಲಿ ಯಾವುದೋ ಒಂದು ಆಸೆ ಅವರನ್ನು ಕಾಡುತ್ತಿತ್ತು ಎಂದು ಅನ್ನಿಸುತ್ತದೆ. ಯಾವುದಾದರೂ ಒಂದು ಸಾರಿ ಮಂತ್ರಿಯಾಗಬಹುದೋ ಏನೋ ಎಂದು ಅವರ ಆತ್ಮಕ್ಕೆ ಕೊನೆಗೆ ಇದು ಸಾಧ್ಯವಾಗಲಿಲ್ಲ ಎಂದು ಅವರಿಗೆ ಅನ್ನಿಸಿದ್ದರಿಂದ ಬಹಳ ಆಘಾತ ಆಗಿರಬಹುದು ಎಂದು ನನಗೆ ಅನ್ನಿಸುತ್ತದೆ. ಈ ಬಗ್ಗೆ ನಮ್ಮ ವಿರೋಧ ಪಕ್ಷದ ನಾಯಕರ ಅಭಿಪ್ರಾಯವನು ನಾನೂ ಕೂಡ ಹೊಂದಿದ್ದೇನೆ. ಅವರನ್ನು ಮಂತ್ರಿಯಾಗಿ ಮಾಡಿದ್ದರೆ ಬಹುಶಃ ಇನ್ನೂ ಕೆಲಕಾಲ ಈ ಮಾನಸಿಕ ನೋವಿನಿಂದ ಹೊರಬಂದು ಬದುಕುತ್ತಿದ್ದರೇನೋ ಎಂದು ನಾನು ಅಂದುಕೊಂಡಿದ್ದೇನೆ. ಮತ್ತು ಅನೇಕ ಜನಪರ ಹೋರಾಟಗಳಲ್ಲಿ ಅವರು ಭಾಗಿಯಾಗಿದ್ದಾರೆ. ಅದು ಹೇಮಾವತಿ ನೀರನ್ನು ಒದಗಿಸತಕ್ಕಂಥಾದ್ದು ಇರಬಹುದು. ಬೇರೆ ಹೋರಾಟಗಳೂ ಇರಬಹುದು. ಹೀಗೆ ಅವರು ಈ ರೈತ ಸಮುದಾಯಕ್ಕೆ ಗ್ರಾಮೀಣ ಜನತೆಗೆ ಒಬ್ಬ ಮುಖಂಡರಾಗಿದ್ದರು. ನಮ್ಮ ಪಕ್ಷದಲ್ಲಿದ್ದ ಭೈರೇಗೌಡರು ಈಗಾಗಲೇ ಹೋಗಿಬಿಟ್ಟಿದ್ದಾರೆ ಮತ್ತು ಈಗ ಶ್ರೀ ವೈ.ಕೆ. ರಾಮಯ್ಯನವರು. ಇವತ್ತು ನಾವು ಅವರನ್ನು ಕಳೆದುಕೊಂಡಿದ್ದೇವೆ. ಶ್ರೀ ವೈ.ಕೆ. ರಾಮಯ್ಯನವರ ಮರಣ ರೈತ ಸಮುದಾಯಕ್ಕೆ ಮತ್ತು ಗ್ರಾಮೀಣ ಜನರಿಗೆ ಬಹಳ ನಷ್ಟವನ್ನು ಉಂಟುಮಾಡಿದೆ. ಅವರ ಕುಟುಂಬ ಈ ದುಃಖವನ್ನು ಭರಿಸುವಂತಾಗಲಿ ಎಂದು ನಾನು ದೇವರಲ್ಲಿ ಕೇಳುತ್ತಿದ್ದೇನೆ.

**+ ಶ್ರೀ ಪಿ.ಜಿ.ಆರ್. ಸಿಂಧ್ಯಾ (ಕನಕಪುರ) :** ಮಾನ್ಯ ಅಧ್ಯಕ್ಷರೇ, ಕಳೆದ ಅಧಿವೇಶನ ಮತ್ತು ಈ ಅಧಿವೇಶನದ ೬ ತಿಂಗಳ ಅವಧಿಯಲ್ಲಿ ಕರ್ನಾಟಕ ರಾಜ್ಯವು ಸಾಹಿತ್ಯ ಕ್ಷೇತ್ರದಲ್ಲಿ ರಾಜಕೀಯ ಕ್ಷೇತ್ರದಲ್ಲಿ, ಸಾರ್ವಜನಿಕ ಕ್ಷೇತ್ರದಲ್ಲಿ ಸುಮಾರು ೧೯-೨೦ ಜನರನ್ನು ಕಳೆದುಕೊಂಡು ಬಡವಾಗಿದೆ. ಇದರ ಹಿನ್ನೆಲೆಯಲ್ಲಿ ತಾವು ಮಂಡಿಸಿರತಕ್ಕಂತಹ ಸಂತಾಪ ಸೂಚನೆಗೆ ನಾನು ನಮ್ಮ ಪಕ್ಷದ ವತಿಯಿಂದ ಸಂಪೂರ್ಣವಾದ ಬೆಂಬಲವನ್ನು ವ್ಯಕ್ತಮಾಡಿ ಮೃತರ ಆತ್ಮಕ್ಕೆ ಶಾಂತಿಯನ್ನು ಕೋರುವುದರ ಜೊತೆಗೆ ಈ ಧೀಮಂತ ವ್ಯಕ್ತಿಗಳ ಕುಟುಂಬಕ್ಕೆ ಈ ದುಃಖವನ್ನು ಭರಿಸತಕ್ಕಂಥ ಶಕ್ತಿಯನ್ನು ಭಗವಂತ ಕೊಡಲಿ ಎಂದು ಪ್ರಾರ್ಥಿಸುತ್ತೇನೆ. ಈ ಸದನದಲ್ಲಿ ನಾವು ಸಂತಾಪ ಸೂಚನೆಯನ್ನು ವ್ಯಕ್ತ ಮಾಡುವಂತಹ ಸನ್ನಿವೇಶದಲ್ಲಿ ಸ್ವಲ್ಪಮಟ್ಟಿಗಾದರೂ ಸಹ ನಮ್ಮ ಮನೆಯವರು ಇಂಥಾದ್ದಕ್ಕೆ ಬಹಳ ಪ್ರಖ್ಯಾತಿಯಾಗಿದ್ದರು ಈ ನಾಡಿನಲ್ಲಿ.

ಶ್ರೀ ವೈ.ಕೆ. ರಾಮಯ್ಯನವರ ಬಗ್ಗೆ ಹೇಳುವುದಾದರೆ, ೧೯೭೪-೭೫ ರಿಂದ ನಾವು ಅವರು ಒಂದು ಕುಟುಂಬದ ಸದಸ್ಯರಿದ್ದಂತೆ ಇದ್ದೆವು. ಬಹುಶಃ ಅವರು ತಮ್ಮ ಭಾವನೆಗಳನ್ನು ನನ್ನ ಜೊತೆಯಲ್ಲಿ ಹಂಚಿಕೊಳ್ಳುತ್ತಿದ್ದರು. ನನ್ನ ಮಟ್ಟಿಗೆ ಹೇಳುವುದಾದರೆ ಅವರ ಸಾವು ಒಂದು ಸಿಡಿಲಿನಂತೆ ವೈಯಕ್ತಿಕವಾಗಿ ಬಹಳ ದೊಡ್ಡ ಆಘಾತವನ್ನು ನನಗೆ ಉಂಟುಮಾಡಿತು. ಅವರು ಕಾಂಗ್ರೆಸ್ ಸೇರುವ ಮುನ್ನ ಕರ್ನಾಟಕದಲ್ಲಿ ಜನತಾ ಪರಿವಾರ, ಜನತಾಪಕ್ಷದ ಅಧಿಕಾರದಲ್ಲಿ,

ಅಂದರೆ ಕಾಂಗ್ರೆಸ್ಸೇತರ ಸರ್ಕಾರ ಇರಬೇಕಾದರೆ ಶ್ರೀ ವೈ.ಕೆ. ರಾಮಯ್ಯನವರ ಕಾಣಿಕೆಯನ್ನು ಅಧಿಕಾರ ಅನುಭವಿಸಿರತಕ್ಕಂಥ ನಾವ್ಯರೂ ಸಹ ಮರೆಯುವುದಕ್ಕೆ ಆಗುವುದಿಲ್ಲ. ಶ್ರೀ ವೈ.ಕೆ. ರಾಮಯ್ಯನವರು ವಿಶೇಷವಾಗಿ ತುಮಕೂರು ಜಿಲ್ಲೆಗೆ ಹೇಮಾವತಿ ನದಿ ನೀರು ಬರಬೇಕಾದರೆ ಬಹಳ ಹೋರಾಟವನ್ನು ಮಾಡಿದರು. ಅನೇಕರು ರಾಜಕೀಯ ಕಾರಣಕ್ಕೋಸ್ಕರ ಹೋರಾಟವನ್ನು ಮಾಡುತ್ತಾರೆ. ಆದರೆ ಮಾನ್ಯ ವೈ.ಕೆ. ರಾಮಯ್ಯನವರು ನೀರಾವರಿ ಬಗ್ಗೆ ಮತ್ತು ನೀರು ಬಳಕೆಯ ಬಗ್ಗೆ ರೈತರಿಗೆ ಆಗಬೇಕಾದಂತಹ ಕೆಲಸಗಳ ಬಗ್ಗೆ ಅಪಾರವಾದ ಕಾಳಜಿಯನ್ನು ಇಟ್ಟುಕೊಂಡಿದ್ದಂತಹ ಒಬ್ಬ ಮುಖಂಡರಾಗಿದ್ದರು. ಅವರು ೧೯೮೩ನೇ ಸಾಲಿಗೆ ಮೊದಲನೇ ಸಲ ಗೆದ್ದು ನಮ್ಮ ರಾಜ್ಯದ ಹೌಸಿಂಗ್ ಬೋರ್ಡ್‌ನ ಅಧ್ಯಕ್ಷರಾಗಿದ್ದರು. ಹೌಸಿಂಗ್ ಬೋರ್ಡ್ ಅಧ್ಯಕ್ಷರಾಗಿ ಅವರು ಬಹಳ ಪ್ರಾಮಾಣಿಕವಾಗಿ ಆಡಳಿತವನ್ನು ಸರಿಪಡಿಸುವುದರಲ್ಲಿ ಪ್ರಯತ್ನ ಮಾಡುವುದರ ಜೊತೆಗೆ ಗ್ರಾಮೀಣ ಪ್ರದೇಶದಲ್ಲಿ ಹೌಸಿಂಗ್ ಬೋರ್ಡ್‌ನ ಮುಖಾಂತರವಾಗಿ ಮನೆಗಳನ್ನು ಕಟ್ಟಿಸಿಕೊಡಬೇಕು, ಸೈಟ್‌ಗಳನ್ನು ಕೊಡಬೇಕು ಎನ್ನುವುದಕ್ಕೆ ಒತ್ತನ್ನು ಕೊಟ್ಟಂತಹ ಒಬ್ಬ ನಾಯಕರು. ಇದಾದ ನಂತರ ೧೯೮೫ನೇ ಇಸವಿಯಲ್ಲಿ ಗೆದ್ದ ನಂತರ ಅವರು ರೇಷ್ಮೆ ಇಲಾಖೆಯ ಮಂತ್ರಿಗಳಾಗಿದ್ದರು. ವಿಶೇಷವಾಗಿ ಈ ರೇಷ್ಮೆ ಬೆಳೆ ಗೂಡು ಏನಿದೆ, ಆ ಗೂಡು, ವಿಶೇಷವಾಗಿ ಗೂಡಿನ ಬೀಜ, ಮಾಗಡಿ, ಕುಣಿಗಲ್, ಆನೇಕಲ್ ಈ ಮೂರು ತಾಲ್ಲೂಕುಗಳಲ್ಲಿ ಬೆಳೆಯತಕ್ಕಂಥಾದ್ದು. ಈ ಮೂರು ತಾಲ್ಲೂಕುಗಳ ರೈತರಿಗೆ ಸಹ ರೇಷ್ಮೆ ಮಾರುಕಟ್ಟೆಯಲ್ಲಿ ಆಗತಕ್ಕಂಥ ವ್ಯತ್ಯಾಸದಿಂದಾಗಿ ಅನುಕೂಲ ವಾಗುತ್ತಿರಲಿಲ್ಲ. ಅಂತಹ ಸಂದರ್ಭದಲ್ಲಿ ಮಾನ್ಯ ವೈ.ಕೆ. ರಾಮಯ್ಯನವರು ಈ ರೇಷ್ಮೆ ವ್ಯವಸಾಯದ ಬಗ್ಗೆ ವಿಶೇಷವಾದ ಕಾಳಜಿಯನ್ನು ವಹಿಸಿ ಎರಡು ಕೆಲಸಗಳನ್ನು ಮಾಡಿರತಕ್ಕಂಥಾದ್ದನ್ನು ನಾನು ನೆನೆಸಿಕೊಳ್ಳುವುದಕ್ಕೆ ಬಯಸುತ್ತೇನೆ. ಒಂದು ಅವರಿಗೆ ಸಬ್ಸಿಡಿಯನ್ನು ಕೊಡತಕ್ಕಂಥಾದ್ದು, ಆ ಕೆಲಸವನ್ನು ಮಾಡಿದರು. ಅದಾದ ನಂತರ ರೈತರು ರೀಲಿಂಗ್ ಹೌಸ್ ಕಟ್ಟಲಿಕ್ಕೆ ಅವರು ಮೊದಲನೇ ಬಾರಿಗೆ ಹೌಸಿಂಗ್ ಬೋರ್ಡ್ ಅಧ್ಯಕ್ಷರಾಗಿದ್ದಾಗ ಪ್ರಯತ್ನ ಮಾಡಿದ ಅನುಭವದ ಆಧಾರದ ಮೇಲೆ, ಅವರು ರೇಷ್ಮೆ ಮಂತ್ರಿಗಳಾಗಿದ್ದಾಗ ರೇಷ್ಮೆ ಬೆಳೆಯತಕ್ಕಂಥ ಎಲ್ಲಾ ರೈತರಿಗೆ ರೇಷ್ಮೆ ಮನೆಗಳನ್ನು ಕಟ್ಟಿಕೊಳ್ಳಲಿಕ್ಕೆ ಸಾಲವನ್ನು ಕೊಡತಕ್ಕಂತಹ ಕಾರ್ಯಕ್ರಮವನ್ನು ಪ್ರಥಮ ಭಾರಿಗೆ ಕರ್ನಾಟಕ ರಾಜ್ಯದಲ್ಲಿ ತಂದಂತಹ ಕೀರ್ತಿ ಶ್ರೀ ವೈ.ಕೆ. ರಾಮಯ್ಯನವರಿಗೆ ಸಲ್ಲಬೇಕಾಗುತ್ತದೆ. ರಾಜಕೀಯದಲ್ಲಿ ವ್ಯತ್ಯಾಸಗಳು ಬರುತ್ತವೆ. ಆದರೆ ವ್ಯತ್ಯಾಸಗಳು ಬಂದಂತಹ ಸಂದರ್ಭದಲ್ಲಿ ಅವರು ಅದನ್ನು ಕೊನೆಯ ಹಂತದವರೆಗೂ ಸಹ ತೆಗೆದುಕೊಂಡು ಹೋಗುತ್ತಿರಲಿಲ್ಲ. ರೇಷ್ಮೆ ಬೆಳೆಗಾರರಿಗೆ ಕೇಂದ್ರ ಸರ್ಕಾರದಿಂದ ಅನ್ಯಾಯವಾಗಿದೆ ಎನ್ನತಕ್ಕಂಥ ಒಂದು ಸನ್ನಿವೇಶದಲ್ಲಿ ಬಹಳ ದೊಡ್ಡ ಹೋರಾಟವನ್ನು ಮಾನ್ಯ ವೈ.ಕೆ. ರಾಮಯ್ಯನವರು ಕರ್ನಾಟಕ ರಾಜ್ಯದಲ್ಲಿ ಮಾಡಿದರು. ಆಗ ಅವರು ಕಾಂಗ್ರೆಸ್ ಪಕ್ಷವನ್ನು ಸೇರಿದ್ದರು. ಆದರೆ ಎಲ್ಲಾ ಪಕ್ಷದವರನ್ನು ಸೇರಿಸಿಕೊಂಡು ಬಹಳ ದೊಡ್ಡ ಹೋರಾಟವನ್ನು ಮಾಡಿದಂತಹ ಕೀರ್ತಿ ಮಾನ್ಯ ವೈ.ಕೆ. ರಾಮಯ್ಯನವರಿಗೆ ಸಲ್ಲಬೇಕಾಗುತ್ತದೆ. ಅದಾದ ನಂತರ ನೀರಾವರಿ ವಿಚಾರದಲ್ಲಿ ಅದು ಕೃಷ್ಣಾ ನದಿ ಇರಲಿ, ಕಾವೇರಿ ನದಿ ನೀರಿನ ವಿಚಾರ ಇರಲಿ, ನೀರಿನ ವಿಚಾರ ಬಂದಂತಹ ಸಂದರ್ಭದಲ್ಲಿ ಮಾನ್ಯ ವೈ.ಕೆ. ರಾಮಯ್ಯನವರಿಗೆ ಇದ್ದಂತಹ ಕಾಳಜಿ ಒಂದು ಆದರ್ಶವಾಗಿರತಕ್ಕಂಥ ವಿಚಾರ ಎನ್ನುವುದನ್ನು ನಾನು ಇಲ್ಲಿ ಹೇಳಲಿಕ್ಕೆ ಬಯಸುತ್ತೇನೆ. ಇದೆಲ್ಲಕ್ಕಿಂತ ಮುಖ್ಯವಾಗಿ ಒಬ್ಬ

ರಾಮಯ್ಯನವರು ಸಂಘರ್ಷದ ಹಾದಿಯಲ್ಲಿ ಕೆಲಸ ಮಾಡಿ ಯಶಸ್ಸನ್ನು ಕಂಡಂಥ ಒಬ್ಬ ಅಪರೂಪದ ವ್ಯಕ್ತಿ. ೧೯೬೭ನೆ ಇಸವಿಯಲ್ಲಿ ಹುಲಿಯೂರುದುರ್ಗ ಕ್ಷೇತ್ರದ ಒಂದು ಪ್ರೌಢಶಾಲೆಯಲ್ಲಿ ನಾನು ೯ನೇ ತರಗತಿಯಲ್ಲಿ ವಿದ್ಯಾಭ್ಯಾಸವನ್ನು ಮಾಡುತ್ತಾ ಇದ್ದೆ. ಆಗ ಮಾನ್ಯ ವೈ.ಕೆ. ರಾಮಯ್ಯನವರು ವಿಧಾನಸಭಾ ಚುನಾವಣೆಗೆ ಸ್ವತಂತ್ರ ಅಭ್ಯರ್ಥಿಯಾಗಿ ಹುಲಿಯೂರುದುರ್ಗ ಕ್ಷೇತ್ರದಿಂದ ಸ್ಪರ್ಧಿಸಿದ್ದರು. ಆಗ ನಾನು ಕುತೂಹಲಕ್ಕೆ ಭಾಷಣ ಕೇಳಲು ಹಳ್ಳಿಯಲ್ಲಿ ನಿಂತಿದ್ದೆ. ಅವರು ೧೯೬೭ರ ಚುನಾವಣಾ ಭಾಷಣವನ್ನು ಹಳ್ಳಿಯಲ್ಲಿ ಮಾಡುವಾಗ ಎಲ್ಲಾ ರಾಜಕೀಯ ಪಕ್ಷಗಳ ಅಭ್ಯರ್ಥಿಗಳ ಬಗ್ಗೆ ನೇರವಾಗಿ, ವೈಯಕ್ತಿಕವಾಗಿ, ಕಟುವಾಗಿ ಟೀಕೆ ಮಾಡುವಂಥ ಭಾಷಣವನ್ನು ಅರು ಅವೊತ್ತು ಮಾಡಿದರು. ಅಂದಿನಿಂದ ಮೊನ್ನೆ ಅವರ ನಿಧನವರೆಗೂ ಕೂಡ ನನಗೆ ಶ್ರೀ ವೈ.ಕೆ. ರಾಮಯ್ಯನವರು ಸಂಘರ್ಷದ ಹಾದಿಯಲ್ಲಿ ಬಂದಿರತಕ್ಕಂಥ ವ್ಯಕ್ತಿ ಎನ್ನತಕ್ಕಂಥ ಭಾವನೆಯು ಬದಲಾವಣೆಯಾಗಲಿಲ್ಲ. ಆದರೂ ಕೂಡ ಆ ಹಾದಿಯಲ್ಲಿ ಅತ್ಯಂತ ಯಶಸ್ಸನ್ನು ಕಂಡಂಥ ಒಬ್ಬ ಅಪರೂಪದ ರಾಜಕಾರಣಿ ಎಂಬ ಮಾತನ್ನು ನಾನು ನಂಬಿಕೊಂಡು ಬಂದವನು. ಸುಮಾರು ೨೫ ವರ್ಷಗಳ ಕಾಲ ನಾನು ಮತ್ತು ರಾಮಯ್ಯನವರು ಒಂದಲ್ಲ ಒಂದು ರೀತಿಯಲ್ಲಿ ನಿಕಟವಾದ ಸಂಬಂಧವನ್ನು ಇಟ್ಟುಕೊಂಡು ಬಂದಂಥವರು. ಅದಕ್ಕೆ ನಾನಾ ಕಾರಣಗಳು ಇವೆ. ೧೯೭೭ನೇ ಇಸವಿಯಲ್ಲಿ ನಾನು ಕುಣಿಗಲ್‌ನಲ್ಲಿ ವಕೀಲಿ ವೃತ್ತಿಯನ್ನು ಪ್ರಾರಂಭ ಮಾಡಿದಂಥ ಸಂದರ್ಭದಲ್ಲಿ ಆ ನ್ಯಾಯಾಲಯದಲ್ಲಿ ಹಿರಿಯ ವಕೀಲರಾಗಿದ್ದಂಥ ಇವರು ನಾನು ಮೊದಲನೇ ದಿವಸ ಕೋರ್ಟ್‌ಗೆ ಹೋಗತಕ್ಕಂಥ ಸಂದರ್ಭದಲ್ಲಿ ನನಗೆ ಅವರ ಆಫೀಸ್‌ನಿಂದ ಒಂದು ಕೇಸ್‌ನ್ನು ಕೊಟ್ಟು ವಕಾಲತ್ತು ಹಾಕಿಸಿ, ನೀನು ಚೆನ್ನಾಗಿ ಬೆಳೆಯಬೇಕಪ್ಪ ಎಂದು ಶುಭಕೋರುವ ಮಾತನ್ನು ಹೇಳಿದ್ದರು. ನಾವು ೧೯೮೩ನೇ ಇಸವಿಯವರೆವಿಗೂ ಅಲ್ಲಿದ್ದಂಥ ಕೇಸ್‌ಗಳಲ್ಲಿ ನನಗೂ ಅವರಿಗೂ ಬಹಳಷ್ಟು ಕೇಸ್‌ಗಳು ಇದ್ದವು. ಅವರು ನ್ಯಾಯಾಲಯದಲ್ಲಿಯೂ ಕೂಡ ತಮ್ಮ ಹಾದಿಯ ಹೊರತಾಗಿ ಇರಲಿಲ್ಲ. ವಕೀಲ ವೃತ್ತಿಯನ್ನೂ ಕೂಡ ಅವರು ಆ ರೀತಿಯಲ್ಲಿಯೇ ನಡೆಸಿಕೊಂಡು ಬಂದರು. ೧೯೮೩ನೇ ಇಸವಿಯಲ್ಲಿ ನಾನು ನ್ಯಾಯಾಂಗ ಇಲಾಖೆಯಲ್ಲಿ ನ್ಯಾಯಾಧೀಶನಾಗಿ ಆಯ್ಕೆಯಾದಂಥ ಸಂದರ್ಭದಲ್ಲಿ ಅವರು ರಾಜಕಾರಣದಲ್ಲಿ ಮೊದಲನೇ ಸಾರಿ ವಿಧಾನಸಭೆಯನ್ನು ಪ್ರವೇಶ ಮಾಡಿದರು. ಪುನಃ ಕೆಲಕಾಲ ನಂತರ ನಾನು ವಾಪಸ್ ಹೋದಾಗ, ಆ ಹೊತ್ತಿಗಾಗಲೇ ಬಹಳ ಬಲಿಷ್ಠವಾಗಿ ಬೆಳೆದಂಥ ರಾಜಕಾರಣಿಯಾಗಿದ್ದರು. ನಂತರದ ದಿನಗಳಲ್ಲಿ ೧೯೯೨ರಲ್ಲಿ ನಡೆದಂಥ ಉಪಚುನಾವಣೆ, ೧೯೯೪ರಲ್ಲಿ ನಡೆದಂಥ ಸಾರ್ವತ್ರಿಕ ಚುನಾವಣೆಗಳಲ್ಲಿ ಕುಣಿಗಲ್ ಕ್ಷೇತ್ರದಿಂದ ನಾನೂ ಅವರೂ ಸ್ಪರ್ಧಿಗಳಾಗಿ ಸ್ಪರ್ಧಿಸಿದ್ದೆವು ೧೯೯೨ರಲ್ಲಿ ಉಪಚುನಾವಣೆಯಲ್ಲಿ ಅವರು ಗೆದ್ದರು. ೧೯೯೪ರಲ್ಲಿ ಸಾರ್ವತ್ರಿಕ ಚುನಾವಣೆಯಲ್ಲಿ ನಾನು ಗೆದ್ದೆ ೧೯೯೮ರಲ್ಲಿ ಅವರು ನಮ್ಮ ಪಕ್ಷವನ್ನು ಸೇರಬೇಕೆಂದಾಗ ನಾನು ಆತ್ಮೀಯವಾಗಿ ಸ್ವಾಗತ ಮಾಡಿದ್ದೆ. ತುಮಕೂರು ಜಿಲ್ಲೆಯಲ್ಲಿ ನಮ್ಮ ಪಕ್ಷಕ್ಕ ಒಂದು ಶಕ್ತಿಯನ್ನು ತಂದುಕೊಡತಕ್ಕಂಥ ವ್ಯಕ್ತಿತ್ವ ಇರತಕ್ಕಂಥ ರಾಜಕಾರಣಿಯೊಬ್ಬರು ಬರುತ್ತಾ ಇರತಕ್ಕಂಥದ್ದು ನಮ್ಮ ಪಕ್ಷಕ್ಕೆ ಇನ್ನೂ ಹೆಚ್ಚಿನ ಶಕ್ತಿಯನ್ನು ತಂದು ಕೊಡುತ್ತದೆ ಎಂದು ಹೇಳುತ್ತಾ ಸ್ವಾಗತ ಮಾಡುತ್ತೇನೆ ಎಂಬ ಮಾತನ್ನು ನಾನು ಹೃದಯಪೂರ್ವಕವಾಗಿ ಹೇಳಿದ್ದೆ. ಅನೇಕ ವಿಚಾರಗಳಲ್ಲಿ ಈ ಕಾರಣಗಳಿಂದಾಗಿ ನಮ್ಮಿಬ್ಬರ ಮಧ್ಯೆ ವೈಮನಸ್ಸು, ಭಿನ್ನಾಭಿಪ್ರಾಯಗಳು ಇಲ್ಲದಿದ್ದರೂ ಕೂಡ ಸಾರ್ವತ್ರಿಕವಾಗಿ ಇವರಲ್ಲಿ ಏನೋ

ಭಿನ್ನಾಭಿಪ್ರಾಯಗಳಿವೆ. ವೈಚಾರಿಕವಾಗಿ ಒಬ್ಬರಿಗೊಬ್ಬರಿಗೆ ಮನಸ್ತಾಪವಿದೆ ಎನ್ನತಕ್ಕಂಥ ಒಂದು ಭಾವನೆಯನ್ನು ಕೊಟ್ಟಿರೂ ಕೂಡ ನಾನು ಅತ್ಯಂತ ಪ್ರಾಮಾಣಿಕತೆಯಿಂದ ಒಂದು ಮಾತನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ನಮ್ಮಲ್ಲಿಗತಕ್ಕಂಥ ಸಣ್ಣಪುಟ್ಟ ಭಿನ್ನಾಭಿಪ್ರಾಯಗಳು ಯಾವೊತ್ತೂ ಕೂಡ ನಮ್ಮ ತಾಲ್ಲೂಕು ಮತ್ತು ಜಿಲ್ಲೆಯಲ್ಲಿರತಕ್ಕಂಥ ಅಭಿವೃದ್ಧಿ ಕೆಲಸಗಳು, ಅಥವಾ ನಮ್ಮ ಜಿಲ್ಲೆಯಲ್ಲಿನ ನಮ್ಮ ಪಕ್ಷದ ಸಂಘಟನೆಗೆ ಯಾವತ್ತೂ ಕೂಡ ಅದು ಮಾರಕವಾಗಿರಲಿಲ್ಲ ಮತ್ತು ಅದರಿಂದ ಯಾವ ತೊಂದರೆಯೂ ಕೂಡ ಆಗಿರಲಿಲ್ಲ. ಯಾವುದೇ ಸಂದರ್ಭ ಬಂದರೂ ಕೂಡ ಅವರ ವ್ಯಕ್ತಿತ್ವವನ್ನು ಅರ್ಥ ಮಾಡಿಕೊಂಡಿದ್ದಂಥ ನಾನು, ತತ್‌ಕ್ಷಣದಲ್ಲಿ ಅವರ ಜೊತೆಯಲ್ಲಿ ರಾಜಿಮಾಡಿಕೊಂಡು ಯಾವುದೇ ರೀತಿಯಲ್ಲಿ ತೊಂದರೆಯಾಗಬಾರದು. ನಮ್ಮ ತಾಲ್ಲೂಕಿಗೆ, ನಮ್ಮ ಪಕ್ಷಕ್ಕೆ, ತೊಂದರೆಯಾಗಬಾರದು ಎನ್ನುವ ವಿಚಾರದಲ್ಲಿ ನಾನು ಅವರ ಜೊತೆಯಲ್ಲಿ ಸಹಮತವನ್ನು ವ್ಯಕ್ತಪಡಿಸಿಕೊಂಡು ಅನೇಕ ಸಲ ನಮ್ಮ ದಾರಿಯನ್ನು ಸುಗಮ ಮಾಡಿಕೊಂಡಿದ್ದುಂಟು. ಮಾನ್ಯ ರಾಮಯ್ಯನವರು ನನಗೆ ವೈಯಕ್ತಿಕವಾಗಿ ಒಂದು ದೊಡ್ಡ ಸಹಾಯನ್ನು ಮಾಡಿದ್ದು ಏನೆಂದರೆ, He always used to keep me more active, because he used to be more active. ಒಂದೇ ತಾಲ್ಲೂಕಿನ ಎರಡು ಕ್ಷೇತ್ರಗಳಲ್ಲಿ ಅವರು ಅತ್ಯಂತ ಕ್ರಿಯಾಶೀಲರಾಗಿ ಕೆಲಸವನ್ನು ಮಾಡತಕ್ಕಂಥ ಸಂದರ್ಭದಲ್ಲಿ ಪಕ್ಕದ ಕ್ಷೇತ್ರದಲ್ಲಿ ನಾನು ಕ್ರಿಯಾಶೀಲನಾಗಿ ಕೆಲಸವನ್ನು ಮಾಡತಕ್ಕಂಥ ಅನಿವಾರ್ಯ ಪರಿಸ್ಥಿತಿಯನ್ನು ಅವರು ನಿರ್ಮಾಣ ಮಾಡಿದ್ದರು. He used to keep me always active.

ಅವರು ಅವರ ಕ್ಷೇತ್ರದಲ್ಲಿ ಬಹಳಷ್ಟು ಅಭಿವೃದ್ಧಿ ಕೆಲಸಗಳನ್ನು ಮಾಡಿದ್ದಾರೆ. ರಾಜ್ಯಮಟ್ಟದ ಮತ್ತು ಜಿಲ್ಲಾಮಟ್ಟದ ರಾಜಕಾರಣವನ್ನು ನಿರಂತರವಾಗಿ ಮಾಡಿದರೂ ಕೂಡ ಅದ್ಯಾವುದೂ ಅವರ ಕ್ಷೇತ್ರದ ಅಭಿವೃದ್ಧಿಗೆ ತೊಂದರೆ ಆಗದ ರೀತಿಯಲ್ಲಿ ಕ್ಷೇತ್ರಕ್ಕೆ ಹೆಚ್ಚಿನ ಆದ್ಯತೆ ಕೊಟ್ಟು ಕೆಲಸ ಮಾಡುತ್ತಿದ್ದರು. ಇದರ ಉದಾಹರಣೆಗೆ ಮಾನ್ಯ ಅಧ್ಯಕ್ಷರೇ, ನಾನು ಒಂದೇ ಒಂದು ಮಾತು ಹೇಳಲಿಕ್ಕೆ ಇಷ್ಟಪಡುತ್ತೇನೆ. ಒಂದು ವಿಧಾನಸಭಾ ಕ್ಷೇತ್ರಕ್ಕೆ ೧೩-೧೪ ಕೋಟಿ ರೂಪಾಯಿ ಕೇಂದ್ರದಿಂದ ರಸ್ತೆ ನಿಧಿ ಬಂತು ಅಂದರೆ ನಾವೆಲ್ಲರೂ ಕೂಡ ಆಶ್ಚರ್ಯ ಪಡಬೇಕು. ಆ ರೀತಿ ಸರ್ಕಾರದ ಮೇಲೆ ಪರಭಾವ ತಂದು ಅಧಿಕಾರಿಗಳ ಮೇಲೆ ಪ್ರಭಾವ ತಂದು ಅವರ ಕ್ಷೇತ್ರದ ಕೆಲಸಗಳನ್ನು ಮಾಡಬೇಕೆಂಬ ಸಂದರ್ಭದಲ್ಲಿ ಅವರು ಎಲ್ಲರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ ಕೆಲಸವನ್ನು ಮಾಡುತ್ತಾ ಇದ್ದುದ್ದು ನಮಗೆಲ್ಲರಿಗೂ ಕೂಡ ಸ್ಫೂರ್ತಿಯಾಗುತ್ತಿತ್ತು. ನಮಗೆಲ್ಲರಿಗೂ ಕೂಡ ಉತ್ಸಾಹವನ್ನು ತುಂಬುತ್ತಾ ಇತ್ತು. ನಮ್ಮ ಕ್ಷೇತ್ರಗಳಿಗೂ ಹೆಚ್ಚು ಹೆಚ್ಚು ಕೆಲಸ ಮಾಡಲು ಅದು ನಮಗೆ ಕಾರಣವಾಗುತ್ತಾ ಇತ್ತು. ಆದ್ದರಿಂದ ಮಾನ್ಯ ಅಧ್ಯಕ್ಷರೇ, ಇವತ್ತು ಮಾನ್ಯ ರಾಮಯ್ಯನವರು ರೇಷ್ಮೆ, ನೀರಾವರಿ, ಕೃಷಿ ಹೀಗೆ ಅನೇಕ ವಿಚಾರಗಳಲ್ಲಿ ಒಂದು ಸಾಮಾಜಿಕ ಕಳಕಳಿಯನ್ನು ಬದ್ಧತೆಗಳನ್ನು ಇಟ್ಟುಕೊಂಡಿದ್ದ ಒಬ್ಬ ವ್ಯಕ್ತಿ. ಅವರು ಯಾವುದೇ ಸಂದರ್ಭದಲ್ಲಿ ರಾಜಕೀಯವಾಗಿ, ಖಾಸಗಿಯಾಗಿ ಮನಸ್ಸಿಗೆ ನೋವಾಗಿದ್ದರೂ ಯಾವುದೂ ಘಟನೆ ನಡೆದೇ ಇಲ್ಲವೇನೋ ಎಂಬುವಷ್ಟರ ಮಟ್ಟಿಗೆ ಬದಲಾವಣೆಯಾಗಿ ತಮ್ಮನ್ನು ತಾವು ಈ ಸಾರ್ವಜನಿಕ ಅಭಿವೃದ್ಧಿ ಕೆಲಸಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದ ಒಂದು ವಿಶಿಷ್ಟವಾದ ಗುಣವನ್ನು ನಾನು ಅವರಲ್ಲಿ ನೋಡಿದ್ದೆ. ಯಾವುದೇ ಸಾರ್ವಜನಿಕ ಜೀವನದಲ್ಲಿರುವ ವ್ಯಕ್ತಿಗೆ ಖಾಸಗಿಯಾಗಿ ಅಥವಾ

ರಾಜಕೀಯವಾಗಿ ಒಂದು ಸಣ್ಣ ಘಟನೆ ನಡೆದರೆ [illegible]. ಅದರಿಂದ ಮುಕ್ತಿ ಪಡೆಯುವುದಕ್ಕೆ [illegible] ಆಗುವುದಕ್ಕೆ ಸ್ವಲ್ಪ ಕಾಲವೇ ಬೇಕಾಗುತ್ತದೆ. ಆದರೆ ಮಾನ್ಯ ರಾಮಯ್ಯನವರಲ್ಲಿದ್ದ [illegible] ಇಲ್ಲ. [illegible] ಅವರು ತಮ್ಮನ್ನು ತಾವು [illegible] ತೊಡಗಿಸಿಕೊಳ್ಳುತ್ತಿದ್ದರು [illegible] ವೃತ್ತಿ. ಕುಣಿಗಲ್ ತಾಲ್ಲೂಕಿನ ಬಹಳ ಭಾಗವನ್ನು ಪ್ರತಿನಿಧಿಸುತ್ತಿದ್ದಂತಹ ಶ್ರೀ ರಾಮಯ್ಯನವರು [illegible] ನಿಧನರಾಗಿದ್ದಾರೆ. [illegible] ಒಂದು ಸತ್ಯವನ್ನು ಇಲ್ಲಿ ಹೇಳುವುದು ತಪ್ಪಾಗಲಾರದು. ಅವರ ಬಹಳ ಕೋಮಲವಾದ ಸ್ವಭಾವವೇ ಅವರಿಗೆ ಅಕಾಲಿಕ ಮರಣ ಬರಲು ಕಾರಣವಾಯಿತೇನೋ ಎಂದು ಭಾವನೆ ಮಾಡುತ್ತೇನೆ. ಮಾನ್ಯ ಸದಸ್ಯರುಗಳು ಕೇಳುವಾಗ ಒಂದು ವಿಚಾರವನ್ನು ಹೇಳುವೆನು. [illegible] ಕಾರ್ಯಕ್ರಮಕ್ಕೆ ಹೋಗಬೇಕಾದರೆ ಡಾಕ್ಟರ್ ಅವರಿಗೆ ಹೇಳಿದರು. [illegible] You are not in a fit condition to go and attend the programme ಎಂದು. [illegible] ಗೊತ್ತಾಗುತ್ತದೆ ಎಂದು ಆ ಪ್ರಿಸ್ಕ್ರಿಪ್ಷನ್ [illegible] ಇಟ್ಟುಕೊಂಡು ಅವರು ಆ ಕಾರ್ಯಕ್ರಮಕ್ಕೆ ಹೋಗಿದ್ದ ವಿಚಾರವನ್ನು ಮಾನ್ಯ ಸಭಾನಾಯಕರು ಹೇಳಿದರು. [illegible] ಬಂದಾಗ ಸ್ವತಃ ಡಾಕ್ಟರ್ರೇ ಹೇಳಿದ್ದಾರೆ. ದಯವಿಟ್ಟು ತಾವು ರೆಸ್ಟ್ ತೆಗೆದುಕೊಳ್ಳಬೇಕು ಸಾರ್. ಇವತ್ತು ಸಂಜೆಯೊಳಗೆ ತಮ್ಮನ್ನು ನಾವು ಬೆಂಗಳೂರಿಗೆ ಕರೆದುಕೊಂಡು ಹೋಗುತ್ತೇವೆ ಎಂದು ಹೇಳಿದಾಗ ಇಲ್ಲ ಒಂದು ಕಾರ್ಯಕ್ರಮದ [illegible] ಮುಗಿಸಿಕೊಂಡು ನಾನು ಬೆಂಗಳೂರಿಗೆ ಬರುತ್ತೇನೆ. ಇವತ್ತು ಆಗುವುದಿಲ್ಲ ಎಂದು ಡಾಕ್ಟರ್‌ಗೆ ಹೇಳಿದ್ದಾರೆ. [illegible] ಎಂದು [illegible] ಸಮಯದಲ್ಲಿ ನಾನು ಅಲ್ಲೇ ನನ್ನ ಕ್ಷೇತ್ರದಲ್ಲಿದ್ದ ಸಂದರ್ಭದಲ್ಲಿ ನನಗೆ [illegible] ಮಾನ್ಯ ರಾಮಯ್ಯನವರು [illegible] ನಿಮಿಷಕ್ಕೆ ನಾನು ಸ್ಥಳಕ್ಕೆ ಹೋದಾಗ ಡಾಕ್ಟರ್ ಇನ್ನೂ ಅಲ್ಲೇ ಇದ್ದರು. ಅವರಲ್ಲಿ ನಡೆದಂತಹ ಪರಿಸ್ಥಿತಿ ವಿಚಾರಣೆ ಮಾಡಿದಾಗ ಮಾನ್ಯ ರಾಮಯ್ಯನವರ ಒಂದು ಸ್ವಭಾವವೇ ಅವರ ಅಕಾಲಿಕ ಮರಣಕ್ಕೆ ಕಾರಣವಾಯಿತೇನೋ ಎಂಬ ಭಾವನೆಯನ್ನು ನಾನು ತಳೆದೆ. ಹಾಗಾಗಿ ಅವರು ಬಹಳ ಚಿಕ್ಕ ವಯಸ್ಸಿನಲ್ಲೇ ನಮ್ಮನ್ನು ಅಗಲಿದ್ದಾರೆ. ನಮಗೆ ನಮ್ಮ ತಾಲ್ಲೂಕಿಗೆ ನಮ್ಮ ಜಿಲ್ಲೆಗೆ ಅಭಿವೃದ್ಧಿ ಕೆಲಸಗಳಿಗೆ ಒಂದು ಸ್ಫೂರ್ತಿಯಾಗಿದ್ದ ಒಂದು ಚೇತನವನ್ನು, ಒಂದು ಚಿಲುಮೆಯನ್ನು ನಾವು ಕಳೆದುಕೊಂಡಿದ್ದೇವೆ. ನಮ್ಮ ಪಕ್ಷಕ್ಕೆ ನಮ್ಮ ಜಿಲ್ಲೆಯ ಮಟ್ಟಿಗೆ ಒಂದು ದೊಡ್ಡ ಆಘಾತವಾಗಿದೆ. ಮಾನ್ಯ ವೈ.ಕೆ. ರಾಮಯ್ಯನವರ ಕಾರ್ಯಶೈಲಿ ಅವರು ನಡೆದುಕೊಂಡು ಬಂದಂತಹ ದಾರಿ ಅವರು ಕುಣಿಗಲ್ ತಾಲ್ಲೂಕಿನಲ್ಲಿ ಮಾಡಿರುವ ಅಭಿವೃದ್ಧಿ ಕೆಲಸಗಳು ಸದಾ ನಮಗೆ ಮಾರ್ಗದರ್ಶಕವಾಗಿರಲಿ. ಅವರು ಅಭಿವೃದ್ಧಿ ಕೆಲಸಕ್ಕೆ ಕೊಟ್ಟಂತಹ ಹೆಚ್ಚಿನ ಆಸಕ್ತಿ ನಮಗೆಲ್ಲರಿಗೂ ಸ್ಫೂರ್ತಿದಾಯಕವಾಗಿರಲಿ ಎಂಬ ಮಾತನ್ನು ಹೇಳುತ್ತಾ, ಇವತ್ತೇನು ಅವರು ನಮ್ಮನ್ನು ಅಗಲಿ ಹೋಗಿದ್ದಾರೆ ಅವರ ಕುಟುಂಬಕ್ಕೆ ಆ ದುಃಖವನ್ನು ಭರಿಸುವ ಶಕ್ತಿಯನ್ನು ಭಗವಂತ ಕರುಣಿಸಲಿ, ಅವರ ಆತ್ಮಕ್ಕೂ ಕೂಡ ಭಗವಂತ ಶಾಂತಿಯನ್ನು ನೀಡಲಿ.

+ ಶ್ರೀ ಸಿ. ಚನ್ನಿಗಪ್ಪ (ಕೊರಟಗೆರೆ) : ಮಾನ್ಯ ಅಧ್ಯಕ್ಷರೇ, ತಾವು ತಂದಿರುವಂತಹ ಸಂತಾಪ ಸೂಚನೆ ನಿರ್ಣಯದಲ್ಲಿ ಈ ರಾಜ್ಯದಲ್ಲಿ ರಾಜಕೀಯವಾಗಿ ಸಾಮಾಜಿಕವಾಗಿ ಸೇವೆ ಮಾಡಿದ ಅನೇಕ

ಕಳಕಳಿ ನೋಡಿದರೆ ನಮ್ಮ ಉತ್ತರ ಕರ್ನಾಟಕದಲ್ಲಿ ಸಹ ಅವರನ್ನು ನಾನು ವಿನಂತಿ ಮಾಡಿಕೊಂಡೆ ಹಳೆಯ ಮೈಸೂರಿನಲ್ಲಿ ಮಾತ್ರ ಈ ರೇಷ್ಮೆ ಬೆಳವಣಿಗೆ ಹೆಚ್ಚಾಗಿದೆ. ಇಲ್ಲೇನು ಸಣ್ಣ ರೈತರು ಇದ್ದಾರೆ. ಅದೇ ಪ್ರಕಾರ ನಮ್ಮ ಉತ್ತರ ಕರ್ನಾಟಕದಲ್ಲೂ ಸಹಿತ ಸಣ್ಣ ರೈತರು ಇದ್ದಾರೆ. ಒಂದು ಎಕರೆ, ಎರಡು ಎಕರೆ ಇರುವಂತಹ ಸಣ್ಣ ರೈತರು ಇದ್ದಾರೆ. ಅಲ್ಲಿಯೂ ಸಹಿತ ಈ ರೇಷ್ಮೆಯ ಬೆಳವಣಿಗೆ ಆಗಬೇಕು. ರೈತರಿಗೆ ಸಹಾಯ ಆಗಬೇಕು ಎಂದಾಗ ಅವರು ಹೆಚ್ಚು ಆಸಕ್ತಿಯಿಂದ ನಮ್ಮ ಧಾರವಾಡ ಜಿಲ್ಲೆಯ ರಾಯಪುರದಲ್ಲಿ ಅದರ ಕೇಂದ್ರವನ್ನು ಮಾಡಿ ಅಧಿಕಾರಿಗಳನ್ನು ನೇಮಿಸಿ ಆ ಬೆಳವಣಿಗೆಗೆ ಸಹಾಯ ಮಾಡಿದರು ಮತ್ತು ಅವರು ತಮ್ಮ ಜೀವನದ ವಿಚಾರಗಳನ್ನು ಹೇಳುತ್ತಿದ್ದರು. ನಾನೂ ಬಹಳ ಕಷ್ಟದಿಂದ ಬಂದಿದ್ದೇನೆ ಬೆಲ್ಲದ್ ಅವರೇ, ನಮ್ಮ ಮನೆಯಲ್ಲಿ ಕುರಿ, ಆಡು ಇಂತಹವೆ ಇದ್ದವು. ಸಣ್ಣ ಕುಟುಂಬ ಇತ್ತು. ನಾವೆಲ್ಲಾ ಅವನ್ನು ಕಾಯ್ತಿವು. ಒಂದು ಎಕರೆಯ ರೇಷ್ಮೆ ವ್ಯವಸಾಯದಿಂದಲೇ ನಾನು ಎಲ್‌ಎಲ್‌ಬಿ ಮಾಡಿದ್ದೇನೆ. ವಕೀಲ ಆಗಿದ್ದೇನೆ. ರಾಜಕೀಯಕ್ಕೆ ಬಂದಿದ್ದೇನೆ ಎನ್ನುವಂತಹ ವಿಚಾರವನ್ನು ಅವರು ಹೇಳುತ್ತಿದ್ದರು. ಒಬ್ಬ ನಿಷ್ಠಾವಂತ ರಾಜಕಾರಣಿ ಮತ್ತು ಸಮಾಜದ ರೈತರ ಬಗ್ಗೆ ಮತ್ತು ಸಣ್ಣ ಜನರ ಬಗ್ಗೆ ಬಹಳ ಕಳಕಳಿ ಇರುವಂತಹ ಒಬ್ಬ ವ್ಯಕ್ತಿ ಅವರಾಗಿದ್ದರು ಮತ್ತು ನಿಷ್ಠೂರವಾದಿಗಳಾಗಿದ್ದರು. ನೀರಾವರಿ ಬಗ್ಗೆ ಅವರು ಮಾಡಿದಂತಹ ಕೆಲಸ ಇರಲಿ, ಪರಿಸರದ ಬಗ್ಗೆ ಮಾಡಿರುವಂತಹ ಕೆಲ ಇರಲಿ, ಅವೆಲ್ಲವರ ಬಗ್ಗೆ ಈಗಾಗಲೇ ಎಲ್ಲರೂ ಮೆಚ್ಚಿಕೊಂಡಿದ್ದಾರೆ. ನಿಷ್ಠಾವಂತ, ಸಮರ್ಥ ರಾಜಕಾರಣಿಗಳನ್ನು ನಾವು ಕಳೆದುಕೊಂಡು ಇವತ್ತು ಕರ್ನಾಟಕ ರಾಜ್ಯ ಬಡವಾಗಿದೆ ಎಂದು ಹೇಳಬೇಕಾಗುತ್ತದೆ.

+ **ಶ್ರೀ ಬಿ.ಆರ್. ಯಾವಗಲ್ (ನರಗುಂದ)** : ಸನ್ಮಾನ್ಯ ಅಧ್ಯಕ್ಷರೆ, ಇವತ್ತಿನ ಈ ಸಂತಾಪ ಸೂಚನೆಯನ್ನು ಏನು ಇದೆ. ಇದರ ಬಗ್ಗೆ ನನ್ನ ಬೆಂಬಲವನ್ನು ವ್ಯಕ್ತ ಮಾಡುತ್ತಾ ವಿಶೇಷವಾಗಿ ಹಲವಾರು ದಿಗ್ಗಜಗಳಲ್ಲಿ ರಾಜಕೀಯ ಕ್ಷೇತ್ರದಿಂದ ಬಂದಂತಹ ನೇರವಾಗಿ ನಮ್ಮ ಜೊತೆ ಸಂಬಂಧ ಹೊಂದಿದ್ದಂತಹ ಸನ್ಮಾನ್ಯ ಶ್ರೀ ವೈ.ಕೆ. ರಾಮಯ್ಯನವರ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ. ನನ್ನ ಪಕ್ಕದ ಸೀಟಿನಲ್ಲಿ ಅವರು ಆಸೀನರಾಗುತ್ತಿದ್ದರು. ಬಹುತೇಕ ಅವರು ಸದನದಲ್ಲಿದ್ದಾಗಲೆಲ್ಲಾ ಬಹಳ ಗಂಭೀರವಾಗಿ ಚರ್ಚೆಯ ಆಗು ಹೋಗುಗಳ ಬಗ್ಗೆ ಕೇಳುತ್ತಿದ್ದರು. ಗಮನ ಹರಿಸುತ್ತಿದ್ದರು. ಅದೂ ವಿಶೇಷವಾಗಿ ವಿರೋಧ ಪಕ್ಷದ ನಾಯಕರ ಭಾಷಣಗಳನ್ನು ಬಹಳ ಗಂಭೀರವಾಗಿ ಆಲಿಸುತ್ತಿದ್ದರು. ವಿಶಿಷ್ಟ ವ್ಯಕ್ತಿತ್ವ ಹೊಂದಿದ್ದರಲ್ಲದೆ, ಕೃಷಿ, ರೈತ ಮತ್ತು ಗ್ರಾಮದ ಬಗ್ಗೆ ಶ್ರೇಷ್ಠವಾದ ಸಾಮಾಜಿಕ ಕಳಕಳಿ ಹೊಂದಿದಂತಹ ಜನರನ್ನು ನೋಡುವುದೇ ಬಹಳ ದುರ್ಲಭವೆಂಬ ಭಾವನೆ ನನಗಿದೆ. ಇದರ ಜೊತೆಗೆ ಮಾನ್ಯ ಸದಸ್ಯರಾದ ಶ್ರೀ ಎಸ್.ಟಿ. ಮುದ್ದಹನುಮೇಗೌಡರು ಹೇಳಿರುವಂತೆ ಅವರಲ್ಲಿದ್ದಂಥ ಆಕ್ರೋಶ, ಸಿಟ್ಟು, ಎಷ್ಟಿತ್ತೆಂದರೆ, ನೂರಾರು ಜನರ ಸಿಟ್ಟು ಸೇರಿದರೆ ಎಷ್ಟಾಗುತ್ತಿತ್ತೋ ಅಷ್ಟಾಗುವುದಕ್ಕೆ ಸಾಧ್ಯವಿತ್ತು ಎನ್ನುವ ಭಾವನೆ. ಕ್ಷಣಕ್ಷಣಕ್ಕೂ ಅವರು ಸಿಟ್ಟಾಗುತ್ತಿದ್ದರು. ಕೆಲವು ಸಂದರ್ಭದಲ್ಲಿ ಅವರು ಅನಾವಶ್ಯಕವಾಗಿ ಸಿಟ್ಟುಗೊಳ್ಳುತ್ತಿದ್ದರು. ಇಂತಹ ವ್ಯಕ್ತಿತ್ವವನ್ನು ಕಾಣುವುದು ಬಹಳ ಅಪರೂಪ. ಅದರಲ್ಲೂ ವಿಶೇಷವಾಗಿ ಅಧಿಕಾರಶಾಹಿ ಹಾಗೂ ಆಡಳಿತದ ಪ್ರಶ್ನೆ ಬಂದಾಗ ಅವರು ಉರಿದು

ಕಂಡವಾಗುವಂತಹ ಸನ್ನಿವೇಶವನ್ನು ನಾವು ಕಾಣುತ್ತಿದ್ದೆವು. ಶ್ರೀಯುತರು ಸಮಿತಿ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಸಮಿತಿ ಅಧ್ಯಯನ ಪ್ರವಾಸ ಕೈಗೊಂಡ ಸಂದರ್ಭದಲ್ಲಿ ಮತ್ತು ನಾನು ಅಧ್ಯಕ್ಷನಾಗಿದ್ದ ಒಂದು ಸಮಿತಿಯಲ್ಲಿ ಅವರು ಸದಸ್ಯರಾಗಿ ಮಾತನಾಡುತ್ತಿದ್ದರೆ ಬೇರೆಯವರಿಗೆ ಅವಕಾಶವಿರುತ್ತಿರಲಿಲ್ಲ! ಅವರು ಹೇಳುವಂತಹ ವಿಚಾರಕ್ಕೆ ಪ್ರತಿಯಾಗಿ ಹೇಳುವಂಥ ದಾಷ್ಟ್ಯತೆ ಅಲ್ಲಿದ್ದ ಯಾರಿಗೂ ಇರುತ್ತಿರಲಿಲ್ಲ! ಮತ್ತು ಅವರು ಹೇಳಿದ್ದನ್ನು ಯಾರಿಗೂ ಹೇಳುವುದಕ್ಕೆ ಸಾಧ್ಯವಿರುತ್ತಿರಲಿಲ್ಲ. ಇದಕ್ಕೆ ಒಂದು ತರಹ ಅಂಜಿಕೆ ಅಥವಾ ಮುಜುಗರ ಕಾರಣವಿರಬಹುದು. ಆದರೆ, ಅವರಲ್ಲಿ ಈ ಅಂಜಿಕೆಯಾಗಲಿ, ಮುಜುಗರವಾಗಲಿ ಯಾವುದೂ ಇರಲಿಲ್ಲ. ಸತ್ಯದ ಸಮೀಪ ಹೋಗಿ ಪ್ರಶ್ನಿಸುವ ಅವರ ನಡವಳಿಕೆ ಬಹಳ ಅರೂಪದ್ದು ಹಾಗೂ ಮೆಚ್ಚುವಂಥಾದ್ದು. ವಿಶೇಷವಾಗಿ ಕುವೆಂಪು ಸಾಹಿತ್ಯ ಹಾಗೂ ಅವರ ವ್ಯಕ್ತಿತ್ವದ ವಿಚಾರಧಾರೆಗಳಲ್ಲಿ ತೀವ್ರವಾದ ತಾದಾತ್ಮ್ಯ ಹೊಂದಿ ಅವರಲ್ಲೇ ಆಳವಾಗಿ ಮುಳುಗಿದ್ದರು. ಖಾಸಗಿಯಾಗಿ 'ವಿಶ್ವಮಾನವ' ವೇದಿಕೆಯನ್ನು ಹುಟ್ಟುಹಾಕುವಂತ್ತಿದ್ದರು. ಸದರಿ ವೇದಿಕೆಗೆ ನನ್ನನ್ನು ಪ್ರಧಾನ ಕಾರ್ಯದರ್ಶಿಯನ್ನಾಗಿ ಸಹ ನೇಮಿಸಿದ್ದರು. ವಿಶ್ವಮಾನವ ವೇದಿಕೆಯನ್ನು ಎಲ್ಲಾ ಕಡೆಗಳಲ್ಲೂ ಸ್ಥಾಪಿಸುವ ಬಗ್ಗೆ ಅಗಾಧ ಕಳಕಳಿ, ಆಸಕ್ತಿ ಹೊಂದಿ ಅದರಲ್ಲೇ ತಮ್ಮನ್ನು ಆಳವಾಗಿ ತೊಡಗಿಸಿಕೊಂಡಿದ್ದ ಅವರು, ಕುವೆಂಪು ಜನ್ಮ ಶತಮಾನೋತ್ಸವ ಆಚರಿಸುತ್ತಿರುವ ಸಂದರ್ಭದಲ್ಲಿ ಅವೆಲ್ಲವೂ ಪರ್ಯಾವಸಾನಗೊಂಡಿತೆಂದು ನಾನು ಭಾವಿಸುತ್ತೇನೆ. ಕೊನೆಯದಾಗಿ ಹೇಳುವುದಾದರೆ, ಅವರಲ್ಲಿ ಕೆಲವು ಚಿಂತನೆಗಳಿದ್ದವು. ಅವರಿಗೆ ಅವಕಾಶಗಳು ಸಿಗಬೇಕಿತ್ತೋ ಅದು ಸಿಗಲಿಲ್ಲವೆಂದು ಮಾನ್ಯ ವಿರೋಧ ಪಕ್ಷದ ನಾಯಕರು ಹೇಳಿರುವ ಮಾತು ಸತ್ಯವಾದುದು. ಅವರು ರಾಜಕೀಯ ಧ್ರುವೀಕರಣಗಳಿಂದಾಗಿ ಬದಿಗೆ ಸರಿಸಲ್ಪಟ್ಟಂಥವರು. ಈ ರಾಜ್ಯ ಅವರಿಂದ ಬಹಳಷ್ಟು ಸೇವೆ ನಿರೀಕ್ಷಿಸಿತ್ತು. ಆ ಮಟ್ಟದ ವ್ಯಕ್ತಿತ್ವ ಹೊಂದಿದವರಾಗಿದ್ದರು. ಅವರಿಗೆ ಅವಕಾಶ ಸಿಗದಿದ್ದಾಗ್ಯೂ ಅವರ ಕರ್ತವ್ಯ ಶಕ್ತಿ ಹಾಗೂ ತಮ್ಮ ಕಾರ್ಯಕ್ಷೇತ್ರಕ್ಕೆ ತೆರಳಿದ್ದಾಗ ಅವರು ಬಹಳಷ್ಟು ಶ್ರದ್ಧೆಯಿಂದ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಅವರಲ್ಲಿ ಕೊಂಚ ಹಠಮಾರಿತನವು ಮೈಗೂಡಿತ್ತು. ಅವರು ಯಾರ ಮೇಲೂ ಅವಲಂಬಿಸಿರಲಿಲ್ಲ. ಯಾರ ಸಹಾಯವು ಬೇಕಾಗಿಲ್ಲವೆನ್ನುವ, ತಮ್ಮದೇ ಆದಂಥ ವಿಶಿಷ್ಟ ವ್ಯಕ್ತಿತ್ವ ಬೆಳಸಿಕೊಂಡಂಥ ಅವರನ್ನು ಸಮೀಪದಿಂದ ಕಂಡಾಗ ಇದು ಗೊತ್ತಾಯಿತು. ಇಂತಹವರ ನಿಧನದಿಂದ ನಮಗೆ, ಈ ಸದನಕ್ಕೆ ಹಾಗೂ ರಾಜ್ಯಕ್ಕೆ ನಷ್ಟವುಂಟಾಗಿದೆಯೆಂದು ಭಾವಿಸಿದರೆ ತಪ್ಪಾಗಲಾರದು.

ಮೃತರ ಆತ್ಮಕ್ಕೆ ಶಾಂತಿ ಕೋರುವ ಸಲುವಾಗಿ ಈಗ ಮಾನ್ಯ ಸದಸ್ಯರೆಲ್ಲರೂ ಎದ್ದು ನಿಂತು ಒಂದು ನಿಮಿಷ ಕಾಲ ಮೌನವನ್ನಾಚರಿಸಬೇಕೆಂದು ಕೋರುತ್ತೇನೆ.

(ಮೃತರ ಗೌರವಾರ್ಥ ಸನದವು ಒಂದು ನಿಮಿಷ ಮೌನವನ್ನಾಚರಿಸಿತು)

**ಅಧ್ಯಕ್ಷರು:** ಈ ಸದನವು ಅಂಗೀಕರಿಸಿದ ಸಂತಾಪ ಸೂಚಕ ನಿರ್ಣಯವನ್ನು ಮೃತರ ಕುಟುಂಬ ವರ್ಗದವರಿಗೆ ಕಳುಹಿಸಿಕೊಡಲಾಗುವುದು.

ಈಗ ಸದನವನ್ನು ನಾಳೆ ಬೆಳಿಗ್ಗೆ ೧೧.೦೦ ಗಂಟೆಯವರೆಗೆ ಮುಂದೂಡುತ್ತಿದ್ದೇನೆ.

# ಅನುಬಂಧ

## ವೈ.ಕೆ. ರಾಮಯ್ಯನವರ ಜೀವನ ವಿವರ

| | |
|---|---|
| ೧೯೩೯ | ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕಿನ ಹುಲಿಯೂರುದುರ್ಗ ಹೋಬಳಿಯ ಎಲೆಕಡಕಲು ಗ್ರಾಮದ ರೈತರ ಕೂಡುಕುಟುಂಬದಲ್ಲಿ ೫.೮.೧೯೩೯ರಲ್ಲಿ ಜನನ |
| | ತಾಯಿ: ಚಿನ್ನಮ್ಮ : ತಂದೆ: ಕಂಚೇಗೌಡ |
| | ಅಣ್ಣ-ಅಕ್ಕಂದಿರು: ಕಂಬೇಗೌಡ, ಹುಚ್ಚೇಗೌಡ, ತಿಮ್ಮಮ್ಮ, ಕರಿಯಮ್ಮ, ಕೆಂಪಮ್ಮ, ಚಿನ್ನಮ್ಮ |
| ೧೯೫೦ವರೆಗೆ | ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸ, ಎಲೆಕಡಕಲು ಮತ್ತು ಉಜ್ಜನಿ ಗ್ರಾಮದಲ್ಲಿ |
| ೧೯೫೮-೫೯ | ಹುಲಿಯೂರುದುರ್ಗ ಪ್ರೌಢಶಾಲೆಯಲ್ಲಿ ವ್ಯಾಸಂಗ, ಎಸ್.ಎಸ್.ಎಲ್.ಸಿ. ಉತ್ತೀರ್ಣ |
| ೧೯೬೨ | ತುಮಕೂರು ಸರ್ಕಾರಿ ಪ್ರಥಮದರ್ಜೆ ಕಾಲೇಜಿನಲ್ಲಿ ಬಿ.ಎ. ಪದವಿ |
| ೧೯೬೪ | ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಮಾನವಶಾಸ್ತ್ರ ಎಂ.ಎ. ಪದವಿ |
| ೧೯೬೬ | ಧಾರವಾಡದ ಜೆ.ಎಸ್.ಎಸ್. ಕಾನೂನು ಕಾಲೇಜಿನಲ್ಲಿ ಎಲ್.ಎಲ್.ಬಿ. ಪದವಿ |
| ೧೯೬೭ | ತುಮಕೂರಿನಲ್ಲಿ ಹಿರಿಯ ವಕೀಲರಾದ ಎಚ್.ಎಸ್. ಶೇಷಾದ್ರಿಯವರ ಬಳಿ ವಕೀಲಿ ವೃತ್ತಿ ಆರಂಭ |
| | ವಿಧಾನಸಭೆಗೆ ಮೊದಲ ಸಲ ಪಕ್ಷೇತರ ಅಭ್ಯರ್ಥಿಯಾಗಿ ಸಿಂಹದ ಗುರುತಿನಿಂದ ಸ್ಪರ್ಧೆ, ಸೋಲು |
| | ತಾಲ್ಲೂಕು ಬೋರ್ಡ್ ಚುನಾವಣೆಗೆ ಎಲೆ ಗುರುತಿನಿಂದ ಸ್ಪರ್ಧೆ, ಗೆಲುವು |
| ೧೯೬೮ | ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕಿನ ಬೆಸಗರಹಳ್ಳಿಯ ಅನುಸೂಯಾ ಅವರೊಂದಿಗೆ ೫.೬.೧೯೬೮ರಂದು ಮದುವೆ |
| | ಮಕ್ಕಳು: ರಮೇಶ್ (೧೧.೬.೧೯೬೯), ಚೇತನಾ (೨೦.೯.೧೯೭೦), ರಾಜೀವ್‌ಬಾಬು (೨೧.೪.೧೯೭೨), ರವಿಕಿರಣ್ (೩೧.೩.೧೯೭೪) |
| ೧೯೬೯ | ರಾಷ್ಟ್ರಮಟ್ಟದಲ್ಲಿ ಕಾಂಗ್ರೆಸ್ ಇಬ್ಭಾಗ (ಓ) ಕಾಂಗ್ರೆಸ್‌ನಲ್ಲಿ ಉಳಿದು ಕೊಂಡಿದ್ದು. |
| ೧೯೭೦ | ಕುಣಿಗಲ್‌ನಲ್ಲಿ ನ್ಯಾಯಾಲಯ ಸ್ಥಾಪನೆ, ಕುಣಿಗಲ್‌ನಲ್ಲಿ ಸ್ವತಂತ್ರವಾಗಿ ವಕೀಲಿ ವೃತ್ತಿ ಆರಂಭ. ಸಾರ್ವಜನಿಕ ಜೀವನಕ್ಕೆ ಪ್ರವೇಶ |
| ೧೯೭೦-೮೫ | ಸ್ಪೋರ್ಟ್ಸ್ ಮತ್ತು ಗೈಡ್ಸ್‌ನ ಅಧ್ಯಕ್ಷರು. (೧೯೮೫ರ ತನಕ) |
| ೧೯೭೦ | ಕುಣಿಗಲ್ ವಕೀಲರ ಸಂಘದ ಅಧ್ಯಕ್ಷ. (೧೯೮೪ರ ತನಕ) |
| | ಕುಣಿಗಲ್ ರೋಟರಿ ಕ್ಲಬ್ ಅಧ್ಯಕ್ಷ. ರೋಟರಿಯ ವಿವಿಧ ಸ್ಥಾನಗಳಲ್ಲಿ ಸಕ್ರಿಯ ಕಾರ್ಯನಿರ್ವಹಣೆ. |

೧೯೭೪ ರಾಜ್ಯ ರೇಷ್ಮೆ ಬೆಳೆಗಾರರ ಸಂಘದ ಅಧ್ಯಕ್ಷ. ರೇಷ್ಮೆ ಬೆಳೆಗಾರರಿಗೆ ಬೋನಸ್‌ಗಾಗಿ ಪ್ರಯತ್ನಿಸಿ ಸಫಲರಾಗಿದ್ದು. (೧೯೮೫ರ ತನಕ)

೧೯೭೫ ರಾಷ್ಟ್ರಮಟ್ಟದಲ್ಲಿ ಜೆ.ಪಿ. ಅವರ ಕರೆಯಂತೆ ಕಾಂಗ್ರೆಸ್ಸೇತರ ಪಕ್ಷಗಳ ವಿಲೀನದಿಂದ ಜನತಾಪಕ್ಷ ಸ್ಥಾಪನೆ. (ಓ) ಕಾಂಗ್ರೆಸ್ ಜನತಾಪಕ್ಷದಲ್ಲಿ ವಿಲೀನ. ಜನತಾಪಕ್ಷದ ಸಕ್ರಿಯ ಸದಸ್ಯರಾಗಿದ್ದು.

೧೯೭೯ 'ರೇಷ್ಮೆ ಕೃಷಿ' ಮಾಸಪತ್ರಿಕೆಯ ಸಂಪಾದಕ ಮಂಡಳಿಯ ಸದಸ್ಯ. (೧೯೮೫ರ ತನಕ)

೧೯೮೩ ಕುಣಿಗಲ್ ಕ್ಷೇತ್ರದಿಂದ ವಿಧಾನಸಭೆಗೆ ಜನತಾಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧೆ. ೧೨,೦೦೦ ಅಧಿಕ ಮತಗಳಿಂದ ಗೆಲುವು.

ಕರ್ನಾಟಕ ಗೃಹಮಂಡಳಿ ಅಧ್ಯಕ್ಷರಾಗಿ ನೇಮಕ.

೧೯೮೪ ಜನತಾಪಕ್ಷದ ಅಭ್ಯರ್ಥಿಯಾಗಿ ಲೋಕಸಭಾ ಚುನಾವಣೆಗೆ ತುಮಕೂರಿನಿಂದ ಸ್ಪರ್ಧೆ. ೩೦,೦೦೦ ಮತಗಳ ಅಂತರದಲ್ಲಿ ಸೋಲು.

೧೯೮೫ ಕುಣಿಗಲ್ ಕ್ಷೇತ್ರದಿಂದ ಜನತಾಪಕ್ಷದ ಅಭ್ಯರ್ಥಿಯಾಗಿ ವಿಧಾನಸಭಾ ಚುನಾವಣೆಗೆ ಸ್ಪರ್ಧೆ. ೨೫,೦೦೦ ಮತಗಳಿಂದ ಗೆಲುವು. ಎರಡನೆ ಬಾರಿಗೆ ವಿಧಾನಸಭೆ ಪ್ರವೇಶ.

ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರ ಮಂತ್ರಿಮಂಡಲದಲ್ಲಿ ರೇಷ್ಮೆ ಸಚಿವರಾಗಿ ನೇಮಕ.

೧೯೮೬ ರೇಷ್ಮೆ ಕುರಿತ ಅಧ್ಯಯನಕ್ಕಾಗಿ ಜಪಾನ್ ಮತ್ತು ಕೊರಿಯಾ ದೇಶಗಳಲ್ಲಿನ ಪ್ರವಾಸ.

ತುಮಕೂರಿನಿಂದ ಬೆಂಗಳೂರು ಗಡಿವರೆಗೆ (೮೦ ಕಿ.ಮೀ.) ಪಾದಯಾತ್ರೆ. ಸಸಿ ನೆಡುವ ಕಾರ್ಯಕ್ರಮ

೧೯೮೭ ಕುಣಿಗಲ್‌ನಿಂದ ಮದ್ದೂರುವರೆಗೆ (೭೫ ಕಿ.ಮೀ.) ಪಾದಯಾತ್ರೆ. ಸಸಿ ನೆಡುವ ಕಾರ್ಯಕ್ರಮ

೧೯೮೮ ರಾಮಕೃಷ್ಣ ಹೆಗಡೆ ಮಂತ್ರಿಮಂಡಲದಲ್ಲಿ ತೋಟಗಾರಿಕಾ ಮಂತ್ರಿಯಾಗಿ ನೇಮಕ.

ಕುಣಿಗಲ್‌ನಿಂದ ಅಮೃತೂರು ಮಾರ್ಗವಾಗಿ ಹುಲಿಯೂರುದುರ್ಗಕ್ಕೆ ಪಾದಯಾತ್ರೆ ಸಸಿ ನೆಡುವ ಕಾರ್ಯಕ್ರಮ.

ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಮಂತ್ರಿಮಂಡಲಕ್ಕೆ ರಾಜೀನಾಮೆ ಸಲ್ಲಿಸಿದ್ದು.

೧೯೯೨ **'ನಾನು ಮತ್ತು ರೇಷ್ಮೆ'** ಕೃತಿ ಪ್ರಕಟಣೆ.

೧೯೯೨ ಕುಣಿಗಲ್ ಕ್ಷೇತ್ರದಲ್ಲಿ ವಿಧಾನಸಭೆಗೆ ನಡೆದ ಉಪ ಚುನಾವಣೆಯಲ್ಲಿ ಸ್ಪರ್ಧೆ. ೧೦,೦೦೦ ಮತಗಳಿಂದ ಐತಿಹಾಸಿಕ ಗೆಲುವು.

ವಿಧಾನಸಭೆಯಲ್ಲಿ ಅತ್ಯುತ್ತಮ ಸಂಸದೀಯ ಪಟುವಾಗಿ ರೂಪಗೊಂಡಿದ್ದು.

ಹೇಮಾವತಿ ಹೋರಾಟದ ತಾರಕ ದಿನಗಳು. ಜೈಲುವಾಸ.

ಮುಲಾಯಂಸಿಂಗ್ ಯಾದವ್ ನೇತೃತ್ವದ ಸಮಾಜವಾದಿ ಜನತಾಪಕ್ಷಕ್ಕೆ ಸೇರ್ಪಡೆ. ಸಮಾಜವಾದಿ ಜನತಾಪಕ್ಷದ ರಾಜ್ಯಾಧ್ಯಕ್ಷರಾಗಿ ನೇಮಕ.

ತಾತ್ವಿಕ ಕಾರಣಗಳಿಂದಾಗಿ ಸಮಾಜವಾದಿ ಜನತಾಪಕ್ಷ ತೊರೆದಿದ್ದು.

೧೯೯೪ ನಿರಂತರ ಹೋರಾಟದ ಫಲವಾಗಿ ಹೇಮಾವತಿ ನೀರು ತುಮಕೂರು ಜಿಲ್ಲೆಗೆ ಹರಿದು ಬಂದಿತು.

೧೯೯೫ ತುಮಕೂರು ಜಿಲ್ಲೆಗೆ ಹೇಮಾವತಿ ನೀರು ಹರಿಸಲು ಮುಖ್ಯಮಂತ್ರಿ ಎಚ್.ಡಿ. ದೇವೇಗೌಡ ಅವರ ಸರ್ಕಾರದೊಂದಿಗೆ ತೀವ್ರ ಸಂಘರ್ಷ. ಸರ್ಕಾರದಿಂದ ಬಂಧನಕ್ಕೊಳಗಾಗಿ ಜೈಲುವಾಸ. ಜೈಲಿನಲ್ಲೇ ಯುಗಾದಿ ಹಬ್ಬ ಆಚರಣೆ

೧೯೯೭-೯೮ ಕಾಂಗ್ರೆಸ್ ಪಕ್ಷಕ್ಕೆ ಸೇರ್ಪಡೆ. ಸೀತಾರಾಂ ಕೇಸರಿ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದ ಅವಧಿ.

೧೯೯೮-೯೯ ಹುಲಿಯೂರುದುರ್ಗ ಕ್ಷೇತ್ರದಿಂದ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ವಿಧಾನಸಭಾ ಚುನಾವಣೆಗೆ ಸ್ಪರ್ಧೆ. ೨೧,೫೬೫ ಮತಗಳಿಂದ ಗೆಲುವು. ನಾಲ್ಕನೆ ಬಾರಿಗೆ ವಿಧಾನಸಭೆಗೆ ಪ್ರವೇಶ.

೩.೧.೨೦೦೪ ಶ್ರೀಯುತರು ಹಠಾತ್ ಆಗಿ ನಿಧನ ಹೊಂದಿದರು.

## ವೈ.ಕೆ. ರಾಮಯ್ಯ ಅವರನ್ನು ಕುರಿತ ಗ್ರಂಥಗಳು


೧. ನಾನು ಮತ್ತು ರೇಷ್ಮೆ, ವೈ.ಕೆ. ರಾಮಯ್ಯ, ಚೇತನ ಪ್ರಕಾಶನ, ಬಿ.ಎಂ. ರಸ್ತೆ, ಕುಣಿಗಲ್, ತುಮಕೂರು ಜಿಲ್ಲೆ

೨. ಹರಿವನದಿ, ಸಂ. ಜಿ.ವಿ. ಆನಂದಮೂರ್ತಿ, ವೈ.ಕೆ. ರಾಮಯ್ಯ ಟ್ರಸ್ಟ್, ೯೭೩, ಚೇತನ, ಬಿ.ಎಂ. ರೋಡ್, ಕುವೆಂಪು ನಗರ, ಕುಣಿಗಲ್

೩. ಹೇಮಾವತಿ, ಸಂ. ಡಾ. ಕರೀಗೌಡ ಬೀಚನಹಳ್ಳಿ, ವೈ.ಕೆ. ರಾಮಯ್ಯ ಟ್ರಸ್ಟ್, ೯೭೩, ಚೇತನ, ಬಿ.ಎಂ. ರೋಡ್, ಕುವೆಂಪು ನಗರ, ಕುಣಿಗಲ್

೪. ಹೊನ್ನಚಂದ್ರಿಕೆ, ಸಂ. ಡಾ. ಹಿ.ಚಿ.ಬೋರಲಿಂಗಯ್ಯ, ವೈ.ಕೆ. ರಾಮಯ್ಯ ಟ್ರಸ್ಟ್, ೯೭೩, ಚೇತನ, ಬಿ.ಎಂ. ರೋಡ್, ಕುವೆಂಪು ನಗರ, ಕುಣಿಗಲ್

೫. ಜೀವನದಿ, ಸಂ. ಪ್ರೊ. ಜಿ.ವಿ. ಆನಂ ದಮೂರ್ತಿ. ವೈ.ಕೆ. ರಾಮಯ್ಯ ಟ್ರಸ್ಟ್, ೯೭೩, ಚೇತನ, ಬಿ.ಎಂ. ರೋಡ್, ಕುವೆಂಪು ನಗರ, ಕುಣಿಗಲ್

೬. ಕ್ರಿಯಾಶೀಲ ಸಂಗಾತಿ, ಸಂ. ಪ್ರೊ. ಜಿ.ವಿ. ಆನಂದಮೂರ್ತಿ, ವೈ.ಕೆ. ರಾಮಯ್ಯ ಟ್ರಸ್ಟ್, ೯೭೩, ಚೇತನ, ಬಿ.ಎಂ. ರೋಡ್, ಕುವೆಂಪು ನಗರ, ಕುಣಿಗಲ್



ಪತ್ನಿ ಶ್ರೀಮತಿ ಅನುಸೂಯಾ ಅವರೊಂದಿಗೆ





ಮಕ್ಕಳು ಮತ್ತು ಮೊಮ್ಮಕ್ಕಳೊಂದಿಗೆ ವೈ.ಕೆ.ಆರ್ ದಂಪತಿಗಳು



ಜೆ.ಎಚ್. ಪಟೇಲ್ ದಂಪತಿಗಳೊಂದಿಗೆ




ಶ್ರೀಮತಿ ಸೋನಿಯಾ ಗಾಂಧಿ, ಶ್ರೀ ಎಸ್.ಎಂ. ಕೃಷ್ಣ ಮತ್ತು
ಶ್ರೀ ಮಲ್ಲಿಕಾರ್ಜುನ ಖರ್ಗೆಯವರೊಂದಿಗೆ



ರಾಮಕೃಷ್ಣಹೆಗಡೆ ಅವರೊಂದಿಗೆ ಆತ್ಮೀಯ ಮಾತುಕತೆ



ಸುಬ್ರಹ್ಮಣ್ಯ ಸ್ವಾಮಿ ಹಾಗೂ ಹೆಚ್.ಡಿ. ದೇವೇಗೌಡ ಅವರೊಂದಿಗೆ



ಮಂಡ್ಯದಲ್ಲಿ ಜನಪರ ರಾಜಕಾರಣಿ ಪ್ರಶಸ್ತಿ ಸಮಾರಂಭದಲ್ಲಿ ಹೆಚ್.ಡಿ. ಚೌಡಯ್ಯ ಮತ್ತು ಚಂದ್ರಶೇಖರ ಪಾಟೀಲ್ ಅವರೊಂದಿಗ



ಹೇಮಾವತಿ ನೀರಿಗಾಗಿ ರಸ್ತೆ ತಡೆ ಚಳುವಳಿ



ಟೋಕಿಯೋದಲ್ಲಿ ಜಪಾನಿನ ರೇಷ್ಮೆ ತಜ್ಞರೊಡನೆ



ಬೆಂಗಳೂರಿನಲ್ಲಿ ಡಾ. ತೋಂಟದ ಸಿದ್ದಲಿಂಗ ಸ್ವಾಮೀಜಿಯವರಿಂದ ಗೌರವಾರ್ಪಣೆ



ಕುಣಿಗಲ್‌ನಲ್ಲಿ ಹೇಮಾವತಿ ನೀರಿನ ಹೋರಾಟದ ಸಂದರ್ಭದಲ್ಲಿ ಸತ್ಯಾಗ್ರಹಿಗಳೊಂದಿಗೆ



ಪಾದಯಾತ್ರೆಯಲ್ಲಿ



ವನಸಂವರ್ಧನಾ ಕಾರ್ಯಕ್ರಮ ಉದ್ಘಾಟನಾ ಸಮಾರಂಭದಲ್ಲಿ
ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ಮತ್ತು ಕುಮಾರ ಬಂಗಾರಪ್ಪ ಅವರೊಂದಿಗೆ



ಉದಯರವಿಯಲ್ಲಿ ಕುವೆಂಪು ಅವರೊಡನೆ



1969ರಲ್ಲಿ ಕೆಂಗಲ್ ಹನುಮಂತಯ್ಯನವರ ಸನ್ಮಾನ ಸಮಾರಂಭದಲ್ಲಿ



ಕರ್ನಾಟಕ ಗೃಹ ಮಂಡಲಿ ಅಧ್ಯಕ್ಷರಾಗಿ



ಕುಣಿಗಲ್‌ನಲ್ಲಿ ಕೆ.ಎಸ್.ಆರ್.ಟಿ.ಸಿ. ಕಛೇರಿ ಉದ್ಘಾಟನಾ ಸಮಾರಂಭದಲ್ಲಿ
ಎಂ.ಪಿ. ಪ್ರಕಾಶ್ ಅವರೊಂದಿಗೆ



ರೈತರೊಂದಿಗೆ ಚಳುವಳಿಯಲ್ಲಿ



ಮೈಸೂರಿನ ಸನ್ಮಾನ ಸಭೆಯಲ್ಲಿ ದೇಜಗೌ, ಆದಿಚುಂಚನಗಿರಿ ಸ್ವಾಮೀಜಿ ಮತ್ತು
ಪ್ರೊ. ಕಾಳೇಗೌಡ ನಾಗವಾರ ಅವರೊಂದಿಗೆ ವೈ.ಕೆ.ಆರ್. ದಂಪತಿಗಳು

| | | | |
|---|---|---|---|
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ|| ಬಿ.ಎಸ್. ಚಂದ್ರಯ್ಯ | 20.00 |
| 17. | ಬಿ. ರಾಜಯ್ಯ | ನಂಜಯ್ಯ ಹೊಂಗನೂರ್ | 20.00 |
| 18. | ಎಂ. ನಾಗಪ್ಪ | ಡಾ|| ಎಂ.ಎಸ್. ಪಾಟೀಲ್ | 15.00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ|| ಹೆಚ್.ಎಂ. ಪಂಚಾಕ್ಷರಯ್ಯ | 15.00 |
| 20. | ಗಂಗಾಧರ್ ನಮೋಶಿ | ಡಾ|| ಕವಂಟೆ ಹಾಗೂ ಇತರರು | 15.00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15.00 |
| 22. | ಆರ್. ಗುಂಡೂರಾವ್ | ಈಶ್ವರ ದೈ ತೋಟ | 20.00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15.00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15.00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15.00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30.00 |
| 27. | ಬಿ.ಎಲ್. ಸುಬ್ಬಮ್ಮ | ಡಾ|| ಡಿ.ಎಸ್. ಜಯಪ್ಪಗೌಡ | 15.00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20.00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವರ್ಣೇಕರ್ | 20.00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಉಷಾ ಹಾರೋಗದ್ದೆನಾಯಕ್ | 20.00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30.00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15.00 |
| 33. | ಕೆ.ಪಿ. ಶಂಕರಗೌಡ | ಜಗದೀಶ ಕೊಪ್ಪ | 20.00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25.00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30.00 |
| 36. | ಎಸ್.ಸಿ. ಮಲ್ಲಯ್ಯ | ಡಾ|| ಟಿ.ಸಿ. ಪೂರ್ಣಿಮ | 20.00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30.00 |

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ಪಿ. ಪಕ್ಕೀರಿ | ಡಾ॥ ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ॥ ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಡಾ॥ ಸಂಧ್ಯಾರೆಡ್ಡಿ | 20.00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |

| | | | |
|---|---|---|---|
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30.00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20.00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20.00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15.00 |
| 42. | ಕೆ.ಎಚ್. ರಂಗನಾಥ್ | ಎಲ್.ಎಸ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ|| ಎಚ್. ನರಸಿಂಹಯ್ಯ | ಪ್ರೊ. ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | 25–00 |
| 51. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–3 | ಡಾ. ಎಂ.ಜಿ. ನಾಗರಾಜ್ | 25–00 |
| 52. | ಬಿ.ಎಂ. ಹೊರಕೇರಿ | ಡಾ. ಎಂ.ಎಸ್. ಪಾಟೀಲ | 20–00 |
| 53. | ಕೆ. ಕೆಂಚಪ್ಪ | ಚಂದ್ರಶೇಖರ ತಾಳ್ಯ | 20–00 |
| 54. | ಕೇಶವರಾವ ನಿಟ್ಟೂರಕರ್ | ಡಾ. ಜಿ.ಬಿ. ವಿಸಾಜಿ | 20–00 |
| 55. | ಸರದಾರ ಶರಣಗೌಡ ಇನಾಂದಾರ | ಡಾ. ಬಿ.ವ್ಹಿ. ಮಲ್ಲಾಪುರ | 20–00 |
| 56. | ಬಸವರಾಜೇಶ್ವರಿ | ಪ್ರಹ್ಲಾದ ಬೆಟಗೇರಿ | 20–00 |

| | | | |
|---|---|---|---|
| 57. | ಕೊಲೂರು ಮಲ್ಲಪ್ಪ | ಗಂಗಾಧರಯ್ಯ ಹಿರೇಮಠ.<br>ಡಾ|| ದೇ.ಮಾ. ಪಾಟೀಲ | 20–00 |
| 58. | ದೇವೇಂದ್ರಪ್ಪ ಫಾಳಪ್ಪ ಜಮಾದಾರ | ಡಾ. ನಾಗಬಾಯಿ ಬಿ.ಬುಳ್ಳಾ | 20–00 |
| 59. | ಮೊಹಮ್ಮದ್ ಅಲಿ | ಪ್ರೊ. ಶಿವರಾಜ ಪಾಟೀಲ | 20–00 |
| 60. | ಬಿ. ಶ್ಯಾಮಸುಂದರ್ | ಗಂಧರ್ವ ಸೇನಾ | 20–00 |
| 61. | ಶಂಕರಶೆಟ್ಟಿ ಪಾಟೀಲ | ಡಾ. ಮಲ್ಲಿಕಾರ್ಜುನ ಶಿವಪ್ಪ ಲಕ್ತೆ | 20–00 |

## ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ|| ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20.00 |
| 2. | ಡಾ|| ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15.00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20.00 |
| 4. | ಡಾ|| ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20.00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15.00 |
| 6. | ಡಾ|| ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20.00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20.00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15.00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20.00 |
| 10. | ಡಾ|| ಚಿಂತಾಮನ್ ಡಿ. ದೇಶಮುಖ್ | ಬೇಳೂರು ಸುದರ್ಶನ್ | 20.00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶಕನಾಲಯ | 15.00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15.00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15.00 |
| 14. | ಡಾ|| ಲಂಕಾ ಸುಂದರಂ | ಜವರಯ್ಯ | 15.00 |

ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು-58.